# ಕೊಲಂಬೊ ಇಂದ ಆಲ್ಮೋರಕೆ

ಸ್ವಾಮಿ ವಿವೇಕಾನಂದ



ಶ್ರೀ ರಾಮಕೃಷ್ಣ ಆಶ್ರಮ
ಮೈಸೂರು.

# ಮುನ್ನುಡಿ

ಆಕಸ್ಮಿಕ ಎಂಬುದು ಅಪೂರ್ಣಜ್ಞಾನ ತನ್ನನ್ನು ತಾನು ಮರೆಮಾಡಿಕೊಳ್ಳಲೆಳಸುವ ಒಂದು ವಿಧಾನಕ್ಕೆ ನಾವು ಇಡುವ ಹೆಸರು. ನಾವು ಯಾವುದನ್ನು ಆಕಸ್ಮಿಕ ಎಂದು ಕರೆಯುತ್ತೇವೆಯೊ ಅದು ನಿಜವಾಗಿಯೂ ಆಕಸ್ಮಿಕವಾದುದಲ್ಲ. ಪೂರ್ವಾಪರವನ್ನು ಅಖಂಡವಾಗಿಯೂ ಏಕವಾಗಿಯೂ ಒಳಕೊಳ್ಳುವ ತ್ರಿಕಾಲದರ್ಶಿಯಾದ ಪೂರ್ಣದೃಷ್ಟಿಗೆ ಆಕಸ್ಮಿಕ ಎಂಬುದಿಲ್ಲ. ನಮ್ಮ ಅಲ್ಪಜ್ಞಾನ ತನಗೆ ಅನಿರೀಕ್ಷಿತವಾದುದನ್ನು ಹಾಗೆ ಕರೆದ ಮಾತ್ರಕ್ಕೆ ಭೂಮಜ್ಞಾನವೂ ಅದನ್ನು ಹಾಗೆ ಗ್ರಹಿಸಬೇಕಾಗಿಲ್ಲ. ಸರ್ವಜ್ಞವಾದ ಸರ್ವೇಚ್ಛಾಶಕ್ತಿ ಸುರುಳಿಬಿಚ್ಚುವ ತನ್ನ ಲೋಕಲೀಲೆಯಲ್ಲಿ ಯಾವುದನ್ನೂ ಅನಿಶ್ಚಯಕ್ಕೆ ಬಿಡುವುದಿಲ್ಲ ಎಂಬ ಪೂರ್ಣದೃಷ್ಟಿಯ ಶ್ರದ್ಧೆಯಿಂದ ಸಮನ್ವಿತವಾದ ಪ್ರಜ್ಞೆ ಸಾಮಾನ್ಯಬುದ್ಧಿಗೆ ಆಕಸ್ಮಿಕ ಎಂದು ತೋರುವುದರಲ್ಲಿಯೂ ಅರ್ಥ ಉದ್ದೇಶ ವ್ಯೂಹಗಳನ್ನು ಸಂದರ್ಶಿಸುತ್ತದೆ.

ಜನವರಿ ಇಪ್ಪತ್ತಾರನೆ ತೇದಿ ಭಾರತೀಯರಾದ ನಮಗೆ ಈಗ ಒಂದು ಮಹಾ ಸಂಕೇತದ ದಿನವಾಗಿ ಪರಿಣಮಿಸಿದೆ. ಸ್ವತಂತ್ರ ಭಾರತರಾಷ್ಟ್ರ ತಾನು ರಿಪಬ್ಲಿಕ್ ಎಂದು ಘೋಷಿಸಿಕೊಂಡ ಮಹಾಸುದಿನವದು. ಅದೊಂದು ಉತ್ಥಾನದ ಮತ್ತು ಉಜ್ಜೀವನದ ಪ್ರಾರಂಭೋತ್ಸವದ ದಿನ; ನವೋತ್ಸಾಹದ ದಿನ, ನವಪ್ರತಿಜ್ಞೆಯ ದಿನ; ನವಸಾಹಸದ, ನವೋದ್ಯೋಗದ, ನವಚೇತನದ, ನವೀನತಾಜೀವನದ ದೀಕ್ಷಾದಿನ. ನವಭಾರತದ ಉದ್ಧಾರೋನ್ಮುಖವೂ ವಿಕಾಸಶೀಲವೂ ಆಗಿರುವ ಸಂಕಲ್ಪಕುಂಡಲಿನಿ ಮತ್ತೆ ಮತ್ತೆ ಪೊರೆಗಳಚಿ ಪುನಃ ಪುನಃ ಊರ್ಧ್ವಗಾಮಿಯಾಗಲು ತನ್ನ ಸಾವಿರಾರು ಹೆಡೆಗಳನ್ನೂ ಎತ್ತಿ ವರುಷವರುಷವೂ ಹೊಸ ಕಂಕಣ ಕಟ್ಟುವ ಪವಿತ್ರದಿನ. ಸರ್ವೋದಯ ರಾಜ್ಯದ ಸುಪೂಜ್ಯ ದಿನ.

ಆ ದಿನ ಭಾರತದ ಕೋಟಿ ಕೋಟಿ ಹೃದಯಗಳಲ್ಲಿ ಒಂದು ಮಿಂಚು ಸಂಚರಿಸುತ್ತದೆ. ಒಂದು ಶಕ್ತಿ ಸ್ಪಂದಿಸುತ್ತದೆ. ಕುರುಡಾದರೂ ಚಿಂತೆಯಿಲ್ಲ, ಮೂಗಾದರೂ ಚಿಂತೆಯಿಲ್ಲ, ಒಮ್ಮೆ ಕಂಬನಿಗರೆದರೂ ಚಿಂತೆಯಿಲ್ಲ, ಒಮ್ಮೆ ಸುಯ್ದರೂ ಚಿಂತೆಯಿಲ್ಲ, ಯಾವುದೋ ಒಂದು ಹೇರಾಸೆ ಆಬಾಲವೃದ್ಧರ ಪ್ರಾಣಕೋಶಗಳಲ್ಲಿ ತುಂಬಿ ತುಳುಕುತ್ತದೆ. ಆ ಚಿನ್ಮಯಸ್ಪಂದನದ ಮೂಲವೆಲ್ಲಿ? ಅದು ಎಂದು ಮೊದಲಾಯಿತು? ಯಾರಿಂದ ಮೊದ

ಲಾಯಿತು ? ಆ ಶಕ್ತಿಬೀಜವನ್ನು ಭಾರತವರ್ಷದ ಸುಪ್ತಚೇತನದಲ್ಲಿ ಬಿತ್ತಿದವರಾರು? ಅದಕ್ಕೆ ನೀರು ಹೊಯ್ದವರಾರು? ಮೊಳೆಯಿಸಿದವರಾರು? ಆ ಎಳಸಸಿಯನ್ನು ಆರೈದವರಾರು?

ಅದನ್ನರಿಯಬೇಕಾದರೆ ನಾವು ಮತ್ತೊಂದು ಜನವರಿ ಇಪ್ಪತ್ತಾರನೆ ತೇದಿಗೆ ಯಾತ್ರೆ ಹೊರಡಬೇಕಾಗುತ್ತದೆ, ೧೮೯೭ನೆ ಇಸವಿಯ ಜನವರಿ ಇಪ್ಪತ್ತಾರನೆಯ ದಿವ್ಯದಿನಕ್ಕೆ.

ಏನು ವಿಶೇಷ ಆ ದಿನದ್ದು! ಕಲ್ಕತ್ತೆಯಲ್ಲಿ ಕೇಳು; ಲಾಹೋರಿನಲ್ಲಿ ಕೇಳು; ರಾಮನಾಡಿನಲ್ಲಿ ಕೇಳು; ಆಲ್ಮೋರದಲ್ಲಿ ಕೇಳು: ಸರ್ವಧರ್ಮ ಸಮನ್ವಯಮೂರ್ತಿ ನವಯುಗಾವತಾರ ಶ್ರೀರಾಮಕೃಷ್ಣ ಪರಮಹಂಸರ ಪರಮಶಿಷ್ಯ ಪರಮ ಪೂಜ್ಯ ಸ್ವಾಮಿವಿವೇಕಾನಂದರು ಚಿಕಾಗೊ ಸರ್ವಧರ್ಮ ಸಮ್ಮೇಳನದಲ್ಲಿ ಜಗತ್ತಿನ ಸಕಲ ಮತಗಳ ಪ್ರತಿನಿಧಿಗಳನ್ನೂ ವೇದಾಂತ ಡಿಂಡಿಮದಿಂದ ಬೆರಗುಗೊಳಿಸಿ, ದಿಗ್ವಿಜಯಿಯಾಗಿ, ಜಗದ್ ವಿಖ್ಯಾತರಾಗಿ ಸ್ವದೇಶಕ್ಕೆ ಹಿಮ್ಮರಳಿ ಭಾರತದ ಭೂಸ್ಪರ್ಶಮಾಡಿದ ಪುಣ್ಯದಿನವಲ್ಲವೆ ಆ ದಿವ್ಯದಿನ! ಬ್ರಿಟಿಷ್ ಚಕ್ರಾಧಿಪತ್ಯದ ಮತ್ತು ಸಾಮ್ರಾಜ್ಯಶಾಹಿಯ ಕಲೋಸಸ್ಸಿನ ಕಾಲಡಿಯಲ್ಲಿ ಕಷ್ಟ ಸಂಕಟಗಳಲ್ಲಿ ನರಳಿ, ಬಿಡುಗಡೆಗಾಗಿ ಹೋರಾಡಿ ಹೊರಳಿ, ದಾರಿಗಾಣದೆ ದಿಕ್ಕು ತೋರದೆ ಎದೆಗೆಟ್ಟು ಕೆರಳಿ, ತಮ್ಮ ದೈನ್ಯವನ್ನೂ ದಾರಿದ್ರ್ಯವನ್ನೂ ಕ್ಲೈಬ್ಯವನ್ನೂ ಪರಿಹರಿಸಿ, ಹೃದಯಕ್ಕೆ ಸಿಂಹ ಧೈರ್ಯವನ್ನು ತುಂಬುವ ಪಾಂಚಜನ್ಯ ಘೋಷಕ್ಕಾಗಿ ಕಾಯುತ್ತಿದ್ದ ಜಾಗ್ರತ ಭಾರತದ ಕೋಟ್ಯಂತರ ಚೇತನಗಳಲ್ಲಿ ಅಭೀಃ ಅಭೀಃ ಅಭೀಃ ಎಂಬ ಪ್ರಚಂಡವಾದ ವೇದೋಪನಿಷತ್ತಿನ ವಾಙ್ಮಂತ್ರದಿಂದ ಶಕ್ತಿಸಾಗರದ ದುರ್ದಮ್ಯ ತರಂಗಗಳನ್ನು ಎಬ್ಬಿಸಿ ಹುರಿದುಂಬಿಸಿದ ವೇದಾಂತಕೇಸರಿಯ ವಿರಾಟ್ ಗರ್ಜನೆ ವಿಂಧ್ಯ ಸಹ್ಯ ಹಿಮಾಲಯಗಳಿಂದ ಪ್ರತಿಧ್ವನಿತವಾದ ಪುಣ್ಯದಿನವಲ್ಲವೆ ಆ ದಿವ್ಯದಿನ!

ಅಂದಿನಿಂದ ಮೊದಲಾಯಿತು ಭರತವರ್ಷದ ಪುನರುತ್ಥಾನ. ದಕ್ಷಿಣೇಶ್ವರ ದೇವಮಾನವನ ಚಿತ್‌ತಪಸ್ ಸ್ವಾಮಿ ವಿವೇಕಾನಂದರ ಸಮುದ್ರಘೋಷಸ್ಪರ್ಧಿಯಾದ ವೀರವಾಣಿಯಲ್ಲಿ ವಾಙ್ಮಂತ್ರವಾಗಿ ಹೊಮ್ಮಿ, ಭಾರತೀಯರ ಧಮನಿಧಮನಿಗಳಲ್ಲಿ ದುಮುದುಮುಕಿ ಹರಿದು ಕ್ಲೈಬ್ಯವನ್ನು ಕೊಚ್ಚಿತು, ಧೈರ್ಯಧ್ವಜವನ್ನೆತ್ತಿತು. ಅಲ್ಪವನ್ನು ಕಿತ್ತು ಭೂಮವನ್ನು ನೆಟ್ಟಿತು. ಸಂಕುಚಿತ ಮನೋಭಾವನೆಯ ಗೋಡೆ

ಗಳನ್ನೊಡೆದು ಮನಸ್ಸನ್ನು ಗಗನವಿಶಾಲವನ್ನಾಗಿ ಮಾಡಿತು. ಕುರಿಗಳಂತಿದ್ದವರನ್ನು ಸಿಂಹಗಳನ್ನಾಗಿ ಪರಿವರ್ತಿಸಿತು. "ಉತ್ತಿಷ್ಠತ ಜಾಗ್ರತ ಪ್ರಾಪ್ಯ ವರಾನ್ನಿಬೋಧತ" ಎಂಬ ಧೀರಮಂತ್ರ ದಶದಿಕ್ಕುಗಳಿಂದಲೂ ಶಕ್ತಿಸಂಚಾರಕವಾಗಿ ಮೊಳಗಿದರೆ ಅಧೈರ್ಯ ಅಶಕ್ತಿಗಳಿಗೆ ಹುದುಗಿಕೊಳ್ಳುವುದಕ್ಕಾದರೂ ಜಾಗವಿರುತ್ತದೆಯೆ?

ಸ್ವಾತಂತ್ರ್ಯಪೂರ್ವದ ಯಾವ ವಿಧವಾದ ರಾಷ್ಟ್ರೀಯ ಕಾರ್ಯಗಳಲ್ಲಿ ಭಾಗವಹಿಸಿದ ಯಾರನ್ನಾದರೂ ಕೇಳಿ ಗೊತ್ತಾಗುತ್ತದೆ. ಪ್ರತಿಯೊಬ್ಬರೂ ಹಿರಿಯ ಕಿರಿಯ ಪ್ರಸಿದ್ಧ ಅಪ್ರಸಿದ್ಧರೆಂಬ ಭೇದವಿಲ್ಲದೆ ಸ್ವಾಮಿ ವಿವೇಕಾನಂದರಿಗೆ ಋಣಿಗಳಾಗಿರುತ್ತಾರೆ. ಒಬ್ಬೊಬ್ಬರೂ ತಮ್ಮದೆ ಆದ ಒಂದಲ್ಲ ಒಂದು ರೀತಿಯಲ್ಲಿ "ಕೊಲಂಬೊ ಇಂದ ಆಲ್ಮೋರಕೆ" ಎಂಬ ಹೊತ್ತಗೆಯಲ್ಲಿ ಕ್ರೋಡೀಕೃತವಾಗಿರುವ ವಿದ್ಯುನ್ಮಯ ಭಾಷಣಪರಂಪರೆಯ ಪ್ರಭಾವದಿಂದ ತಂತಮ್ಮ ವ್ಯಕ್ತಿತ್ವವನ್ನು ರೂಪುಗೊಳಿಸಿಕೊಂಡವರಾಗಿರುತ್ತಾರೆ. ದೇಶಭಕ್ತಿಯ ಹೃದಯದಲ್ಲಿ, ರಾಜಕೀಯ ವ್ಯಕ್ತಿಗಳ ಸಾಹಸದ ಪ್ರಾಣಸ್ಥಾನದಲ್ಲಿ, ಸಮಾಜಸುಧಾರಕರ ವೀರೋದ್ಯಮದ ಅಂತರಾಳದಲ್ಲಿ, ಆರ್ಥಿಕ ಅಭ್ಯುದಯದ ಆಕಾಂಕ್ಷೆಯ ನಾಡಿಯಲ್ಲಿ, ಧರ್ಮೋದ್ಧಾರದ ಪ್ರಯತ್ನದ ಧಮನಿಯಲ್ಲಿ, ಆಧ್ಯಾತ್ಮಿಕ ಅಭೀಪ್ಸೆಯ ಅಂತರತಮ ನಿಗೂಢ ಗಹ್ವರದಲ್ಲಿ, ಕಡೆಗೆ ಕಲಾ ವಿಜ್ಞಾನ ಸಾಹಿತ್ಯಾದಿ ಕ್ಷೇತ್ರಗಳಲ್ಲಿ ತಪಸ್ವಿಗಳಾದವರ ಮಹತ್‌ಸಾಧನೆಯ ಮೂಲದಲ್ಲಿ-ಎಲ್ಲೆಲ್ಲಿಯೂ ಎಲ್ಲದರಲ್ಲಿಯೂ ಸ್ವಾಮಿ ವಿವೇಕಾನಂದರ ಚಿತ್ತಪಸ್ಸು, 'ಸ್ವಧಾ' ಶಕ್ತಿಯಾಗಿ, 'ಪ್ರಯತಿಃ' ಶಕ್ತಿಯಾಗಿ, ನೂಂಕುವ ಪ್ರೇರಣೆಯಾಗಿ ಸೆಳೆಯುವ ಆಕರ್ಷಣೆಯಾಗಿ ಅಧಿಕಾರ ಮಾಡುತ್ತಿರುವುದನ್ನು ಕಾಣುತ್ತೇವೆ. ಆದ್ದರಿಂದಲೆ ನಾವು ಹೇಳುತ್ತೇವೆ: ಅಂದಿನ ಜನವರಿ ಇಪ್ಪತ್ತಾರರಲ್ಲಿ ಪಶ್ಚಿಮ ದೇಶಗಳಿಂದ ಭಾರತವರ್ಷಕ್ಕೆ ವಿಜಯಿಯಾಗಿ ಹಿಂತಿರುಗಿದ ಸ್ವಾಮಿಜಿ ಭಾರತಮಾತೆಯ ಯಾವ ಪಾದಸ್ಥಳದಲ್ಲಿ ಮೊತ್ತಮೊದಲು ಪದವಿಟ್ಟರೋ ಅಲ್ಲಿ ಅಂಕುರಾರ್ಪಣೆಗೊಂಡ ದಿವ್ಯ ಸಂಕಲ್ಪವು ನಾನಾ ವೀಚಿಗಳಲ್ಲಿ ವಿಕಾಸಗೊಂಡು ಮುಂಬರಿದು ಇಂದಿನ ಜನವರಿ ಇಪ್ಪತ್ತಾರರಲ್ಲಿ ತನ್ನ ಫಲಸಿದ್ಧಿಯ ಮಾರ್ಗದಲ್ಲಿ ರಾಜಕೀಯ ಸ್ವಾತಂತ್ರ್ಯರೂಪವಾದ ಒಂದು ಬಹುಮುಖ್ಯ ಸೋಪಾನವನ್ನೇರಿ ನಿಂತಿದೆ! ರಾಮನಾಡಿನ ದೊರೆ ರಾಜಾಭಾಸ್ಕರವರ್ಮ ಸೇತುಪತಿ ಅವರು ಅಂದು ನೆಟ್ಟಿರುವ ಸ್ಮೃತಿಸ್ತಂಭದ ಶಾಸನದಲ್ಲಿ ಮೊದ

ಲಾಗುವ "ಸತ್ಯಮೇವ ಜಯತೇ" ಎಂಬ ವೇದೋಕ್ತಿಯು ನಮ್ಮ ರಿಪಬ್ಲಿಕ್ಕಿನ ಅಧಿಕಾರ ಮುದ್ರೆಯನ್ನು ಅಲಂಕರಿಸಿದೆ ಎಂದು ನೆನೆದರೆ ನಮ್ಮ ಭಾವಪೂರ್ಣತೆ ಅರ್ಥಪೂರ್ಣವೂ ಆಗುವುದಿಲ್ಲವೆ?

ರಾಮನಾಡಿನ ಬಿನ್ನವತ್ತಳೆಗೆ ಉತ್ತರರೂಪವಾಗಿ ಅವರು ಮಾಡಿದ ಭಾಷಣದ ಆದಿಯಲ್ಲಿಯೆ ವಿನ್ಯಾಸಗೊಂಡಿರುವ ಭಂಗಿ ಭಣಿತಿಗಳನ್ನು ಗಮನಿಸಿದರೇ ಸಾಕು ಗೊತ್ತಾಗುತ್ತದೆ, ಅಲ್ಲಿ ಪ್ರವಾದಿಯ ಭವಿಷ್ಯವಾಣಿ ಮಾತ್ರವಲ್ಲದೆ ಶಕ್ತಿಪೂರ್ಣ ಮಂತ್ರದ್ರಷ್ಟಾರನ ವರಾನುಗ್ರಹ ಸಾಮರ್ಥ್ಯವೂ ವ್ಯಕ್ತವಾಗುತ್ತದೆ ಎಂದು. ಆ ವಾಣಿ ಆ ರೀತಿ ಮುಂದಾಗುವುದನ್ನು ಹೇಳುತ್ತದೆ ಮಾತ್ರವಲ್ಲ, ಅದನ್ನು ಆಗುವಂತೆಯೂ ಮಾಡುವ ಆಶ್ವಾಸನೆಯನ್ನೂ ನೀಡುತ್ತದೆ. ಆಲಿಸಿ: ಎನಿತೊಮ್ಮೆ ಕೇಳಿದರೂ ಮತ್ತೊಮ್ಮೆ ಕೇಳಬೇಕು ಎನಿಸುತ್ತದೆ:

"ಸುದೀರ್ಘರಾತ್ರಿ ಕಡೆಗಿಂದು ಕೊನೆಗಾಣುತ್ತಿದೆ. ಬಹುಕಾಲದ ಕೋಪತಾಪಗಳು ಕಡೆಗಿಂದು ಮಾಯವಾಗುತ್ತಲಿವೆ. ಇದುವರೆಗೆ ಶವದಂತೆ ಬಿದ್ದಿದ್ದ ಶರೀರವಿಂದು ಸಚೇತನವಾಗುತ್ತಿದೆ. ಅದೋ ಕಿವಿಗೊಡಿ; ತೂರ್ಯವಾಣಿಯೊಂದು ಕೇಳಿಬರುತ್ತಿದೆ–ಬಹು ಪುರಾತನಕಾಲದ ಇತಿಹಾಸ ಗರ್ಭದಿಂದ ಹೊಮ್ಮಿ, ಪರ್ವತ ಪರ್ವತ ಶಿಖರಗಳಿಂದ ಮರುದನಿಯಾಗಿ ಚಿಮ್ಮಿ, ಅರಣ್ಯಾರಣ್ಯ ಕಂದರ ಕಂದರಗಳಲ್ಲಿ ಸಂಚರಿಸಿ, ಬರಬರುತ್ತ ಪ್ರಬಲವಾಗಿ, ಬಂದಂತೆಲ್ಲಾ ಅಪ್ರತಿಹತವಾಗಿ, ನಮ್ಮ ಪುಣ್ಯಭೂಮಿಯನ್ನು ನಿದ್ದೆಯಿಂದೊದೆದೆಬ್ಬಿಸಿ, ಜ್ಞಾನ ಭಕ್ತಿ ಕರ್ಮ ವೈರಾಗ್ಯ ಸೇವಾ ತತ್ತ್ವಗಳನ್ನು ಉಚ್ಚಕಂಠದಿಂದ ಸಾರುವ ತೂರ್ಯವಾಣಿಯೊಂದು ಕೇಳಿಬರುತ್ತಿದೆ. ಹಿಮಾಲಯಗಳಿಂದ ಬೀಸಿಬರುವ ಪುಣ್ಯ ಸಮೀರಣನಂತೆ ನಿರ್ಜೀವವಾದಂತಿದ್ದ ಅಸ್ಥಿ ಮಾಂಸಗಳಿಗೆ ಜೀವದಾನ ಮಾಡುತ್ತಿದೆ; ಜಡನಿದ್ದೆಯನ್ನು ಪರಿಹರಿಸುತ್ತಿದೆ; ಕಾರ್ಯೋತ್ಸಾಹ ಸ್ಥೈರ್ಯ ಧೈರ್ಯಗಳನ್ನು ಉದ್ರೇಕಿಸುತ್ತಿದೆ. ಕುರುಡರಿಗೆ ಕಾಣದು; ಮೂರ್ಖರಿಗೆ ತಿಳಿಯದು. ನಮ್ಮ ಭಾರತಭೂಮಿ ಯುಗಯುಗಗಳ ನಿದ್ರೆಯಿಂದ ಮೇಲೇಳುತ್ತಿದೆ. ಆಕೆಯನ್ನು ಇನ್ನಾರೂ ತಡೆಯ ಬಲ್ಲವರಿಲ್ಲ; ಇನ್ನಾಕೆ ನಿದ್ದೆ ಮಾಡುವುದಿಲ್ಲ. ಯಾವ ಶಕ್ತಿಯೂ ಆಕೆಯನ್ನು ಬಗ್ಗಿಸಲಾರದು. ಏಕೆಂದರೆ, ಅದೋ ನೋಡಿ! ಮಹಾಕಾಳಿ ಮತ್ತೊಮ್ಮೆ ಎಚ್ಚತ್ತು ಮೈಕೊಡವಿ ಉಸಿರೆಳೆದು ನಿಲ್ಲುತ್ತಿದ್ದಾಳೆ...."

ಆಲಿಸಿದಿರಲ್ಲವೆ? ಓದಿ, ಮತ್ತೆ ಮತ್ತೆ ಸಾವಧಾನದಿಂದ ಓದಿ. ಮನನಮಾಡಿ. ಪಂಕ್ತಿ ಪಂಕ್ತಿಯನ್ನೂ ಮನನಮಾಡಿ. ಅದರಲ್ಲಿ ಯಾವುದಾದರೂ ಅಂಶ ಹುಸಿಯಾಗಿದೆಯೆ? ಅಥವಾ ಹುಸಿಯಾಗುವಂತೆ ತೋರುತ್ತದೆಯೆ? ಇಲ್ಲ, ಹುಸಿಯಾಗಿಲ್ಲ, ಹುಸಿಯಾಗುವುದೂ ಇಲ್ಲ!

ರಾಜಕೀಯ ಸ್ವಾತಂತ್ರ್ಯವೇನೊ ಸಿದ್ಧಿಸಿದೆ. ಅದನ್ನು ಒಂದು ಬಹು ಮುಖ್ಯವಾದ ಸೋಪಾನ ಎಂದು ಮಾತ್ರ ಕರೆದಿದ್ದೇವೆ. ಆದರೆ ಸ್ವಾಮಿಜಿ ನಮಗೆ ಮೆಟ್ಟಲಿನ ಮೇಲೆಯೆ ಮನೆ ಕಟ್ಟಲು ಹೇಳಿಲ್ಲ. ಅವರ ಮೊಟ್ಟ ಮೊದಲನೆಯ ಕೊಲಂಬೊ ಭಾಷಣದಲ್ಲಿಯೆ ಈ ವಿಚಾರದಲ್ಲಿ ಸ್ಪಷ್ಟವಾಗಿ ಎಚ್ಚರಿಕೆ ಕೊಟ್ಟಿದ್ದಾರೆ. ಪ್ರಾಚೀನ ಭರತಖಂಡದ ಆಧ್ಯಾತ್ಮಿಕ ತೇಜಸ್ಸು ಭೂಮಂಡಲವನ್ನೆಲ್ಲಾ ಹೇಗೆ ವ್ಯಾಪಿಸಿತ್ತು ಎಂಬ ಪೂರ್ವ ವೈಭವವನ್ನು ನಮ್ಮ ನೆನಪಿಗೆ ತಂದುಕೊಡುತ್ತಾ ಹೀಗೆ ಹೇಳುತ್ತಾರೆ:

"ಇಂದು ಜಡನಾಗರಿಕತೆಯ ಪ್ರಪಂಚಕ್ಕೆ ಆಧ್ಯಾತ್ಮವನ್ನು ಧಾರೆ ಎರೆಯುವ ಮಹಾ ಪ್ರವಾಹವೂ ಇಲ್ಲಿಂದ ಉದಿಸಬೇಕಾಗಿದೆ. ಇಲ್ಲಿದೆ ಬಾಳಿಗೆ ಹೊಸಬೆಳಕನ್ನು ಕೊಡುವ ಅಮೃತಪ್ರವಾಹ . . ."

"ಪ್ರಪಂಚದ ಇತರ ರಾಷ್ಟ್ರಗಳಿಗೆ ಧರ್ಮವೆಂಬುದು ಜೀವನದ ಹಲವು ಕಸಬುಗಳಲ್ಲಿ ಒಂದು. ರಾಜಕೀಯವಿದೆ, ಸಮಾಜದ ಸುಖ ಭೋಗಗಳಿವೆ, ಐಶ್ವರ್ಯ ಮತ್ತು ಅಧಿಕಾರದಿಂದ ಗಳಿಸುವುದು ಇನ್ನೆಷ್ಟೋ ಇದೆ, ಇಂದ್ರಿಯಸುಖಕ್ಕೆ ಬೇಕಾದಷ್ಟು ವಿಷಯವಸ್ತುಗಳಿವೆ. ಜೀವನದ ಇಂತಹ ಹಲವು ವ್ಯವಹಾರಗಳ ನಡುವೆ ಇಂದ್ರಿಯಗಳ ಸುಖಸಂತೃಪ್ತಿಗಾಗಿ ಹಲವಾರು ವಸ್ತುಗಳನ್ನು ಅರಸುವಾಗ ಮಧ್ಯ ಸ್ವಲ್ಪ ಧರ್ಮವೂ ಇದೆ. ಆದರೆ ಇಲ್ಲಿ, ಭರತಖಂಡದಲ್ಲಿ, ಧರ್ಮವೇ ಪರಮಪುರುಷಾರ್ಥ ರೂಪವಾದ ಏಕಮಾತ್ರ ವ್ಯವಹಾರ . . ."

"ಜಗತ್ತಿನಲ್ಲಿ ಪ್ರತಿಯೊಂದು ಜನಾಂಗವೂ ತನ್ನ ಪಾಲಿಗೆ ಬಂದ ವಿಶೇಷ ಕರ್ತವ್ಯವನ್ನು ಸಾಧಿಸಬೇಕಾಗಿದೆ . . . . ರಾಜಕೀಯ ಮಹತ್ವವಾಗಲಿ, ಸೇನಾಶಕ್ತಿಯಾಗಲಿ ನಮ್ಮ ಜನಾಂಗದ ಗುರಿಯಲ್ಲ. ಅದು ಎಂದೂ ಹಿಂದೆ ಅಗಿರಲಿಲ್ಲ. ಹೇಳುತ್ತೇನೆ ಗಮನಿಸಿ. ಅದೆಂದೂ ಮುಂದೆಯೂ ಆಗಲೂ ಆರದು . . . . ಆಧ್ಯಾತ್ಮಿಕ ಜ್ಞಾನವೇ ಪ್ರಪಂಚಕ್ಕೆ ಭರತಖಂಡ ನೀಡುವ ಬಹುಮಾನ."

"ಪ್ರತಿಯೊಂದು ಜನಾಂಗಕ್ಕೂ ಪ್ರತಿಯೊಬ್ಬ ವ್ಯಕ್ತಿಗಿರುವಂತೆಯೇ

ಒಂದೊಂದು ಜೀವನೋದ್ದೇಶವಿದೆ. ಆ ಉದ್ದೇಶವೆ ಅದರ ಹೃದಯ. ಉಳಿದುವೆಲ್ಲವೂ ಗೌಣ. ಯಾವ ಜನಾಂಗವಾದರೂ ಶತಮಾನಗಳಿಂದ ತನ್ನ ನಾಡಿಗಳಲ್ಲಿ ಪ್ರವಹಿಸಿ ಬಂದ ಆದರ್ಶವನ್ನು ಕಿತ್ತೊಗೆಯಿತೆಂದರೆ ಸರ್ವನಾಶ ವಾಗುತ್ತದೆ. ರಾಜಕೀಯ ಒಂದರ ಹೃದಯ; ಕಲಾಜೀವನ ಮತ್ತೊಂದರದು. ಭರತಖಂಡದ ಹೃದಯವೆಂದರೆ ಧರ್ಮ. ಅದನ್ನು ವರ್ಜಿಸಿದರೆ ನಮ್ಮ ಸಂಸ್ಕೃತಿ ಅಳಿದು ಹೋಗುತ್ತದೆ.''

ಸ್ವಾತಂತ್ರ್ಯಪೂರ್ವದ ಮಹೋದ್ದೇಶಗಳನ್ನೂ ಮಹಾ ಪ್ರತಿಜ್ಞೆಗಳನ್ನೂ ಮಹಾಧ್ಯೇಯಗಳನ್ನೂ ಮರೆತೋ ತಿರಸ್ಕರಿಸಿಯೋ, ರಾಜಕೀಯವೇ ಸರ್ವಸ್ವ ಎಂಬಂತೆ ವರ್ತಿಸುವ ಮನೋಭಾವ ಇತ್ತೀಚೆಗೆ ಹೆದರಿಕೆ ಹುಟ್ಟಿಸುವಷ್ಟರಮಟ್ಟಿಗೆ ಪ್ರಬಲವಾಗುತ್ತಿರುವ ಈ ಸಂಧಿಸಮಯದಲ್ಲಿ ಸ್ವಾಮಿಜಿಯ ವಾಣಿ–''ಕೊಲಂಬೊ ಇಂದ ಆಲ್ಮೋರಕೆ'' ಎಂಬ ಈ ಹೊತ್ತಗೆ ನಮ್ಮ ತರುಣರಿಗೆ, ಮುಂದೆ ಮುಂದಾಳಾಗುವ ಇಂದಿನ ತರುಣರಿಗೆ–ಮಾರ್ಗದರ್ಶಕವಾಗುವುದರಲ್ಲಿ ಸಂದೇಹವಿಲ್ಲ. ಆ ಮಾರ್ಗದರ್ಶನವನ್ನು ನಾವು ತಿರಸ್ಕರಿಸಿದರೆ ದೇಶಕ್ಕೆ ಉಳಿಗಾಲವಿಲ್ಲ.

ಸ್ವಾತಂತ್ರ್ಯಪೂರ್ವದಲ್ಲಿ ರಾಜಕೀಯವೂ ತ್ಯಾಗಶೀಲವಾಗಿತ್ತು. ಸ್ವಾತಂತ್ರ್ಯೋತ್ತರದಲ್ಲಿ ಅದು ಒಂದು ರೀತಿಯ ಭೋಗಾಭಿಲಾಷೆಯಾಗಿ ಪರಿಣಮಿಸುತ್ತಿದೆ. ಅಂದು ರಾಜಕೀಯಕ್ಕೆ ಪ್ರವೇಶಿಸುವುದೆಂದರೆ, ಮುಖ್ಯವಾಗಿ, ಸ್ವಾತಂತ್ರ್ಯ ಸಂಗ್ರಾಮದಲ್ಲಿ ಗಾಂಧೀಜಿ ಅಂತಹರ ನೇತೃತ್ವದಲ್ಲಿ ತಿತಿಕ್ಷಾಜೀವನ ನಡಸುವುದಾಗಿತ್ತು. ಕಷ್ಟ, ಸಂಕಟ ಮನಃಕ್ಲೇಶ ತ್ಯಾಗ ಕಾರಾಗೃಹವಾಸ ದೈಹಿಕಶ್ರಮ ಇತ್ಯಾದಿ ರೂಪವಾದ ಸಾಧನ ರಂಗದಲ್ಲಿ ವ್ಯಕ್ತಿ ಸಾಧಕನಾಗಬೇಕಾಗಿತ್ತು. ಇಂದು ರಾಜಕೀಯಕ್ಕೆ ಪ್ರವೇಶಿಸುವುದೆಂದರೆ ಸ್ವಾರ್ಥತೆ, ಸ್ವಪ್ರತಿಷ್ಠೆ, ಸ್ವಜಾತಿ ಸ್ವಪಕ್ಷಗಳ ಉದ್ಧಾರದ ನೆವದಲ್ಲಿ ಪಕ್ಷಪ್ರತಿಪಕ್ಷಗಳನ್ನು ಕಟ್ಟಿಯೋ ಸೇರಿಯೋ ಎದುರಾಳಿಯನ್ನೂ ಎದುರು ಪಕ್ಷವನ್ನೂ ಸದೆಬಡಿಯುವುದು, ಏನಕೇನ ಪ್ರಕಾರೇಣ 'ಅಖಿಲಭಾರತ ಧುರೀಣ' ನಾಗುವುದು, ಅಧಿಕಾರ ಧನ ಮಾನ ಸಂಪಾದನೆ ಇತ್ಯಾದಿ ಇತ್ಯಾದಿ.

ನೇರವಾಗಿ ರಾಜಕೀಯಕ್ಕೆ ಇಳಿಯುವವರ ಗತಿ ಅದಾದರೆ ಉಳಿದವರ ಗತಿ ಅದಕ್ಕಿಂತಲೂ ಮೇಲಾಗಿ ತೋರುತ್ತಿಲ್ಲ. ಹಳ್ಳಿಗ ಪಟ್ಟಣಿಗ, ಸಾಕ್ಷರ ನಿರಕ್ಷರ, ದರಿದ್ರ ಶ್ರೀಮಂತ, ಬಡವ ಬಂಡವಾಳಗಾರ, ಆಳು

ಒಡೆಯು ಅವರು ಇವರು ಎಂಬ ಭೇದವಿಲ್ಲದೆ ಎಲ್ಲರನ್ನೂ ಆಕ್ರಮಿಸಿದೆ ಈ ರಾಜಕೀಯದ ಜ್ವರ. ದಿನ ಬೆಳಗಾದರೆ ಪತ್ರಿಕೆಗಳು ಈ ಜ್ವರವನ್ನು ಮನೆ ಮನೆಗೂ ಮನ ಮನಕ್ಕೂ ಹಂಚುವ ಶೀಘ್ರ ಸಾಧನಗಳಾಗಿವೆ. ಆ ಪತ್ರಿಕೆಗಳ ಬಹುಭಾಗವನ್ನೆಲ್ಲಾ ವ್ಯಾಪಿಸಿರುತ್ತದೆ ಈ ರಾಜಕೀಯದ ಸುದ್ದಿ ಮತ್ತು ಬೇಗೆ. ಜೊತೆಗೆ ಚುನಾವಣೆ ಬೇರೆ ಈ ರಾಜಕೀಯ ಜ್ವರ ಒಂದರೆನಿಮಿಷವೂ ಯಾರ ಮೆದುಳನ್ನೂ ಬಿಟ್ಟು ಹೋಗದಂತೆ ನೋಡಿಕೊಳ್ಳುತ್ತಿದೆ. ಮಹಾ ಚುನಾವಣೆ! ಅದಾಯಿತು ಉಪಚುನಾವಣೆ! ಅಷ್ಟರಲ್ಲಿ ಚುನಾವಣೆಯ ಕೇಸುಗಳು. ಅವಿನ್ನೂ ಮುಗಿಯುವುದರೊಳಗೆ ಜಿಲ್ಲಾ ಚುನಾವಣೆ ಪ್ರಾರಂಭ. ಅವುಗಳಿಗೆ ಪುಚ್ಛಭೂತವಾಗಿ ಪೌರಸಭೆಗೊ ಗ್ರಾಮಪಂಚಾಯಿತಿಗೊ ಮಣ್ಣಿಗೊ ಮಸಣಕ್ಕೊ ಮತ್ತೆ ಚುನಾವಣೆ! ಸರಿ ಇದೆಲ್ಲಾ ಪೂರೈಸುವುದರೊಳಗೆ ಮತ್ತೆ ಮಹಾ ಚುನಾವಣೆ ಸಮೀಪಿಸುತ್ತದೆ. ಸರಿ, ಮತ್ತೆ ಅದಕ್ಕೆ ಪೂರ್ವಸಿದ್ಧತೆ ಬೇಡವೆ? ವ್ಯೂಹರಚನೆ ಬೇಡವೆ ಯುದ್ಧಕ್ಕೆ ಮುನ್ನ? — ಹೀಗೆ ಒಂದಲ್ಲ ಹಲವು ತೆರಗಳಲ್ಲಿ ಕಲೆ ಸಂಸ್ಕೃತಿ ಧರ್ಮ ಅಧ್ಯಾತ್ಮ ಇವುಗಳ ಕಡೆಯಿಂದ ರಾಜಕೀಯದ ಕಡೆಗೆ ತಿರುಗುವ ಜನಮನಸ್ಸು ಅದನ್ನೇ ಬಹು ಮುಖ್ಯವೆಂದೂ ಪರಮಪುರುಷಾರ್ಥವೆಂದೂ ಭಾವಿಸುತ್ತದೆ. ಪಾಶ್ಚಾತ್ಯ ದೇಶಗಳಲ್ಲಿ ಆಗಿರುವಂತೆ ರಾಜಕೀಯ ವ್ಯಕ್ತಿಯೆ ಪರಮಗಣ್ಯನೂ ಪೂಜ್ಯನೂ ಆಗುತ್ತಾನೆ. ರಾಜಕೀಯವಲ್ಲದ ಜೀವನ ವ್ಯಾಪಾರಕ್ಕೆ ಪುರಸತ್ತಿಲ್ಲ ಎಂಬ ಆತ್ಮವಂಚನೆಯು ಕಾರಣ ಸಿದ್ಧವಾಗುತ್ತದೆ. ಕೊನೆಗೆ ಯಾವ ವಿಶೇಷಲಕ್ಷಣದಿಂದ ನಮ್ಮ ಭಾರತೀಯತೆ ಲೋಕ ಗೌರವಕ್ಕೆ ಭಾಜನವಾಗಿತ್ತೊ ಆ ಲಕ್ಷಣವೇ ನಮ್ಮ ಜೀವನದಿಂದ ದೂರವಾಗುವ ದುರ್ಗತಿ ನಮಗೊದಗುತ್ತದೆ. ಆತ್ಮಶ್ರೀ ಶೂನ್ಯರಾಗುತ್ತೇವೆ, ಸ್ವಾಮಿಜಿಯ ಎಚ್ಚರಿಕೆಯನ್ನು ನಾವು ಗುಮನಿಸದಿದ್ದರೆ. ಆದ್ದರಿಂದಲೆ ಮುಂದೆ ಮುಂದಾಳುಗಳಾಗುವ ನಮ್ಮ ಇಂದಿನ ತರುಣರಿಗೆ "ಕೊಲಂಬೊ ಇಂದ ಆಲ್ಮೋರಕೆ" ಒಂದು ಕೈದೀವಿಗೆಯಾವುದರಲ್ಲಿ ಸಂದೆಹವಿಲ್ಲ.

ನನ್ನ ತಾರುಣ್ಯ ಸ್ವಾಮಿ ವಿವೇಕಾನಂದರಿಗೆ ಎಷ್ಟು ಋಣಿಯಾಗಿತ್ತೆಂದು ನಾನು ಹೇಳಿ ಪೂರೈಸಲಾರೆ. ಅದನ್ನು ನೆನೆದರೇ ಕೃತಜ್ಞತೆಯ ಹರ್ಷಾಶ್ರು ಹನಿಯುತ್ತದೆ. ಹಿಂದೂ ಧರ್ಮದ ವೈಶಾಲ್ಯದ ಮತ್ತು ವೇದಾಂತ ತತ್ತ್ವದ ಗಂಭೀರತೆಯ ಪರಿಚಯ ಸರ್ವಸಾಮಾನ್ಯವೂ ಸರ್ವ ಸುಲಭಗ್ರಾಹ್ಯವೂ ಆಗಬೇಕಾದರೆ ಸ್ವಾಮಿಜಿಯ ಉಪನ್ಯಾಸಗಳನ್ನು ಬಿಟ್ಟರೆ ಬೇರಾವುದೂ ಇಲ್ಲ.

# ಅನುಕ್ರಮಣಿಕೆ

# ೧

# ಕೊಲಂಬೊ

ಕೊಲಂಬೊ.
೧೬ ಜನವರಿ ೧೮೯೭

ನಾನು ಮಾಡಿರುವ ಅಲ್ಪಕಾರ್ಯ ಕೇವಲ ನನ್ನಲ್ಲಿರುವ ಶಕ್ತಿಯಿಂದಲ್ಲ. ನನ್ನ ಪರಮಪವಿತ್ರ ಪ್ರಿಯತಮ ಮಾತೃಭೂಮಿಯಿಂದ ಹೊರಟ ಉತ್ತೇಜನ ಶುಭಾಶಯ ಆಶೀರ್ವಾದಗಳೇ ಅದಕ್ಕೆ ಮೂಲ. ಪಾಶ್ಚಾತ್ಯ ದೇಶದಲ್ಲಿ ನಿಸ್ಸಂದೇಹವಾಗಿಯೂ ಸ್ವಲ್ಪ ಒಳ್ಳೆಯ ಕಾರ್ಯವೇನೋ ಆಗಿದೆ. ಆದರೆ ವ್ಯಕ್ತಿಶಃ ನನಗೆ ಪ್ರಯೋಜನವಾಗಿದೆ. ಯಾವುದು ಹಿಂದೆ ಕೇವಲ ಭಾವಪೂರ್ಣವಾಗಿತ್ತೋ ಅದು ಈಗ ಪ್ರಮಾಣಸಿದ್ಧ ಸತ್ಯದಂತೆ ತೋರುತ್ತಿದೆ. ಅದನ್ನು ಈಗ ಕಾರ್ಯರೂಪಕ್ಕೆ ತರುವುದಕ್ಕೆ ಶಕ್ತಿ ಬಂದಿದೆ. ಹಿಂದೆ ನಾನು ಎಲ್ಲಾ ಹಿಂದೂಗಳು ಭಾವಿಸುವಂತೆ ನಿಮ್ಮ ಘನ ಅಧ್ಯಕ್ಷರು ಈಗತಾನೆ ಹೇಳಿದಂತೆ, ಭರತಖಂಡವನ್ನು ಪುಣ್ಯಭೂಮಿ ಕರ್ಮಭೂಮಿ ಎಂದು ಭಾವಿಸಿದೆ. ಇಂದು ನಾನು ನಿಮ್ಮ ಎದುರಿಗೆ ಸತ್ಯವಾಗಿ ಅದನು ಘಂಟಾಘೋಷದಿಂದ ಸಾರುತ್ತೇನೆ. ಪ್ರಪಂಚದಲ್ಲಿ ಯಾವುದಾದರೂ ಪುಣ್ಯಭೂಮಿಯೆಂದು ಕರೆಯಿಸಿಕೊಳ್ಳಲು ಅರ್ಹವಾದರೆ, ಜೀವಿಗಳು ತಮ್ಮ ಬಾಳ ಕೊನೆಯ ಕರ್ಮವನ್ನು ಸವೆಸಲು ಬರಬೇಕಾದ ಸ್ಥಳವೊಂದಿದ್ದರೆ, ಭಗವಂತನೆಡೆಗೆ ಸಂಚರಿಸುತ್ತಿರುವ ಪ್ರತಿಯೊಂದು ಜೀವಿಯೂ ತನ್ನ ಕೊನೆಯ ಯಾತ್ರೆಯನ್ನು ಪೂರೈಸುವುದಕ್ಕೆ ಒಂದು ಕರ್ಮಭೂಮಿಗೆ ಬರಬೇಕಾದರೆ, ಯಾವುದಾದರೂ ದೇಶದಲ್ಲಿ ಮಾನವಕೋಟಿ, ಮಾಧುರ‍್ಯ ಔದಾರ‍್ಯ ಪರಿಶುದ್ಧತೆ, ಶಾಂತಿ ಎಲ್ಲಕ್ಕಿಂತ ಹೆಚ್ಚಾಗಿ ಧ್ಯಾನ ಮತ್ತು ಅಂತರ್ಮುಖ ಜೀವನ ತನ್ನ ಪರಾಕಾಷ್ಠತೆಯನ್ನು ಮುಟ್ಟಿದ್ದರೆ, ಅದೇ ಈ ಭರತಖಂಡ. ಅನಾದಿಕಾಲದಿಂದಲೂ ಇಲ್ಲಿಂದ ಧರ್ಮ ಸಂಸ್ಥಾಪನಾಚಾರ‍್ಯರು, ಪೃಥ್ವಿಯನ್ನೆಲ್ಲಾ, ತಮ್ಮ ಪವಿತ್ರ–ಎಂದೆಂದಿಗೂ ಬತ್ತದ ಆಧ್ಯಾತ್ಮಿಕ ಮಹಾಸತ್ಯ ಪ್ರವಾಹದಿಂದ ತೋಯಿಸಿರುವರು. ಇಲ್ಲಿಂದ ಎದ್ದ ಆಧ್ಯಾತ್ಮಿಕ ಮಹಾ ಪ್ರವಾಹದ ಅಲೆ ಪೂರ್ವ ಪಶ್ಚಿಮ, ಉತ್ತರ ದಕ್ಷಿಣವೆನ್ನದೆ ಜಗತ್ತನ್ನು ಆವರಿಸಿರುವುದು. ಇಂದು ಜಡನಾಗರಿಕತೆಯ

ಪ್ರಪಂಚಕ್ಕೆ ಆಧ್ಯಾತ್ಮವನ್ನು ಧಾರೆ ಎರೆಯುವ ಮಹಾ ಪ್ರವಾಹವೂ ಇಲ್ಲಿಂದ ಉದಿಸಬೇಕಾಗಿದೆ. ಇಲ್ಲಿದೆ ಬಾಳಿಗೆ ಹೊಸ ಬೆಳಕನ್ನು ಕೊಡುವ ಅಮೃತ ಪ್ರವಾಹ. ಅನ್ಯದೇಶದಲ್ಲಿ ಕೋಟ್ಯಂತರ ಜೀವಿಗಳೆದೆಯನ್ನು ದಹಿಸುತ್ತಿರುವ ಜಡವಾದದ ದಳ್ಳುರಿಯ ಶಮನಕ್ಕೆ ಅಮೃತಪ್ರವಾಹವಿಲ್ಲಿದೆ. ಸ್ನೇಹಿತರೇ, ನೆಚ್ಚಿ, ಈ ಕಾರ್ಯ ಕೈಗೂಡುವುದು.

ನಾನೆಷ್ಟೋ ನೋಡಿರುವೆನು. ಜನಾಂಗದ ಜೀವನ ಚರಿತ್ರೆಯನ್ನು ಅಧ್ಯಯನ ಮಾಡಿರುವ ನಿಮ್ಮಲ್ಲಿ ಕೆಲವರಿಗೆ ಆಗಲೇ ಅದು ವೇದ್ಯವಾಗಿದೆ. ಭರತಖಂಡಕ್ಕೆ ಅನ್ಯರಾಷ್ಟ್ರಗಳ ಋಣ ಮಹತ್ತರವಾದುದು. ಒಂದಾದ ಮೇಲೊಂದು ದೇಶವನ್ನು ಪರಸ್ಪರ ಹೋಲಿಸಿ ನೋಡಿದರೆ "ಸಹಿಷ್ಣು ಹಿಂದು" "ದೀನ ಹಿಂದು" ಎಂಬ ಜನಾಂಗಕ್ಕೆ ಪ್ರಪಂಚದ ಋಣ ಮಹತ್ತರವಾದುದು. ದೀನ ಹಿಂದೂ ಎಂಬ ಪದವನ್ನು ನಿಂದೆಯ ದೃಷ್ಟಿಯಿಂದ ಉಪಯೋಗಿಸಿರುವರು. ನಿಂದೆಯ ಪದದಲ್ಲಿ ಏನಾದರೂ ಸ್ವಲ್ಪ ಸತ್ಯ ಹುದುಗಿದ್ದರೆ ಅದೇ "ದೀನ ಹಿಂದೂ" ಎಂಬ ಪದದಲ್ಲಿದೆ. ಅವನಾವಾಗಲೂ ಧನ್ಯ; ಭಗವಂತನ ಶಿಶುವಾಗಿರುವನು. ಪ್ರಪಂಚದ ಎಷ್ಟೋಕಡೆ ನಾಗರಿಕತೆಗಳು ಉದಿಸಿವೆ. ಪುರಾತನ ಮತ್ತು ಆಧುನಿಕ ಕಾಲದಲ್ಲಿ ಬಲಾಢ್ಯ ಪ್ರಖ್ಯಾತ ರಾಷ್ಟ್ರಗಳಿಂದ ಗಹನ ಭಾವನೆಗಳುದಿಸಿವೆ. ಗತಕಾಲದಲ್ಲಿ ಮತ್ತು ವರ್ತಮಾನ ಕಾಲದಲ್ಲಿಯೂ ಒಂದು ಜನಾಂಗದಿಂದ ಮತ್ತೊಂದು ಜನಾಂಗಕ್ಕೆ ಅದ್ಭುತ ಭಾವನೆಗಳು ಹರಡಿವೆ. ಪೂರ್ವ ಮತ್ತು ಆಧುನಿಕ ಕಾಲದಲ್ಲಿ ಜನಜಾಗ್ರತಿಯ ಮಹಾ ಪ್ರವಾಹವು ಉದಾತ್ತ ಸತ್ಯಗಳ ಮತ್ತು ಶಕ್ತಿಯ ಬೀಜವನ್ನು ಪ್ರಪಂಚಕ್ಕೆ ಬಿತ್ತಿವೆ. ಆದರೆ ನನ್ನ ಸ್ನೇಹಿತರೇ, ಇದನ್ನು ಗಮನಿಸಿ: ಅದನ್ನು ಸಾರಿದ್ದು ಸಮರ ಕಹಳೆಯ ಧ್ವನಿಯಿಂದ, ದಿಗ್ಭಿತ್ತಿ ಬಿರಿಯುವ ಪ್ರಚಂಡ ಸೇನಾಸಮೂಹದ ಚಲನದ ಪ್ರಭಾವದಿಂದ ಪ್ರತಿಯೊಂದು ಭಾವನೆಯನ್ನೂ ರಕ್ತ ಪ್ರವಾಹದಲ್ಲಿ ತೋಯಿಸಬೇಕಾಯಿತು; ಪ್ರತಿಯೊಂದು ಭಾವನೆಯೂ ಕೋಟ್ಯಂತರ ಜನರ ರಕ್ತದ ಮಡುವಿನ ಮೂಲಕ ಸಾಗಿಹೋಗಬೇಕಾಯಿತು; ಪ್ರತಿಯೊಂದು ಶಕ್ತಿದಾಯಕ ಪದದ ಮುಂದೆಯೂ ಲಕ್ಷಾಂತರ ಜನರ ನಿಟ್ಟುಸಿರು, ಅನಾಥರ ವಿಧವೆಯರ ಕಣ್ಣೀರು ಕೋಡಿ ಹರಿಯುತ್ತಿತ್ತು. ಅನ್ಯರಾಷ್ಟ್ರಗಳು ಇತರರಿಗೆ ಬೋಧಿಸಿರುವುದು ಹೀಗೆ. ಆದರೆ ಭರತಖಂಡ ಸಹಸ್ರಾರು ವರ್ಷಗಳಿಂದ ಶಾಂತವಾಗಿ ಬಾಳಿದೆ. ಗ್ರೀಸ್ ಇನ್ನೂ ಹುಟ್ಟದೆ ಇರುವಾಗ,

ರೋಮ್ ದೇಶವನ್ನು ಇನ್ನೂ ಆಲೋಚನೆ ಮಾಡದೇ ಇರುವಾಗ, ಆಧುನಿಕ ಐರೋಪ್ಯ ಜನಾಂಗದ ಪೂರ್ವಿಕರು ಕಾನನಾಂತರಗಳಲ್ಲಿ ನೆಲಸಿ ಕಾಡು ಮನುಷ್ಯರಂತೆ ಮೈಗೆ ಬಣ್ಣ ಬಳಿದುಕೊಳ್ಳುತ್ತಿದ್ದ ಕಾಲದಲ್ಲೇ ನಮ್ಮ ನಾಡು ಪ್ರಬುದ್ಧವಾಗಿತ್ತು. ಇತಿಹಾಸದ ಬಗೆಗೆ ಕೂಡ ನಿಲುಕದ ಪುರಾತನಕಾಲದಿಂದಲೂ, ನಮ್ಮ ಆಚಾರ ವ್ಯವಹಾರಗಳ ಬಗೆಗೂ ನಿಲುಕದ ಗತಕಾಲದಿಂದಲೂ, ಅನಾದಿಕಾಲದಿಂದ ಇಂದಿನ ವರೆಗೂ ಮಹೋನ್ನತ ಭಾವನಾಪರಂಪರೆ ಇಲ್ಲಿಂದ ಹೊರಹೊಮ್ಮಿವೆ. ಅವರಾಡಿದ ಪ್ರತಿಯೊಂದು ಮಾತಿನ ಹಿಂದೆ ಆಶೀರ್ವಾದ ಬಲವಿದೆ, ಮುಂದೆ ಶಾಂತಿಯೊಲುಮೆ ಇದೆ. ಪ್ರಪಂಚದಲ್ಲಿ ನಾವು ಇತರ ರಾಷ್ಟ್ರಗಳಂತೆ ಮತ್ತೊಬ್ಬರನ್ನು ಗೆಲ್ಲಲಿಲ್ಲ. ಈ ಆಶೀರ್ವಾದ ನಮ್ಮಮೇಲಿರುವುದು, ಅದಕ್ಕೇ ನಾವಿನ್ನೂ ಜೀವಿಸಿರುವೆವು. ಒಂದು ಕಾಲವಿತ್ತು, ಆಗ ಯವನ ಸೇನಾ ಸಮೂಹದ ಪದಾಘಾತಕ್ಕೆ ತಿರೆ ತಲ್ಲಣಿಸುತ್ತಿತ್ತು. ಅದು ತಿರೆಯ ರಂಗಭೂಮಿಯಿಂದ ಮಂಗಮಾಯವಾಯಿತು. ಅದರ ಕಥೆಯನ್ನು ಕೂಡ ಈಗ ಹೇಳುವವರಿಲ್ಲ. ಆ ಪುರಾತನ ಯವನ ದೇಶ ಗತಕಾಲದಲ್ಲಿ ಗತಿಸಿಯೇ ಹೋಯಿತು. ಪ್ರಪಂಚದ ಪ್ರಖ್ಯಾತ ಸ್ಥಳಗಳಲ್ಲೆಲ್ಲಾ ರೋಮನ್ನರ ಪತಾಕೆ ಹಾರಾಡುತ್ತಿದ್ದ ಕಾಲ ಒಂದಿತ್ತು. ರೋಮನ್ ಚಕ್ರಾಧಿಪತ್ಯದ ಶಕ್ತಿಯನ್ನು ಎಲ್ಲರೂ ಮನಗಂಡರು, ಎಲ್ಲರೂ ಅದರ ಪ್ರಭಾವಕ್ಕೆ ಮಣಿಯಬೇಕಾಯಿತು. 'ರೋಮನ್' ಪದವನ್ನು ಕೇಳಿದೊಡನೆಯೇ ತಿರೆ ತಲ್ಲಣಿಸುತ್ತಿತ್ತು. ಆದರೆ ಈಗ ಅವರ ರಾಜಧಾನಿ ಭಗ್ನಾವಶೇಷದಿಂದ ತುಂಬಿದೆ. ಸೀಸರ್ ಚಕ್ರವರ್ತಿಗಳಾಳಿದೆಡೆಯಲ್ಲಿ ಜೇಡ ತನ್ನ ಬಲೆಯನ್ನು ಕಟ್ಟುತ್ತಿರುವುದು. ಅನ್ಯ ಜನಾಂಗಗಳು ಇದರಂತೆಯೆ ಪ್ರಖ್ಯಾತಿಯ ಶಿಖರದಲ್ಲಿ ಕೆಲವು ಗಂಟೆಗಳ ಕಾಲ ಕಾಂತಿಯಿಂದ ಕೋರೈಸಿ, ಹೀನ ಬಾಳಿನಲ್ಲಿ ನಿರತರಾಗಿ, ನೀರಮೇಲಿನ ಕಿರುದೆರೆಯಂತೆ ನಿರ್ನಾಮವಾಗಿ ಹೋಗಿವೆ. ಅನ್ಯ ಜನಾಂಗಗಳು ಮಾನವ ಕೋಟಿಯ ಮೇಲೆ ತಮ್ಮ ಪ್ರಭಾವವನ್ನು ಬಿಟ್ಟಿರುವುದು ಹೀಗೆ. ಆದರೆ ನಾವಿನ್ನೂ ಜೀವಂತವಾಗಿರುವೆವು. ಮನು ಏನಾದರೂ ಈಗ ಬಂದರೆ ಅವನಿಗೆ ಆಶ್ಚರ್ಯವಾಗುವುದಿಲ್ಲ, ಪರದೇಶದಲ್ಲಿ ಇರುವೆನೆಂಬ ಭಾವನೆ ಬರುವುದಿಲ್ಲ. ಹಲವು ಸಹಸ್ರ ವರ್ಷಗಳಿಂದ ಆಲೋಚಿಸಿ ಆಚರಣೆಗೆ ತಂದ ಅಂದಿನ ನಿಯಮಗಳೇ ಇಂದು ಇವೆ; ಹಲವು ಶತಮಾನಗಳ ಅನುಭವದಿಂದ

ಜನಿಸಿದ, ಶಾಶ್ವತವಾಗಿರುವಂತೆ ತೋರುವ ಆಚಾರ ವ್ಯವಹಾರಗಳೇ ಇಂದೂ ಇವೆ. ದಿನ ಕಳೆದಂತೆಲ್ಲಾ, ದುರದೃಷ್ಟದ ಪೆಟ್ಟಿನ ಸುರಿಮಳೆಗೆ ತುತ್ತಾದ ಮೇಲೆ, ಇದರಿಂದ ಒಂದು ಮಾತ್ರ ಸಿದ್ಧಿಸಿದಂತೆ ಆಗಿದೆ. ಅದೇ ಇವರನ್ನು ಇನ್ನೂ ದೃಢಮನಸ್ಕರನ್ನಾಗಿ ಮಾಡಿರುವುದು, ಬಲಾಢ್ಯರನ್ನಾಗಿ ಮಾಡಿರುವುದು. ಇವುಗಳ ಕೇಂದ್ರ, ಜನಜೀವನದ ಸ್ಫೂರ್ತಿ ಚಿಲುಮೆ, ಯಾವ ಹೃದಯದಿಂದ ಈ ಭಾವನಾಡಿಗಳು ಹೋಗುವುವೋ, ಅದೇ ಈ ನಮ್ಮ ಭಾರತಾವನಿ. ಪ್ರಪಂಚದ ಪೂರ್ಣ ಅನುಭವ ಪಡೆದಮೇಲೆ ಈ ಮಾತನ್ನು ಹೇಳುತ್ತಿರುವೆನು ಕೇಳಿ. ಪ್ರಪಂಚದ ಇತರ ರಾಷ್ಟ್ರಗಳಿಗೆ ಧರ್ಮವೆಂಬುದು ಜೀವನದ ಹಲವು ಕಸಬಿನಲ್ಲಿ ಒಂದು. ರಾಜಕೀಯವಿದೆ, ಸಮಾಜದ ಸುಖ ಭೋಗಗಳಿವೆ, ಐಶ್ವರ್ಯ ಮತ್ತು ಅಧಿಕಾರದಿಂದ ಗಳಿಸುವುದು ಎಷ್ಟೋ ಇವೆ, ಇಂದ್ರಿಯ ಸುಖಕ್ಕೆ ಬೇಕಾದಷ್ಟು ವಿಷಯ ವಸ್ತುಗಳಿವೆ. ಜೀವನದ ಇಂತಹ ಹಲವು ವ್ಯವಹಾರಗಳ ಮಧ್ಯೆ, ಕ್ಷಣಿಕ ಇಂದ್ರಿಯ ಸುಖ ತೃಪ್ತಿಗಾಗಿ ಪಲವು ವಸ್ತುಗಳನ್ನು ಅರಸುವಾಗ, ಮಧ್ಯೆ ಸ್ವಲ್ಪ ಧರ್ಮವೂ ಇದೆ. ಆದರೆ ಇಲ್ಲಿ ಭರತಖಂಡದಲ್ಲಿ ಧರ್ಮ ಏಕಮಾತ್ರ ವ್ಯವಹಾರ. ನಿಮ್ಮಲ್ಲಿ ಎಷ್ಟು ಜನಕ್ಕೆ ಚೈನಾ ಜಪಾನೀಯರ ಯುದ್ಧ ಗೊತ್ತಿದೆ? ಯಾರಿಗಾದರೂ ಗೊತ್ತಿದ್ದರೆ ಬಹಳ ಕಡಿಮೆ. ಆದರೆ ಅಮೆರಿಕಾದಲ್ಲಿ ವಿಶ್ವಧರ್ಮ ಸಮ್ಮೇಳನ ಒಂದಾಯಿತು. ಅಲ್ಲಿಗೆ ಒಬ್ಬ ಹಿಂದೂ ಸನ್ಯಾಸಿಯನ್ನು ಕಳುಹಿಸಿದ್ದರು, ಎಂಬ ವರ್ತಮಾನ ಒಬ್ಬ ಕೂಲಿಗೂ ತಿಳಿದಿರುವುದು ಆಶ್ಚರ್ಯ. ಇದು ಗಾಳಿ ಎತ್ತ ಬೀಸುತ್ತದೆ ಎಂಬುದನ್ನು ತೋರುವುದು, ನಮ್ಮ ಜನಾಂಗದ ಜೀವಾಳವೆಲ್ಲಿದೆ ಎಂಬುದನ್ನು ತೋರುವುದು. ಪರದೇಶೀಯ ಪ್ರಪಂಚ ಪ್ರವಾಸಿಗಳು ಬರೆದ ಪುಸ್ತಕಗಳನ್ನು ಓದುತ್ತಿದ್ದೆ. ಪ್ರಾಚ್ಯ ಜನಾಂಗದ ಮೌಢ್ಯತೆಯನ್ನು ನೋಡಿ ಅವರು ವ್ಯಥೆಪಡುವರು. ಆದರೆ ಇದು ಸ್ವಲ್ಪ ಮಟ್ಟಿಗೆ ಸತ್ಯ ಸ್ವಲ್ಪ ಮಟ್ಟಿಗೆ ಅಸತ್ಯವೆಂದು ನನಗೆ ತಿಳಿಯಿತು. ಇಂಗ್ಲೆಂಡ್, ಅಮೆರಿಕಾ, ಫ್ರಾನ್ಸ್, ಜರ್ಮನಿ ರೈತರನ್ನು ನೀವು ಯಾವ ರಾಜಕೀಯ ಪಂಗಡಕ್ಕೆ ಸೇರಿದವರೆಂದು ಪ್ರಶ್ನಿಸಿದರೆ, ಅವರು, ರ್ಯಾಡಿಕಲ್ಸ್, ಅಥವಾ ಕನ್‌ಸರ್‌ವೇಟೀವ್ ಪಂಗಡಕ್ಕೆ ಸೇರಿದವರೆಂದು, ಮತ್ತು ತಾವು ಯಾರಿಗೆ ಓಟು ಮಾಡುತ್ತೇವೆ ಎಂಬುದನ್ನೂ ಹೇಳುವರು. ಅಮೆರಿಕಾ ದೇಶದಲ್ಲಿ ತಾವು ರಿಪಬ್ಲಿಕನ್ನೇ ಅಥವಾ ಡೆಮೋಕ್ರಾಟೇ ಎಂಬುದನ್ನು ಹೇಳುವರು. ಬೆಳ್ಳಿಯ ಸಮಸ್ಯೆಯ ವಿಷಯವಾಗಿಯೂ ಅವರಿಗೆ

ಸ್ವಲ್ಪ ಅನುಭವವಿದೆ. ಅವನನ್ನು ಧರ್ಮದ ವಿಷಯವಾಗಿ ಪ್ರಶ್ನಿಸಿದರೆ, ಅವನು ತಾನು ಚರ್ಚಿಗೆ ಹೋಗುತ್ತೇನೆ, ಯಾವುದೋ ಒಂದು ಪಂಗಡಕ್ಕೆ ಸೇರಿರುವೆನು ಎಂದು ಹೇಳುವನು. ಅವನಿಗೆ ಗೊತ್ತಿರುವುದೇ ಇಷ್ಟು. ಇಷ್ಟೇ ಸಾಕೆಂದು ಅವನು ಭಾವಿಸುವನು.

ನೀವು ಭರತಖಂಡದಲ್ಲಿ ಯಾರಾದರೂ ರೈತರನ್ನು "ನಿಮಗೆ ರಾಜಕೀಯ ವಿಷಯ ಏನಾದರೂ ಗೊತ್ತಿದೆಯೇ?" ಎಂದು ಪ್ರಶ್ನಿಸಿದರೆ, "ಅದೇನು?" ಎನ್ನುವನು. ಅವನಿಗೆ ಸಮತಾವಾದಿಗಳ ಚಳುವಳಿ ಗೊತ್ತಿಲ್ಲ. ಬಂಡವಾಳ ಮತ್ತು ಕೂಲಿಗಾರರಿಗೆ ಇರುವ ಸಂಬಂಧ ಗೊತ್ತಿಲ್ಲ. ಅವನು ಈ ವಿಷಯವನ್ನೇ ಜೀವನದಲ್ಲಿ ಕೇಳಿಲ್ಲ. ಕಷ್ಟಪಟ್ಟು ದುಡಿದು ಸಂಪಾದಿಸುವನು. "ನಿಮ್ಮ ಧರ್ಮ ಯಾವುದು?" ಎಂದು ಪ್ರಶ್ನಿಸಿದರೆ, ಆತ "ನೋಡು ನನ್ನ ಮಿತ್ರನೆ, ಅದನ್ನು ಹಣೆಯ ಮೇಲೆ ಬರೆದಿರುವೆನು" ಎನ್ನುವನು. ಧರ್ಮಕ್ಕೆ ಸಂಬಂಧಪಟ್ಟ ಒಂದೆರಡು ವಿಷಯಗಳನ್ನು ಅವನು ಹೇಳಬಲ್ಲ. ಇದೇ ನಮ್ಮ ಅನುಭವ. ಇದೇ ನಮ್ಮ ರಾಷ್ಟ್ರಜೀವನ. ವ್ಯಕ್ತಿಗಳಲ್ಲಿ ಎಷ್ಟೋ ವೈಶಿಷ್ಟ್ಯಗಳಿವೆ. ಪ್ರತಿಯೊಬ್ಬನೂ ತನ್ನ ಜೀವನ ವಿಕಾಸದ ನಿಯಮವನ್ನು ಅನುಸರಿಸಿ ಬೆಳೆಯುವನು. ಅದನ್ನು ಅವನ ಹಿಂದಿನ ಕರ್ಮ ನಿರ್ಧರಿಸುತ್ತದೆ ಎಂದು ಹಿಂದೂ ಹೇಳುವನು. ಈ ಪ್ರಪಂಚಕ್ಕೆ ಬರುವಾಗ ತನ್ನ ಹಿಂದಿನ ಕರ್ಮವನ್ನೆಲ್ಲಾ ತೆಗೆದುಕೊಂಡು ಬರುವನು. ಅವನ ಅನಂತ ಭೂತಕಾಲ ಈ ವರ್ತಮಾನ ಕಾಲವನ್ನು ನಿರ್ಧರಿಸುವುದು ಅದನ್ನು ಉಪಯೋಗಿಸಿಕೊಳ್ಳುವುದರ ಮೇಲೆ ಅವನ ಭವಿಷ್ಯ ನಿಂತಿದೆ. ಪ್ರಪಂಚದಲ್ಲಿ ಹುಟ್ಟಿದ ಪ್ರತಿಯೊಬ್ಬರಿಗೂ ಯಾವುದೋ ಒಂದು ಸಂಸ್ಕಾರವಿದೆ, ಅವನು ಯಾವುದೋ ಒಂದು ರೀತಿ ಬಾಳಬೇಕಾಗಿದೆ. ಹೇಗೆ ಇದು ವ್ಯಕ್ತಿಗೆ ಅನ್ವಯಿಸುವುದೋ ಹಾಗೆಯೇ ಜನಾಂಗಕ್ಕೆ ಅನ್ವಯಿಸುವುದು. ಪ್ರತಿಯೊಂದು ಜನಾಂಗಕ್ಕೆ ಒಂದು ವಿಧದ ಸಂಸ್ಕಾರವಿದೆ. ಪ್ರತಿಯೊಂದು ಜನಾಂಗವೂ ಒಂದು ರೀತಿ ಆಲೋಚಿಸುವುದು. ಜಗತ್ತಿನಲ್ಲಿ ಪ್ರತಿಯೊಂದು ಜನಾಂಗವೂ ತನ್ನ ಪಾಲಿಗೆ ಬಂದ ವಿಶೇಷ ಕರ್ತವ್ಯವನ್ನು ಸಾಧಿಸಬೇಕಾಗಿದೆ. ಪ್ರತಿಯೊಂದು ಜನಾಂಗವೂ ತನ್ನ ಉದ್ದೇಶ ಸಾಧನೆಗೆ ತಾನೇ ಶ್ರಮಪಡಬೇಕಾಗಿದೆ. ರಾಜಕೀಯ ಮಹತ್ವವಾಗಲೀ, ಸೇನಾ ಶಕ್ತಿಯಾಗಲೀ, ನಮ್ಮ ಜನಾಂಗದ ಗುರಿಯಲ್ಲ. ಅದು ಎಂದೂ ಹಿಂದೆ ಆಗಿರಲಿಲ್ಲ. ಗಮನದಲ್ಲಿಡಿ, ಅದೆಂದೂ ಮುಂದೆ ಆಗ

ಲಾರದು. ಆದರೆ ನಮ್ಮ ಪಾಲಿಗೆ ಬಂದ ಕರ್ತವ್ಯ ಬೇರೆ ಇದೆ. ಜನಾಂಗದ ಆಧ್ಯಾತ್ಮಿಕ ಶಕ್ತಿಯನ್ನೆಲ್ಲಾ ಒಟ್ಟುಗೂಡಿಸಿ, ಕೇಂದ್ರೀಕರಿಸಿ, ಸಮಯ ಬಂದಾಗ ಆ ಮಹಾ ಪ್ರವಾಹದಿಂದ ಜಗತ್ತನ್ನೆಲ್ಲ ಮುಳುಗಿಸುವುದು ನಮ್ಮ ಧ್ಯೇಯವಾಗಿತ್ತು. ಪಾರ್ಸಿಕರು, ಯವನರು, ರೋಮನ್‌ರು, ಅರಬ್ಬಿಯವರು, ಇಂಗ್ಲೀಷರು ತಮ್ಮ ಸೇನಾಸಮೂಹದಿಂದ ಪ್ರಪಂಚವನ್ನು ಗೆದ್ದು ಬೇರೆ ಬೇರೆ ರಾಷ್ಟ್ರಗಳನ್ನು ಒಟ್ಟುಗೂಡಿಸಲಿ. ಆಗ ಈ ಹೊಸ ಮಾರ್ಗದ ಮೂಲಕ ಅನ್ಯಜನಾಂಗದ ನಾಡಿಯಲ್ಲಿ ಪ್ರವಹಿಸುವುದಕ್ಕೆ ಭಾರತೀಯ ತತ್ತ್ವ ಮತ್ತು ಆಧ್ಯಾತ್ಮಿಕ ಭಾವನೆಗಳು ಸದಾ ಅಣಿಯಾಗಿರುವುವು. ಮಾನವಕೋಟಿಯ ಪ್ರಗತಿಗೆ, ಶಾಂತ ಪರಾಯಣ ಭಾರತೀಯ ತನ್ನ ಪಾಲಿನದನ್ನೂ ನೀಡಬೇಕಾಗಿದೆ. ಆಧ್ಯಾತ್ಮಿಕ ಜ್ಞಾನವೆ ಪ್ರಪಂಚಕ್ಕೆ ಭರತಖಂಡ ಕೊಡುವ ಬಹುಮಾನ.

ಹಿಂದಿನ ಇತಿಹಾಸವನ್ನು ಓದಿದರೆ, ಎಂದು ಯಾವುದಾದರು ಪ್ರಬಲ ದಿಗ್ವಿಜಯೀ ರಾಷ್ಟ್ರ ಅನ್ಯರಾಷ್ಟ್ರಗಳನ್ನು ಗೆದ್ದು ಒಂದು ಸೂತ್ರದಲ್ಲಿ ಬಂಧಿಸುವುದಕ್ಕೆ ಯತ್ನಿಸಿದಾಗ, ಚಿರಸ್ವಾತಂತ್ರ್ಯಪ್ರಿಯ ಭರತಖಂಡವನ್ನು ಕೂಡ ಅನ್ಯರಾಷ್ಟ್ರಗಳ ಅಧೀನಕ್ಕೆ ಸೇರಿಸಿದಾಗ, ಇದರ ಫಲರೂಪವಾಗಿ ಸಮಗ್ರ ಜಗತ್ತಿಗೆ ಭಾರತೀಯ ಆಧ್ಯಾತ್ಮಿಕ ತರಂಗ ವ್ಯಾಪಿಸುವುದು ಅರಿವಾಗುವುದು. ಪಾರ್ಸಿ ಭಾಷೆಯಲ್ಲಿ ಭಾಷಾಂತರಮಾಡಿದ ಉಪನಿಷತ್ತನ್ನು ಫ್ರಾನ್ಸಿನ ತರುಣನೊಬ್ಬ ಅದನ್ನು ಲ್ಯಾಟಿನ್ ಭಾಷೆಗೆ ಅನುವಾದ ಮಾಡಿದ್ದನು. ಈ ಶತಮಾನದ ಆದಿಯಲ್ಲಿ ಪ್ರಖ್ಯಾತ ಜರ್ಮನ್ ತತ್ತ್ವಜ್ಞಾನಿ ಷೋಪನಾರ್ ಎಂಬುವನು ಇದನ್ನು ಓದಿ, "ಪ್ರಪಂಚದಲ್ಲೆಲ್ಲಾ ಉಪನಿಷತ್ತಿನ ಅಧ್ಯಯನದಷ್ಟು ಪ್ರಯೋಜನಕಾರಿ ಮತ್ತೊಂದು ಇಲ್ಲ. ಇದು ನನ್ನ ಜೀವನಕ್ಕೆ ಶಾಂತಿ ನೀಡಿದೆ, ಮೃತ್ಯುಸಮ್ಮುಖದಲ್ಲಿಯೂ ಶಾಂತಿ ಭರವಸೆ ನೀಡುತ್ತದೆ" ಎಂದಿರುವನು. ಆ ಪ್ರಖ್ಯಾತ ಜರ್ಮನ್ ಋಷಿಯ ಭವಿಷ್ಯವಾಣಿ ಇದು : "ಗ್ರೀಕ್ ಸಾಹಿತ್ಯ ಪುನರುದ್ಧಾರಕ್ಕಿಂತ ಪ್ರಬಲವಾಗಿ ವಿಸ್ತಾರವಾಗಿರುವ ಆಲೋಚನಾ ಪ್ರಣಾಳಿಯನ್ನು ಜಗತ್ತು ಕಾಣುವುದು". ಅವನ ಭವಿಷ್ಯವಾಣಿ ಇಂದು ಸಫಲವಾಗುತ್ತಿರುವುದು. ಯಾರು ಲಕ್ಷ್ಯದಿಂದ ನೋಡುತ್ತಿರುವರೊ, ಪಾಶ್ಚಾತ್ಯ ಜನಾಂಗದ ವಿಭಿನ್ನ ಆಲೋಚನೆಯನ್ನು ಗ್ರಹಿಸಬಲ್ಲರೋ, ಯಾವ ಆಲೋಚನಾಶೀಲರು ಅನ್ಯದೇಶಗಳಲ್ಲಿ ಅಧ್ಯಯನ ಮಾಡುತ್ತಿರುವರೋ, ಅವರಿಗೆ ಭಾರತೀಯ ಆಲೋಚನೆ ಧೀರವಾಗಿ

ಅವಿರಾಮವಾಗಿ, ಪ್ರಪಂಚದ ಮೇಲೆ ತನ್ನ ಪ್ರಭಾವವನ್ನು ಬೀರುತ್ತಿರುವುದು ಕಾಣುವುದು. ಜಗತ್ತಿನ ಭಾವಗತಿಯಲ್ಲಿ, ಆದರ ಸಾಹಿತ್ಯದಲ್ಲಿ ಒಂದು ಹೊಸರೀತಿಯನ್ನು ನೋಡುತ್ತೇವೆ.

ಭಾರತೀಯ ಪ್ರಭಾವದಲ್ಲಿ ಮತ್ತೊಂದು ವಿಶೇಷವಿದೆ. ನಾವು ನಮ್ಮ ಭಾವನೆಯನ್ನು ಕತ್ತಿ ಅಥವಾ ಕೋವಿಯ ಬಲದಿಂದ ಹರಡಲಿಲ್ಲ. ಪ್ರಪಂಚಕ್ಕೆ ಭರತಖಂಡ ಕೊಟ್ಟ ಬಹುಮಾನವನ್ನು ಒಂದು ಆಂಗ್ಲ ಭಾಷೆಯ ಪದದಲ್ಲಿಡಬೇಕಾದರೆ, ಭಾರತೀಯ ಸಾಹಿತ್ಯ, ಮಾನವ ಕೋಟಿಯ ಮೇಲೆ ಮಾಡಿದ ಪರಿಣಾಮವನ್ನು ಒಂದು ಪದದಲ್ಲಿಡಬೇಕಾದರೆ, ಅದೇ fascination, ಸಮ್ಮೋಹಿನೀ ಶಕ್ತಿ. ಹಟಾತ್ತಾಗಿ ಮನುಷ್ಯನನ್ನು ಮುಗ್ಧ ಮಾಡುವಂತೆ ಅಲ್ಲ. ಅನೇಕರಿಗೆ ಭಾರತೀಯ ಆಲೋಚನೆ ಅವರ ರೀತಿ ನೀತಿ ಅವರ ದರ್ಶನ ಅವರ ಸಾಹಿತ್ಯ ಮೊದಲು ಉಪೇಕ್ಷಣೀಯವಾಗಿರುವುದು. ಆದರೆ ಬಿಡದೆ ಮುಂದುವರಿಯಲಿ, ಆ ಭಾವನೆಗಳ ಹಿಂದೆ ಇರುವ ತತ್ತ್ವಗಳ ಪರಿಚಯವಾಗಲಿ, ಆಗ ನೂರರಲ್ಲಿ ತೊಂಬತ್ತೊಂಬತ್ತು ಮಂದಿ ಮುಗ್ಧರಾಗುವರು. ಅದರ ಆಕರ್ಷಣೆಗೆ ಸಿಲುಕುವರು. ನಿಧಾನವಾಗಿ ಮೌನವಾಗಿ ಮುಂಜಾನೆಯಲ್ಲಿ ಬೀಳುವ ಹಿಮಮಣಿಯು ಕೇಳದೇ ಇದ್ದರೂ ಕಾಣದೇ ಇದ್ದರೂ ಅದ್ಭುತ ಪರಿಣಾಮವನ್ನುಂಟುಮಾಡುವಂತಿದೆ ಶಾಂತ ಸಹಿಷ್ಣು ಆಧ್ಯಾತ್ಮಿಕ ಪ್ರಧಾನ ಭಾರತೀಯರ ಪ್ರಭಾವ.

ಪುನಃ ಪ್ರಾಚೀನ ಇತಿಹಾಸದ ಪುನರಭಿನಯ ಪ್ರಾರಂಭವಾಗಿದೆ. ಇಂದು ಆಧುನಿಕ ವಿಜ್ಞಾನದ ಆವಿಷ್ಕಾರದೆದುರಿಗೆ ಕೇವಲ ತೋರಿಕೆಗೆ ಸಧೃಡವಾಗಿ ಕಾಣುತ್ತಿದ್ದ ನಂಬಿಕೆಗಳೆಲ್ಲಾ ಆಮೂಲಾಗ್ರವಾಗಿ ಕುಸಿದು ಹೋಗಿರುವಾಗ, ವಿಭಿನ್ನ ಧರ್ಮ ಸಂಪ್ರದಾಯ ಮನುಷ್ಯರಿಗೆ ಬೇರೆ ಬೇರೆ ನಂಬಿಕೆಗಳನ್ನು ಅನುಸರಿಸಬೇಕೆಂದು ಹೇಳುತ್ತಿದ್ದುದೆಲ್ಲಾ ಶೂನ್ಯದಲ್ಲಿ ಪರ್ಯವಸಾನವಾಗುತ್ತಿದೆ. ಆಧುನಿಕ ಕಾಲದ ಪ್ರಾಚೀನ ಸಂಶೋಧನೆಗಳೆಂಬ ಪ್ರಬಲ ಮುಸಲಧಾರೆ ಎದುರಿಗೆ ಪ್ರಾಚೀನ ನಂಬಿಕೆಗಳೆಲ್ಲಾ ಗಾಜಿನಂತೆ ಚೂರು ಚೂರಾಗುತ್ತಿವೆ. ಪಾಶ್ಚಾತ್ಯ ಜಗತ್ತಿನಲ್ಲಿ ಧರ್ಮ ಕೇವಲ ಮೂಢಮತಿಗಳ ಆದರಣೆಗೆ ಮಾತ್ರ ಪಾತ್ರವಾಗಿದೆ. ಕೃತವಿದ್ಯರು ಧರ್ಮಕ್ಕೆ ಸಂಬಂಧಪಟ್ಟ ಅಂಶಗಳನ್ನು ತಾತ್ಸಾರದಿಂದ ನೋಡುತ್ತಿರುವರು. ಇಂತಹ ಪರಿಸ್ಥಿತಿಯಲ್ಲಿ ಭಾರತ ದರ್ಶನ ಮತ್ತು ಭಾರತೀಯರು ಅನುಷ್ಠಾನದಲ್ಲಿ ತೋರುವ ಸರ್ವೋಚ್ಛ ಧಾರ್ಮಿಕ ಭಾವನೆ

ಪ್ರಮುಖವಾಗುತ್ತಿದೆ. ಅಸೀಮ ಅನಂತ ಜಗತ್ತಿನಲ್ಲಿ ಏಕತ್ವ, ನಿರ್ಗುಣ ಬ್ರಹ್ಮವಾದ, ಜೀವಾತ್ಮನ ಅನಂತ ಸ್ವರೂಪ ಮತ್ತು ಅದರ ವಿಭಿನ್ನ ಜೀವ ಶರೀರಗಳಲ್ಲಿ ಅವಿಚ್ಛೇದ ಸಂಕ್ರಮಣ ರೂಪಿನಲ್ಲಿರುವ ಅಪೂರ್ವ ತತ್ತ್ವ, ಬ್ರಹ್ಮಾಂಡದ ಅನಂತತ್ವ ಇವು ವೈಜ್ಞಾನಿಕ ಜಡವಾದದ ಪಾಶದಿಂದ ನಮ್ಮನ್ನು ಪಾರುಮಾಡಲು ಬರುತ್ತಿವೆ. ಪ್ರಾಚೀನ ಸಂಪ್ರದಾಯಬದ್ಧರು ಪ್ರಪಂಚವನ್ನು ಒಂದು ಮಣ್ಣಿನ ಮುದ್ದೆ ಎಂದೂ, ಸೃಷ್ಟಿ ಈಗ ತಾನೆ ಆರಂಭವಾಯಿತೆಂದೂ ಭಾವಿಸಿದ್ದರು. ಆದರೆ ಕೇವಲ ನಮ್ಮ ಪ್ರಾಚೀನ ಶಾಸ್ತ್ರದಲ್ಲಿ ಮಾತ್ರ ದೇಶಕಾಲನಿಮಿತ್ತದ ಅನಂತತೆ, ಮತ್ತು ಎಲ್ಲಾ ಧರ್ಮದ ಅನ್ವೇಷಣೆಯ ಹಿಂದೆಯೂ ಜೀವಾತ್ಮನ ಅನಂತ ಮಹಿಮೆಯೆ ಆಧಾರವಾಗಿದೆ. ಕ್ರಮವಿಕಾಸವಾದ, ಶಕ್ತಿ ಸಾತತ್ಯ (conservation of energy) ಮುಂತಾದ ಆಧುನಿಕ ಭಯಾನಕ ತತ್ತ್ವಗಳು ಕ್ಷುದ್ರ ಧರ್ಮಗಳಿಗೆ ಕುಠಾರಾಘಾತ ಪ್ರಾಯವಾಗಿವೆ. ಅದ್ಭುತವಾದ ಯುಕ್ತಿ ಪೂರಿತವಾದ ವಿಶಾಲವಾದ ಭವ್ಯ ಭಾವನೆಗಳು ಉಪನಿಷತ್ತಿನಲ್ಲಿ ಮಾತ್ರ ದೊರಕುವುವು. ಮಾನವನ ಅತಿ ಅದ್ಭುತ ಕೃತಿಗಳು ಇವು. ಇದೇ ದೇವ ವಾಣಿ, ಇದೇ ಉಪನಿಷತ್ತು. ಇಂತಹ ಸಮಯದಲ್ಲಿ ಈ ಭಾವನೆ ಮಾತ್ರ ಶಿಕ್ಷಿತ ಮಾನವ ಕುಲಕ್ಕೆ ಶ್ರದ್ಧೆ ಭಕ್ತಿ ಹುಟ್ಟಿಸಬಲ್ಲದು.

ಪರರಾಷ್ಟ್ರಗಳಮೇಲೆ ನಮ್ಮ ಧರ್ಮ ತನ್ನ ಪ್ರಭಾವವನ್ನು ಬೀರು ತ್ತಿದೆ ಎಂದರೆ ನಮ್ಮ ಧರ್ಮಗಳಲ್ಲಿ ಮೂಲವಾದ ಅದರ ಹಿನ್ನೆಲೆಯಾದ ತತ್ತ್ವಗಳು ಮಾತ್ರ ಎಂದು ಹೇಳಬೇಕಾಗಿದೆ. ಹಲವು ಶತಮಾನಗಳಿಂದ ಸಾಮಾಜಿಕ ಹಿತರಕ್ಷಣೆಯ ಅವಶ್ಯಕತೆಗಾಗಿ ಉದಿಸಿದ ಆಚಾರ ವ್ಯವಹಾರ ಗಳು ಗೌಣ, ಇವು ಧರ್ಮವಲ್ಲ. ನಮ್ಮ ಶಾಸ್ತ್ರದಲ್ಲಿ ಎರಡು ವಿಧದ ಸತ್ಯ ವನ್ನು ಹೇಳುವರು. ಒಂದು ಯಾವಾಗಲೂ ಇರುವಂತಹುದು, ಮನುಷ್ಯನ ಸ್ವರೂಪ, ಆತ್ಮ ಸ್ವರೂಪ, ಜೀವನಿಗೂ ಈಶ್ವರನಿಗೂ ಇರುವ ಸಂಬಂಧ, ಈಶ್ವರ ಸ್ವರೂಪ ಮೋಕ್ಷ ಇತ್ಯಾದಿ. ಪೂರ್ಣತ್ವ, ಸೃಷ್ಟಿಯ ಅನಂತತೆ, ಇದನ್ನು ಸ್ಪಷ್ಟವಾಗಿ ಹೇಳುವುದಾದರೆ ಬ್ರಹ್ಮನ ಪ್ರಕ್ಷೇಪಣ, (Projection) ಜಗತ್ ಶೂನ್ಯದಿಂದ ಜನಿಸಿಲ್ಲ, ಇದು ಆದಿಯಲ್ಲಿ ಇದ್ದ ಸೂಕ್ಷ್ಮ ವಸ್ತುವಿನ ವಿಕಾಸ, ಇದು ಯುಗಪ್ರವಾಹ ಸಂಬಂಧವಾದ ಅದ್ಭುತ ನಿಯ ಮಾವಳಿ ಮೇಲೆ ನಿಂತಿದೆ. ಪ್ರಕೃತಿಯ ಸರ್ವವ್ಯಾಪಿ ನಿಯಮಾವಳಿಮೇಲೆ ನಿಂತ ಸನಾತನ ತತ್ತ್ವಗಳು ಇವು. ಎರಡನೆಯದು ಗೌಣ ನಿಯಮ. ಇದು

ದೈನಂದಿನ ಕಾರ್ಯನಿರ್ವಾಹಕ್ಕಾಗಿದೆ. ಇವು ಪುರಾಣಕ್ಕೆ ಸ್ಮೃತಿಗೆ ಸೇ ದುವು, ಶ್ರುತಿಗಲ್ಲ. ಇವಕ್ಕೂ ಆಧ್ಯಾತ್ಮಿಕ ತತ್ತ್ವಕ್ಕೂ ಸಂಬಂಧವಿಲ್ಲ ನಮ್ಮ ದೇಶದಲ್ಲಿ ಈ ಗೌಣ ನಿಯಮಗಳು ಕಾಲಕಾಲಕ್ಕೆ ಬದಲಾಯಿಸ ತ್ತಿವೆ. ಒಂದು ಕಾಲದ ಒಂದು ಯುಗದ ಆಚಾರ ವ್ಯವಹಾರ ಮತ್ತೊಂದು ಕಾಲ ಯುಗಕ್ಕೆ ಅನ್ವಯಿಸುವುದಿಲ್ಲ. ಯುಗವಾದ ಮೇಲೆ ಯುಗ ಬರುವುದ ರಿಂದ ಅವು ಇನ್ನೂ ಬದಲಾಯಿಸಬೇಕು. ಮಹಾ ಋಷಿಗಳು ಜನಿಸಿ ಆಯಾ ದೇಶಕಾಲಕ್ಕೆ ಉಪಯೋಗವಾಗುವಂತಹ ನವನವ ಆಚಾರ ವ್ಯವ ಹಾರವನ್ನು ಜಾರಿಗೆ ತರುವರು.

ಜೀವಾತ್ಮ ಪರಮಾತ್ಮ ಬ್ರಹ್ಮಾಂಡಕ್ಕೆ ಸಂಬಂಧಪಟ್ಟ ಅಪೂರ್ವ ಅನಂತ ಭವ್ಯ ಮಹಾತತ್ತ್ವಗಳೇ ಭರತಖಂಡದಲ್ಲಿ ಉತ್ಪನ್ನ ವಾಗಿವೆ. ಕೇವಲ ಭರತಖಂಡ ಮಾತ್ರ, ಸಣ್ಣ ಒಂದು ಕೋಮಿನ ದೇವರ ಹೆಸರಿನಲ್ಲಿ, "ನನ್ನ ದೇವರೆ ಸತ್ಯ. ನಿನ್ನದಲ್ಲ, ಅದನ್ನು ಕಾದಾಡಿ ಬಗೆಹರಿಸುವ" ಎಂದು ನಿಂತಿಲ್ಲ. ಕ್ಷುದ್ರ ದೇವತೆಗಳ ಹೆಸರಿನಲ್ಲಿ ಕಾದಾಟ ಇಲ್ಲಿ ಹುಟ್ಟಲಿಲ್ಲ. ಮಾನವನ ಅನಂತತೆಯ ಮೇಲೆ ನಿಂತ ಈ ಸನಾತನ ತತ್ತ್ವಗಳು ಮಾನವನ ಹಿತಕ್ಕೆ ಹೇಗೆ ಪ್ರಯೋಜನಕಾರಿಯಾಗಿತ್ತೋ ಹಾಗೆಯೇ ಈಗಲೂ ಪ್ರಬಲವಾಗಿವೆ. ಎಲ್ಲಿಯವರೆವಿಗೂ ಸೃಷ್ಟಿ ಇದೆಯೊ, ಕರ್ಮನಿಯಮ ಜಾರಿಯಲ್ಲಿದೆಯೊ, ನಾವು ಜೀವಿಗಳಂತೆ ಹುಟ್ಟಿ ನಮ್ಮ ನಮ್ಮ ಶಕ್ತಿದ್ವಾರ ಕರ್ಮಕ್ಕೆ ತಕ್ಕಂತೆ ನಮ್ಮ ಭವಿಷ್ಯವನ್ನು ಸೃಷ್ಟಿಸಿಕೊಳ್ಳ ಬೇಕಾಗಿದೆಯೋ, ಅಲ್ಲಿಯವರೆಗೂ ಈ ನಿಯಮಗಳು ಚಿರಜಾಗ್ರತ ವಾಗಿರುವುವು.

ಎಲ್ಲಕ್ಕಿಂತ ಹೆಚ್ಚಾಗಿ ಭರತಖಂಡ, ಪ್ರಪಂಚಕ್ಕೆ ಮಾಡುವ ಮಹಾ ದಾನ ಇದು. ಭಿನ್ನ ಭಿನ್ನ ಜಾತಿಯಲ್ಲಿ ಹೇಗೆ ಧರ್ಮ ಹುಟ್ಟಿತು, ಪ್ರವರ್ಧ ಮಾನಕ್ಕೆ ಬಂದಿತು ಎಂಬುದನ್ನು ನೋಡಿದರೆ ಪ್ರತಿಯೊಂದು ಕೋಮಿಗೂ ಮೊದಲು ಒಂದೊಂದು ದೇವರು ಇತ್ತು: ಭಿನ್ನ ಭಿನ್ನ ಜಾತಿಗಳಿಗೆ ಪರಸ್ಪರ ಸಂಬಂಧವಿದ್ದರೆ ದೇವರಿಗೆ ಒಂದು ಸಾಮಾನ್ಯ ಹೆಸರು ಬ್ಯಾಬಿಲೋನಿಯಾ ದೇವರಿಗೆಲ್ಲಾ ಇದ್ದಂತೆ ಇರುತ್ತಿತ್ತು. ಬ್ಯಾಬಿಲೋನಿಯಾದವರು ಹಲವು ಪಂಗಡಗಳಾದಾಗ "ಬಾಲ್" ಎಂಬ ಸರ್ವ ಸಾಮಾನ್ಯ ಹೆಸರು ಇರು ತ್ತಿತ್ತು. ಯಹೂದ್ಯ ಪಂಗಡಗಳಲ್ಲಿ ಮೊಲಾಕ್ ಎಂಬ ಸಾಮಾನ್ಯ ಪದ ವಿದ್ದಂತೆ. ಇದರಲ್ಲಿ ಯಾವುದಾದರೂ ಒಂದು ಪಂಗಡ ಪ್ರಬಲವಾದಾಗ

ಅವರ ದೊರೆಯೆ ಉಳಿದ ಪಂಗಡಗಳಿಗೆಲ್ಲಾ ದೊರೆಯಾಗುವುದಕ್ಕೆ ಅಧಿಕಾರವಿದೆ ಎಂದು ಭಾವಿಸುತ್ತಿದ್ದರು. ಇದರಂತೆಯೇ ತಮ್ಮ ಪಂಗಡಕ್ಕೆ ಸೇರಿದ ದೇವರೇ ಉಳಿದ ಪಂಗಡಗಳಿಗೂ ದೇವರು ಎಂಬ ಭಾವವನ್ನು ಉಳಿಸಿಕೊಳ್ಳಬೇಕೆಂದು ಆಲೋಚಿಸುತ್ತಿದ್ದರು. ಬ್ಯಾಬಿಲೋನಿಯದವರು 'ಬಾಲ್ ಮೊರೊಡಾಕ್' ನೇ ಅತ್ಯುತ್ತಮ ದೇವರು, ಉಳಿದವೆಲ್ಲಾ ಗೌಣ ಎನ್ನುತ್ತಿದ್ದರು. ಮೊಲಾಕ್‌ಯಾವ ಉಳಿದವರಿಗೆಲ್ಲರಿಗಿಂತಲೂ ಬಲಾಢ್ಯ ದೇವರು. ಇದನ್ನು ಯುದ್ಧಮಾಡಿ ನಿಷ್ಕರ್ಶಿಸಬೇಕಾಗಿತ್ತು. ಇಲ್ಲಿಯೂ ಅದೇ ಹೋರಾಟವಿತ್ತು. ಇಲ್ಲಿಯೂ ಆ ಶ್ರೇಷ್ಠಪದವಿಗೆ ಹಲವು ದೇವತೆಗಳು ಸ್ಪರ್ಧಿಸುತ್ತಿದ್ದರು. ಆದರೆ ಈ ದೇಶದ ಮತ್ತು ಪ್ರಪಂಚದ ಒಂದು ಮಹಾಭಾಗ್ಯವೇ ಇಂತಹ ಒಂದು ಗೊಂದಲದ ಮಧ್ಯದಿಂದ "ಏಕಂ ಸತ್ ವಿಪ್ರಾ ಬಹುಧಾ ವದಂತಿ" ಎಂಬ ಧ್ವನಿಯುದಿಸಿತು. ಶಿವ ವಿಷ್ಣುವಿಗಿಂತ ಮೇಲೆಂದಾಗಲೀ, ವಿಷ್ಣು ಶಿವನಿಗಿಂತ ಮೇಲೆಂದಾಗಲಿ ಅಲ್ಲ. ನೀವು ಶಿವನೆನ್ನುವುದು ಅದೇ, ವಿಷ್ಣುವೆನ್ನುವುದೂ ಅದೇ, ಬೇರೆ ನೂರಾರು ಹೆಸರಿನಿಂದ ಕರೆಯುವುದೂ ಅದೆ. ಹೆಸರು ಬೇರೆ ಆದರೂ ಅದೆಲ್ಲಾ ಒಂದೇ ವಸ್ತುವನ್ನು ನಿರ್ದೇಶಿಸುವುದು. ಈ ಕೆಲವು ಪದಗಳಲ್ಲಿ ಭಾರತೀಯ ಇತಿಹಾಸವೆಲ್ಲಾ ಹುದುಗಿದೆ. ಆ ಒಂದು ಮಹಾತತ್ತ್ವವನ್ನು ಓಜಸ್ಸಿನಿಂದ ಕೂಡಿದ ಸವಿಸ್ತಾರವಾದ ಭಾಷೆಯಲ್ಲಿ ಇತಿಹಾಸ ಪುನಃ ಪುನಃ ತೋರುತ್ತಿದೆ. ಬಾರಿ ಬಾರಿ ಈ ಮಹಾಸಂದೇಶವನ್ನು ಸಾರುತ್ತಿದೆ. ದೇಶದ ರಕ್ತಗತವಾಗಿ, ನಾಡಿನಾಡಿಯಲ್ಲಿ ಸಂಚರಿಸುವ ಪ್ರತಿಯೊಂದು ರಕ್ತ ಬಿಂದು ಬಿಂದುವಿನಲ್ಲಿಯೂ, ಅವರ ಜೀವನದಲ್ಲಿ ಓತಪ್ರೋತವಾಗಿ ಅವರ ಜಾತೀಯ ಜೀವನದಲ್ಲಿ ಅನುರಣಿತವಾಗುವವರೆಗೆ ಈ ಮಹಾ ಸತ್ಯವನ್ನು ಸಾರಿರುವರು. ಹೀಗೆ ಈ ದೇಶ ಅದ್ಭುತ ಅನ್ಯಮತಸಹಿಷ್ಣುಲೀಲಾ ಕ್ಷೇತ್ರವಾಗಿ ಪರಿಣಮಿಸಿದೆ. ಹಲವು ಧರ್ಮ ಮತ್ತು ಪಂಗಡಗಳನ್ನು ಈ ನಮ್ಮ ಪ್ರಾಚೀನ ಮಾತೃಭೂಮಿಗೆ ಸ್ವಾಗತಿಸುವ ಹಕ್ಕು ನಮ್ಮದಾಗಿದೆ.

ಹಲವು ಧರ್ಮ ಸಂಪ್ರದಾಯಗಳು ಪರಸ್ಪರ ವಿರೋಧದಂತೆ ಕಂಡರೂ ಸೌಹಾರ್ದದಿಂದ ಬಾಳುವಂತಹ ಅದ್ಭುತ ನಿದರ್ಶನಕ್ಕೆ ಇಲ್ಲಿ ಮಾತ್ರ ವಿವರಣೆ ಇದೆ. ನೀನು ದ್ವೈತಿಯಾಗಿರಬಹುದು, ಮತ್ತೊಬ್ಬನು ಅದ್ವೈತಿಯಾಗಿರಬಹುದು, ನೀನು ಭಗವಂತನ ಸೇವಕನೆಂದು ಭಾವಿಸಿರಬಹುದು, ಮತ್ತೊಬ್ಬನು ತಾನೇ ದೇವರೆಂದು ಭಾವಿಸಿರಬಹುದು.

ಆದರೆ ಇಬ್ಬರೂ ಒಳ್ಳೆಯ ಹಿಂದೂಗಳೆ. ಇದು ಹೇಗೆ ಸಾಧ್ಯ? ಇದನ್ನು ಓದಿ: "ಇರುವುದೊಂದೆ ಅದನ್ನು ಋಷಿಗಳು ಬೇರೆ ಬೇರೆ ಹೆಸರುಗಳಿಂದ ಕರೆಯುವರು." ನನ್ನ ದೇಶಬಾಂಧವರೇ, ಎಲ್ಲಕ್ಕಿಂತ ಹೆಚ್ಚಾಗಿ ಈ ಒಂದು ಮಹಾ ಸತ್ಯವನ್ನು ಜಗತ್ತಿಗೆ ನಾವು ಸಾರಬೇಕಾಗಿದೆ. ಅನ್ಯ ದೇಶದ ವಿದ್ಯಾವಂತರು ಕೂಡ ನಮ್ಮ ಧರ್ಮವನ್ನು ವಿಗ್ರಹಾರಾಧನೆ ಎಂದು ತಾತ್ಸಾರದಿಂದ ಅಣಕಿಸುವರು. ನಾನು ಇದನ್ನು ನೋಡಿರುವೆನು. ತಮ್ಮಲ್ಲೇ ಎಷ್ಟೊಂದು ಮೂಢನಂಬಿಕೆಗಳಿವೆ ಎಂಬುದನ್ನು ಅವರು ಆಲೋಚಿಸುವುದೇ ಇಲ್ಲ. ಈಗಲೂ ಈ ಮಹಾಮತಭ್ರಾಂತಿ, ಮನೋ ಸಂಕುಚತೆ ಹಾಗೆಯೆ ಇದೆ. ಒಬ್ಬನಿಗೆ ಏನು ಇದೆಯೋ ಅದೇ ಪ್ರಪಂಚ ದಲ್ಲೆಲ್ಲಾ ಸಾರ್ಥಕವಾದುದು. ಐಶ್ವರ್ಯ ಅಧಿಕಾರ ಆರಾಧನೆಯಿಂದ ಕೂಡಿದ ತನ್ನ ಅಲ್ಪ ಬಾಳುವೆ ಅತ್ಯುತ್ತಮ ಜೀವನ. ಪ್ರಪಂಚದಲ್ಲೆಲ್ಲಾ ಸಂಗ್ರಹ ಯೋಗ್ಯವಾದುದೇ ತನ್ನ ಆಸ್ತಿ, ಬೇರೊಂದೂ ಅಲ್ಲ. ಮಣ್ಣಿನ ಮುದ್ದೆಯಿಂದ ಏನನ್ನಾದರೂ ಮಾಡಿದರೆ ಅಥವಾ ಯಾವುದಾದರೂ ಒಂದು ಯಂತ್ರವನ್ನು ಕಂಡುಹಿಡಿದರೆ, ಅದನ್ನೇ ಪರಮೋಚ್ಚ ವಸ್ತು ವೆಂದು ಹೊಗಳಬೇಕು. ಎಷ್ಟೇ ವಿದ್ಯಾವಂತರಾದರೂ ಪಂಡಿತರಾದರೂ ಪ್ರಪಂಚದಲ್ಲೆಲ್ಲಾ ಹೀಗೆಯೇ. ಪ್ರಪಂಚಕ್ಕೆ ಇನ್ನೂ ವಿದ್ಯೆ ಸಂಸ್ಕೃತಿ ಬರ ಬೇಕಾಗಿದೆ. ಎಲ್ಲಿಯೂ ಸಂಸ್ಕೃತಿ ಇನ್ನೂ ಪ್ರಾರಂಭವಾಗಿಲ್ಲ. ಶೇಕಡ ನೂರಕ್ಕೆ ೯೯.೯ ಜನ ಅನಾಗರಿಕರು. ಗ್ರಂಥಗಳಲ್ಲಿ ನಾವು ಇದನ್ನು ಓದ ಬಹುದು. ಧರ್ಮದಲ್ಲಿ ಸಹಿಷ್ಣುತೆ ಎಂಬ ಪದವನ್ನು ಕೇಳಬಹುದು. ಆದರೆ ಅನುಷ್ಠಾನದಲ್ಲಿರುವುದು ಅತ್ಯಲ್ಪ. ನನ್ನ ಅನುಭವವನ್ನು ತೆಗೆದು ಕೊಳ್ಳಿ. ಶೇಕಡ ತೊಂಬತ್ತೊಂಬತ್ತು ಮಂದಿ ಅದನ್ನು ಆಲೋಚಿ ಸುವುದೂ ಇಲ್ಲ. ನಾನು ಕಂಡ ದೇಶದಲ್ಲೆಲ್ಲ ಧರ್ಮದ ಹೆಸರಿನಲ್ಲಿ ಹಿಂಸೆ ಯಾಗುತ್ತಿದೆ. ಏನನ್ನಾದರೂ ಹೊಸದಾಗಿ ಕಲಿಯಬೇಕಾದರೆ ಹಿಂದಿನ ಆಕ್ಷೇಪಣೆಯನ್ನೇ ತೆಗೆಯುವರು. ಪ್ರಪಂಚದಲ್ಲಿ ಧಾರ್ಮಿಕ ಭಾವನೆಗೆ ಸ್ವಲ್ಪ ಸಹಿಷ್ಣುತೆ ಇದ್ದರೆ, ದಯೆ ಇದ್ದರೆ, ಅದು ಈ ಆರ್ಯ ಭೂಮಿ ಯೊಂದರಲ್ಲಿ ಮಾತ್ರ ಇದೆ. ಇಲ್ಲಿ ಮಾತ್ರ ಭಾರತೀಯರು ಮಹಮ್ಮದೀ ಯರಿಗೆ ಕ್ರೈಸ್ತರಿಗೆ ದೇವಮಂದಿರ ಕಟ್ಟಿ ಕೊಡುವರು. ಮತ್ತೆಲ್ಲಿಯೂ ಇಲ್ಲ. ನೀವು ಅನ್ಯದೇಶಗಳಿಗೆ ಹೋಗಿ, ಮಹಮ್ಮದೀಯರು ಅಥವಾ ಅನ್ಯ ಧರ್ಮಾವಲಂಬಿಗಳನ್ನು ನಿಮಗಾಗಿ ಒಂದು ಗುಡಿ ಕಟ್ಟಿಸಿಕೊಡಿ ಎಂದು

ಕೇಳಿದರೆ, ಅವರು ನಿಮಗೆ ಸಹಾಯ ಮಾಡುವ ರೀತಿಯನ್ನು ಗಮನಿಸಿ. ನಿಮ್ಮ ಗುಡಿಯನ್ನು ಮತ್ತು ಸಾಧ್ಯವಾದರೆ ನಿಮ್ಮನ್ನೂ ಧ್ವಂಸ ಮಾಡಲು ಯತ್ನಿಸುವರು. ಪ್ರಪಂಚಕ್ಕೆ ಇಂದು ಅತ್ಯಾವಶ್ಯಕವಾಗಿ ಬೇಕಾಗಿರುವ ಭಾವನೆ, ಭರತಖಂಡದಿಂದ ಪ್ರಪಂಚ ಕಲಿಯಬೇಕಾಗಿರುವ ನೀತಿ, ಸಹಿಷ್ಣುತೆ ಮಾತ್ರವಲ್ಲ, ಸಹಾನುಭೂತಿ. ಶಿವಮಹಿಮ್ನ ಸ್ತೋತ್ರದಲ್ಲಿ,

> ತ್ರಯೀ ಸಾಂಖ್ಯಂ ಯೋಗಃ ಪಶುಪತಿಮತಂ ವೈಷ್ಣವಮಿತಿ
> ಪ್ರಭಿನ್ನೇ ಪ್ರಸ್ಥಾನೆ ಪರಮಿದಮದಃ ಪಥ್ಯಮಿತಿಚ
> ರುಚೀನಾಂ ವೈಚಿತ್ರ್ಯಾದೃಜುಕುಟಿಲ ನಾನಾಪಥಜುಷಾಂ
> ನೃಣಾಮೇಕೋಗಮ್ಯಸ್ಥಮಸಿ ಪಯಸಾಮರ್ಣವ ಇವ

ಹಲವು ನದಿಗಳು ಬೇರೆ ಬೇರೆ ಬೆಟ್ಟದಲ್ಲಿ ಹುಟ್ಟಿ ನೇರವಾಗಿಯೋ ವಕ್ರವಾಗಿಯೋ ಹರಿದು ಕೊನೆಗೆ ಸಾಗರಕ್ಕೆ ಸೇರುವಂತೆ, ಹೇ ಶಿವ, ಜನರು ತಮ್ಮ ತಮ್ಮ ಸಂಸ್ಕಾರಕ್ಕೆ ತಕ್ಕಂತೆ ನಡೆಯುವ ಬೇರೆ ಬೇರೆ ಪಥಗಳೆಲ್ಲಾ ಕೊನೆಗೆ ನಿನ್ನೆಡೆಗೆ ಒಯ್ಯುವುವು. ದಾರಿ ಬೇರೆ ಆದರೂ ಎಲ್ಲಾ ಒಂದೇ ಗುರಿಯೆಡೆಗೆ ಹೋಗುತ್ತಿರುವುವು. ಕೆಲವು ವಕ್ರವಾಗಿ ಹರಿಯಬಹುದು, ಕೆಲವು ನೇರವಾಗಿ ಹರಿಯಬಹುದು. ಆದರೆ ಕೊನೆಗೆ ಎಲ್ಲಾ ಈಶ್ವರನೆಡೆಗೆ ಬರಲೇಬೇಕು. ಶಿವನನ್ನು ಲಿಂಗದಲ್ಲಿ ಮಾತ್ರ ನೋಡದೆ ಎಲ್ಲೆಡೆಯಲ್ಲಿಯೂ ಅವನನ್ನು ನೋಡಿದಾಗ ಮಾತ್ರ ನಿನ್ನ ಶಿವಭಕ್ತಿ ಪೂರ್ಣವಾಯಿತು. ಎಲ್ಲೆಲ್ಲಿಯೂ, ಎಲ್ಲದರಲ್ಲಿಯೂ ಯಾರು ಹರಿಯನ್ನು ನೋಡಬಲ್ಲರೋ ಅವನೇ ಸಾಧು, ಅವನೇ ಹರಿಭಕ್ತ. ನೀನು ನಿಜವಾದ ಶಿವಭಕ್ತನಾದರೆ ಎಲ್ಲರಲ್ಲಿಯೂ, ಎಲ್ಲದರಲ್ಲಿಯೂ ಅವನನ್ನು ನೋಡಬೇಕು. ಯಾವ ನಾಮರೂಪಗಳಿಂದ ಅವನನ್ನು ಕರೆಯಲಿ ಪೂಜೆಯೆಲ್ಲಾ ಅವನಿಗೆ ಸಲ್ಲುವಂತೆ ನೋಡಬೇಕು. ಯಾರು ಪ್ರಾರ್ಥನಾ ಸಮಯದಲ್ಲಿ ಕಾಬಾಕಡೆಗೆ ತಿರುಗಿರುವರೋ, ಕ್ರೈಸ್ತರ ಚರ್ಚಿನಲ್ಲಿ ಮಂಡಿಯೂರಿ ನಿಂತಿರುವರೋ, ಬುದ್ಧರ ವಿಹಾರದಲ್ಲಿ ಧ್ಯಾನದಲ್ಲಿರುವರೋ ಅವರೆಲ್ಲಾ ತಮಗೆ ತಿಳಿಯಲಿ ತಿಳಿಯದೆ ಇರಲಿ ಅವರೆಲ್ಲರೂ ಪರಮೇಶ್ವರನಡಿದಾವರೆಯಲ್ಲಿ, ಪರಮಾತ್ಮನ ಅಡಿದಾವರೆಯಲ್ಲಿ ತಮ್ಮ ಭಕ್ತಿ ಕಾಣಿಕೆಯನ್ನು ಅರ್ಪಿಸುತ್ತಿರುವರು. ಈ ಪ್ರಪಂಚಕ್ಕೆ ಏನು ಬೇಕೊ ಅದು, ನನಗೆ ಮತ್ತು ನಿಮಗಿಂತ ಅವನಿಗೆ ಚೆನ್ನಾಗಿ ಗೊತ್ತು. ಈ ವೈವಿಧ್ಯತೆ ಮಾಯವಾಗುವುದಿಲ್ಲ, ಅದು ಇರಲೇಬೇಕು. ವೈವಿಧ್ಯತೆ ಇಲ್ಲದೆ ಇದ್ದರೆ ಸೃಷ್ಟಿ ನಾಶವಾದಂತೆ. ಈ ಆಲೋಚನೆಯ

ಘರ್ಷಣದಿಂದಲೇ, ಭಿನ್ನತೆಯಿಂದಲೇ ಬೆಳಕು ಉತ್ಪನ್ನವಾಗುವುದು, ಚಲನೆ ಪ್ರಾರಂಭವಾಗುವುದು, ಎಲ್ಲಾ ಸಾಗುವುದು ಇವರಿಂದ. ಅನಂತ ವಿರೋಧಗಳಂತೆ ಕಾಣುವ ವೈವಿಧ್ಯತೆಯೆಲ್ಲಾ ಇರಬೇಕು. ಆದರೆ ಇದರಿಂದ ನಾವು ಮತ್ತೊಬ್ಬರನ್ನು ದ್ವೇಷಿಸಬೇಕೆಂದಲ್ಲ. ನಾವು ಮತ್ತೊಬ್ಬರೊಂದಿಗೆ ಕಾದಾಡಬೇಕಾದ ಅವಶ್ಯಕತೆ ಇಲ್ಲ. ನಮ್ಮ ಮಾತೃಭೂಮಿಯಲ್ಲಿ ಮಾತ್ರ ಸಾರಿದ ಮೂಲತತ್ತ್ವವನ್ನು ನಾವು ಪುನಃ ಕಲಿಯಬೇಕು, ಅದನ್ನು ಪುನಃ ಮತ್ತೊಬ್ಬರಿಗೆ ಬೋಧಿಸಬೇಕು. ಏಕೆ? ಇವು ನಮ್ಮ ಶಾಸ್ತ್ರದಲ್ಲಿ ಮಾತ್ರ ಇರುವುದಲ್ಲ. ಇದು ನಮ್ಮ ಸಾಹಿತ್ಯದ ಪ್ರತಿಯೊಂದು ಕ್ಷೇತ್ರದಲ್ಲಿಯೂ ಇದೆ. ನಮ್ಮ ಜನಜೀವನದಲ್ಲಿ ಹಾಸುಹೊಕ್ಕಾಗಿದೆ. ಇಲ್ಲಿ ಮಾತ್ರ ಅನುದಿನ ಅನುಷ್ಠಾನ ಮಾಡುತ್ತಿರುವರು. ಯಾರು ಕಣ್ಣುಬಿಟ್ಟು ನೋಡುತ್ತಿರುವರೋ ಅವರಿಗೆ ಅದು ಇಲ್ಲಿ ಮಾತ್ರ ಆಚರಣೆಯಲ್ಲಿರುವುದು ಗೊತ್ತಾಗುವುದು. ನಾವು ಧರ್ಮವನ್ನು ಹೀಗೆ ಬೋಧಿಸಬೇಕು. ಬೋಧಿಸುವುದಕ್ಕೆ ಇದಕ್ಕೂ ಮಿಗಿಲಾದ ಇನ್ನೂ ಅನ್ಯ ವಿಷಯಗಳಿವೆ. ಆದರೆ ಅವು ಕೇವಲ ಪಂಡಿತರಿಗೆ ಮಾತ್ರ. ಶಾಂತಭಾವ ತಿತಿಕ್ಷೆ ಅನ್ಯಮತ ಸಹಿಷ್ಣುತೆ ದಯೆ ಸಹೋದರತ್ವ ಮುಂತಾದುವನ್ನು ಗಂಡಸಾಗಲಿ ಹೆಂಗಸಾಗಲಿ ಮಗುವಾಗಲಿ ಪಂಡಿತನಾಗಲಿ ಪಾಮರನಾಗಲಿ ಯಾವ ಜಾತಿ ಕುಲ ಗೋತ್ರಕ್ಕೆ ಸೇರಿರಲಿ ಎಲ್ಲರೂ ಇದನ್ನು ಅನುಷ್ಠಾನಕ್ಕೆ ತರಬೇಕು;

"ಏಕಂ ಸತ್ ವಿಪ್ರಾ ಬಹುಧಾ ವದಂತಿ"



೨

# ವೇದಾಂತ

## ಜಾಫ್ನ ಉಪನ್ಯಾಸ

ಮಾತನಾಡಬೇಕೆಂದಿರುವ ವಿಷಯ ಬೃಹತ್ತಾಗಿದೆ. ಕಾಲವಿರುವುದು ಅಲ್ಪ. ಒಂದು ಉಪನ್ಯಾಸದಲ್ಲಿ ಹಿಂದೂಧರ್ಮದ ವಿಷಯವನ್ನೆಲ್ಲಾ ವಿಸ್ತರಿಸುವುದು ಅಸಾಧ್ಯ. ಸಾಧ್ಯವಾದಷ್ಟು ಸುಲಭ ಭಾಷೆಯಲ್ಲಿ ಹಿಂದೂ ಧರ್ಮದ ಮುಖ್ಯ ವಿಷಯಗಳನ್ನು ನಿಮ್ಮ ಮುಂದಿಡಲು ಯತ್ನಿಸುತ್ತೇನೆ. ಇಂದು ನಾವು ಕರೆದುಕೊಳ್ಳುತ್ತಿರುವ ಹಿಂದೂ ಎಂಬ ಪದಕ್ಕೆ ಅರ್ಥವೆಲ್ಲಾ ಮಾಯವಾಗಿದೆ. ಇದಕ್ಕೆ ಹಿಂದೆ ಇದ್ದ ಅರ್ಥ ಸಿಂಧೂನದಿಯ ಆಚೆಕಡೆ ಎಂದರೆ ಪೂರ್ವಕ್ಕೆ ಇದ್ದವರು ಎಂದು. ಪುರಾತನ ಪಾರ್ಸಿಯವರು ಇದನ್ನು ಹಿಂದೂಗಳೆಂದು ತಿರುಗಿಸಿದರು. ಸಿಂಧೂನದಿಯ ಪೂರ್ವಕ್ಕೆ ಇರುವವರನ್ನೆಲ್ಲಾ ಹಿಂದೂಗಳೆಂದು ಕರೆದರು. ಈ ಪದ ಬಂದಿರುವುದು ಹೀಗೆ. ಮುಹಮ್ಮದೀಯರ ಆಳ್ವಿಕೆಯ ಕಾಲದಲ್ಲಿ ನಾವೇ ಆ ಪದವನ್ನು ತೆಗೆದುಕೊಂಡೆವು. ಆ ಪದವನ್ನು ಉಪಯೋಗಿಸಿದರೆ ಏನೂ ತೊಂದರೆ ಇಲ್ಲ. ಆದರೆ ಅದಕ್ಕೆ ಇದ್ದ ಅರ್ಥವೆಲ್ಲಾ ಮಾಯವಾಗಿದೆ. ಸಿಂಧೂ ನದಿಯ ಈ ಪಾರ್ಶ್ವದಲ್ಲಿರುವವರೆಲ್ಲಾ ಹಿಂದಿನಂತೆ ಒಂದು ಧರ್ಮವನ್ನು ಅನುಸರಿಸುತ್ತಿಲ್ಲ. ಆ ಪದದ ಅರ್ಥದಲ್ಲಿ ಹಿಂದೂಗಳೂ ಮಾತ್ರವಲ್ಲ, ಇಂಡಿಯಾದೇಶದಲ್ಲಿ ಇರುವ ಮುಹಮ್ಮದೀಯರು ಕ್ರೈಸ್ತರು ಜೈನರು ಎಲ್ಲರೂ ಸೇರಿರುವರು. ಆದಕಾರಣ ನಾನು ಹಿಂದೂ ಎಂಬ ಪದವನ್ನು ಉಪಯೋಗಿಸುವುದಿಲ್ಲ. ಮತ್ತಾವ ಪದವನ್ನು ಉಪಯೋಗಿಸುವುದು? ಮತ್ತೊಂದು ಪದವೇ ವೇದವನ್ನು ಅನುಸರಿಸುವ ವೈದಿಕರು ಅಥವಾ ವೇದಾಂತಿಗಳು. ಎಲ್ಲಾ ಧರ್ಮಗಳೂ ಯಾವುದಾದರೊಂದು ಶಾಸ್ತ್ರಕ್ಕೆ ಗೌರವ ತೋರುತ್ತವೆ. ಇದು ದೇವ ವಾಣಿ ಅಥವಾ ಯಾವುದಾದರೊಬ್ಬ ಅತಿ ಮಾನವನು ಇದನ್ನು ಹೇಳಿದನು ಎಂದು ನಂಬುವುವು. ಈ ಶಾಸ್ತ್ರವೇ ಆಯಾಧರ್ಮಗಳ ತಳಹದಿ. ಆಧುನಿಕ ವಿದ್ಯಾವಂತರ ದೃಷ್ಟಿಯಲ್ಲಿ ಇಂತಹ ಶಾಸ್ತ್ರಗಳಲ್ಲಿ ಅತಿ ಪುರಾತನವಾದುದೇ ಹಿಂದೂಗಳ ವೇದ. ವೇದಗಳ ಸಂಕ್ಷೇಪ ಪರಿಚಯ ಆವಶ್ಯಕ.

ವೇದ ಮಾನವನು ಬರೆದಿದ್ದಲ್ಲ. ಅದರ ಕಾಲವನ್ನು ಇದುವರೆವಿಗೂ ಯಾರೂ ನಿಶ್ಚಯಿಸಿಲ್ಲ, ನಿಶ್ಚಯಿಸುವಂತೆಯೂ ಇಲ್ಲ. ನಮ್ಮ ದೃಷ್ಟಿಯಲ್ಲಿ ವೇದ ಅನಾದಿ ಅನಂತ್ಯ. ಇಲ್ಲಿ ಒಂದು ಮುಖ್ಯವಿಷಯವನ್ನು ಗಮನಿಸಬೇಕು. ಉಳಿದ ಧರ್ಮಗಳು ತಮ್ಮ ಶಾಸ್ತ್ರವನ್ನು ದೇವರೋ, ದೇವದೂತರೊ, ದೇವಮಾನವರೋ ಮನುಷ್ಯರಿಗೆ ಉಸುರಿದರೆಂದು ನಂಬುವರು. ಆದರೆ ಹಿಂದೂಗಳ ದೃಷ್ಟಿಯಲ್ಲಿ ವೇದಕ್ಕೆ ಬೇರೆ ಪ್ರಮಾಣವೇ ಇಲ್ಲ. ಸ್ವತಃ ಪ್ರಮಾಣವಸ್ತು ಅದು. ಅನಾದಿ ಅನಂತವಾದುದು, ಈಶ್ವರನ ಜ್ಞಾನರಾಶಿ ಅದು. ಅದನ್ನು ಯಾರೂ ಬರೆಯಲಿಲ್ಲ, ಸೃಷ್ಟಿಸಲಿಲ್ಲ, ಅನಾದಿ ಕಾಲದಿಂದಲೂ ಅದು ಇತ್ತು. ಹೇಗೆ ಸೃಷ್ಟಿಗೆ ಆದಿ ಅಂತ್ಯವಿಲ್ಲವೋ ಹಾಗೆಯೇ ಈಶ್ವರನ ಜ್ಞಾನರಾಶಿಯಾದ ವೇದಕ್ಕೆ ಆದಿ ಅಂತ್ಯವಿಲ್ಲ. ಈ ಜ್ಞಾನರಾಶಿಯನ್ನು ವೇದವೆನ್ನುವುದು. ವೇದಾಂತವೆಂಬ ಜ್ಞಾನರಾಶಿಯನ್ನು ಋಷಿಗಳು ಕಂಡುಹಿಡಿದರು. ಋಷಿ ಎಂಬ ಪದಕ್ಕೆ ಅರ್ಥ ಮಂತ್ರದ್ರಷ್ಟ, ಅಂದರೆ ಮಂತ್ರವನ್ನು ಕಂಡವನು; ಅದನ್ನು ಸೃಷ್ಟಿಸಿದವನೆಂದು ಅಲ್ಲ. ಯಾರೋ ಒಬ್ಬ ಋಷಿ ಮಂತ್ರವನ್ನು ಬರೆದರು ಎಂದು ವೇದದಲ್ಲಿದ್ದರೆ ಅದನ್ನು ಆತ ತನ್ನ ಮನಸ್ಸಿನಲ್ಲಿ ಸೃಷ್ಟಿಸಿದನೆಂದಾಗಲಿ, ಬರೆದನೆಂದಾಗಲೀ ತಿಳಿಯಬೇಡಿ. ಆಗಲೇ ಇದ್ದ ಈ ಭಾವವನ್ನು ಆತ ಸಂದರ್ಶಿಸಿದ ಎಂದು ಅರ್ಥ. ಅನಾದಿಯಿಂದಲೂ ಇದು ವಿಶ್ವದಲ್ಲಿ ಇತ್ತು. ಋಷಿ ಇದನ್ನು ಆವಿಶ್ಕಾರಮಾಡಿದವನು, ಋಷಿಗಳು ಜ್ಞಾನರಾಶಿಯನ್ನು ಆವಿಶ್ಕಾರಮಾಡಿದವರು.

ವೇದ ಕರ್ಮಖಾಂಡ ಜ್ಞಾನಖಾಂಡವೆಂದು ಎರಡು ಭಾಗವಾಗಿದೆ. ಕರ್ಮಖಾಂಡದಲ್ಲಿ ಹಲವು ಯಾಗ ಯಜ್ಞಗಳಿವೆ. ಇದರಲ್ಲಿ ಹಲವನ್ನು ಆಧುನಿಕ ಕಾಲದಲ್ಲಿ ಅನುಷ್ಠಾನಕ್ಕೆ ಅಸಾಧ್ಯವೆಂದು ತೊರೆದಿರುವರು. ಉಳಿದವು ಯಾವುದಾದರೊಂದು ರೂಪಿನಲ್ಲಿ ಈಗಲೂ ಇವೆ. ಕರ್ಮಖಾಂಡದಲ್ಲಿ ಬರುವ ಮುಖ್ಯ ವಿಷಯ:— ಸಾಧಾರಣ ಮಾನವನ ಕರ್ತವ್ಯ, ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಸನ್ಯಾಸಾಶ್ರಮಗಳ ಭಿನ್ನ ಭಿನ್ನ ಕರ್ತವ್ಯ ಈಗಲೂ ಸ್ವಲ್ಪ ಹೆಚ್ಚು ಕಡಿಮೆ ಹಾಗೆಯೆ ಇವೆ. ಎರಡನೆಯದೇ ಜ್ಞಾನಖಾಂಡ; ನಮ್ಮ ಧರ್ಮದ ಆಧ್ಯಾತ್ಮಿಕ ಭಾಗವಿರುವುದೇ ಅಲ್ಲಿ. ಇದೇ ವೇದಾಂತ, ವೇದಗಳ ಚರಮಲಕ್ಷ್ಯ. ವೇದಗಳ ಜ್ಞಾನಸಾರವನ್ನು ವೇದಾಂತ ಎಂದು ಕರೆಯುವುದು. ಇದನ್ನೇ ಉಪನಿಷತ್ತು ಎನ್ನು

ವುದು. ದ್ವೈತಿಗಳಾಗಲಿ ವಿಶಿಷ್ಟಾದ್ವೈತಿಗಳಾಗಲಿ ಶೈವರಾಗಲಿ ವೈಷ್ಣವರಾಗಲಿ ಶಾಕ್ತರಾಗಲಿ ಸೌರ್‍ಯರಾಗಲಿ ಗಾಣಪತ್ಯರಾಗಲಿ ಅಥವಾ ಹಿಂದೂ ಧರ್ಮದ ಅಡಿಯಲ್ಲಿ ಬರಲು ಯತ್ನಿಸುವ ಮತ್ತಾವ ಧರ್ಮವೇ ಆಗಲಿ, ಎಲ್ಲರೂ ವೇದಗಳ ಉಪನಿಷತ್ತಿನ ಪ್ರಮಾಣವನ್ನು ಒಪ್ಪಬೇಕು. ಅವಕ್ಕೆ ತಮ್ಮದೇ ಭಾಷ್ಯಗಳಿರಬಹುದು, ತಮಗೆ ತೋರಿದ ರೀತಿಯಲ್ಲಿ ಅದನ್ನು ವಿವರಿಸಬಹುದು; ಆದರೆ ಅದರ ಪ್ರಮಾಣವನ್ನು ಒಪ್ಪಿಕೊಳ್ಳಬೇಕು. ಆದಕಾರಣ ಹಿಂದೂಗಳೆಂದು ಕರೆಯದೇ ವೇದಾಂತಿಗಳೆಂದು ಕರೆಯಲಿಚ್ಛಿಸುತ್ತೇನೆ. ಪುರಾತನ ಸಾಂಪ್ರದಾಯಕ ದಾರ್ಶನಿಕರೆಲ್ಲಾ ವೇದಾಂತದ ಪ್ರಮಾಣವನ್ನು ಒಪ್ಪಲೇಬೇಕು. ಆಧುನಿಕ ಕಾಲದ ಧರ್ಮಗಳಲ್ಲಿರುವ ಹಲವು ಶಾಕೋಪಶಾಕೆಗಳೆಲ್ಲ ಅವು ಎಷ್ಟೇ ಅಸ್ಪಷ್ಟವಾಗಿರಲಿ, ಗ್ರಾಮ್ಯವಾಗಿರಲಿ ಅವನ್ನು ನಾವು ಪರೀಕ್ಷಿಸಿದರೆ ಅವುಗಳ ಮೂಲ ಉಪನಿಷತ್ತಿನಲ್ಲಿವೆ. ಉಪನಿಷತ್ತಿನ ಭಾವ ನಮ್ಮ ಜನಾಂಗದ ಅಂತರಾಳಕ್ಕೆ ಹೋಗಿವೆ. ಹಿಂದೂಗಳ ಅತಿಗ್ರಾಮ್ಯ ಧರ್ಮದ ಚಿಹ್ನೆಯನ್ನು ನೋಡಿದರೂ ಅಲ್ಲಿ ಉಪನಿಷತ್ತಿನ ಕೆಲವು ಭಾವನೆಗಳನ್ನು ನೋಡಲು ಆಶ್ಚರ್ಯವಾಗುವುದು. ಉಪನಿಷತ್ತು ಕಾಲಕ್ರಮೇಣ ಚಿಹ್ನೆಯಾಗುವುದು, ರೂಪಕವಾಗುವುದು. ಉಪನಿಷತ್ತಿನ ಆಧ್ಯಾತ್ಮಿಕ, ಮತ್ತು ತಾತ್ತ್ವಿಕ ಭಾವನೆಗಳು ಈಗ ನಮ್ಮಲ್ಲಿವೆ. ಚಿಹ್ನೆಗಳು ಪೂಜಾಕಾಲದ ಸಾಮಗ್ರಿಗಳಾಗಿವೆ. ನಾವು ಈಗ ಉಪಯೋಗಿಸುವ ಹಲವು ಚಿಹ್ನೆಗಳೆಲ್ಲಾ ವೇದಾಂತದಿಂದ ಬಂದವು. ವೇದಾಂತದಲ್ಲಿ ಇವನ್ನು ಚಿಹ್ನೆಯಂತೆ ಉಪಯೋಗಿಸಿರುವರು. ಈ ಭಾವನೆ ನಮ್ಮ ಜನಜೀವನದಲ್ಲಿ ಪ್ರವೇಶಿಸಿ ಚಿಹ್ನೆಯಾಗಿ ನಮ್ಮ ಜೀವನದ ಅಂಗವಾಗಿ ಹಾಸುಹೊಕ್ಕಾಗಿದೆ.

ವೇದಾಂತವಾದ ಮೇಲೆ ಸ್ಮೃತಿ ಬರುವುದು. ಋಷಿಗಳೇ ಇದನ್ನು ಬರೆದರು. ಇದರ ಪ್ರಮಾಣ ವೇದಾಂತಕ್ಕೆ ಅಧೀನವಾಗಿದೆ. ಇತರ ಧರ್ಮ ಗ್ರಂಥಗಳು ಆಯಾ ಧರ್ಮಾನುಯಾಯಿಗಳಿಗೆ ಹೇಗೆ ಇದೆಯೋ ಇದೂ ಹಾಗೆಯೆ. ಇದನ್ನು ಬರೆದವರು ಋಷಿಗಳೆಂದು ನಾವು ಒಪ್ಪಿಕೊಳ್ಳುತ್ತೇವೆ. ಈ ದೃಷ್ಟಿಯಲ್ಲಿ ಇತರ ಧರ್ಮಗಳ ಶಾಸ್ತ್ರದಂತೆ ಇದೂ ಕೂಡ. ಆದರೆ ಸ್ಮೃತಿಯೇ ಪರಮ ಪ್ರಮಾಣವಲ್ಲ. ವೇದಾಂತದ ಪ್ರಮಾಣಕ್ಕೆ ಚ್ಯುತಿ ತರುವಂತಹುದು ಸ್ಮೃತಿಯಲ್ಲಿ ಏನಾದರೂ ಇದ್ದರೆ ಆಗ ಸ್ಮೃತಿಯನ್ನು ತ್ಯಜಿಸಬಹುದು. ಅದಕ್ಕೆ ಪ್ರಮಾಣವಿಲ್ಲ. ಈ ಸ್ಮೃತಿಗಳು ಕಾಲಕಾಲಕ್ಕೆ

ಬದಲಾಯಿಸಿವೆ. ಒಂದು ಸ್ಮೃತಿ ಸತ್ಯಯುಗಕ್ಕೆ ಒಂದು ತ್ರೇತಾಯುಗಕ್ಕೆ ಒಂದು ದ್ವಾಪರ ಯುಗಕ್ಕೆ ಒಂದು ಕಲಿಯುಗಕ್ಕೆ ಪ್ರಮಾಣವೆಂಬುದನ್ನು ನೋಡುತ್ತೇವೆ. ಜನಾಂಗದ ಸ್ಥಿತಿ ಬದಲಾಯಿಸಿದ ಹಾಗೆ ಹಲವು ಸಮಸ್ಯೆ ಗಳನ್ನು ಜನಾಂಗ ಇದಿರಿಸಿದಾಗ ಅವರ ಆಚಾರ ವ್ಯವಹಾರ ಬದಲಾಯಿ ಸಿತು. ಜನಾಂಗದ ಆಚಾರ ವ್ಯವಹಾರವನ್ನು ಕ್ರಮಪಡಿಸುವುದೇ ಸ್ಮೃತಿಯ ಮುಖ್ಯ ಗುರಿಯಾದುದರಿಂದ ಅವೂ ಕಾಲಕಾಲಕ್ಕೆ ಬದಲಾಯಿಸ ಬೇಕಾ ಯಿತು. ಇದನ್ನು ಜ್ಞಾಪಕದಲ್ಲಿಡಬೇಕೆಂದು ನಿಮಗೆ ಹೇಳುತ್ತೇನೆ. ವೇದಾಂತ ದಲ್ಲಿರುವ ಆಧ್ಯಾತ್ಮ ತತ್ತ್ವಗಳು ಬದಲಾಸುವುದಿಲ್ಲ. ಏತಕ್ಕೆ? ಅವೆಲ್ಲವೂ ಜೀವ ಮತ್ತು ಜಗತ್ತಿನಲ್ಲಿರುವ ಸನಾತನ ತತ್ತ್ವಗಳ ಮೇಲೆ ನಿಂತಿವೆ. ಅವೆಂದಿಗೂ ಬದಲಾಯಿಸುವುದಿಲ್ಲ. ಆತ್ಮ, ಪರಲೋಕ ಮುಂತಾದುವು ಎಂದಿಗೂ ಬದಲಾಯಿಸುವುದಿಲ್ಲ. ಸಾವಿರಾರು ವರ್ಷಗಳ ಹಿಂದೆಯೂ ಹೀಗೆಯೇ ಇದ್ದವು, ಈಗಲೂ ಹಾಗೆಯೇ ಇರುವುವು, ಲಕ್ಷಾಂತರ ವರ್ಷ ಗಳ ಮುಂದೆಯೂ ಹೀಗೆಯೇ ಇರುವುವು. ಆದರೆ ನಮ್ಮ ಸಾಮಾಜಿಕ ಸ್ಥಿತಿಯ ಮೇಲೆ ನಿಂತ ಧಾರ್ಮಿಕ ಅನುಷ್ಠಾನಗಳು ಸಮಾಜ ಬದಲಾಯಿಸಿ ದಂತೆ ಅವೂ ಬದಲಾಯಿಸಬೇಕು. ಕೆಲವು ನಿಯಮ ಕೆಲವು ಕಾಲ ದೇಶಕ್ಕೆ ಸರಿಹೋಗುವುದೇ ಹೊರತು ಅನ್ಯಕಾಲ ದೇಶಕ್ಕೆ ಅಲ್ಲ. ಒಂದು ಆಚಾರ ಒಂದು ಕಾಲಕ್ಕೆ ಸರಿ, ಬೇರೇ ಕಾಲಕ್ಕೆ ಅಲ್ಲ. ಅದು ಆ ಕಾಲಕ್ಕೆ ಮಾತ್ರ ಯೋಗ್ಯ. ವಾಯುಗುಣ ಮುಂತಾಂದವು ಬದಲಾಯಿಸಿದಾಗ ಇನ್ನೂ ಹಲವು ಸಮಸ್ಯೆಗಳನ್ನು ಎದುರಿಸಬೇಕಾಯಿತು. ಆಗ ಸ್ಮೃತಿ ಆಹಾರ ಮುಂತಾದುವನ್ನು ಬದಲಾಯಿಸಿತು. ಆಧುನಿಕ ಕಾಲದಲ್ಲಿ ಸಮಾಜದಲ್ಲಿ ಕೆಲವು ಬದಲಾವಣೆ ಆವಶ್ಯಕವಾದರೆ ಅದನ್ನು ಮಾಡಬೇಕು, ಅದನ್ನು ಹೇಗೆ ಮಾಡಬೇಕೆಂಬುದನ್ನು ಋಷಿಗಳು ಬಂದು ಹೇಳುವರು. ಆದರೆ ನಮ್ಮ ಆಧ್ಯಾತ್ಮಿಕ ತತ್ತ್ವಗಳಾವುವೂ ಬದಲಾಯಿಸುವಹಾಗಿಲ್ಲ. ಅವು ಹಾಗೆಯೇ ಇರುವುವು.

ಇದಾದ ನಂತರ ಪುರಾಣ ಬರುವುದು. ಪುರಾಣಕ್ಕೆ ಪಂಚ ಲಕ್ಷಣ ಗಳಿವೆ. ಇತಿಹಾಸ ಸೃಷ್ಟಿತತ್ತ್ವ ಇತ್ಯಾದಿ ಹಲವು ಕಥೆಗಳ ಮೂಲಕ ವಿವರಿ ಸುವ ಧಾರ್ಮಿಕ ತತ್ತ್ವಗಳು ಇವುಗಳಲ್ಲಿ ಅಡಕವಾಗಿವೆ. ವೇದ ಧರ್ಮವನ್ನು ಜನಸಾಮಾನ್ಯರಿಗೆ ಹರಡುವುದಕ್ಕಾಗಿ ಇದನ್ನು ಬರೆದಿದೆ. ವೇದಗಳ ಭಾಷೆ ಅತಿ ಪುರಾತನ. ಪಂಡಿತರಿಗೂ ಅದರ ಕಾಲ ನಿರ್ಣಯಿಸುವುದು ಕಷ್ಟ.

ಪುರಾಣವನ್ನು ಜನರ ಆಗಿನ ಭಾಷೆಯಲ್ಲಿ ಅಂದರೆ ಈಗಿನ ಸಂಸ್ಕೃತದಲ್ಲಿ ಬರೆದರು. ಅದು ಪಂಡಿತರಿಗಲ್ಲ ಸಾಧಾರಣ ಜನರಿಗೆ. ಸಾಧಾರಣ ಜನ ತತ್ತ್ವವನ್ನು ತಿಳಿದುಕೊಳ್ಳಲಾರರು. ಆ ಗಹನವಿಷಯಗಳನ್ನು ಅಂದಿನ ಕಾಲದ ಇತಿಹಾಸದ ಮೂಲಕ ಋಷಿಗಳ ರಾಜರ ಜೀವನದ ಮೂಲಕ ವಿವರಿಸುವರು. ಧರ್ಮದ ಸನಾತನ ತತ್ತ್ವಗಳನ್ನು ವಿವರಿಸುವುದಕ್ಕೆ ಋಷಿಗಳು ಪುರಾಣವನ್ನು ಉಪಯೋಗಿಸಿಕೊಂಡರು.

ತಂತ್ರಶಾಸ್ತ್ರವೆಂಬುದೂ ಇದೆ. ಅದು ಕೆಲವು ವಿಷಯದಲ್ಲಿ ಪುರಾಣವನ್ನು ಹೋಲುವುದು. ಅದರಲ್ಲಿ ಕೆಲವು ವೇದಗಳ ಕರ್ಮ ಖಾಂಡವನ್ನು ಪುನಃ ಜಾರಿಗೆ ತರುವ ಪ್ರಯತ್ನವಾಗಿದೆ.

ಈ ಗ್ರಂಥಗಳೇ ಹಿಂದೂಶಾಸ್ತ್ರ. ಈ ದೇಶದಲ್ಲಿ ಮುಕ್ಕಾಲುಪಾಲು ಕಾಲವನ್ನೆಲ್ಲಾ ಆಧ್ಯಾತ್ಮ ವಿದ್ಯೆಗೆ ಮೀಸಲಾಗಿಟ್ಟ ಜನಾಂಗದಲ್ಲಿ, ಇಷ್ಟು ಪವಿತ್ರ ಗ್ರಂಥರಾಶಿ ಇರುವುದರಿಂದ ಭಿನ್ನ ಭಿನ್ನ ಪಂಗಡಗಳಿರುವುದು ಸಹಜವೇ ಸರಿ. ಇನ್ನೂ ಸಾವಿರಾರು ಪಂಗಡಗಳು ಇಲ್ಲದೇ ಇರುವುದೇ ಒಂದು ಆಶ್ಚರ್ಯ. ಕೆಲವು ವಿಷಯಗಳಲ್ಲಿ ಈ ಪಂಗಡಗಳಿಗೆ ಎಷ್ಟೋ ವ್ಯತ್ಯಾಸವಿದೆ. ಇವುಗಳಿಗೆ ಇರುವ ವ್ಯತ್ಯಾಸವನ್ನಾಗಲೀ ಅಥವಾ ಇವುಗಳಲ್ಲಿ ಇರುವ ಆಧ್ಯಾತ್ಮ ವಿಷಯಗಳನ್ನು ವಿಷದವಾಗಿ ತಿಳಿದುಕೊಳ್ಳುವುದಕ್ಕಾಗಲೀ ಸಮಯವಿಲ್ಲ. ಪ್ರತಿಯೊಬ್ಬ ಹಿಂದೂ ನಂಬಬೇಕಾದ ಭಿನ್ನ ಭಿನ್ನ ಪಂಗಡಗಳ ಸಾಮಾನ್ಯ ಮೂಲ ತತ್ತ್ವಗಳನ್ನು ಮಾತ್ರ ತೆಗೆದುಕೊಳ್ಳುತ್ತೇನೆ.

ಮೊದಲು ಸೃಷ್ಟಿವಿಷಯ ತೆಗೆದು ಕೊಳ್ಳೋಣ. ಪ್ರತಿಯೊಬ್ಬ ಹಿಂದುವು, ಸಂಸಾರ ಈ ಪ್ರಕೃತಿ ಅನಾದಿ ಮತ್ತು ಅನಂತವೆಂದು ತಿಳಿಯುವನು. ಎಲ್ಲೋ ಕೆಲವು ದಿನದ ಹಿಂದೆ ಈ ಪ್ರಪಂಚವನ್ನು ದೇವರು ಸೃಷ್ಟಿಸಿ ಅನಂತರ ಇದುವರೆಗೆ ಅವನು ನಿದ್ರಿಸುತ್ತಿರುವನೆಂದು ಅಲ್ಲ. ಸೃಷ್ಟಿ ಇನ್ನೂ ಆಗುತ್ತಿದೆ. ದೇವರು ಅನುಗಾಲವೂ ಸೃಷ್ಟಿಸುತ್ತಿರುವನು. ಅವನಿಗೆ ವಿರಾಮವೆಂದಿಗೂ ಇಲ್ಲ. "ನಾನು ಒಂದುಕ್ಷಣ ಸುಮ್ಮನಿದ್ದರೂ ಸೃಷ್ಟಿ ನಾಶವಾಗುವುದು" ಎಂದು ಶ್ರೀಕೃಷ್ಣ ಗೀತೆಯಲ್ಲಿ ಹೇಳುವುದನ್ನು ಗಮನಿಸಿ. ಸೃಷ್ಟಿಯಲ್ಲಿ ಅದು ಕೆಲಸ ಮಾಡದ ಸಮಯವೇ ಇಲ್ಲ. ಆದರೆ ನಮ್ಮಲ್ಲಿ ಪ್ರಳಯ ತತ್ತ್ವವಿದೆ. ಸಂಸ್ಕೃತ ಸೃಷ್ಟಿ ಶಬ್ದಕ್ಕೆ ಆಂಗ್ಲೇಯ Creation ಎಂಬ ಪದವಲ್ಲ ಅರ್ಥ; ಅದಕ್ಕೆ Projection ಎಂಬ

ಅರ್ಥವೇ ಹೊರತು, Creation ಎಂದು ಅರ್ಥವಲ್ಲ. ಇಂಗ್ಲೀಷಿನಲ್ಲಿ Creation ಎಂಬ ಪದಕ್ಕೆ ದುರದೃಷ್ಟವಶಾತ್ ಶೂನ್ಯದಿಂದ ಸೃಷ್ಟಿ, ಮುಂಚೆ ಏನೂ ಇರಲಿಲ್ಲ ಅನಂತರ ಏನೊ ಅಲ್ಲೊಂದು ಉದಿಸಿತು ಎಂಬ ಭಯಾನಕ ಅಸಂಸ್ಕೃತ ಅರ್ಥದ ಸಂಬಂಧವಿದೆ. ಇದನ್ನು ನಂಬಿ ಎಂದು ನಾನು ನಿಮಗೆ ಅವಮಾನ ಮಾಡವುದಿಲ್ಲ. ನಾವು ಅದಕ್ಕೆ ಪ್ರಕ್ಷೇಪಣ (Projection) ವೆನ್ನುತ್ತೇವೆ. ಈ ಪ್ರಕೃತಿ ಯಾವಾಗಲೂ ಇರುವುದು. ಸೂಕ್ಷ್ಮವಾಗಿ ಅವ್ಯಕ್ತವಾಗಿ ತಾಟಸ್ಥ್ಯವಾಗಿದ್ದಂತೆ ತೋರುವುದು. ಕೆಲವು ಕಾಲದ ಮೇಲೆ ಪುನಃ ಹೊರಗೆ ಆವಿರ್ಭವಿಸುವಂತೆ ತೋರುವುದು. ಹಿಂದಿನಂತೆಯೆ ಮಿಶ್ರವಾಗಿ ವಿಕಾಸವಾಗಿ ಹಲವು ರೂಪಗಳನ್ನು ತಾಳಿ ಕೆಲವು ಕಾಲ ಹಾಗಿದ್ದು ಪುನಃ ವಿಭಾಗವಾಗಿ ಅವ್ಯಕ್ತವಾಗುವುದು; ಅದಾದ ಮೇಲೆ ಪುನಃ ವ್ಯಕ್ತವಾಗುವುದು. ಅನಂತ್ಯದವರೆವಿಗೂ ಅಲೆಯಂತೆ ಮೇಲೆದ್ದು ಬೀಳುತ್ತಿರುವುದು. ಕಾಲದೇಶ ಕಾರಣಗಳೆಲ್ಲಾ ಪ್ರಕೃತಿಯಲ್ಲಿರುವುದು. ಅದಕ್ಕೆ ಒಂದು ಆದಿ ಇತ್ತು ಎನ್ನುವುದು ಅಸಮಂಜಸ. ಆದಿ ಅಂತ್ಯದ ಪ್ರಶ್ನೆ ಏಳುವುದಿಲ್ಲ. ನಮ್ಮ ಶಾಸ್ತ್ರದಲ್ಲಿ ಆದಿ ಅಂತ್ಯವೆಂಬ ಪ್ರಶ್ನೆ ಇದ್ದರೆ ಅದು ಕೇವಲ ಒಂದು ಕಲ್ಪದ ಆದಿ ಅಂತ್ಯವೆಂದು ಭಾವಿಸಬೇಕು. ಇದಕ್ಕಿಂತ ಹೆಚ್ಚಿಗೆ ಏನೂ ಅಲ್ಲ.

ಸೃಷ್ಟಿಗೆ ಕಾರಣ ಯಾವುದು? ದೇವರು. ಇಂಗ್ಲೀಷಿನಲ್ಲಿ God ಎಂದರೆ ಅರ್ಥವೇನು. ಸಾಧಾರಣವಾಗಿ ಆ ಪದವನ್ನು ಉಪಯೋಗಿಸುವ ರೀತಿಯಲ್ಲಿ ಅಲ್ಲ. ಎಷ್ಟೋ ವ್ಯತ್ಯಾಸವಿದೆ. ಇಂಗ್ಲೀಷಿನಲ್ಲಿ ಸರಿಯಾದ ಬೇರೆ ಪದವಿಲ್ಲ. ಆದಕಾರಣ ಸಂಸ್ಕೃತದ ಬ್ರಹ್ಮ ಎಂಬ ಪದವನ್ನು ಉಪಯೋಗಿಸುತ್ತೇನೆ. ಅವನೇ ಸೃಷ್ಟಿಗೆಲ್ಲಾ ಮುಖ್ಯಕಾರಣ. ಬ್ರಹ್ಮನೆಂದರೆ ಏನು? ಅವನು ನಿತ್ಯ ನಿತ್ಯಶುದ್ಧ ಸದಾ ಜಾಗ್ರತ ಸರ್ವಶಕ್ತಿಮಾನ್ ಸರ್ವಜ್ಞ ಪರಮದಯಾಮಯ ಸರ್ವವ್ಯಾಪಿ ನಿರಾಕಾರ ಅಖಂಡಸ್ವರೂಪ. ಆತನು ಈ ವಿಶ್ವವನ್ನು ಸೃಷ್ಟಿಸುವನು. ಅವನು ಯಾವಾಗಲೂ ಪ್ರಪಂಚವನ್ನು ಸೃಷ್ಟಿಸುತ್ತ ರಕ್ಷಿಸುತ್ತ ಇದ್ದರೆ ಎರಡು ಸಮಸ್ಯೆಗಳು ಬರುವುವು. ಈ ಜಗತ್ತಿನಲ್ಲಿ ಪಕ್ಷಪಾತವಿದೆ. ಒಬ್ಬ ಸುಖದಲ್ಲಿ ಹುಟ್ಟುವನು ಮತ್ತೊಬ್ಬ ದುಃಖದಲ್ಲಿ ಹುಟ್ಟುವನು. ಒಬ್ಬ ಶ್ರೀಮಂತ. ಮತ್ತೊಬ್ಬ ಗರೀಬ. ಇದು ಪಕ್ಷಪಾತವನ್ನು ತೋರುವುದು. ಈ ಪ್ರಪಂಚದಲ್ಲಿ ನಿಷ್ಠುರತೆಯೂ ಇದೆ. ಇಲ್ಲಿ ಒಂದು ಪ್ರಾಣಿ ಜೀವಿಸಿರ

ಬೇಕಾದರೆ ಮತ್ತೊಂದು ಪ್ರಾಣಿನಾಶವಾಗಬೇಕು. ಒಂದು ಮೃಗ ಮತ್ತೊಂದನ್ನು ಕೊಲ್ಲುವುದು. ಪ್ರತಿಯೊಬ್ಬನೂ ಸಾಧ್ಯವಾದಮಟ್ಟಿಗೆ ಇತರರಿಗಿಂತ ಮೇಲಿರಲು ಯತ್ನಿಸುವನು. ಪೋಟಾಪೋಟಿ ನಿಷ್ಠುರ ದುಃಖ ಹಗಲೂ ರಾತ್ರೆ ಜೀವವನ್ನು ಕರಗಿಸುವಂತಹ ಹಾಹಾಕಾರದಿಂದ ಜಗತ್ತು ತುಂಬಿದೆ. ಇದು ದೇವರ ಸೃಷ್ಟಿಯಾದರೆ, ಆ ದೇವರು ನೈಷ್ಠುರತೆಗಿಂತ ಭಯಾನಕನಾಗಿರುವನು. ಅವನು ಮನುಷ್ಯ ಕಲ್ಪಿಸಿಕೊಳ್ಳುವ ಶೈತಾನನಂತೆ ಕಠೋರನಾಗಿರುವನು. ಈ ಪೋಟಾಪೋಟಿ ಇರುವುದಕ್ಕೆ ತಾರತಮ್ಯವಿರುವುದಕ್ಕೆ ಈಶ್ವರನಲ್ಲ ಕಾರಣ ಎಂದು ವೇದಾಂತ ಸಾರುವುದು. ಇದನ್ನು ಮಾಡುವವರು ಯಾರು? ನಾವು. ಮೋಡ ಎಲ್ಲಾ ಕಡೆಯಲ್ಲಿಯೂ ಮಳೆಯನ್ನು ಕರೆಯುತ್ತದೆ. ಆದರೆ ಯಾವ ಹೊಲ ಸರಿಯಾಗಿ ಉತ್ತಿದೆಯೋ ಅದು ಮಾತ್ರ ಇದರಿಂದ ಪ್ರಯೋಜನವನ್ನು ಪಡೆಯುವುದು. ಯಾವ ಹೊಲವನ್ನು ಉತ್ತಿಲ್ಲವೋ, ನಿರ್ಲಕ್ಷ್ಯದಿಂದ ನೋಡಿರುವೆವೋ ಅದಕ್ಕೆ ಇದರ ಪ್ರಯೋಜನವಿಲ್ಲ. ಅದು ಮೋಡದ ತಪ್ಪಲ್ಲ. ಈಶ್ವರನ ದಯೆ ನಿತ್ಯವಾದುದು ಅವಿಕಾರಿಯಾದುದು. ನಾವೇ ಈ ತಾರತಮ್ಯವನ್ನು ತರುವೆವು. ಆದರೆ ಕೆಲವರು ಸುಖದಲ್ಲಿ ಹುಟ್ಟುವರು ಮತ್ತೆ ಕೆಲವರು ದುಃಖದಲ್ಲಿ ಹುಟ್ಟುವರು ಇದನ್ನು ಹೇಗೆ ವಿವರಿಸುವುದು? ಅವರು ಈ ವ್ಯತ್ಯಾಸಕ್ಕೆ ಕಾರಣವಲ್ಲ. ಈ ಜನ್ಮದಲ್ಲಿ ಅಲ್ಲ, ಕಳೆದ ಜನ್ಮದಲ್ಲಿ ಕಾರಣವಿರಬಹುದು. ಪೂರ್ವಜನ್ಮದ ಕರ್ಮ ಈ ವ್ಯತ್ಯಾಸಕ್ಕೆ ಕಾರಣವನ್ನು ಕೊಡುವುದು.

ನಾವೆಲ್ಲರೂ ಹಿಂದೂಗಳಾಗಲೀ ಬೌದ್ಧರಾಗಲೀ ಜೈನರಾಗಲೀ ಒಪ್ಪಿಕೊಳ್ಳುವ ಎರಡನೇ ನಿಯಮಕ್ಕೆ ಬರುತ್ತೇವೆ. ಜೀವನ ಸೃಷ್ಟಿಯಂತೆ ಅನಾದಿ ಅನಂತ್ಯ. ಸೃಷ್ಟಿ ಶೂನ್ಯದಿಂದ ಆಗಿಲ್ಲ. ಅದು ಹಾಗೆ ಆಗಲಾರದು. ಇಂತಹ ಜೀವನವನ್ನು ಬಾಳಿ ಪ್ರಯೋಜನವಿಲ್ಲ. ಕಾಲದಲ್ಲಿ ಮೊದಲಾದುದೆಲ್ಲಾ ಒಂದಲ್ಲ ಒಂದು ದಿನ ನಾಶವಾಗಬೇಕು. ಸರ್ವನಾಶವೇ ಪರಿಣಾಮ. ಜೀವನ ಯಾವಾಗಲೂ ಇರಬೇಕು. ನಾವು ಈ ವಿಷಯವನ್ನು ಇಂದು ತಿಳಿದುಕೊಳ್ಳಬೇಕಾದರೆ ಅಷ್ಟೊಂದು ವಿಚಾರ ಶಕ್ತಿ ಏನೂ ಅವಶ್ಯಕವಿಲ್ಲ. ಆಧುನಿಕ ವಿಜ್ಞಾನ ಶಾಸ್ತ್ರವೆಲ್ಲಾ ನಮ್ಮ ಶಾಸ್ತ್ರಗಳಸಿದ್ಧಾಂತವನ್ನು ಬಾಹ್ಯ ಘಟನೆಗಳ ಮೂಲಕ ಪ್ರಮಾಣವಾಗಿ ತೋರುತ್ತಿವೆ. ಇದು ಆಗಲೆ ನಿಮಗೆ ಗೊತ್ತಿದೆ. ಪ್ರತಿಯೊಬ್ಬರೂ ಅನಂತ

ಭೂತಕಾಲದ ಪರಿಣಾಮ. ಕವಿಗಳು ಹೇಳಲಿಚ್ಛಿಸುವಂತೆ ಪ್ರಕೃತಿ ಕರ ಗಳಿಂದ ಮಿಂಚಿನಂತೆ ಹೊಸದಾಗಿ ಶಿಶು ಈಗ ತಾನೆ ಪ್ರಪಂಚಕ್ಕೆ ಇಳಿಯು ಲಿಲ್ಲ. ಆ ಮಗುವಿನಲ್ಲಿ ಅನಂತ ಭೂತ ಕಾಲದ ಸಂಸ್ಕಾರವಿದೆ. ಒಳ್ಳೆಯು ದಕ್ಕೋ ಕೆಟ್ಟುದಕ್ಕೋ ಕರ್ಮ ಸಮೆಸಲು ಅದು ಪ್ರಪಂಚಕ್ಕೆ ಬರುವುದು. ಅದೇ ವ್ಯತ್ಯಾಸಕ್ಕೆ ಕಾರಣ. ಇದೇ ಕರ್ಮನಿಯಮ. ಪ್ರತಿಯೊಬ್ಬನೂ ತನ್ನ ಅದೃಷ್ಟಕ್ಕೆ ತಾನೇ ಹೊಣೆಗಾರ. ಅದೃಷ್ಟದ ಪೂರ್ವ ನಿರ್ಧಾರವಾದ ಮುಂತಾದುವನ್ನೆಲ್ಲಾ ಇದು ತಳ್ಳಿಹಾಕುವುದು. ಈಶ್ವರ ಮತ್ತು ಜೀವಿ ಯುನ್ನು ರಾಜಿಮಾಡುವ ಏಕಮಾತ್ರ ಸಿದ್ಧಾಂತವನ್ನು ಇದು ತೋರುವುದು. ನಮ್ಮ ಅದೃಷ್ಟಕ್ಕೆ ನಾವೇ ಹೊಣೆ, ನಾವೇ ಅದರ ಪರಿಣಾಮ. ಆದ ಕಾರಣ ನಾವು ಸ್ವತಂತ್ರರು. ನಾವು ದುಃಖಿಯಾಗಿದ್ದರೆ ನಾವೇ ಅದಕ್ಕೆ ಕಾರಣ. ಇಚ್ಛೆಪಟ್ಟರೆ ನಾನು ಸುಖಿಯಾಗಿರಬಹುದೆಂಬುದನ್ನು ಇದೇ ತೋರುವುದು. ನಾನು ಅಶುದ್ಧನಾಗಿದ್ದರೆ ನಾನೇ ಅದಕ್ಕೆ ಕಾರಣ, ಇಚ್ಛೆಪಟ್ಟರೆ ಶುದ್ಧನಾಗಬಲ್ಲೆ ಎಂಬುದನ್ನು ಇದು ತೋರುವುದು. ಮನುಷ್ಯನ ಇಚ್ಛೆ ಇವನ್ನೆಲ್ಲಾ ಮೀರಿ ನಿಲ್ಲುವುದು. ಮನುಷ್ಯನ ಪ್ರಬಲ ವಿರಾಟ ಅನಂತ ಇಚ್ಛಾಶಕ್ತಿ ಮತ್ತು ಸ್ವಾತಂತ್ರ್ಯದ ಎದುರಿಗೆ ಪ್ರಕೃತಿ ಬಾಗಿ ಶರಣಾಗಿ ಅದರ ಗುಲಾಮನಾಗಬೇಕು. ಇದೇ ಕರ್ಮಸಿದ್ಧಾಂತದ ಪರಿಣಾಮ.

ಸ್ವಭಾವತಃ ನಂತರ ಪ್ರಶ್ನೆಯೇ ಆತ್ಮವೆಂದರೇನು ಎಂಬುದು. ನಮ್ಮ ಶಾಸ್ತ್ರದಲ್ಲಿ ಆತ್ಮದರ್ಶನವಿಲ್ಲದೆ ಈಶ್ವರನನ್ನು ನಾವು ತಿಳಿದುಕೊಳ್ಳಲಾರೆವು. ಬಾಹ್ಯ ಪ್ರಕೃತಿಯ ಸಂಶೋಧನೆಯಿಂದ ಅತೀಂದ್ರಿಯ ವಸ್ತುವಿನ ದರ್ಶನ ಪಡೆಯಲು ಭರತಖಂಡದಲ್ಲಿ ಮತ್ತು ಹೊರಗೆ ಪ್ರಯೋಗ ನಡೆದಿದೆ. ಇದೆಲ್ಲ ಹೇಗೆ ನಿಷ್ಪ್ರಯೋಜಕವಾಗಿದೆ ಎಂಬುದು ನಮಗೆಲ್ಲಾ ಗೊತ್ತಿದೆ. ಅತೀಂದ್ರಿಯವಸ್ತುವಿನ ಅನುಭವವನ್ನು ಪಡೆಯುವ ಬದಲು ನಾವು ಹೆಚ್ಚು ಹೆಚ್ಚು ಪ್ರಪಂಚವನ್ನು ಪರೀಕ್ಷಿಸಿದಷ್ಟೂ, ಹೆಚ್ಚು ಹೆಚ್ಚು ನಾವು ಪ್ರಾಪಂಚಿಕರಾಗುತ್ತಿರುವೆವು. ನಾವು ಪ್ರಾಪಂಚಿಕ ವಸ್ತುಗಳಲ್ಲಿ ಪರಿಣಿತ ರಾದಷ್ಟೂ ಮೊದಲು ಇದ್ದ ಸ್ವಲ್ಪ ಆಧ್ಯಾತ್ಮಿಕತೆಯೂ ಮಾಯವಾಗುವುದು ಕಾಣುವುದು. ಆಧ್ಯಾತ್ಮಕ್ಕೆ ಇದಲ್ಲ ದಾರಿ, ಪರಮ ಜ್ಞಾನಕ್ಕೆ ಇದಲ್ಲ ದಾರಿ. ಇದು ಮಾನವನ ಹೃದಯದ ಮೂಲಕ ಬರಬೇಕು, ಆತ್ಮದ ಮೂಲಕ ಬರ ಬೇಕು. ಬಾಹ್ಯರಚನೆ ಅತೀಂದ್ರಿಯ ವಸ್ತುವನ್ನು ಅನಂತವನ್ನು ವಿವರಿಸ

ಲಾರದು. ಅಂತರಂಗವಾದುದು ಮಾತ್ರ ಅದನ್ನು ವಿವರಿಸಬಲ್ಲುದು. ಮಾನವನ ಆತ್ಮದ ಪರೀಕ್ಷೆಯ ಮೂಲಕ ಮಾತ್ರ ನಾವು ದೇವರನ್ನು ತಿಳಿದುಕೊಳ್ಳಬಹುದು. ಭರತಖಂಡದಲ್ಲಿ ಭಿನ್ನ ಭಿನ್ನ ಪಂಗಡದವರಲ್ಲಿ ಜೀವಾತ್ಮನ ವಿಷಯದಲ್ಲಿ ಭಿನ್ನಾಭಿಪ್ರಾಯಗಳಿವೆ. ಅವರೆಲ್ಲರೂ ಒಪ್ಪಿಕೊಳ್ಳುವ ಕೆಲವು ವಿಷಯಗಳೂ ಇವೆ. ಆತ್ಮಕ್ಕೆ ಆದಿ ಅಂತ್ಯವಿಲ್ಲವೆಂದು ನಾವು ಒಪ್ಪುತ್ತೇವೆ. ಅದು ಸ್ವಭಾವತಃ ಅಮೃತವಾದುದು. ಸರ್ವವಿಧ ಶಕ್ತಿ ಆನಂದ ಪವಿತ್ರತೆ ಸರ್ವವ್ಯಾಪಿತ್ವ ಮತ್ತು ಸರ್ವಜ್ಞತ್ವ ಪ್ರತ್ಯೇಕ ಆತ್ಮನಲ್ಲಿ ಅಂತರ್ನಿಹಿತವಾಗಿದೆ. ನಾವು ಜ್ಞಾಪಕದಲ್ಲಿಡಬೇಕಾದ ಶ್ರೇಷ್ಠ ಭಾವನೆ ಇದು. ಪ್ರತಿಯೊಬ್ಬ ಮಾನವನಲ್ಲಿ ಕೀಟದಲ್ಲಿ ಎಷ್ಟೇ ದುರ್ಬಲನಾಗಿರಲಿ ದುರಾತ್ಮನಾಗಿರಲಿ ಅಣುವಾಗಿರಲಿ ವಿಭುವಾಗಿರಲಿ ಎಲ್ಲದರಲ್ಲಿಯೂ ಸರ್ವವ್ಯಾಪಿಯಾದ ಸರ್ವಜ್ಞತೆ ಹುದುಗಿದೆ. ಆತ್ಮನಲ್ಲಿ ವ್ಯತ್ಯಾಸವಿಲ್ಲ ಇರುವುದು, ಆದರೆ ಆವಿರ್ಭಾವನೆಯಲ್ಲಿ. ನನಗೂ ಅತಿಕ್ಷುದ್ರ ಕೀಟಕ್ಕೂ ಇರುವ ವ್ಯತ್ಯಾಸ ಅದರ ಆವಿರ್ಭಾವನೆಯಲ್ಲಿ. ಒಂದು ಸಿದ್ಧಾಂತದ ದೃಷ್ಟಿಯಿಂದ ನಾನೂ ಅದೂ ಎರಡು ಒಂದೇ, ನನ್ನ ಸಹೋದರ ಅದು. ನನ್ನಲ್ಲಿರುವಂತೆಯೇ ಅದರಲ್ಲಿಯೂ ಆತ್ಮವಿದೆ. ಭರತಖಂಡದ ಬೋಧನೆಯ ಮಹಾತತ್ತ್ವ ಇದು. ಮಾನವ ಸಹೋದರತ್ವ ಎಂಬ ಭಾವನೆ ಭರತ ಖಂಡದಲ್ಲಿ ಮೃಗ ಕ್ರಿಮಿ ಕೀಟಗಳಿಂದ ಕೂಡಿದ ವಿರಾಟ್‌ಜೀವನದ ಸಹೋದರತ್ವ ಭಾವನಾಗುವುದು. ಇವುಗಳೆಲ್ಲಾ ನಮ್ಮ ದೇಹವೆ. ಅದಕ್ಕೇ ನಮ್ಮ ಶಾಸ್ತ್ರ "ಜ್ಞಾನಿ, ಒಬ್ಬನೇ ಈಶ್ವರ ಎಲ್ಲಾ ಭೂತಗಳಲ್ಲೂ ಇರುವನೆಂದು ತಿಳಿದು ಎಲ್ಲವನ್ನೂ ಅವನು ಆರಾಧಿಸುವನು" ಎನ್ನುವುದು. ಅದಕ್ಕೆ ಭರತಖಂಡದಲ್ಲಿ ದೀನರು ಪ್ರಾಣಿಗಳು ಮುಂತಾದವರನ್ನು ಆ ಪವಿತ್ರ ದೃಷ್ಟಿಯಿಂದ ನೋಡುವುದು. ಆತ್ಮನ ವಿಷಯದಲ್ಲಿ ನಾವುಗಳೆಲ್ಲರೂ ಒಪ್ಪಿಕೊಳ್ಳುವ ಒಂದು ಸಾಮಾನ್ಯಭಾವನೆ ಇದು.

ಈಗ ನಾವು ಸ್ವಾಭಾವಿಕವಾಗಿ ಈಶ್ವರತತ್ತ್ವ ವಿಚಾರಕ್ಕೆ ಬರುತ್ತೇವೆ. ಆತ್ಮನ ವಿಚಾರವಾಗಿ ಮತ್ತೊಂದು ವಿಷಯ. ಆಂಗ್ಲಭಾಷೆಯನ್ನು ಓದುವವರಿಗೆ Soul, Mind ಎಂಬ ಪದ ಭ್ರಮೆಯನ್ನುಂಟು ಮಾಡುವುದು. ನಮ್ಮ ಆತ್ಮ ಮತ್ತು ಆಂಗ್ಲಭಾಷೆಯ Soul ಬೇರೆ ಪದಗಳು. ನಾವು ಯಾವುದನ್ನು ಮನಸ್ಸು (Mind) ಎನ್ನುವೆವೋ ಅದನ್ನು ಪಾಶ್ಚಾತ್ಯರು Soul ಎನ್ನುವರು. ಇಪ್ಪತ್ತು ವರ್ಷಗಳ ಹಿಂದೆ ಸಂಸ್ಕೃತ ತತ್ತ್ವದಿಂದ

ಈ ಜ್ಞಾನ ಅವರಿಗೆ ಸಿಕ್ಕುವವರೆಗೆ ಅವರಿಗೆ ಈ ಭಾವನೆಯೇ ಇರಲಿಲ್ಲ. ದೇಹ ಇಲ್ಲಿದೆ. ಇದರಾಚೆ ಮನಸ್ಸು. ಆದರೆ ಮನಸ್ಸೇ ಆತ್ಮವಲ್ಲ. ಅದು ಸೂಕ್ಷ್ಮ ಶರೀರ. ಇದು ತನ್ಮಾತ್ರದಿಂದ ಆದುದು. ಜನ್ಮ ಜನ್ಮಾಂತರಗಳವರೆಗೂ ಇದು ಇರುವುದು. ಆದರೆ ಮನಸ್ಸಿನ ಹಿಂದೆ ಆತ್ಮನಿರುವುದು. ನಾವು ಇದನ್ನು Soul ಅಥವಾ Mind ಎಂದು ಭಾಷಾಂತರ ಮಾಡಲಾಗುವುದಿಲ್ಲ. ನಾವು ಇದನ್ನು ಆತ್ಮ ಅಥವಾ ಪಾಶ್ಚಾತ್ಯ ದಾರ್ಶನಿಕರು ಹೇಳುವಂತೆ Self ಎಂದು ಕರೆಯಬೇಕು. ನೀವು ಯಾವ ಪದವನ್ನಾದರೂ ಉಪಯೋಗಿಸಿರಿ. ಆದರೆ ಇದನ್ನು ಮಾತ್ರ ನೆನಪಿಟ್ಟಿರಿ: ಆತ್ಮ ಮನಸ್ಸಿಗಿಂತ ಬೇರೆ, ದೇಹಕ್ಕಿಂತ ಬೇರೆ. ಈ ಆತ್ಮ ಜನನ ಮರಣಗಳಲ್ಲಿ ತನ್ನ ಸೂಕ್ಷ್ಮ ಶರೀರದೊಂದಿಗೆ ಹೋಗುವುದು. ಜ್ಞಾನ ಪಡೆದಾದ ಮೇಲೆ ಪೂರ್ಣತೆಯ ಗುರಿಯನ್ನು ಮುಟ್ಟಿ ಆದ ಮೇಲೆ ಜನನ ಮರಣಗಳು ಅದಕ್ಕೆ ಇಲ್ಲ. ಆಗ ಅದು ಸೂಕ್ಷ್ಮ ಶರೀರವನ್ನು ಬೇಕಾದರೆ ಇಟ್ಟುಕೊಂಡಿರಬಹುದು ಇಲ್ಲದೇ ಇದ್ದರೆ ತ್ಯಜಿಸಿ ಅನಂತ ಕಾಲದವರೆಗೆ ಸ್ವತಂತ್ರನಾಗಿ ಮುಕ್ತನಾಗಿರಬಹುದು. ಆತ್ಮನ ಗುರಿ ಸ್ವಾತಂತ್ರ್ಯ. ಇದು ಕೇವಲ ನಮ್ಮ ಧರ್ಮದ ವಿಶೇಷವಲ್ಲ. ನಮ್ಮಲ್ಲಿಯೂ ಸ್ವರ್ಗ ನರಕಗಳಿವೆ. ಆದರೆ ಅವು ಅನಂತವಲ್ಲ. ಸ್ವಭಾವತಃ ಅವು ಹಾಗೆ ಇರಲಾರವು. ಸ್ವರ್ಗವೇನಾದರೂ ಇದ್ದರೆ ಅವು ನಮ್ಮ ಪ್ರಪಂಚದಂತೆಯೇ ದೊಡ್ಡದೊಂದು ಪುನರಾವೃತ್ತಿ. ಅಲ್ಲಿ ಇಲ್ಲಿಗಿಂತ ಹೆಚ್ಚು ಸುಖಭೋಗ ಇರಬಹುದು. ಆದರೆ ಇದರಿಂದ ಜೀವನಿಗೇ ಹಾನಿ. ಇಂತಹ ಸ್ವರ್ಗಗಳು ಎಷ್ಟೋ ಇವೆ. ಫಲಾಪೇಕ್ಷೆಯಿಂದ ಯಾರು ಇಲ್ಲಿ ಸತ್ಕರ್ಮವನ್ನು ಮಾಡುವರೋ ಅವರು ಕಾಲವಾದರೆ ಇಂತಹ ಸ್ವರ್ಗದಲ್ಲಿ ಇಂದ್ರ ಮುಂತಾದವರಂತೆ ಹುಟ್ಟುವರು. ದೇವತೆಗಳು ಎಂದರೆ ಕೆಲವು ಪದವಿ ಹೆಸರು. ಅವರೂ ಮನುಷ್ಯರಾಗಿದ್ದರು, ಸತ್ಕರ್ಮದಿಂದ ದೇವತೆಗಳಾದರು. ನೀವು ಓದುವ ಇಂದ್ರಾದಿ ದೇವತೆಗಳ ಹೆಸರು ವ್ಯಕ್ತಿಯ ಹೆಸರಲ್ಲ, ಪದವಿಯ ಹೆಸರು. ಸಾವಿರಾರು ಇಂದ್ರರಿರುವರು. ನಹುಷ ಪ್ರಖ್ಯಾತ ರಾಜನಾಗಿದ್ದ. ಕಾಲವಾದ ಮೇಲೆ ಇಂದ್ರನಾದ. ಇದೊಂದು ಪದವಿ. ಒಂದು ಜೀವಿ ಸತ್ಕರ್ಮದಿಂದ ಮೇಲೆ ಹೋಗಿ ಇಂದ್ರನಾಗುವನು. ಅಲ್ಲಿ ಕೆಲವು ಕಾಲ ಇರುವನು. ಅವನು ಕಾಲವಾದ ಮೇಲೆ ಪುನಃ ಮಾನವನಾಗಿ ಹುಟ್ಟುವನು. ಆದರೆ ಮನುಷ್ಯ ಜೀವನವೇ ಸರ್ವಶ್ರೇಷ್ಠ. ಕೆಲವು ದೇವತೆಗಳು ಸ್ವರ್ಗವನ್ನು ಮೀರಿ ಹೋಗಿ

ಸುಖಭೋಗೇಚ್ಛೆಗಳನ್ನೆಲ್ಲಾ ತ್ಯಜಿಸಬಹುದು. ಆದರೆ ಈ ಪ್ರಪಂಚದಲ್ಲಿ ಐಶ್ವರ್ಯ ಅಧಿಕಾರ ಭೋಗ ಬಹುಪಾಲು ಜನರನ್ನು ಹೇಗೆ ಭ್ರಾಂತರಾಗಿ ಮಾಡುವುದೋ ಹಾಗೆಯೇ ದೇವತೆಗಳೂ ಭ್ರಾಂತರಾಗುವರು. ದೇವತೆಗಳು ತಮ್ಮ ಸತ್ಕರ್ಮ ಫಲವನ್ನು ಅನುಭವಿಸಿದ ಮೇಲೆ ಪತಿತರಾಗಿ ಜನ್ಮವೆತ್ತುವರು. ಆದಕಾರಣವೇ ಈ ಪ್ರಪಂಚ ಕರ್ಮಭೂಮಿ. ನಾವು ಈ ಪ್ರಪಂಚದಿಂದ ಮೋಕ್ಷವನ್ನು ಪಡೆಯುವೆವು. ಈ ಸ್ವರ್ಗಲೋಕ ಕೂಡ ನಾವು ಇಚ್ಛಿಸಲು ಯೋಗ್ಯವಲ್ಲ. ಆದರೆ ನಾವು ಯಾವುದನ್ನು ಇಚ್ಛಿಸಬೇಕು? ಮುಕ್ತಿ.

ಅತಿ ಉತ್ಕೃಷ್ಟ ಸ್ವರ್ಗದಲ್ಲಿದ್ದರೂ ನೀನು ಪ್ರಕೃತಿಯ ದಾಸ. ಇಪ್ಪತ್ತು ಸಾವಿರ ವರುಷ ನೀನು ರಾಜನಾದರೆ ಪ್ರಯೋಜನವೇನು? ಎಲ್ಲಿಯುವರೆಗೆ ನಿನಗೆ ದೇಹವಿದೆಯೋ ಎಲ್ಲಿಯುವರೆಗೆ ನೀನು ಸುಖಕ್ಕೆ ದಾಸನೋ ಎಲ್ಲಿಯುವರೆಗೆ ನೀನು ಕಾಲದೇಶಗಳ ಎಲ್ಲೆಯೊಳಗೆ ಇರುವೆಯೋ ಅಲ್ಲಿಯುವರೆಗೆ ನೀನು ದಾಸ. ಬಾಹ್ಯ ಮತ್ತು ಆಂತರಿಕ ಪ್ರಕೃತಿಯಿಂದ ಮುಕ್ತನಾಗುವುದೇ ಗುರಿ. ಪ್ರಕೃತಿ ನಿನಗೆ ಬಾಗಬೇಕು, ನೀನು ಅದನ್ನು ತುಳಿಯಬೇಕು, ಮುಕ್ತನಾಗಿ ನಿನ್ನ ಮಹಿಮೆಯಲ್ಲಿ ನೀನು ಪ್ರತಿಷ್ಠಿತನಾಗಬೇಕು. ನಿನಗೆ ಇನ್ನು ಜನನವಿಲ್ಲ ಮರಣವೂ ಇಲ್ಲ. ಇನ್ನು ಮೇಲೆ ಸುಖವಿಲ್ಲ, ಅಂದರೆ ದುಃಖವೂ ಇಲ್ಲ. ಆಗ ನೀನು ಸರ್ವಾತೀತ ಅವ್ಯಕ್ತ ಅವಿನಾಶಿ ಆನಂದಕ್ಕೆ ಅಧಿಕಾರಿಯಾಗುವೆ. ನಾವು ಇಲ್ಲಿ ಯಾವುದನ್ನು ಸುಖ ಆನಂದವೆನ್ನುವೆವೋ ಅದು ಆ ಆನಂದದ ಕಣಮಾತ್ರ. ಅನಂತ ಆನಂದವೇ ನಮ್ಮ ಗುರಿ.

ಆತ್ಮ ಲಿಂಗಾತೀತವಾದುದು. ಅದನ್ನು ಪುರುಷ ಅಥವಾ ಸ್ತ್ರೀ ಎಂದು ಹೇಳಲಾರೆವು. ಲಿಂಗ ದೇಹಕ್ಕೆ ಮಾತ್ರ ಅನ್ವಯಿಸುವುದು. ಆತ್ಮನಿಗೆ ಸ್ತ್ರೀಪುರುಷನೆಂದು ಹೇಳುವುದೆಲ್ಲಾ ಭ್ರಾಂತಿ. ಅದು ದೇಹಕ್ಕೆ ಮಾತ್ರ ಅನ್ವಯಿಸುವುದು. ಹಾಗೆಯೇ ವಯಸ್ಸೂಕೂಡ. ಅದಕ್ಕೆ ವಯಸ್ಸಾಗುವುದಿಲ್ಲ. ಆ ಪುರಾಣ ಪುರುಷ ಯಾವಾಗಲೂ ಹಾಗೆಯೇ ಇರುವನು. ಅದು ಪ್ರಪಂಚಕ್ಕೆ ಬಂದದ್ದು ಹೇಗೆ? ಅದಕ್ಕೆ ಒಂದು ಉತ್ತರ ನಮ್ಮ ಶಾಸ್ತ್ರದಲ್ಲಿ ಇದೆ. ಈ ಬಂಧನಕ್ಕೆಲ್ಲಾ ಕಾರಣ ಅವಿದ್ಯೆ. ನಾವು ಅಜ್ಞಾನದಿಂದ ಬದ್ಧರಾಗಿರುವೆವು. ಜ್ಞಾನ ನಮ್ಮನ್ನು ಮುಕ್ತರನ್ನಾಗಿ ಮಾಡುವುದು. ಈ ಜ್ಞಾನ ಬರುವುದು ಹೇಗೆ. ಭಕ್ತಿಯಿಂದ ಪೂಜೆಯಿಂದ ಎಲ್ಲರನ್ನೂ

ಭಗವಂತನ ಸಚಲ ದೇವಾಲಯವೆಂದು ಭಾವಿಸುವುದರಿಂದ ಅದು ಸಾಧ್ಯ. ಅವನು ಎಲ್ಲರಲ್ಲಿಯೂ ಇರುವನು. ಪರಮಭಕ್ತಿಯಿಂದ ಜ್ಞಾನ ಲಭಿಸುವುದು, ಅಜ್ಞಾನ ಮಾಯವಾಗುವುದು, ಜೀವಿ ಮುಕ್ತನಾಗುವನು. ನಮ್ಮ ಶಾಸ್ತ್ರದಲ್ಲಿ ಎರಡು ಬಗೆ ದೇವರ ಭಾವನೆ ಇವೆ, ಒಂದು ಸಗುಣ ಮತ್ತೊಂದು ನಿರ್ಗುಣ. ಸಗುಣವೆಂದರೆ ಸರ್ವವ್ಯಾಪಿಯಾದ ಸೃಷ್ಟಿಕರ್ತ, ರಕ್ಷಕ ಮತ್ತು ಸಂಹಾರಕ. ಅವನೇ ವಿಶ್ವಕ್ಕೆ ಸನಾತನ ತಾಯಿ ತಂದೆ. ಆದರೆ ಅವನು ಪ್ರಕೃತಿಗಿಂತ ಜೀವಿಗಳಿಗಿಂತ ಪ್ರತ್ಯೇಕನಾಗಿರುವನು. ಮೋಕ್ಷವೆಂದರೆ ಅವನ ಹತ್ತಿರ ಬರುವುದು, ಅವನಲ್ಲಿ ಬಾಳುವುದು. ನಿರ್ಗುಣ ದೇವರ ಭಾವನೆ ಮತ್ತೊಂದು ಇರುವುದು. ಇಲ್ಲಿ ಗುಣವಾಚಕಗಳು ಅನಾವಶ್ಯಕ ಅಯುಕ್ತ. ಅವ್ಯಕ್ತ ಸರ್ವವ್ಯಾಪಿಯಾದ ನಿರ್ಗುಣವೊಂದೇ ಉಳಿಯುವುದು. ಅವನನ್ನು ಜ್ಞಾನಿ ಎನ್ನಲಾಗುವುದಿಲ್ಲ. ಜ್ಞಾನ ಮನುಷ್ಯನಿಗೆ ಮಾತ್ರ ಸೇರಿದ್ದು. ಅವನನ್ನು ಆಲೋಚನಾ ಜೀವಿ ಎನ್ನಲಾಗುವುದಿಲ್ಲ. ಆಲೋಚಿಸುವುದು ದುರ್ಬಲ ಮಾನವನ ಚಿಹ್ನೆ. ವಿಚಾರ ಪರ ಎನ್ನಲಾಗುವುದಿಲ್ಲ. ಇದೊಂದು ದುರ್ಬಲತೆಯ ಚಿಹ್ನೆ. ಅವನನ್ನು ಸೃಷ್ಟಿಕರ್ತ ಎನ್ನಲಾರೆವು. ಬಂಧನದಲ್ಲಿ ಇಲ್ಲದೇ ಇದ್ದರೆ ಯಾರೂ ಸೃಷ್ಟಿಸಲಾರರು. ಅವನಿಗೆ ಇರುವ ಬಂಧನ ಯಾವುದು? ಆಸೆಯ ತೃಪ್ತಿಗಾಗಿ ಮಾತ್ರ ಎಲ್ಲರೂ ಕೆಲಸಮಾಡುವುದು. ಅವನಿಗೆ ಇರುವ ಆಸೆಯಾವುದು? ಕೊರತೆಯ ಪೂರ್ಣತೆಗೆ ಯಾರಾದರೂ ಕೆಲಸ ಮಾಡುವುದು. ಇವನಿಗೆ ಇರುವ ಕೊರತೆ ಯಾವುದು? ವೇದಗಳಲ್ಲಿ ಇದಕ್ಕೆ "ಅದು" ಎಂದು ಉಪಯೋಗಿಸುವರು, ಅವನು ಎಂದು ಕರೆಯುವುದಿಲ್ಲ. ಅವನು ಎಂದರೆ ಪುಲ್ಲಿಂಗ ಉಪಯೋಗಿಸಿದಂತೆ ಆಗುವುದು. ಅಲ್ಲಿ "ಅದು" ಎಂದು ಕರೆಯುವರು, "ಅದು" ಎಂದು ಬೋಧಿಸುವರು. ಇದನ್ನೇ ಅದ್ವೈತವೆನ್ನುವುದು.

ಈ ನಿರ್ಗುಣದೊಂದಿಗೆ ನಮ್ಮ ಸಂಬಂಧ ಏಂತಹುದು? ನಾವೇ ಅದು. ನಾವು ಅದು ಎರಡು ಒಂದೇ. ಎಲ್ಲರೂ ಆ ನಿರ್ಗುಣದ ಆವಿರ್ಭಾವನೆ, ಎಲ್ಲರಿಗೂ ಅದೇ ಮೂಲವಸ್ತು. ನಾವು ಅವ್ಯಕ್ತ ಅನಂತದಿಂದ ಬೇರೆ ಎಂದು ಭಾವಿಸುವುದೇ ದುಃಖಕ್ಕೆ ಕಾರಣ. ಮುಕ್ತಿ ಎಂದರೆ ಈ ಅದ್ವೈತ, ನಿರ್ಗುಣವೇ ನಾವು ಎಂದು ಭಾವಿಸುವುದು. ನಮ್ಮ ಶಾಸ್ತ್ರದಲ್ಲಿ ದೊರಕುವ ಎರಡುಬಗೆ ದೇವರ ಸಂಕ್ಷೇಪ ಭಾವನೆ ಇದು. ಇಲ್ಲಿ

ಕೆಲವು ವಿವರಣೆ ಆವಶ್ಯಕ. ನಿರ್ಗುಣ ಬ್ರಹ್ಮವಾದವೇ ಎಲ್ಲಾ ಬಗೆಯ ಶಾಸ್ತ್ರಕ್ಕೆ ತಳಹದಿ. ಎಲ್ಲ ದೇಶಗಳಲ್ಲಿಯೂ ಅತಿ ಪುರಾತನ ಕಾಲದಿಂದಲೂ ಮಾನವರನ್ನು ನಿಮ್ಮಂತೆಯೇ ನೋಡಿ, ನಿಮ್ಮಂತೆಯೇ ಪ್ರೀತಿಸಿ, ಎಂಬ ಸತ್ಯ ವನ್ನು ಬೋಧಿಸಿರುವರು. ಭರತಖಂಡದಲ್ಲಿ ಎಲ್ಲರನ್ನೂ ನಿಮ್ಮವರಂತೆ ಪ್ರೀತಿಸಿ ಎಂದು ಬೋಧಿಸಿರುವರು. ಪ್ರಾಣಿ ಮನುಷ್ಯರಿಗೆ ಯಾವ ವ್ಯತ್ಯಾಸವನ್ನೂ ನಾವು ಮಾಡುವುದಿಲ್ಲ. ಆದರೆ ಇದಕ್ಕೆ ಸರಿಯಾದ ಕಾರಣ ಗೊತ್ತಿರಲಿಲ್ಲ, ಇತರರನ್ನು ನಮ್ಮಂತೆ ಪ್ರೀತಿಸಿದರೆ ಪ್ರಯೋಜನವೇನು ಎಂದು ಗೊತ್ತಿರಲಿಲ್ಲ. ನಿರ್ಗುಣ ಬ್ರಹ್ಮವಾದದಲ್ಲಿ ಮಾತ್ರ ಇದಕ್ಕೆ ವಿವರಣೆ ಇದೆ. ಈ ಸೃಷ್ಟಿಯೆಲ್ಲಾ ಒಂದು, ಏಕ, ಎಲ್ಲಾ ಜೀವನವೂ ಒಂದು. ನಾನು ಮತ್ತೊಂದನ್ನು ಪೀಡಿಸಿದರೆ ನನಗೆ ನಾನೇ ಪೀಡಿಸಿಕೊಳ್ಳುತ್ತಿರುವೆನು, ಅನ್ಯ ರನ್ನು ಪ್ರೀತಿಸಿದರೆ ನನ್ನನ್ನು ಪ್ರೀತಿಸುತ್ತಿರುವೆನು. ಅದಕ್ಕೇ ನಾವು ಮತ್ತೊಬ್ಬರಿಗೆ ನೋವನ್ನುಂಟುಮಾಡಕೂಡದು. ಈ ನೀತಿಗೆ ಕಾರಣ ನಮಗೆ ನಿರ್ಗುಣ ಬ್ರಹ್ಮವಾದದಲ್ಲಿ ದೊರಕುವುದು. ಅಲ್ಲಿ ಈಶ್ವರನಿಗೆ ಇರುವ ಸ್ಥಾನದ ಪ್ರಶ್ನೆ ಏಳುವುದು. ಸಗುಣೋಪಾಸನೆಯಲ್ಲಿ ಬರುವ ಅದ್ಭುತ ಭಕ್ತಿಯನ್ನು ನಾನು ಬಲ್ಲೆ. ಜನರಿಗೆ ಭಕ್ತಿಯ ಆವಶ್ಯಕತೆ ಮತ್ತು ಅದರಲ್ಲಿರುವ ಶಕ್ತಿ ನನಗೆ ಗೊತ್ತು. ದೇಶದಲ್ಲಿ ನಮಗೆ ಇಂದು ಬೇಕಾ ಗಿರುವುದು ಅಳುವಲ್ಲ, ಶಕ್ತಿ. ಎಲ್ಲ ಮೂಢನಂಬಿಕೆಯನ್ನು ಕಿತ್ತೊಗೆದು, ನಾನೇ ಅವ್ಯಕ್ತ ಬ್ರಹ್ಮನೆಂದು ನಿರ್ಭೀತಿಯಿಂದ ನಿಂತರೆ ಎಂತಹ ಶಕ್ತಿ ಗಣಿ ಅಲ್ಲಿರುವುದು! ಯಾವುದಕ್ಕೆ ನಾನಂಜುವುದು? ಪ್ರಕೃತಿ ನಿಯಮಗಳನ್ನೂ ನಾನು ಲೆಕ್ಕಿಸುವುದಿಲ್ಲ. ಮೃತ್ಯುವನ್ನು ನೋಡಿ ನಗುವೆನು. ನಾನು ಅನಂತ ವಾದ ಸನಾತನವಾದ ಚ್ಯುತಿಯಿಲ್ಲದ ನಾಶವಿಲ್ಲದ ನನ್ನ ಆತ್ಮದ ಮಹಿ ಮೆಯ ಮೇಲೆ ನಿಲ್ಲುವೆನು. ಯಾವ ಶಸ್ತ್ರವೂ ಅದನ್ನು ಛೇದಿಸಲಾರದು, ಶಾಖ ಒಣಗಿಸಲಾರದು, ಬೆಂಕಿ ಸುಡಲಾರದು, ನೀರು ಕರಗಿಸಲಾರದು. ಅನಂತ, ಜನನ ಮರಣಾತೀತ ಆದಿ ಅಂತ್ಯರಹಿತ. ಇದರೆದುರಿಗೆ ಸೂರ್ಯ ಚಂದ್ರಾದಿಗಳು ಸಾಗರದ ಬಿಂದುಗಳಂತೆ ಕಾಣುವುವು. ಅದರ ಮಹಿಮೆ ಎದುರಿಗೆ ದೇಶ ಮಾಯವಾಗುವುದು. ಇಂತಹ ಮಹಾ ಆತ್ಮನನ್ನು ನಾವು ನಂಬಬೇಕು. ಅದರಿಂದ ಶಕ್ತಿ ಬರುವುದು. ನೀವು ಇಚ್ಛಿಸಿದುದೆಲ್ಲಾ ಪ್ರಾಪ್ತ ವಾಗುವುದು. ದುರ್ಬಲನೆಂದು ಯೋಚಿಸಿದರೆ ದುರ್ಬಲನಾಗುವೆ. ಶಕ್ತಿವಂತ ನೆಂದು ಯೋಚಿಸಿದರೆ ಶಕ್ತಿವಂತನಾಗುವೆ. ಅಶುದ್ಧನೆಂದು ಭಾವಿಸಿದರೆ

ಅಶುದ್ಧನಾಗುವೆ, ಶುದ್ಧನೆಂದು ಯೋಚಿಸಿದರೆ ಶುದ್ಧನಾಗುವೆ. ದುರ್ಬಲ ರೆಂದು ಭಾವಿಸದೆ, ತೇಜಸ್ವಿಗಳು ನಾವು ಸರ್ವಶಕ್ತಿವಂತರು ಜ್ಞಾನಿಗಳು ಎಂದು ಭಾವಿಸಿ ಎನ್ನುವುದು ಅದ್ವೈತವಾದ. ಅದನ್ನು ನಾನು ಇದುವರೆಗೆ ವ್ಯಕ್ತಪಡಿಸದೆ ಇದ್ದರೆ ಚಿಂತೆಯಿಲ್ಲ. ಅದು ನನ್ನಲ್ಲಿರುವುದು. ಅನಂತ ಜ್ಞಾನ ನನ್ನಲ್ಲಿದೆ, ಅನಂತಶಕ್ತಿ ಪರಿಶುದ್ಧತೆ ಸ್ವಾತಂತ್ರ್ಯವೆಲ್ಲಾ ನನ್ನಲ್ಲಿದೆ. ನಾನೇಕೆ ಈ ಜ್ಞಾನವನ್ನು ವ್ಯಕ್ತಪಡಿಸಬಾರದು? ನನಗೆ ಅದರಲ್ಲಿ ಶ್ರದ್ಧೆಯಿಲ್ಲ. ಶ್ರದ್ಧೆ ಹುಟ್ಟಲಿ, ಇವೆಲ್ಲ ವ್ಯಕ್ತವಾಗುವುವು. ನಿರ್ಗುಣ ಬ್ರಹ್ಮಬೋಧಿ ಸುವುದು ಇದನ್ನು. ಬಾಲ್ಯದಿಂದಲೇ ನಿಮ್ಮ ಮಕ್ಕಳನ್ನು ಪೌರುಷವಂತ ರನ್ನಾಗಿ ಮಾಡಿ. ಅವರಿಗೆ ದುರ್ಬಲತೆಯನ್ನು ಬಾಹ್ಯ ಆಚಾರಗಳನ್ನು ಬೋಧಿಸಬೇಡಿ. ಬಲಾಢ್ಯರನ್ನಾಗಿಮಾಡಿ ತಮ್ಮ ಕಾಲಮೇಲೆ ತಾವು ನಿಂತು ಕೊಳ್ಳಲಿ, ಧೀರರಾಗಲಿ, ವಿಜಯಿಗಳಾಗಲಿ, ಸಹಿಷ್ಣುಗಳಾಗಲಿ. ಆತ್ಮನ ಮಹಾತ್ಮೆಯನ್ನು ಮೊದಲು ತಿಳಿಯಲಿ. ನಿಮಗೆ ಈ ಭಾವನೆ ವೇದಾಂತ ದಲ್ಲಿ ಮಾತ್ರ ದೊರಕುವುದು. ಉಳಿದ ಧರ್ಮಗಳಲ್ಲಿರುವಂತೆಯೇ ಅದರಲ್ಲಿ ಹೆಚ್ಚಾಗಿ ಪ್ರೀತಿ ಪೂಜೆ ಮುಂತಾದುವು ಇವೆ. ಜೀವನೋತ್ಸಾಹವನ್ನು ತುಂಬುವ ಅದ್ಭುತವಾದ ಈ ಆತ್ಮಭಾವನೆ ಇಲ್ಲಿ ಮಾತ್ರ ಇರುವುದು. ಸಂಸಾರದಲ್ಲೆಲ್ಲಾ ಒಂದು ಕ್ರಾಂತಿಯನ್ನು ತರುವ ಭಾವನೆ ಇಲ್ಲಿ ಮಾತ್ರ ಇದೆ. ಜಡವಿಜ್ಞಾನ ಧರ್ಮದೊಂದಿಗೆ ರಾಜಿಯಾಗುವುದು ಇಲ್ಲಿ.

ನಮ್ಮ ಧರ್ಮದ ಮುಖ್ಯ ತತ್ತ್ವಗಳನ್ನು ನಿಮ್ಮೆದುರಿಗೆ ಇಡಲು ಯತ್ನಿಸಿರುವೆ. ಅದನ್ನು ಹೇಗೆ ಪ್ರಯೋಗಿಸಬೇಕು, ಅನುಷ್ಠಾನಕ್ಕೆ ತರ ಬೇಕು ಎಂಬ ವಿಷಯದಮೇಲೆ ಸ್ವಲ್ಪ ಹೇಳಬೇಕಾಗಿದೆ. ಸ್ವಾಭಾವಿಕವಾಗಿ ಭರತಖಂಡದಲ್ಲಿ ಇರುವ ಪರಿಸ್ಥಿತಿಗಳಿಗನುಸಾರವಾಗಿ ಹಲವು ಪಂಗಡಗಳು ಇರಲೇಬೇಕು. ವಾಸ್ತವವಾಗಿ ಹಲವು ಪಂಗಡಗಳಿವೆ. ಆದರೆ ಒಬ್ಬರು ಮತ್ತೊಬ್ಬರೊಂದಿಗೆ ವ್ಯಾಜ್ಯವಾಡುವುದಿಲ್ಲ. ಇದೊಂದು ವಿಚಿತ್ರ. ವೈಷ್ಣ ವರು ನರಕಕ್ಕೆ ಹೋಗುತ್ತಾರೆಂದು ಶೈವ ಹೇಳುವುದಿಲ್ಲ. ಶೈವರು ನರಕಕ್ಕೆ ಹೋಗುತ್ತಾರೆಂದು ವೈಷ್ಣವರು ಹೇಳುವುದಿಲ್ಲ. ಶೈವನು "ಇದು ನನ್ನ ದಾರಿ, ನಿನ್ನದು ಬೇರೆ ದಾರಿ ಇದೆ, ಕೊನೆಗೆ ನಾವಿಬ್ಬರೂ ಸಂಧಿಸುವೆವು" ಎನ್ನುವನು. ಭರತಖಂಡದಲ್ಲಿ ಎಲ್ಲರಿಗೂ ಇದು ಗೊತ್ತಿದೆ. ಇದೇ ಇಷ್ಟ ದೇವತಾಸಿದ್ಧಾಂತ. ಅತಿ ಪುರಾತನ ಕಾಲದಲ್ಲೇ ಭಗವಂತನ ಉಪಾಸನೆಗೆ ಹಲವು ಆಕಾರಗಳಿವೆ ಎಂಬುದನ್ನು ಒಪ್ಪಿಕೊಂಡಿರುವರು. ಒಬ್ಬೊಬ್ಬರ

ಪ್ರಕೃತಿಗೆ ಒಂದೊಂದು ಮಾರ್ಗವಿರಬೇಕೆಂಬುದನ್ನೂ ಒಪ್ಪಿಕೊಂಡಿರುವರು. ನಿನ್ನ ದಾರಿ ನನ್ನದಲ್ಲ, ಬಹುಶಃ ನನಗೆ ಅದು ಅಪಾಯಕರವಿರಬಹುದು. ಎಲ್ಲರಿಗೂ ಒಂದೇ ಮಾರ್ಗವಿದೆ ಎಂಬುದು ಅಪಾಯಕಾರಿ, ಅರ್ಥವಿಲ್ಲದ್ದು. ಆ ಭಾವನೆಯಿಂದ ನಾವು ಪಾರಾಗಬೇಕು. ಪ್ರತಿಯೊಬ್ಬರೂ ಒಂದೇ ಧರ್ಮಕ್ಕೆ ಸೇರಿ, ಒಂದೇ ಮಾರ್ಗವನ್ನು ಅನುಸರಿಸುವ ದುರ್ದಿನ ಪ್ರಪಂಚಕ್ಕೆ ಬರದಿರಲಿ. ಆಗ ಧರ್ಮ ಮತ್ತು ಆಧ್ಯಾತ್ಮಿಕ ಭಾವನೆ ನಾಶ ವಾಗುವುದು. ವೈವಿಧ್ಯತೆಯೆ ಜೀವನದ ರಹಸ್ಯ. ಇದು ಪೂರ್ಣ ನಾಶ ವಾದರೆ ಸೃಷ್ಟಿಯೇ ನಾಶವಾಗುವುದು. ನಮ್ಮ ಭಾವನೆಯಲ್ಲಿ ವೈವಿಧ್ಯತೆ ಇದ್ದರೆ ನಾವು ಜೀವಿಸಿರುವೆವು. ವೈವಿಧ್ಯತೆ ಇದೆ ಎಂದು ನಾವು ಹೋರಾಡ ಬೇಕಾಗಿಲ್ಲ. ನಿನ್ನ ದಾರಿ ನಿನಗೆ ಸರಿ, ನನಗಲ್ಲ. ನನ್ನದಾರಿ ನನಗೆ ಸರಿ, ನಿನಗಲ್ಲ. ನನ್ನ ದಾರಿಗೆ ನನ್ನ "ಇಷ್ಟ" ವೆಂದು ಸಂಸ್ಕೃತದಲ್ಲಿ ಹೆಸರು. ಪ್ರಪಂಚದಲ್ಲಿ ಯಾವ ಧರ್ಮದೊಂದಿಗೂ ನಾವು ಕಾದಾಡುವುದಿಲ್ಲ. ಇದನ್ನು ಮರೆಯದಿರಿ. ನಮ್ಮಲ್ಲಿ ಪ್ರತಿಯೊಬ್ಬರಿಗೂ ಇಷ್ಟ ಬೇರೆಬೇರೆ ಇದೆ. ಜನ ಹೊರಗಿನಿಂದ ಬಂದು "ಇದೊಂದೇ ಮಾರ್ಗ" ವೆಂದು ಬಲಾತ್ಕರಿಸಿದರೆ ನಾವು ಒಂದು ಮಾತನ್ನು ಆಡಬೇಕಾಗಿದೆ. ಅವರನ್ನು ನೋಡಿ ನಗುವೆವು. ದೇವರೆಡೆಗೆ ಬೇರೆ ದಾರಿಯಲ್ಲಿ ಹೋಗಲಿಚ್ಛಿಸುವುದರಿಂದ ಅವರನ್ನು ನಾಶ ಮಾಡಬೇಕೆಂದು ಬಯಸಿದಾಗ, ಪ್ರೀತಿ ಎಂದು ಮಾತನಾಡುವುದು ಅಪ ಹಾಸ್ಯ. ಆ ಪ್ರೀತಿಗೆ ಏನೂ ಅರ್ಥವಿಲ್ಲ. ತಮ್ಮ ಮಾರ್ಗವನ್ನು ಬಿಟ್ಟು ಬೇರೆ ಮಾರ್ಗದಲ್ಲಿ ಹೋಗುವವನನ್ನೇ ತಾಳಲಾರದವನು ಪ್ರೇಮವನ್ನು ಹೇಗೆ ಬೋಧಿಸಬಲ್ಲ? ಅದು ಪ್ರೀತಿಯಾದರೆ ದ್ವೇಷವೆಂದರೇನು? ಯಾವ ಧರ್ಮದೊಂದಿಗೂ ನಮಗೆ ವೈಮನಸ್ಯವಿಲ್ಲ. ಕ್ರೈಸ್ತ, ಮಹಮದ್, ಬುದ್ಧ ಅಥವಾ ಇನ್ನೂ ಯಾವುದಾದರೂ ದೇವದೂತನನ್ನು ಅವರು ಆರಾಧಿಸಲಿ ಚಿಂತೆಯಿಲ್ಲ. "ಒಳ್ಳೆಯದು ಸಹೋದರನೆ ನಾನು ನಿನಗೆ ಸಹಾಯಮಾಡು ವೆನು. ಆದರೆ ನನ್ನ ದಾರಿಯಲ್ಲಿ ನಾನು ನಡೆಯುವುದಕ್ಕೆ ಸ್ವಾತಂತ್ರ್ಯ ಕೊಡಿ. ಅದು ನನ್ನ ಇಷ್ಟ. ನಿಮ್ಮ ಮಾರ್ಗ ನಿಮಗೆ ಶ್ರೇಷ್ಠವಿರಬಹುದು. ಆದರೆ ನನಗೆ ಅದು ಅಪಾಯಕಾರಿಯಾಗಿರಬಹುದು. ಯಾವ ಆಹಾರ ಒಳ್ಳೆಯದೆಂದು ನನ್ನ ಅನುಭವವೇ ಹೇಳುವುದು. ವೈದ್ಯರ ಒಂದು ಸೇನೆ ನನಗೆ ಅದನ್ನು ಹೇಳಬೇಕಾಗಿಲ್ಲ. ನನ್ನ ಅನುಭವದಿಂದ ಯಾವ ಮಾರ್ಗ ನನಗೆ ಹಿತಕಾರಿ ಎಂಬುದು ಗೊತ್ತಿದೆ" ಎನ್ನುವನು. ಅದೇ ನಮ್ಮ ಗುರಿ,

ಇಷ್ಟ. ದೇವಸ್ಥಾನ ಪ್ರತೀಕ ವಿಗ್ರಹ ನಿಮ್ಮ ಆತ್ಮ ಸಾಕ್ಷಾತ್ಕಾರಕ್ಕೆ ಸಹಾಯಮಾಡಿದರೆ ಅದನ್ನು ಸ್ವೀಕರಿಸಿ. ವಿಗ್ರಹಗಳನ್ನು ಸಾಧ್ಯವಾದರೆ ಇಟ್ಟುಕೊಳ್ಳಿ. ಕೆಲವು ಆಕಾರ ಮತ್ತು ಅನುಷ್ಠಾನ ಭಗವತ್ ಸಾಕ್ಷಾತ್ಕಾರಕ್ಕೆ ಸಹಾಯಮಾಡಿದರೆ ಅಗತ್ಯವಾಗಿ ಸ್ವೀಕರಿಸಿ. ಯಾವ ಯಾವ ವಿಗ್ರಹ ಮಂತ್ರ ಆಚಾರಗಳು ನಿಮ್ಮನ್ನು ದೇವರ ಸಮೀಪಕ್ಕೆ ಒಯ್ಯುವುವೋ ಅವನ್ನೆಲ್ಲ ಸ್ವೀಕರಿಸಿ. ಆದರೆ ಅದಕ್ಕಾಗಿ ಹೋರಾಡಬೇಡಿ. ನೀನು ಕಾದಾಡುವುದಕ್ಕೆ ಪ್ರಾರಂಭಿಸಿದೊಡನೆ ದೇವರಿಗೆ ಅಭಿಮುಖನಾಗಿ ಹೋಗುತ್ತಿಲ್ಲ ವಿಮುಖನಾಗಿ ಹೋಗುತ್ತಿರುವಿ, ಮೂರ್ಖನಕಡೆಗೆ ಹೋಗುತ್ತಿರುವಿ.

ಇವು ನಮ್ಮ ಧರ್ಮದ ಕೆಲವು ಭಾವನೆಗಳು. ಎಲ್ಲವನ್ನೂ ನಾವು ಸ್ವೀಕರಿಸುತ್ತೇವೆ. ಯಾವುದನ್ನೂ ನಿರಾಕರಿಸುವುದಿಲ್ಲ. ನಮ್ಮ ಜಾತಿ ಮತ್ತು ಇನ್ನೂ ಹಲವು ಆಚಾರ ಧರ್ಮದೊಂದಿಗೆ ಬೆರೆತು ಹೋಗಿರುವಂತೆ ಕಂಡರೂ ಅದು ನಿಜವಾಗಿಯೂ ಹಾಗಿಲ್ಲ. ನಮ್ಮ ಜನಾಂಗ ರಕ್ಷಣೆಗೆ ಇವು ಆವಶ್ಯಕ ಅಷ್ಟೆ. ರಾಷ್ಟ್ರ ರಕ್ಷಣೆ ಯಾವಾಗ ಅವಶ್ಯಕ ವಿಲ್ಲವೋ ಆಗ ಇವೂ ಸ್ವಾಭಾವಿಕವಾಗಿ ಮಾಯವಾಗುವುವು. ಆದರೆ ನನಗೆ ವಯಸ್ಸಾದಂತೆಲ್ಲಾ ಪುರಾತನ ಕಾಲದಿಂದಲೂ ಬಂದ ಈ ಸಂಸ್ಥೆಗಳನ್ನು ಗೌರವದಿಂದ ಕಾಣುತ್ತೇನೆ. ಮುಕ್ಕಾಲು ಪಾಲು ಇವೆಲ್ಲಾ ಕೆಲಸಕ್ಕೆ ಬಾರದವು ಎಂದು ಆಲೋಚಿಸುತ್ತಿದ್ದ ಕಾಲ ಒಂದಿತ್ತು. ಆದರೆ ವಯಸ್ಸಾದಂತೆಲ್ಲಾ ಅವುಗಳಲ್ಲಿ ಯಾವುದನ್ನೂ ತುಚ್ಛವಾಗಿ ಕಾಣಲಾರೆ. ಪ್ರತಿಯೊಂದರಲ್ಲಿಯೂ ಹಲವು ಶತಮಾನಗಳ ಪ್ರಯೋಗ ಫಲವಿದೆ. ನೆನ್ನೆ ಹುಟ್ಟಿದ ಮೊಗು, ನಾಳೆ ಕಾಲವಾಗಬಹುದು; ನನ್ನ ಬಳಿಗೆ ಬಂದು ನನ್ನ ಯೋಜನೆಯನ್ನೆಲ್ಲಾ ಬದಲಾಯಿಸು ಎನ್ನುವುದು. ಅದರ ಮಾತಿನಂತೆ ನಾನು ಬದಲಾಯಿಸಿದರೆ ನಾನೇ ಹುಚ್ಚ. ಹಲವು ದೇಶಗಳಿಂದ ಬರುತ್ತಿರುವ ಬುದ್ಧಿವಾದ ಈ ಬಗೆಯದು. ನೀವೇ ಒಂದು ಸದೃಢ ಸಮಾಜವನ್ನು ತಯಾರು ಮಾಡಿದಾಗ ನಿಮ್ಮ ಮಾತನ್ನು ಕೇಳುತ್ತೇನೆ ಎಂದು ಈ ಹರಟೆ ಮಲ್ಲರಿಗೆ ಹೇಳಿ. ಒಂದು ಭಾವನೆಯನ್ನು ಎರಡುದಿನ ಇಟ್ಟುಕೊಂಡಿರಲಾರಿರಿ, ಆಗಲೇ ಜಗಳ ಕಾಯುವಿರಿ, ನಿರಾಶರಾಗುವಿರಿ. ನೀವು ವಸಂತ ಋತುವಿನಲ್ಲಿ ಹುಟ್ಟುವ ಚಿಟ್ಟೆಗಳಂತೆ, ಅವುಗಳಂತೆಯೆ ಐದು ನಿಮಿಷದಲ್ಲಿ ಕಾಲವಾಗುವಿರಿ. ಗುಳ್ಳೆಯಂತೆ ಮೇಲೇಳುವಿರಿ, ಅವುಗಳಂತೆಯೇ ಒಡೆದು ಹೋಗುವಿರಿ. ನಮ್ಮ ಸಮಾಜದಂತಹ ಸುಭದ್ರ ಸಮಾಜವನ್ನು ಮೊದಲು ತಯಾರು ಮಾಡಿ.

ಹಲವು ಶತಮಾನಗಳಾದರೂ ಅಚ್ಚಳಿಯದೆ ನಿಲ್ಲುವಂತಹ ಸಮಾಜವನ್ನು, ನಿಯಮಾವಳಿಯನ್ನು ರಚಿಸಿ. ಆಗ ಬೇಕಾದರೆ ನಿಮ್ಮೊಂದಿಗೆ ಈ ವಿಷಯದ ಮೇಲೆ ಮಾತಾಡ ಬಹುದು. ಅಲ್ಲಿಯವರೆಗೂ ನೀನೊಬ್ಬ ಅಮಲೇರಿದ ಹುಡುಗ.

ಧಾರ್ಮಿಕ ವಿಷಯವಾಗಿ ನಾನು ಮಾತಾಡಬೇಕೆಂದುದು ಆಯಿತು. ಈಗಿನ ಕಾಲದ ಒಂದು ಆವಶ್ಯಕ ವಿಷಯವನ್ನು ನಿಮಗೆ ಜ್ಞಾಪಿಸಿ ಪೂರೈ ಸುವೆನು. ಮಹಾಭಾರತ ಪ್ರಣೇತ ವ್ಯಾಸನಿಗೆ ಧನ್ಯವಾದ. ಅವನು "ಕಲಿಯುಗದಲ್ಲಿ ದಾನವೊಂದೇ ಧರ್ಮ" ಎಂದು ಸಾರಿರುವನು. ತಪಸ್ಸು ಕಠಿಣ; ಯೋಗ, ಈ ಯುಗದಲ್ಲಿ ಸಾಧ್ಯವಿಲ್ಲ. ಇತರರಿಗೆ ಸಹಾಯ ಮಾಡುವ ಧರ್ಮ ಇಂದು ಬೇಕಾಗಿದೆ. ದಾನವೆಂದರೇನು? ಎಲ್ಲಾ ದಾನಕ್ಕಿಂತ ಶ್ರೇಷ್ಠ ಧರ್ಮದಾನ, ಅದರ ನಂತರ ವಿದ್ಯಾದಾನ, ಅನಂತರ ಪ್ರಾಣದಾನ, ವಸ್ತ್ರ ಅನ್ನ ದಾನಾದಿಗಳು ಎಲ್ಲದಕ್ಕಿಂತ ಕನಿಷ್ಟದಾನ. ಯಾರು ಆಧ್ಯಾತ್ಮವಿದ್ಯೆಯನ್ನು ದಾನ ಮಾಡುವರೋ ಅವರು ಜೀವಿಯನ್ನು ಹಲವು ಜನ್ಮಗಳಿಂದ ಪಾರುಮಾಡುವರು. ಯಾರು ಲೌಕಿಕ ವಿದ್ಯೆಯನ್ನು ದಾನ ಮಾಡುವರೋ ಅವರು ಜನರ ಆಧ್ಯಾತ್ಮವನ್ನು ಜಾಗ್ರತಗೊಳಿಸುವರು. ಇದಕ್ಕಿಂತ ಕನಿಷ್ಟ ಉಳಿದ ದಾನಗಳೆಲ್ಲಾ. ಪ್ರಾಣದಾನ ಕೂಡ ಇದಕ್ಕಿಂತ ಕೆಳಗಿನದು. ಆದಕ್ಕೇ ಇದನ್ನು ನೀವು ತಿಳಿದುಕೊಳ್ಳುವುದು ಆವಶ್ಯಕ. ಆಧ್ಯಾತ್ಮದಾನಕ್ಕಿಂತ ಉಳಿದವೆಲ್ಲಾ ಕನಿಷ್ಟ. ಶ್ರೇಷ್ಠವಾದ ಅಮೋಘದಾನವೇ ಅಧ್ಯಾತ್ಮ ವಿದ್ಯೆಯನ್ನು ಜನರಿಗೆ ಹಂಚುವುದು. ನಮ್ಮ ಶಾಸ್ತ್ರದಲ್ಲಿ ಎಂದಿಗೂ ಬತ್ತದ ಆಧ್ಯಾತ್ಮಿಕಚಿಲುಮೆ ಇದೆ. ಈ ಪುಣ್ಯ ಭೂಮಿಯನ್ನು ಬಿಟ್ಟರೆ ಮತ್ತೆಲ್ಲಿಯೂ ಆಧ್ಯಾತ್ಮವನ್ನು ಅನುಷ್ಠಾನದಲ್ಲಿ ಇಟ್ಟಿರುವಂತಹ ಉದಾಹರಣೆ ದೊರಕುವುದಿಲ್ಲ. ಇತರ ದೇಶಗಳಲ್ಲಿ ಬೇಕಾದಷ್ಟು ಮಾತನಾಡುವರು. ಜೀವನದಲ್ಲಿ ಅನುಷ್ಠಾನಕ್ಕೆ ತಂದವರು ಇಲ್ಲಿ ಮಾತ್ರ ಇರುವರು. ಮಾತನಾಡುವದಲ್ಲ ಧರ್ಮ. ಅರಗಿಳಿಗಳೂ ಮಾತನಾಡುವುವು. ಈಗಿನಕಾಲದಲ್ಲಿ ಯಂತ್ರವೂ ಮಾತನಾಡುವುದು. ಆದರೆ ತ್ಯಾಗ ಜೀವನವನ್ನು ತೋರಿ, ಆಧ್ಯಾತ್ಮಜೀವನವನ್ನುತೋರಿ, ಸಹಿಷ್ಣುತಾಜೀವನವನ್ನು ತೋರಿ, ಅಪಾರ ಪ್ರೇಮಜೀವನವನ್ನು ತೋರಿ. ಇದೇ ಆಧ್ಯಾತ್ಮ ಜೀವನದ ಲಕ್ಷಣ. ಇಂತಹ ಭಾವನೆ ನಮ್ಮಲ್ಲಿರುವಾಗ, ಇಂತಹ ಜಾಜ್ವಲ್ಯಮಾನವಾದ ಉದಾಹರಣೆ ನಮ್ಮ ಯೋಗಿಗಳ ಹೃದಯ

ದಲ್ಲಿ, ಬುದ್ಧಿಶಕ್ತಿಯಲ್ಲಿರುವಾಗ, ಇಂತಹ ಅನರ್ಘ್ಯ ರತ್ನಗಳು ಶ್ರೀಮಂತರ ಬಡವರ ಪಂಡಿತ ಪಾಮರರ ಉಚ್ಚನೀಚರ ಸರ್ವಸಾಮಾನ್ಯ ಆಸ್ತಿಯಾಗದೆ ಇರುವುದು ಶೋಚನೀಯ. ಭರತಖಂಡಕ್ಕೆ ಮಾತ್ರವಲ್ಲ ಪ್ರಪಂಚದ ಮೂಲೆ ಮೂಲೆಗೂ ಇದನ್ನು ಸಾರಬೇಕು. ಇದು ನಮ್ಮ ಪರಮ ಕರ್ತವ್ಯಗಳಲ್ಲಿ ಒಂದು. ನೀವು ಹೆಚ್ಚು ಮತ್ತೊಬ್ಬರಿಗೆ ಸಹಾಯ ಮಾಡಿದಷ್ಟೂ ಅದರಿಂದ ನಿಮಗೇ ಉಪಯೋಗ. ನೀವು ನಿಜವಾಗಿ ನಿಮ್ಮ ಧರ್ಮವನ್ನು ಪ್ರೀತಿಸಿದರೆ, ದೇಶವನ್ನು ಪ್ರೀತಿಸಿದರೆ ನಿಮ್ಮ ಪವಿತ್ರ ಗ್ರಂಥಗಳಲ್ಲಿ ಹುದುಗಿರುವ ರತ್ನಗಳನ್ನು ತಂದು ಅದನ್ನು ಯೋಗ್ಯ ಜನರಿಗೆ ಹರಡುವುದಕ್ಕೆ ದುಡಿಯುವುದು ನಿಮ್ಮ ಆದ್ಯ ಕರ್ತವ್ಯ. ಎಲ್ಲಕ್ಕಿಂತ ಹೆಚ್ಚಾಗಿ ಅತ್ಯಂತ ಆವಶ್ಯಕ: ಹಲವು ಶತಮಾನಗಳಿಂದ ನಾವು ಭಯಾನಕ ಅಸೂಯಾ ಭಾವನೆಯಲ್ಲಿ ಸಿಕ್ಕಿ ನರಳುತ್ತಿರುವೆವು. ಇತರರನ್ನು ಕಂಡರೆ ಯಾವಾಗಲೂ ಅಸೂಯೆ; ಇವನೇಕೆ ನನಗಿಂತ ಸ್ವಲ್ಪ ಮುಂದಿರುವುದು, ನಾನಿಲ್ಲ? ದೇವರ ಪೂಜೆಯಲ್ಲೂ ನಮಗೆ ಅಗ್ರಸ್ಥಾನ ಬೇಕು. ಇಂತಹ ಗುಲಾಮಗಿರಿಗೆ ನಾವು ಬಂದಿರುವೆವು. ನಾವು ಇದರಿಂದ ಪಾರಾಗಬೇಕಾಗಿದೆ. ಭರತಖಂಡದಲ್ಲಿ ಇಂದು ಯಾವುದಾದರೂ ಮಹಾ ಪಾತಕವಿದ್ದರೆ ಅದೇ ಈ ಗುಲಾಮಗಿರಿ. ಪ್ರತಿಯೊಬ್ಬರೂ ಆಜ್ಞಾಪಿಸುವವರೇ, ಆಜ್ಞಾಧಾರಕರಾಗಲು ಯಾರೂ ಇಚ್ಛಿಸುವುದಿಲ್ಲ. ಹಿಂದಿನಕಾಲದ ಬ್ರಹ್ಮಚರ್ಯಾಶ್ರಮ ಈಗ ಅಭಾವವೇ ಇದಕ್ಕೆ ಕಾರಣ. ಮೊದಲು ಆಣತಿ ಪಾಲಿಸುವುದನ್ನು ಕಲಿಯಿರಿ, ಆಜ್ಞೆಕೊಡುವುದು ನಂತರ ಬರುವುದು. ಮೊದಲು ಹೇಗೆ ಸೇವಕನಾಗಬೇಕೆಂಬುದನ್ನು ಕಲಿಯಿರಿ. ನಂತರ ಸ್ವಾಮಿಯಾಗಲು ಯೋಗ್ಯರಾಗುವಿರಿ. ಅಸೂಯೆ ತೊರೆಯಿರಿ. ಇನ್ನೂ ಆಗಬೇಕಾದ ಮಹತ್ಕಾರ್ಯಗಳನ್ನು ಸಾಧಿಸುವಿರಿ. ನಮ್ಮ ಪೂರ್ವಿಕರು ಅದ್ಭುತ ಕಾರ್ಯಗಳನ್ನು ಸಾಧಿಸಿದರು. ನಾವು ಗೌರವಪೂರ್ವಕ ಹೆಮ್ಮೆಯಿಂದ ನೋಡುತ್ತೇವೆ. ನಾವೂ ಮಹತ್ಕಾರ್ಯಗಳನ್ನು ಸಾಧಿಸುತ್ತೇವೆ. ನಮ್ಮ ನಂತರ ಬರುವವರು ಹೆಮ್ಮೆಯಿಂದ ಆಶೀರ್ವಾದ ದೃಷ್ಟಿಯಿಂದ ನೋಡಲಿ. ನಮ್ಮ ಪೂರ್ವಿಕರು ಸಾಧಿಸಿದ ಮಹತ್ಕಾರ್ಯಗಳನ್ನು ಮ್ಲಾನ ಮಾಡುವಂತಹ ಮಹತ್ಕಾರ್ಯಗಳನ್ನು ಇಲ್ಲಿರುವ ಪ್ರತಿಯೊಬ್ಬರೂ ಭಗವಂತನ ದಯೆಯಿಂದ ಸಾಧಿಸುವರು.

---

# ಪಾಂಬನ್ ಬಿನ್ನವತ್ತಳೆಗೆ ಉತ್ತರ

ನಮ್ಮ ಪವಿತ್ರ ಭಾರತ ವರ್ಷ ಧರ್ಮ ಮತ್ತು ದರ್ಶನಗಳ ಪುಣ್ಯ ಭೂಮಿ. ದೊಡ್ಡ ದೊಡ್ಡ ಮಹಾತ್ಮರು ಋಷಿಗಳು ಜನ್ಮವೆತ್ತ ನಾಡು, ತ್ಯಾಗ ಭೂಮಿ ಇದು. ಕೇವಲ ಇಲ್ಲಿ ಮಾತ್ರ ಪುರಾತನ ಕಾಲದಿಂದಲೂ ಇಂದಿನವರೆಗೆ ಮಾನವನೆದುರಿಗೆ ಸರ್ವೋಚ್ಚ ಆದರ್ಶ ಇರುವುದು.

ನಾನು ಪಾಶ್ಚಾತ್ಯ ದೇಶದಲ್ಲಿ ಸಂಚರಿಸಿರುವೆನು, ಹಲವು ದೇಶ ಜನಾಂಗಗಳನ್ನು ನೋಡಿರುವೆನು. ಪ್ರತಿಯೊಂದು ದೇಶ ಮತ್ತು ಜನಾಂಗ ದಲ್ಲಿಯೂ ಒಂದು ಮುಖ್ಯ ಆದರ್ಶವಿದೆ. ಈ ಆದರ್ಶ ರಾಷ್ಟ್ರದ ಸಮಸ್ತ ಜೀವನದಲ್ಲಿ ಸಂಚರಿಸುತ್ತಿದೆ. ಈ ಆದರ್ಶವೇ ರಾಷ್ಟ್ರದ ಜೀವಾಳ. ಭಾರತ ರಾಷ್ಟ್ರದ ಜೀವಾಳ ರಾಜನೀತಿಯಲ್ಲ, ಸೈನ್ಯ ಶಕ್ತಿಯಲ್ಲ, ಆರ್ಥಿಕ ಅಥವಾ ಯಾಂತ್ರಿಕ ಪರಮಾಧಿಕಾರವೂ ಅಲ್ಲ. ಧರ್ಮ ಒಂದೇ ನಮ್ಮಲ್ಲಿರುವುದು, ಅದನ್ನೇ ನಾವು ಇಟ್ಟುಕೊಳ್ಳುವೆವು. ಆಧ್ಯಾತ್ಮವೇ ಸದಾಕಾಲದಲ್ಲಿಯೂ ಭಾರತೀಯರ ನಿಧಿಯಾಗಿತ್ತು.

ಶಾರೀರಕ ಶಕ್ತಿಯ ಮೂಲಕ ಅದ್ಭುತ ಕಾರ್ಯಗಳಾಗಿವೆ. ವೈಜ್ಞಾನಿಕ ನಿಯಮಾವಳಿಗಳ ಮೂಲಕ ಯಂತ್ರವನ್ನು ಕಂಡು ಹಿಡಿದಿರುವ ಧೀಶಕ್ತಿ ಪ್ರಚಂಡವಾಗಿದೆ. ಆದರೆ ಆಧ್ಯಾತ್ಮ ತನ್ನ ಪ್ರಭಾವವನ್ನು ಜಗತ್ತಿನ ಮೇಲೆ ಬೀರುವಷ್ಟು ಪ್ರಬಲವಾಗಿಲ್ಲ ಇವು.

ಭಾರತವರ್ಷ ಈ ಕ್ಷೇತ್ರದಲ್ಲಿ ಸದಾ ಜಾಗ್ರತವಾಗಿತ್ತು ಎಂಬುದನ್ನು ಇತಿಹಾಸ ತೋರುವುದು. ಇನ್ನೂ ಹೆಚ್ಚು ತಿಳಿದುಕೊಳ್ಳಬೇಕಾದ ಮನುಷ್ಯರು, ಹಿಂದೂಗಳು ಭೀರುಗಳು ಅಕರ್ಮಿಗಳು ಎಂದು ಹೇಳು ತ್ತಿರುವರು. ಇತರ ದೇಶದವರು ಕೂಡ ಇದನ್ನು ಒಂದು ನಾಣ್ಣುಡಿಯಂತೆ ಉಪಯೋಗಿಸುತ್ತಿರುವರು. ಹಿಂದೂಗಳು ಅಕರ್ಮಿಗಳೆಂಬುದನ್ನು ನಾನು ವಿರೋಧಿಸುತ್ತೇನೆ. ನಮ್ಮ ಪುಣ್ಯಭೂಮಿಯಲ್ಲಿರುವಷ್ಟು ಚಟುವಟಿಕೆ ಮತ್ತಾವ ದೇಶದಲ್ಲಿಯೂ ಇರಲಿಲ್ಲ. ಅತಿ ಪುರಾತನ ಉದಾರ ಹೃದಯದ ಜನಾಂಗ ಇನ್ನೂ ಜೀವಂತವಾಗಿರುವುದೇ ಇದಕ್ಕೆ ಸಾಕ್ಷಿ. ತನ್ನ ಉಜ್ವಲ ಜೀವನ ಕಾಲದಲ್ಲಿ ಕಾಲಕಾಲಕ್ಕೆ ಪುನಃ ಚಿರಸ್ಥಾಯಿ ಶಕ್ತಿಶಾಲಿಯಾಗಿ ಹೊರ ಹೊಮ್ಮುವುದು ನಮಗೆ ತೋರುವುದು. ಈ ಕಾರ್ಯ ಧಾರ್ಮಿಕ ಜೀವನದಲ್ಲಿ ಪ್ರಕಟವಾಗುತ್ತದೆ. ಆದರೆ ಮಾನವರ ಒಂದು ವಿಚಿತ್ರ ಸ್ವಭಾವವೇನೆಂದರೆ,

ಪ್ರತಿಯೊಬ್ಬರೂ ತಮ್ಮ ವೃತ್ತಿಯ ದೃಷ್ಟಿಯಿಂದ ಮತ್ತೊಬ್ಬರನ್ನು ಅಳೆಯು ತ್ತಾರೆ. ಒಬ್ಬ ಮೋಚಿಯನ್ನು ತೆಗೆದುಕೊಳ್ಳಿ. ಅವನಿಗೆ ಜೋಡು ಹೊಲಿ ಯುವುದೊಂದೇ ತಿಳಿಯುವುದು ; ಅದಲ್ಲದೆ ಬೇರೆ ಕೆಲಸವೇ ಇಲ್ಲ ಪ್ರಪಂಚ ದಲ್ಲಿ ಎಂದು ಭಾವಿಸುವನು. ಇಟ್ಟಿಗೆ ಸುಡುವವನಿಗೆ ಆ ಕೆಲಸವಲ್ಲದೆ ಬೇರೆ ಗೊತ್ತಾಗುವುದೇ ಇಲ್ಲ. ಪ್ರತಿದಿನ ಅವನು ಇದನ್ನೇ ಪ್ರತಿಪಾದಿಸುವನು. ಇದನ್ನು ವಿವರಿಸಲು ಮತ್ತೊಂದು ಕಾರಣವಿದೆ. ಜ್ಯೋತಿಸ್ಪಂದನ ಹೆಚ್ಚಾ ದಾಗ ನಾವು ಅದನ್ನು ಕಾಣಲಾರೆವು. ಏಕೆಂದರೆ ನಾವು ನೋಡುವ ಸ್ಥಿತಿ ಗಿಂತ ಬೇರೆ ಇರುವುದನ್ನು ಕಾಣಲಾರೆವು. ಸಾಧಾರಣ ಜನರು ನೋಡು ತ್ತಿರುವ ಜಡತೆರೆಯನ್ನು ಸೀಳಿ ನೋಡಬಲ್ಲದು ಯೋಗಿಯ ಅಂತರ್ಮುಖ ಆಧ್ಯಾತ್ಮ ಚಕ್ಷುಸ್ಸು.

ಆಧ್ಯಾತ್ಮಿಕ ಆಹಾರಕ್ಕಾಗಿ ಇಡೀ ಪ್ರಪಂಚ ಭರತಖಂಡದ ಕಡೆ ನೋಡುತ್ತಿದೆ. ಭರತಖಂಡ ಎಲ್ಲಾ ಜನಾಂಗಗಳಿಗೂ ಇದನ್ನು ಒದಗಿಸ ಬೇಕಾಗಿದೆ. ಮಾನವ ಕೋಟಿಗೆ ಅತಿ ಶ್ರೇಷ್ಠ ಆದರ್ಶ ಇಲ್ಲಿ ಮಾತ್ರ ಇದೆ. ಸಂಸ್ಕೃತ ಸಾಹಿತ್ಯ ಮತ್ತು ದರ್ಶನಗಳಲ್ಲಿ ಹುದುಗಿರುವ, ನಮ್ಮ ಭರತ ಭೂಮಿಯ ಒಂದು ಸ್ವಭಾವವಾಗಿರುವ ಈ ಆದರ್ಶವನ್ನು ಪಾಶ್ಚಾತ್ಯ ವಿದ್ವಾಂಸರು ಈಗ ತಿಳಿದುಕೊಳ್ಳಲು ಪ್ರಯತ್ನಿಸುತ್ತಿರುವರು.

ಇತಿಹಾಸ ಪ್ರಾರಂಭದಿಂದಲೂ ಭರತಖಂಡದಿಂದ ಹೊರಗೆ ಧರ್ಮ ಪ್ರಚಾರಕ್ಕಾಗಿ ಯಾರೂ ಹೋಗಲಿಲ್ಲ. ಆದರೆ ಈ ಒಂದು ಅದ್ಭುತ ಬದ ಲಾವಣೆ ಆಗುತ್ತಿದೆ. ಭಗವಾನ್ ಶ್ರೀಕೃಷ್ಣ "ಎಂದು ಧರ್ಮನಷ್ಟವಾಗು ವುದೋ, ಅಧರ್ಮ ತಲೆಯೆತ್ತುವುದೋ ಆಗ ಮಾನವನ ಉದ್ಧಾರಕ್ಕೆ ಪುನಃ ಪುನಃ ಜನ್ಮವೆತ್ತುವೆನು" ಎಂದು ಸಾರುವನು. ಧಾರ್ಮಿಕ ಇತಿಹಾಸ ಅನ್ವೇ ಷಣೆಯದ್ವಾರ ನಮಗೆ ಗೊತ್ತಾಗುವುದೇನೆಂದರೆ, ಯಾವ ದೇಶದಲ್ಲಿ ಒಳ್ಳೆಯ ಧಾರ್ಮಿಕ ನಿಯಮಗಳಿವೆಯೋ ಅವರು ನಮ್ಮಿಂದ ಸ್ವಲ್ಪ ತೆಗೆದು ಕೊಂಡಿರುವರು. ಆತ್ಮದ ಅಮರತ್ವವನ್ನು ಸಾರುವ ಯಾವ ಅನ್ಯಧರ್ಮ ವಾಗಲೀ, ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಆ ಭಾವನೆಗಾಗಿ ನಮಗೆ ಋಣಿಗಳು.

ಪ್ರಪಂಚದ ಇತಿಹಾಸದಲ್ಲಿ ಹತ್ತೊಂಬತ್ತನೇ ಶತಮಾನದ ಅಂತ್ಯದಲ್ಲಿ ರುವಷ್ಟು ದರೋಡೆ, ಕ್ರೌರ್ಯ, ಬಲಾಢ್ಯರು ಬಲಹೀನರ ಮೇಲೆ ಪ್ರಯೋ ಗಿಸುವಷ್ಟು ದಬ್ಬಾಳಿಕೆ ಎಂದಿಗೂ ಇರಲಿಲ್ಲ. ಆಸೆಯಿಂದ ಪಾರಾದಲ್ಲದೆ

ಮುಕ್ತಿ ಯಾರಿಗೂ ಲಭಿಸದು ಎಂಬದನ್ನು ಎಲ್ಲರೂ ಅರಿಯಬೇಕು. ಯಾರು ಜಡವಸ್ತುಗಳ ಅಧೀನದಲ್ಲಿರುವರೋ ಅವರು ಸ್ವತಂತ್ರರಲ್ಲ. ಈ ಮಹಾ ಸತ್ಯವನ್ನು ಎಲ್ಲಾ ದೇಶಗಳೂ ಕ್ರಮೇಣ ಅರಿಯುತ್ತಿವೆ, ಶ್ಲಾಘಿಸು ತ್ತಿವೆ. ಸತ್ಯವನ್ನು ತಿಳಿಯುವ ಸ್ಥಿತಿಗೆ ಶಿಷ್ಯ ಬಂದರೆ ಗುರು ಬೋಧನೆ ಅವನ ನೆರವಿಗೆ ಪ್ರಾಪ್ತವಾಗುವುದು. ಭಗವಂತ ತನ್ನ ಅಪಾರ ಕರುಣೆ ಯಿಂದ ತನ್ನ ಮಕ್ಕಳಿಗೆ ಸಹಾಯವನ್ನು ಕರುಣಿಸುವನು. ಈ ದಯೆ ಯಾವ ಧರ್ಮದಲ್ಲಿಯೂ ಬತ್ತುವುದಿಲ್ಲ. ಯಾವಾಗಲೂ ಪೂರ್ಣವಾಗಿ ಹರಿಯುತ್ತಿರುವುದು. ನಮ್ಮ ದೇವರು ಎಲ್ಲಾ ಧರ್ಮದ ದೇವರು. ಈ ಉದಾರಭಾವನೆ ಭರತಖಂಡಕ್ಕೆ ಮಾತ್ರ ಸೇರಿದ್ದು. ಪ್ರಪಂಚದ ಇತರ ಧರ್ಮಶಾಸ್ತ್ರಗಳಲ್ಲಿ ಇದನ್ನು ಸಾಧ್ಯವಾದರೆ ತೋರಿ.

ವಿಧಿನಿಯಮದಂತೆ ಹಿಂದೂಗಳು ಇಂದು ಕಠಿಣಸ್ಥಿತಿಯಲ್ಲಿರುವರು. ಜವಾಬ್ದಾರಿಯನ್ನು ಹೊತ್ತಿರುವರು. ಆಧ್ಯಾತ್ಮಿಕ ಸಹಾಯಕ್ಕೆ ಪಾಶ್ಚಾ ತ್ಯರು ನಮ್ಮ ಬಳಿಗೆ ಬರುತ್ತಿರುವರು. ಮಾನವಸಂಸಾರ ಸಮಸ್ಯೆಗಳನ್ನು ಬಗೆಹರಿಸಲು ಸಿದ್ಧರಾಗಬೇಕಾದಂತಹ ಒಂದು ಗುರುತರದ ಕರ್ತವ್ಯ ಭರತಖಂಡದ ಮಕ್ಕಳ ಮೇಲೆ ಬಿದ್ದಿದೆ. ಅನ್ಯದೇಶಗಳ ಪ್ರಖ್ಯಾತ ಪುರು ಷರು, ತಮ್ಮ ಪೂರ್ವಿಕರು ಗುಡ್ಡ ಕಾಡುಗಳಲ್ಲಿ ಇದ್ದು ಪ್ರಯಾಣಿಕರನ್ನು ಸುಲಿಯುತ್ತಿದ್ದ ದರೋಡೆ ಮಾಡುವ ಪಾಳೆಯಗಾರ ವಂಶಕ್ಕೆ ತಾವು ಸೇರಿದವರೆಂದು ಹೇಳಿಕೊಳ್ಳಲು ಹೆಮ್ಮೆ ತಾಳುವರು. ಆದರೆ ಹಿಂದೂಗಳು, ತಮ್ಮ ಪೂರ್ವಿಕರು ಗಿರಿ ಗುಹೆಗಳಲ್ಲಿ ವಾಸಿಸುತ್ತ ಗೆಡ್ಡೆಗೆಣಸುಗಳನ್ನು ತಿಂದು ಬ್ರಹ್ಮ ಚಿಂತನೆಯಲ್ಲಿ ಕಾಲಕಳೆಯುತ್ತಿದ್ದ ಋಷಿಕುಲಕ್ಕೆ ಸೇರಿದವರು ತಾವೆಂದು ಹೆಮ್ಮೆತಾಳುವರು. ನಾವು ಈಗ ಅಧೋಗತಿಗೆ ಇಳಿದಿರಬಹುದು, ಅಧಮರಾಗಿರಬಹುದು, ಆದರೆ ನಮ್ಮ ಧರ್ಮದಪರವಾಗಿ ನಾವು ಶ್ರದ್ಧೆ ಯಿಂದ ಕೆಲಸ ಮಾಡಿದರೆ ಪುನಃ ಪ್ರಖ್ಯಾತರಾಗಬಹುದು.

ಸಸ್ನೇಹ ಶ್ರದ್ಧಾಪೂರ್ವಕ ನನಗೆ ನೀವು ಕೊಟ್ಟ ಸ್ವಾಗತಕ್ಕೆ ಹೃತ್ಪೂರ್ವಕ ಧನ್ಯವಾದವನ್ನು ಸ್ವೀಕರಿಸಿ. ರಾಮನಾಡಿನ ರಾಜರು ನನಗೆ ತೋರಿದ ಪ್ರೀತಿಗೆ ಕೃತಜ್ಞತೆಯನ್ನು ತೋರಲು ಅಸಾಧ್ಯ. ನನ್ನಿಂದ ಮತ್ತು ನನ್ನ ಮೂಲಕ ಏನಾದರೂ ಒಳ್ಳೆಯ ಕೆಲಸವಾಗಿದ್ದರೆ ಭರತಖಂಡ ಈ ವ್ಯಕ್ತಿಗೆ ಹೆಚ್ಚು ಋಣಿ. ಇವರೇ ಚಿಕಾಗೋ ನಗರಕ್ಕೆ ಹೋಗಬೇಕೆಂಬ ಭಾವನೆಯನ್ನು ಗ್ರಹಿಸಿದ್ದು. ನನಗೆ ಅದನ್ನು ಹೇಳಿ ಬಿಡದೆ ಅದನ್ನು

ನೆರವೇರಿಸಬೇಕೆಂದು ಒತ್ತಾಯಮಾಡಿದರು. ಹಿಂದಿನ ಶ್ರದ್ಧೆ ಉತ್ಸಾಹ ಗಳಿಂದಲೇ ಇಂದು ನನ್ನ ಪಕ್ಕದಲ್ಲಿ ನಿಂತು ಮತ್ತೂ ಹೆಚ್ಚುಕಾರ್ಯವನ್ನು ಮಾಡಬೇಕೆಂದು ಪ್ರೋತ್ಸಾಹಿಸುತ್ತಿರುವರು. ನಮ್ಮ ಮಾತೃಭೂಮಿಯ ಕಲ್ಯಾಣಕ್ಕಾಗಿ, ಆಧ್ಯಾತ್ಮಿಕ ಕ್ಷೇತ್ರದಲ್ಲಿ ಶ್ರದ್ಧೆವಹಿಸಿ ದುಡಿಯಬಲ್ಲ ಇಂತಹ ಹತ್ತಾರು ಜನ ರಾಜರಿರಲಿ ಎಂಬುದೇ ನನ್ನ ಆಶಯ.



## ನಿಜವಾದ ಪೂಜೆ

### (ರಾಮೇಶ್ವರ ದೇವಸ್ಥಾನದಲ್ಲಿ ಕೊಟ್ಟ ಉಪನ್ಯಾಸ)

ಧರ್ಮ ಇರುವುದು ಪ್ರೇಮದಲ್ಲಿ, ಬಾಹ್ಯಾಚಾರದಲ್ಲಿ ಅಲ್ಲ. ಶುದ್ಧ ನಿಷ್ಕಪಟ ಹೃದಯ ಮುಖ್ಯ. ಒಬ್ಬನ ದೇಹ ಮನಸ್ಸು ಪರಿಶುದ್ಧ ವಿಲ್ಲದೇ ಇದ್ದರೆ ಅವನು ದೇವಸ್ಥಾನಕ್ಕೆ ಬಂದು ಪ್ರಾರ್ಥಿಸಿದರೆ ಪ್ರಯೋಜನ ವಿಲ್ಲ. ಪರಿಶುದ್ಧ ದೇಹ ಮನಸ್ಸಿನಿಂದ ಪ್ರಾರ್ಥಿಸಿದರೆ ಶಿವ ಅದನ್ನು ನೆರ ವೇರಿಸುವನು. ಯಾರು ಅಶುದ್ಧರಾದರೂ ಧಾರ್ಮಿಕ ವಿಷಯವನ್ನು ಬೋಧಿಸಲಿಚ್ಛಿಸುವರೋ ಅದರಿಂದ ಕೊನೆಗೆ ನಿಷ್ಪ್ರಯೋಜನವಾಗುವುದು. ಬಾಹ್ಯಪೂಜೆ ಆಂತರಿಕ ಪೂಜೆಯ ಚಿಹ್ನೆ ಮಾತ್ರ. ಆಂತರಿಕ ಪೂಜೆ ಅಂತರಂಗ ಶುದ್ಧಿಯೇ ಮುಖ್ಯ. ಇವಿಲ್ಲದೇ ಬಾಹ್ಯಪೂಜೆಯಿಂದ ಪ್ರಯೋಜನವಿಲ್ಲ. ಆದಕಾರಣವೇ ನೀವು ಇದನ್ನು ಜ್ಞಾಪಕದಲ್ಲಿಡಬೇಕು. ಕಲಿಯುಗದಲ್ಲಿ ಜನ ಅಷ್ಟು ಕುಲಗೆಟ್ಟು ಹೋಗಿರುವರು. ಎಂತಹ ಮಹಾಪಾತಕ ಮಾಡಿದರೂ ಪುಣ್ಯಸ್ಥಳಕ್ಕೆ ಹೋದರೆ ದೇವರು ಅವರ ಪಾತಕವನ್ನು ಕ್ಷಮಿಸುವನೆಂದು ಭಾವಿಸುವರು. ಕಳ್ಳಮನಸ್ಸಿನಿಂದ ದೇವ ಸ್ಥಾನಕ್ಕೆ ಹೋದರೆ, ಅವನಲ್ಲಿರುವ ಪಾಪದ ಮೊತ್ತಕ್ಕೆ ಮತ್ತಷ್ಟು ಸೇರಿ ಸುವನು. ಮನೆಗೆ ಹೋಗುವಾಗ ಹಿಂದೆ ಇದ್ದುದಕ್ಕಿಂತ ಹೀನವಾಗಿರುವನು. ತೀರ್ಥವೆಂದರೆ ಪವಿತ್ರ ವಸ್ತುಗಳು ಇರುವ ಸ್ಥಳ, ಮಹಾತ್ಮರು ಇರುವ ಸ್ಥಳ. ಮಹಾತ್ಮರು ಇದ್ದು ಅಲ್ಲಿ ದೇವಸ್ಥಾನವಿಲ್ಲದೇ ಇದ್ದರೂ ಅದು ತೀರ್ಥ. ನೂರು ದೇವಸ್ಥಾನಗಳಿದ್ದರೂ ಅಯೋಗ್ಯರು ಇದ್ದರೆ ಅಲ್ಲಿ ತೀರ್ಥ ವೆಲ್ಲ ಮಾಯವಾಗಿದೆ. ತೀರ್ಥ ಸ್ಥಳದಲ್ಲಿ ವಾಸಿಸುವುದು ಅತಿ ಕಷ್ಟ. ಸಾಧಾರಣ ಸ್ಥಳದಲ್ಲಿ ಮಾಡಿದ ಪಾಪವನ್ನು ಸುಲಭವಾಗಿ ಕಳೆದುಕೊಳ್ಳ ಬಹುದು. ಆದರೆ ತೀರ್ಥ ಸ್ಥಳದಲ್ಲಿ ಮಾಡಿದ ಪಾಪದಿಂದ ಪಾರಾಗಲಾಗುವು ದಿಲ್ಲ. ನಾವು ಪರಿಶುದ್ಧರಾಗಿರುವುದು, ಇತರರಿಗೆ ಒಳ್ಳೆಯದನ್ನು ಮಾಡು ವುದು, ಇದೇ ಎಲ್ಲಾ ಪೂಜೆಯ ಸಾರ. ಯಾರು ದೀನರಲ್ಲಿ ದುರ್ಬಲರಲ್ಲಿ ರೋಗಿಗಳಲ್ಲಿ ಶಿವನನ್ನು ನೋಡುವರೋ ಅವರು ನಿಜವಾಗಿ ಶಿವನನ್ನು ಪೂಜಿಸುವರು. ಅವನು ಕೇವಲ ವಿಗ್ರಹದಲ್ಲಿ ಮಾತ್ರ ಶಿವನನ್ನು ನೋಡಿ ದರೆ ಅವನ ಪೂಜೆ ಇನ್ನೂ ಗೌಣ. ಜಾತಿ ಕುಲ ಗೋತ್ರಗಳನ್ನು ಲೆಕ್ಕಿಸದೆ ಯಾರು ಒಬ್ಬ ಬಡವನಲ್ಲಿ ಶಿವನನ್ನು ನೋಡಿ ಅವನನ್ನು ಸೇವಿಸಿರುವರೋ,

ಅವನಿಗೆ ಸಹಾಯ ಮಾಡಿರುವರೋ ಅವರ ಮೇಲೆ ಶಿವನಿಗೆ ಕೇವಲ ತನ್ನನ್ನು ವಿಗ್ರಹದಲ್ಲಿ ನೋಡುವವರಿಗಿಂತ ಹೆಚ್ಚು ಪ್ರೀತಿ.

ಒಬ್ಬ ಜಮೀನ್‌ದಾರನಿಗೆ ಒಂದು ತೋಟವಿತ್ತು. ಅಲ್ಲಿ ಇಬ್ಬರು ಆಳುಗಳಿದ್ದರು. ಅಲ್ಲಿ ಒಬ್ಬ ತೋಟಗಾರ, ಸೋಮಾರಿ ಕೆಲಸಮಾಡು ತ್ತಿರಲಿಲ್ಲ. ಆದರೆ ತೋಟದ ಯಜಮಾನ ಬಂದಾಗ ಕೈಮುಗಿದು, "ನಮ್ಮ ಯಜಮಾನನ ವದನಾರವಿಂದ ಎಷ್ಟು ಸೊಗಸಾಗಿದೆ!" ಎಂದು ಹೊಗಳುತ್ತ ಕುಣಿಯುತ್ತಿದ್ದನು. ಮತ್ತೊಬ್ಬ ಹೆಚ್ಚು ಮಾತನಾಡುತ್ತಿರಲಿಲ್ಲ. ಶ್ರಮ ಪಟ್ಟು ಕೆಲಸಮಾಡಿ ಹಲವು ಬಗೆ ತರಕಾರಿ ಹಣ್ಣು ಮುಂತಾದುವನ್ನು ಬೆಳೆದು ದೂರದಲ್ಲಿ ವಾಸಿಸುತ್ತಿದ್ದ ಯಜಮಾನನಿಗೆ ತಲೆಯ ಮೇಲೆ ಹೊತ್ತುಕೊಂಡು ಹೋಗುತ್ತಿದ್ದನು. ಯಜಮಾನನಿಗೆ ಇಬ್ಬರಲ್ಲಿ ಯಾರ ಮೇಲೆ ಇಷ್ಟ? ಶಿವನೇ ಯಜಮಾನ, ಈ ಪ್ರಪಂಚವೇ ಅವನ ತೋಟ. ಎರಡು ಬಗೆಯ ಸೇವಕರಿರುವರು. ಒಬ್ಬ ಶುದ್ಧ ಸೋಮಾರಿ, ಕಪಟಿ, ಏನೂ ಕೆಲಸಮಾಡುವುದಿಲ್ಲ. ನಮ್ಮ ಶಿವನ ಕಣ್ಣು ಮೂಗು ಹೊಗಳುವನು. ಮತ್ತೊಬ್ಬ ಶಿವನ ಸಂಸಾರದಲ್ಲಿರುವ ದೀನರು ದುರ್ಬಲರು ಪಶು ಪಕ್ಷಿಗಳು ಎಲ್ಲರನ್ನೂ ಸೇವಿಸುತ್ತಿರುವನು. ಶಿವನಿಗೆ ಯಾರ ಮೇಲೆ ಇಷ್ಟ? ನಿಜವಾಗಿ ಯಾರು ಅವನ ಮಕ್ಕಳನ್ನು ಸೇವಿಸುವರೋ ಅವರ ಮೇಲೆ. ಯಾರು ತಂದೆ ಯನ್ನು ಸೇವಿಸಬೇಕೆಂದಿರುವರೋ ಅವರು ಮೊದಲು ಅವನ ಮಕ್ಕಳನ್ನು ಸೇವಿಸಬೇಕು. ಶಿವನನ್ನು ಪೂಜಿಸಲಿಚ್ಛಿಸುವವನು ಅವನ ಮಕ್ಕಳನ್ನು ಸೇವಿಸಬೇಕು. ಈ ಸೃಷ್ಟಿಯಲ್ಲಿರುವ ಎಲ್ಲರನ್ನೂ ಅವನು ಸೇವಿಸಬೇಕು. ಯಾರು ಭಗವಂತನ ಭೃತ್ಯರನ್ನು ಸೇವಿಸುವರೋ ಅವರೇ ಭಗವಂತನ ಶ್ರೇಷ್ಠ ಭಕ್ತರು ಎಂದು ಶಾಸ್ತ್ರ ಸಾರುವುದು. ಇದನ್ನು ನೀವು ಗಮನಿಸಿ. ಮೊದಲು ನೀವು ಪರಿಶುದ್ಧರಾಗಿ, ಯಾರು ನಿಮ್ಮ ಬಳಿಗೆ ಬರುವರೋ ಅವ ರಿಗೆ ಸಾಧ್ಯವಾದಷ್ಟು ಸಹಾಯಮಾಡಿ. ಇದೇ ಸತ್ಕರ್ಮ. ಇದರಿಂದ ಚಿತ್ತಶುದ್ಧಿಯಾಗುವುದು. ಸರ್ವಜೀವಿಗಳಲ್ಲಿಯೂ ನೆಲಸಿರುವ ಶಿವನ ದರ್ಶನ ಆಗ ಆಗುವುದು. ಅವನು ಆಗಲೇ ಪ್ರತಿಯೊಬ್ಬರ ಹೃದಯ ದಲ್ಲಿಯೂ ಇರುವನು. ಕನ್ನಡಿಯ ಮೇಲೆ ಕೊಳೆ ಇದ್ದರೆ ನಮ್ಮ ಪ್ರತಿಬಿಂಬ ಕಾಣುವುದಿಲ್ಲ. ಅಜ್ಞಾನ ಮತ್ತು ದೌರ್ಜನ್ಯವೇ ನಮ್ಮ ಹೃದಯದ ಕನ್ನಡಿ ಮೇಲೆ ಕುಳಿತಿರುವ ಧೂಳು. ನಮ್ಮ ಹಿತವನ್ನೇ ಆಲೋಚಿಸುವ ಸ್ವಾರ್ಥತೆ ಮುಖ್ಯಪಾಪ. ಯಾರು "ನಾನು ಮೊದಲು ಊಟಮಾಡುತ್ತೇನೆ!

ಇತರರಿಗಿಂತ ಹೆಚ್ಚುದುಡ್ಡನ್ನು ನಾನು ಇಟ್ಟುಕೊಳ್ಳುವೆನು! ನಾನೇ ಎಲ್ಲ ವನ್ನೂ ತೆಗೆದುಕೊಳ್ಳುವೆನು! ಇತರರಿಗಿಂತ ಮುಂಚೆ ನಾನು ಸ್ವರ್ಗಕ್ಕೆ ಹೋಗುತ್ತೇನೆ! ನಾನು ಮೊದಲು ಮುಕ್ತಿಗಳಿಸುತ್ತೇನೆ" ಎಂದು ಯೋಚಿಸುವರೋ ಅವರೇ ಸ್ವಾರ್ಥಿಗಳು. ನಿಸ್ವಾರ್ಥಿಗಳು, "ನಾನೇ ಕೊನೆಯಲ್ಲಿರುವೆನು, ಸ್ವರ್ಗಕ್ಕೆ ಇಚ್ಛೆಯಿಲ್ಲ, ನರಕಕ್ಕೆ ಹೋಗುವುದರಿಂದ ಇತರರಿಗೆ ನಾನು ಸಹಾಯಮಾಡುವಂತೆ ಇದ್ದರೆ ನಾನು ಅದಕ್ಕೆ ಸಿದ್ಧ ನಾಗಿರುವೆನು" ಎನ್ನುವರು. ಈ ನಿಸ್ವಾರ್ಥತೆಯೇ ಧರ್ಮದ ಪರೀಕ್ಷೆ. ಯಾರಲ್ಲಿ ಈ ನಿಸ್ವಾರ್ಥತೆ ಹೆಚ್ಚು ಇದೆಯೋ ಅವನು ಹೆಚ್ಚು ಧಾರ್ಮಿಕ, ಅವನು ಶಿವನ ಸಮೀಪದಲ್ಲಿರುವನು. ಅವನು ಪಂಡಿತನಾಗಲಿ ಪಾಮರ ನಾಗಲಿ, ಅವನಿಗೆ ಗೊತ್ತಿರಲಿ ಗೊತ್ತಿಲ್ಲದೆ ಇರಲಿ ಇತರರಿಗಿಂತ ಹೆಚ್ಚು ದೇವರ ಸಮೀಪದಲ್ಲಿರುವನು. ಸ್ವಾರ್ಥಿಯಾಗಿದ್ದರೆ ಎಲ್ಲಾ ದೇವಸ್ಥಾನ ಗಳನ್ನು ನೋಡಿದ್ದರೂ ಎಲ್ಲಾ ತೀರ್ಥಯಾತ್ರೆ ಮಾಡಿದ್ದರೂ ಶಿವನಿಗೆ ಬಹಳ ದೂರದಲ್ಲಿರುವನು.



## ರಾಮನಾಡಿನ ಬಿನ್ನವತ್ತಳಿಗೆ ಉತ್ತರ

ಸುದೀರ್ಘರಾತ್ರಿ ಕಡೆಗಿಂದು ಕೊನೆಗಾಣುತ್ತಿದೆ. ಬಹುಕಾಲದ ಶೋಕತಾಪಗಳು ಕಡೆಗಿಂದು ಮಾಯವಾಗುತ್ತಿವೆ. ಇದುವರೆಗೆ ಶವ ದಂತೆ ಇದ್ದ ಶರೀರವಿಂದು ಸಚೇತನವಾಗುತ್ತಿದೆ. ಅದೋ ಕಿವಿಗೊಡಿ, ವಾಣಿಯೊಂದು ಕೇಳಿಬರುತ್ತಿದೆ. ಬಹುಪುರಾತನಕಾಲದ ಗರ್ಭದಿಂದ ಹೊಮ್ಮಿ ಪರ್ವತಶಿಖರಗಳಿಂದ ಮರುದನಿಯಾಗಿ ಚಿಮ್ಮಿ ಅರಣ್ಯಾರಣ್ಯ ಕಂದರ ಕಂದರಗಳಲ್ಲಿ ಸಂಚರಿಸಿ ಬರಬರುತ್ತಾ ಪ್ರಬಲವಾಗಿ ಬಂದಂತೆಲ್ಲಾ ಅಪ್ರತಿಹತವಾಗಿ ನಮ್ಮೀ ಪುಣ್ಯ ಭೂಮಿಯನ್ನು ನಿದ್ದೆಯಿಂದ ಒದೆದು ಎಬ್ಬಿಸಿ, ಜ್ಞಾನ ಭಕ್ತಿ ವೈರಾಗ್ಯ ಸೇವಾತತ್ತ್ವಗಳನ್ನು ಉಚ್ಚಕಂಠದಿಂದ ಸಾರುವ ತೂರ್ಯವಾಣಿಯೊಂದು ಕೇಳಿ ಬರುತ್ತಿದೆ. ಹಿಮಾಲಯದಿಂದ ಬೀಸಿಬರುವ ಪುಣ್ಯಸಮೀರಣನಂತೆ ನಿರ್ಜೀವದಂತಿದ್ದ ಅಸ್ತಿಮಾಂಸಗಳಿಗೆ ಜೀವದಾನ ಮಾಡುತ್ತಿದೆ. ಜಡನಿದ್ರೆಯನ್ನು ಪರಿಹರಿಸುತ್ತಿದೆ. ಕಾರ್ಯೋ ತ್ಸಾಹ ಸ್ಥೈರ್ಯಧೈರ್ಯಗಳನ್ನು ಉದ್ರೇಕಿಸುತ್ತಿದೆ. ಕುರುಡರಿಗೆ ಕಾಣದು, ಮೂರ್ಖರಿಗೆ ತಿಳಿಯದು. ನಮ್ಮೀ ಭಾರತಭೂಮಿ ಯುಗಯುಗಗಳ ನಿದ್ರೆಯಿಂದ ಮೇಲೇಳುತ್ತಿದೆ. ಆಕೆಯನ್ನು ಇನ್ನು ಯಾರೂ ತಡೆಯ ಬಲ್ಲವರಿಲ್ಲ. ಇನ್ನಾಕೆ ನಿದ್ದೆ ಮಾಡುವುದಿಲ್ಲ. ಯಾವಶಕ್ತಿಯೂ ಆಕೆ ಯನ್ನು ಬಗ್ಗಿಸಲಾರದು. ಏಕೆಂದರೆ ಅದೋ ನೋಡಿ! ಮಹಾಕಾಳಿ ಮತ್ತೊಮ್ಮೆ ಎಚ್ಚೆತ್ತು ಮೈ ಕೊಡಹಿ ಉಸಿರೆಳೆದು ನಿಲ್ಲುತ್ತಿರುವಳು.

ಮಹಾರಾಜರೇ, ರಾಮನಾಡಿನ ಸಜ್ಜನರೆ! ನೀವು ಹೃತ್ಪೂರ್ವಕ ದಯೆಯಿಂದ ನನ್ನ ಸ್ವಾಗತ ಬಯಸಿದುದಕ್ಕೆ ನನ್ನ ಅನಂತ ಧನ್ಯವಾದ. ನೀವು ನನಗೆ ಸುಸ್ವಾಗತ ಬಯಸುತ್ತಿರುವಿರಿ, ನನ್ನ ಮೇಲೆ ಪ್ರೀತಿಯನ್ನು ಮಳೆಗರೆಯುತ್ತಿರುವಿರಿ ಎಂದು ಭಾವಿಸುತ್ತೇನೆ. ಎಲ್ಲಾ ಭಾಷೆಗಳಿಗಿಂತ ಸ್ಪಷ್ಟವಾಗಿ ಹೃದಯ ಹೃದಯದೊಂದಿಗೆ ಮಾತನಾಡುವುದು. ಆತ್ಮ ಮತ್ತೊಂದು ಆತ್ಮದೊಂದಿಗೆ ಅಭ್ರಾಂತ ಭಾಷೆಯಲ್ಲಿ ಮೌನದಲ್ಲಿ ಮಾತ ನಾಡುವುದು ಅದು ನನ್ನ ಹೃದಯಕ್ಕೆ ಅರಿವಾಗುವುದು. ರಾಮನಾಡಿನ ಮಹಾರಾಜರೆ! ನಮ್ಮ ಧರ್ಮ ಮತ್ತು ಮಾತೃಭೂಮಿಯ ಪರವಾಗಿ ಏನಾದರೂ ಈ ದೀನ ವ್ಯಕ್ತಿ ಸ್ವಲ್ಪ ಕೆಲಸ ಮಾಡಿದ್ದರೆ, ನಮ್ಮ ದೇಶದಲ್ಲಿ ಅಜ್ಞಾತವಾಗಿ ಗುಪ್ತವಾಗಿ ಬಿದ್ದಿರುವ ರತ್ನರಾಶಿಯಮೇಲೆ ಗಮನಹೋಗಿ,

ಸ್ವದೇಶದಮೇಲೆ ವಿಶ್ವಾಸ ಹುಟ್ಟುವಂತೆ ನಾನು ಪ್ರಯತ್ನಿಸಿದ್ದರೆ, ಅಜ್ಞಾನಾಂಧಕಾರದಲ್ಲಿ ತೊಳಲುತ್ತಾ, ಬಾಯಾರಿಕೆಯಿಂದ ನರಳಿ ಸಾಯುತ್ತಾ, ಮೋರಿಯ ನೀರನ್ನು ಕುಡಿಯುವ ಬದಲು ತಮ್ಮ ಮನೆಯಲ್ಲೆ ಹರಿಯುತ್ತಿರುವ ಅಮೃತ ಪ್ರವಾಹವನ್ನು ಪಾನಮಾಡಿ ಎಂದು ಹೇಳಿದ್ದರೆ, ನಮ್ಮ ದೇಶ ಬಾಂಧವರನ್ನು ಕಾರ್ಯೋನ್ಮುಖರನ್ನಾಗಿ ಮಾಡಿದ್ದರೆ, ಭಾರತ ಪ್ರಾಣ ಧರ್ಮ, ಅದು ಹೋದರೆ ಸರ್ವನಾಶವಾದಂತೆ, ಅದಿಲ್ಲದೆ ರಾಜನೀತಿ ಸಾಮಾಜಿಕ ಉನ್ನತಿ ಪ್ರತಿಯೊಬ್ಬ ಭಾರತೀಯ ಸುತನಿಗೂ ಕುಬೇರ ಐಶ್ವರ್ಯವಿದ್ದರೂ ಇಲ್ಲವೆಂಬ ಭಾವನೆ ನನ್ನ ಬಾಂಧವರಲ್ಲಿ ಮೂಡುವಂತೆ ಮಾಡಿದ್ದರೆ, ಅಥವಾ ಹೊರಗೆ ಈ ಭಾವನೆ ಹರಡಿದ್ದರೆ ಅದಕ್ಕೆಲ್ಲಾ ರಾಮನಾಡಿನ ರಾಜರೆ ಪ್ರಶಂಸನಾರ್ಹರು. ಮೊದಲು ನನಗೆ ಆಲೋಚನೆಯನ್ನು ಕೊಟ್ಟವರು ನೀವು, ಅದನ್ನು ಸಾಧಿಸುವುದಕ್ಕೆ ಪದೇ ಪದೇ ಪ್ರೋತ್ಸಾಹ ಕೊಡುತ್ತಿದ್ದವರು ನೀವು. ನೀವು ಅಂತರ್‌ದೃಷ್ಟಿಯ ಬಲದಿಂದ ಭವಿಷ್ಯದಲ್ಲಿ ಏನಾಗುವುದೆಂಬುದನ್ನು ಅರಿತಂತೆ ನನ್ನನ್ನು ಕೈಹಿಡಿದು ನಡೆಸಿ ಉತ್ಸಾಹ ತುಂಬಿದಿರಿ. ನನ್ನ ದಿಗ್ವಿಜಯಕ್ಕೆ ಸಂತೋಷಿಸುವುದಕ್ಕೆ ನೀವೇ ಮೊದಲಿಗರಾದುದರಲ್ಲಿ ಆಶ್ಚರ್ಯವಿಲ್ಲ. ನಾನು ಹಿಂತಿರುಗಿ ಬರುವಾಗ ನಿಮ್ಮ ದೇಶದಲ್ಲಿ ಕಾಲಿಡುವುದು ಸರಿಯಾಗಿಯೆ ಇದೆ. ನೀವು ಆಗಲೇ ಅಪ್ಪಣೆ ಕೊಡಿಸಿದಂತೆ ನಾವು ಮಹಾಕಾರ್ಯ ಸಾಧಿಸಬೇಕಾಗಿದೆ, ಮಹಾಶಕ್ತಿ ವ್ಯಕ್ತಗೊಳಿಸಬೇಕಾಗಿದೆ. ನಾವು ಅನ್ಯರಾಷ್ಟ್ರಗಳಿಗೆ ಹಲವು ವಿಷಯ ಬೋಧಿಸಬೇಕಾಗಿದೆ. ನಮ್ಮ ಮಾತೃಭೂಮಿ ದರ್ಶನ, ಧರ್ಮ, ನೀತಿ, ವಿಜ್ಞಾನ ಮಧುರತೆ, ಕೋಮಲತೆ, ಪ್ರೀತಿಗೆ ತೌರೂರು. ಇವು ಈಗಲೂ ಇವೆ. ಪ್ರಪಂಚದ ಅನುಭವ ಇದನ್ನು ಮತ್ತೂ ದೃಢಪಡಿಸಿರುವುದು. ಈಗಲೂ ಭರತಖಂಡ ಈ ಗುಣಗಳಲ್ಲಿ ಪ್ರಪ್ರಥಮ ಸ್ಥಾನದಲ್ಲಿದೆ ಎಂದು ಮುಕ್ತಕಂಠದಿಂದ ಸಾರುತ್ತೇನೆ. ಈ ಒಂದು ಸಣ್ಣ ಪ್ರಸಂಗವನ್ನು ತೆಗೆದುಕೊಳ್ಳಿ. ಕಳೆದ ನಾಲ್ಕೈದು ವರ್ಷಗಳಿಂದ ಎಷ್ಟೋ ರಾಜಕೀಯ ಬದಲಾವಣೆ ಆಗಿದೆ. ಪಾಶ್ಚಾತ್ಯ ದೇಶದಲ್ಲೆಲ್ಲಾ ಪ್ರಚಂಡ ಸಂಸ್ಥೆಗಳು ಸಮಾಜದ ಸ್ಥಿತಿಯನ್ನೇ ಬದಲಾಯಿಸುವುದಕ್ಕೆ ಎಷ್ಟೋ ಆಂದೋಳನವನ್ನು ನಡೆಸಿ ಸ್ವಲ್ಪ ಜಯವನ್ನು ಪಡೆದಿವೆ. ಈ ವಿಷಯವನ್ನೇನಾದರೂ ಕೇಳಿರುವಿರಾ ಎಂದು ನಮ್ಮ ದೇಶದವರನ್ನು ವಿಚಾರಿಸಿ. ಅವರಿಗೆ ಇದಾವುದೂ ತಿಳಿಯದು. ಆದರೆ ಚಿಕಾಗೋ ನಗರದಲ್ಲಿ ಒಂದು ವಿಶ್ವಧರ್ಮ ಸಮ್ಮೇಳನ ನಡೆಯಿತು, ಭರತಖಂಡದಿಂದ

ಒಬ್ಬ ಸನ್ಯಾಸಿಯನ್ನು ಅಲ್ಲಿಗೆ ಕಳಿಸಿಕೊಟ್ಟರು, ಆ ದೇಶದ ಜನರು ಹೃತ್ಪೂರ್ವಕ ಅವನನ್ನು ಸ್ವಾಗತಿಸಿದರು, ಆತ ಇನ್ನೂ ಅಲ್ಲಿ ಕೆಲಸ ಮಾಡುತ್ತಿರುವನು ಎಂಬ ಸಂಗತಿ ಒಬ್ಬ ದರಿದ್ರ ಭಿಕ್ಷುಕನಿಗೂ ಗೊತ್ತಿದೆ. ನಮ್ಮ ಜನ ಮೂಢರು, ಅವರಿಗೆ ವಿದ್ಯಾಭ್ಯಾಸ ಬೇಕಾಗಿಲ್ಲ, ವಿಷಯ ಸಂಗ್ರಹದ ಕುತೂಹಲವಿಲ್ಲವೆಂದು ನಾನು ಕೇಳಿರುವೆನು. ನಾನು ಒಂದಾನೊಂದು ಕಾಲದಲ್ಲಿ ಹೀಗೆಯೆ ಮೂಢನಂತೆ ಭಾವಿಸಿದ್ದೆ. ಆದರೆ ಬರೀ ಊಹೆಗಿಂತ, ಪ್ರಪಂಚ ಪರ್ಯಟನಕಾರರು ಅವಸರದಲ್ಲಿ ಬರೆದ ಪುಸ್ತಕ ಓದುವುದಕ್ಕಿಂತ ಅನುಭವ ದೊಡ್ಡ ಬೋಧಕ. ಈ ಅನುಭವದಿಂದ ಅವರು ಮೂಢರಲ್ಲ, ಮಂದಬುದ್ಧಿಯವರಲ್ಲ, ಇತರ ಜನಾಂಗದವರಂತೆ ಅವರೂ ವಿಷಯ ಸಂಗ್ರಹ ಮಾಡಲು ಕುತೂಹಲಿಗಳಾಗಿರುವರು ಎಂಬುದು ತಿಳಿಯುವುದು. ಆದರೆ ಪ್ರತಿಯೊಂದು ದೇಶದ ಪಾತ್ರವೇ ಬೇರೆ. ಅದರಂತೆಯೇ ಸ್ವಾಭಾವಿಕವಾಗಿ ಅದರ ವ್ಯಕ್ತಿತ್ವವೇ ಬೇರೆ. ಈ ಸಂಸ್ಕಾರಗಳೊಂದಿಗೆ ಅದು ಹುಟ್ಟಿರುವುದು. ಇಡೀ ರಾಷ್ಟ್ರದ ಸಾಮರಸ್ಯದಲ್ಲಿ ಪ್ರತಿಯೊಂದು ದೇಶವೂ ಒಂದು ರಾಗದಂತೆ ಇದೆ. ಇದೇ ಅದರ ಜೀವಾಳ, ಸಾರ. ಅದೇ ಅದರ ಬೆನ್ನೆಲುಬು. ರಾಷ್ಟ್ರಜೀವನದ ತಳಹದಿ. ಈ ಪವಿತ್ರ ಭೂಮಿಯಲ್ಲಿ ಆ ಬೆನ್ನೆಲುಬು, ತಳಹದಿ, ಜೀವನದ ಕೇಂದ್ರವೇ ಧರ್ಮ. ಇತರರು ರಾಜಕೀಯವನ್ನು ಮಾತನಾಡಲಿ, ವ್ಯಾಪಾರದಿಂದ ಜೀವನ ಮತ್ತು ಐಶ್ವರ್ಯಗಳಿಸುವುದನ್ನು ಹೇಳಲಿ, ವ್ಯಾಪಾರದ ಶಕ್ತಿ ಮತ್ತು ಅದರ ವಿಕಾಸದ ವಿಷಯ ಮಾತನಾಡಲಿ, ಬಾಹ್ಯ ಸ್ವಾತಂತ್ರ್ಯದ ಅದ್ಭುತ ಮೂಲದ ವಿಷಯ ಮಾತನಾಡಲಿ, ಇದಾವುದನ್ನು ಹಿಂದೂ ಅರ್ಥಮಾಡಿಕೊಳ್ಳಲಾರ, ಅರ್ಥಮಾಡಿಕೊಳ್ಳುವುದಕ್ಕೆ ಇಚ್ಛಿಸುವುದೂ ಇಲ್ಲ. ಆದರೆ ಅವನ ಹತ್ತಿರ ಆಧ್ಯಾತ್ಮ, ದೇವರು ಧರ್ಮ ಆತ್ಮ ಅನಂತ ಧಾರ್ಮಿಕ ಸ್ವಾತಂತ್ರ್ಯ ಇವುಗಳ ವಿಷಯ ಮಾತನಾಡಿ. ಕನಿಷ್ಟ ಕೂಲಿ ಕೂಡ ಈ ವಿಷಯದಲ್ಲಿ ಇತರ ದೇಶದ ಘನ ವಿದ್ವಾಂಸರಿಗಿಂತ ಹೆಚ್ಚು ತಿಳಿದುಕೊಂಡಿರುವನು. ಸಭಿಕರೆ, ಪ್ರಪಂಚಕ್ಕೆ ನಾವು ಬೋಧಿಸಬೇಕಾಗಿರುವುದೊಂದು ಇದೆ ಎಂದು ಹೇಳಿದೆನು. ಆದಕಾರಣವೇ ಈ ದೇಶ ನೂರಾರು ವರ್ಷ ದಬ್ಬಾಳಿಕೆಗೆ ತುತ್ತಾದರೂ, ಸಹಸ್ರಾರು ವರ್ಷ ಪರಾಧೀನತೆಯಲ್ಲಿದ್ದರೂ ಅವರ ಕ್ರೌರ್ಯಕ್ಕೆ ತುತ್ತಾದರೂ ಬದುಕಬೇಕಾಗಿದೆ. ಈ ದೇಶ ಇಂದೂ ಜೀವಂತವಾಗಿರುವುದು. ಇದಕ್ಕೆ ಕಾರಣ ಧರ್ಮ ಆಧ್ಯಾತ್ಮದ ಅನರ್ಘ್ಯರತ್ನವಾದ ಈಶ್ವರನನ್ನು ಇದು ಇನ್ನೂ ನೆಚ್ಚಿಕೊಂಡಿರುವುದು.

ಈ ದೇಶದಲ್ಲಿ ಧರ್ಮ ಮತ್ತು ಆಧ್ಯಾತ್ಮ ಸ್ರೋತವಿನ್ನೂ ಹರಿಯ ಬೇಕಾಗಿದೆ. ಪ್ರಪಂಚವನ್ನೆಲ್ಲಾ ಇದು ತುಂಬಿ, ರಾಜನೀತಿ ಮತ್ತು ಸಾಮಾಜಿಕ ಗೊಂದಲಗಳಲ್ಲಿ ಸಿಕ್ಕಿ ಜರ್ಝರಿತವಾಗಿ ನಿರಾಶವಾಗಿ ಮೃತು ಪ್ರಾಯವಾಗಿರುವ ಪಾಶ್ಚಾತ್ಯ ದೇಶಗಳಿಗೆ ಹೊಸ ಬೆಳಕನ್ನು, ಹೊಸ ಬಾಳನ್ನು ನೀಡಬೇಕಾಗಿದೆ. ನಾನಾ ಪ್ರಕಾರ ಮತ ಮತಾಂತರಗಳ ವಿಭಿನ್ನ ಧ್ವನಿಯಿಂದ ಭಾರತಾವನಿ ತುಂಬಿ ತುಳುಕುತ್ತಿದೆ. ಸ್ವಲ್ಪ ತಾಳ ದೊಂದಿಗೆ ಭೇತಾಳ ಬೆರೆತಿದೆ. ಆದರೆ ಇವುಗಳಲ್ಲೆಲ್ಲಾ ಒಂದು ಸ್ವರ ಎಲ್ಲಕ್ಕಿಂತ ತೀಕ್ಷ್ಣವಾಗಿ, ಎಲ್ಲ ಧ್ವನಿಯನ್ನು ಅಡಗಿಸಿ ನಮ್ಮ ಕರ್ಣ ಕುಹರವನ್ನು ಭೇದಿಸುತ್ತಿರುವುದು. ತ್ಯಾಗರೂಪಿ ಭೈರವರಾಗಲು ಉಳಿದ ಎಲ್ಲಾ ರಾಗರಾಗಿಣಿಗಳನ್ನು ಸೋಲಿಸಿ ಝೇಂಕರಿಸುತ್ತಿದೆ. "ವಿಷಯಾನ್ ವಿಷವತ್‌ತ್ಯಜ" ಭಾರತೀಯ ಶಾಸ್ತ್ರಸಾರವೇ ಇದು. ಅದರ ಮೂಲವೆ ಇದು. ಈ ಪ್ರಪಂಚ ಒಂದೆರಡು ದಿನದ ಭ್ರಾಂತಿ. ಜೀವನ ಕ್ಷಣಿಕ. ಇದರಿಂದ ಸುದೂರದಲ್ಲಿ ಅನಂತ ಅಪಾರ ರಾಜ್ಯವಿರುವುದು. ಅದನ್ನು ಅರಸುವ. ಈ ರಾಜ್ಯ ಮಹಾ ವೀರ ಮಾನಿಷಿಗಳ ಹೃದಯದ ಜ್ಯೋತಿ ಯಿಂದ ಪ್ರಕಾಶಿಸುತ್ತಿದೆ. ಅವರು ಈ ಅನಂತ ಜಗತ್ತನ್ನು ಕೂಡ ಒಂದು ಕಸದ ಗುಂಡಿಯಂತೆ ನೋಡಬಲ್ಲರು. ಇದನ್ನೂ ಮೀರಿಹೋಗಬೇಕು. ಅನಂತ ಕಾಲವನ್ನು ಕೂಡ ಅವರು ಗಣನೆಗೆ ತರುವುದಿಲ್ಲ. ಅವರಿಗೆ ಕಾಲವೇ ಇಲ್ಲ. ಕಾಲಾತೀತರಾಗಿ ಹೋಗುವರು. ದೇಶವನ್ನು ಕೂಡ ಅವರು ಲಕ್ಷಿಸುವುದಿಲ್ಲ. ಇದನ್ನೂ ಮೀರಿ ಹೋಗುವರು. ಈ ಕಾಲ ದೇಶವನ್ನು ಮೀರಿಹೋಗುವುದೇ ಧರ್ಮದ ಸಾರ. ನಮ್ಮ ದೇಶದ ಒಂದು ಲಕ್ಷಣ ಈ ಅತೀಂದ್ರಿಯ ದರ್ಶನ, ಅತೀತರಾಗಬೇಕೆಂಬ ಹೋರಾಟ, ಪ್ರಕೃತಿಯ ತೆರೆಯನ್ನು ಸೀಳಿ ಎಂತಹ ಅಪಾಯವನ್ನಾದರೂ ಎದುರಿಸಿ ಎಷ್ಟು ಕಷ್ಟವಾದರೂ ಆಗಲಿ ಅದರ ಹಿಂದಿನ ಪರಂಜ್ಯೋತಿಯ ಕ್ಷಣಿಕ ದರ್ಶನವನ್ನಾದರೂ ಪಡೆಯಬೇಕೆಂಬುದು. ಅದೇ ನಮ್ಮ ಆದರ್ಶ. ಆದರೆ ದೇಶದ ಜನರೆಲ್ಲಾ ಸರ್ವಸಂಗ ಪರಿತ್ಯಾಗಮಾಡಲಾರರು. ಅವರಿಗೆ ನೀವು ಪ್ರೋತ್ಸಾಹ ಕೊಡಬೇಕಾದರೆ ಇಲ್ಲಿದೆ ಮಾರ್ಗ. ನಿಮ್ಮ ರಾಜ ನೀತಿ ಸಮಾಜಸುಧಾರಣೆ ಐಶ್ವರ್ಯ ಸಂಪಾದನೆ ವ್ಯಾಪಾರದ ಮಾತು ಕತೆಯೆಲ್ಲ ಬಾತಿನ ಮೇಲಿನ ನೀರಿನಂತೆ ಜಾರಿಹೋಗುವುದು. ಈ ಆಧ್ಯಾತ್ಮ ಕತೆಯನ್ನು ನೀವು ಜಗತ್ತಿಗೆ ಬೋಧಿಸಬೇಕಾಗಿದೆ. ನಾವು ಆ ದೇಶಗಳಿಂದ

ಎನನ್ನಾದರೂ ಕಲಿಯಬೇಕೆ? ಹೌದು ವಿಜ್ಞಾನಶಾಸ್ತ್ರ, ಸಂಘಟನಾರೀತಿ ನೀತಿ, ಅಧಿಕಾರವನ್ನು ಉಪಯೋಗಿಸುವ ರೀತಿ, ಅತ್ಯಲ್ಪ ಉಪಾದಾನ ಗಳಿಂದ ಮಹಾ ಫಲವನ್ನು ಪಡೆಯುವುದರಲ್ಲಿ ನಾವು ಕೆಲವು ವಿಷಯ ಗಳನ್ನು ಅವರಿಂದ ಕಲಿಯಬೇಕು. ಪಾಶ್ಚಾತ್ಯ ದೇಶಗಳಿಂದ ಇಂತಹ ಕೆಲವು ವಿಷಯಗಳನ್ನು ಬೇಕಾದರೆ ಸ್ವಲ್ಪ ಕಲಿಯಬಹುದು. ಆದರೆ ಯಾರಾದರೂ ಭರತಖಂಡದಲ್ಲಿ, ಕೇವಲ ತಿನ್ನುವುದು ಕುಡಿಯುವುದು ವಿನೋದ ಇವೇ ಜೀವನದ ಗುರಿ ಎಂದು ಭಾವಿಸಿದರೆ, ದೇವರ ಬದಲು ಪ್ರಪಂಚವನ್ನು ತಂದರೆ, ಅವನು ಮಿಥ್ಯಾವಾದಿ. ಈ ಪುಣ್ಯಭೂಮಿಯಲ್ಲಿ ಅವನಿಗೆ ಸ್ಥಳವಿಲ್ಲ. ಭಾರತೀಯರು ಅವನಿಗೆ ಕಿವಿಗೊಡುವುದಿಲ್ಲ. ಪಾಶ್ಚಾತ್ಯ ನಾಗರಿಕತೆ ಕೋರೈಸುತ್ತಿರುವಾಗ ಅದರ ಅದ್ಭುತ ವ್ಯಾಪಾರ ವನ್ನು ನೋಡುತ್ತಿರುವಾಗಲೂ ಅವರೆದುರಿಗೆ ಇವೆಲ್ಲ ಭ್ರಾಂತಿ ಮಿಥ್ಯ ವೆಂದು ಮುಕ್ತಕಂಠದಿಂದ ಸಾರಿಹೇಳುತ್ತೇನೆ. ಈಶ್ವರನೊಬ್ಬನೇ ಸತ್ಯ. ಆತ್ಮ ಒಂದೇ ಸತ್ಯ. ಧರ್ಮ ಒಂದೇ ಸತ್ಯ. ಅದನ್ನು ಮಾತ್ರ ನೆಚ್ಚಿ.

ಆದರೂ ನಮ್ಮಲ್ಲಿ ಉಚ್ಚತಮ ಆದರ್ಶಕ್ಕೆ ಸಿದ್ಧರಲ್ಲದ ಅನೇಕರಿಗೆ ಆವಶ್ಯಕವಾದ ಸ್ವಲ್ಪ ಜಡ ಸಂಪತ್ತು ಕಲ್ಯಾಣಕಾರಿ. ಈ ದೋಷವನ್ನು ಪ್ರತಿಯೊಂದು ದೇಶದಲ್ಲೂ ಪ್ರತಿಯೊಂದು ಸಮಾಜದಲ್ಲೂ ನೋಡುವೆವು. ಭರತಖಂಡದಲ್ಲಿ ಕೂಡ ಇದೇ ತಪ್ಪನ್ನು ಈಚೆಗೆ ಮಾಡಿರುವುದು ವಿಷಾದಕರ. ಅದೇ ಇನ್ನೂ ಯೋಗ್ಯರಲ್ಲದವರಿಗೆ ಶ್ರೇಷ್ಠ ಸತ್ಯವನ್ನು ಬಲಾತ್ಕಾರವಾಗಿ ಸ್ವೀಕರಿಸಿ ಎನ್ನುವುದು. ನನ್ನ ಮಾರ್ಗ ನಿನ್ನದಾಗದೇ ಇರಬಹುದು. ನಮಗೆಲ್ಲರಿಗೂ ಗೊತ್ತಿರುವಂತೆ ಹಿಂದೂಗಳ ಆದರ್ಶ ಸನ್ಯಾಸ. ಪ್ರತಿ ಯೊಬ್ಬರೂ ತ್ಯಜಿಸಬೇಕೆಂದು ನಮ್ಮ ಶಾಸ್ತ್ರ ವಿಧಿಸುವುದು. ಈ ಪ್ರಪಂಚ ವನ್ನು ಅನುಭವಿಸಿದ ಹಿಂದೂಗಳೆಲ್ಲರೂ ಜೀವನದ ಕೊನೆಗಾಲದಲ್ಲಿ ಇದನ್ನು ತ್ಯಜಿಸಬೇಕು. ಯಾರು ಹೀಗೆ ಮಾಡುವುದಿಲ್ಲವೋ ಅವರು ಹಿಂದೂ ಗಳಲ್ಲ, ಹಿಂದೂಗಳೆಂದು ಹೇಳಿಕೊಳ್ಳುವುದಕ್ಕೆ ಅವರಿಗೆ ಅಧಿಕಾರವಿಲ್ಲ. ಈ ಕ್ಷಣಭಂಗುರ ಪ್ರಪಂಚವನ್ನು ಅನುಭವಿಸಿ ತ್ಯಜಿಸುವುದು ಆದರ್ಶವೆನ್ನು ವುದು ನಮಗೆ ಗೊತ್ತಿದೆ. ಈ ಸಂಸಾರದೊಳಗೆ ಏನೂ ಇಲ್ಲ, ಬರೀಪೊಳ್ಳು, ನಿಸ್ಸಾರ, ಬೂದಿ ಮಾತ್ರ ಇರುವುದು ಎಂದು ತಿಳಿದು ತ್ಯಜಿಸಿ ನಿವೃತ್ತಿ ಮಾರ್ಗವನ್ನು ಅವಲಂಬಿಸುವುದು. ಮನಸ್ಸು ಹಿಂತಿರುಗಿ ಹೋಗಬೇಕು, ಪ್ರವೃತ್ತಿನಿಂತು ನಿವೃತ್ತಿ ಪ್ರಾರಂಭಿಸಬೇಕು. ಇದೇ ಆದರ್ಶ. ಆದರೆ

ಸ್ವಲ್ಪ ಪ್ರಪಂಚವನ್ನು ಅನುಭವಿಸಿದ ಮೇಲೆ ಮಾತ್ರ ಈ ಆದರ್ಶ ಸಾಧ್ಯ. ಮಗುವಿಗೆ ತ್ಯಾಗಜೀವನದ ಸತ್ಯವನ್ನು ಬೋಧಿಸಬೇಕಾಗಿಲ್ಲ. ಮಗು ಹುಟ್ಟು ಆಶಾವಾದಿ; ಅದರ ಜೀವನವೆಲ್ಲಾ ಪಂಚೇಂದ್ರಿಯಗಳಲ್ಲಿರುವುದು; ಅದರಲ್ಲಿ ಆನಂದಿಸುವುದೇ ಅದರ ಏಕ ಮಾತ್ರ ಗುರಿ. ಪ್ರತಿಯೊಂದು ಸಮಾಜದಲ್ಲಿಯೂ ಶಿಶುಸಹಜ ಜನರಿರುವರು. ಅವರಿಗೆ ಸ್ವಲ್ಪ ಸುಖ ಭೋಗದ ಅನುಭವ ಬೇಕಾಗಿದೆ. ಆಗ ಮಾತ್ರ ಅದರ ಅನಿತ್ಯತೆಯನ್ನು ತಿಳಿಯುವರು. ಅನಂತರ ತ್ಯಾಗ ಬುದ್ಧಿ ಬರುವುದು. ನಮ್ಮ ಶಾಸ್ತ್ರದಲ್ಲಿ ಅವರಿಗೆ ಬೇಕಾದಷ್ಟು ಅವಕಾಶವಿದೆ. ಆದರೆ ದುರದೃಷ್ಟವಶಾತ್ ಅನಂತರ ಯಾವ ನಿಯಮ ಸನ್ಯಾಸಿಗೆ ಅನ್ವಯಿಸುವುದೋ ಅದನ್ನೇ ಎಲ್ಲರ ಮೇಲೂ ಹೇರುವರು. ಇದೊಂದು ಮಹಾ ತಪ್ಪು. ಇದಿಲ್ಲದೆ ಇದ್ದರೆ ಭರತ ಖಂಡದಲ್ಲಿ ಇಷ್ಟೊಂದು ದಾರಿದ್ರ್ಯ ದುಃಖ ಇರುತ್ತಿರಲಿಲ್ಲ. ತನಗೆ ಪ್ರಯೋಜನವಿಲ್ಲದ ಧರ್ಮ ಮತ್ತು ಆಧ್ಯಾತ್ಮಿಕ ನಿಯಮ ಜಾಲದಲ್ಲಿ ಪಾಪ ಬಡವ ಸಿಕ್ಕಿ ನರಳುವನು. ಕೈ ತೆಗೆಯಿರಿ! ಸಂಸಾರವನ್ನು ಅವನು ಸ್ವಲ್ಪ ಅನುಭವಿಸಲಿ. ನಂತರ ಅವನು ತಾನೆ ವಿಮುಖನಾಗುವನು. ತ್ಯಾಗ ಬಂದೇ ಬರುವುದು. ಈ ಮಾರ್ಗದಲ್ಲಿ ಪಾಶ್ಚಾತ್ಯರಿಂದ ನಾವು ಸ್ವಲ್ಪ ಕಲಿತುಕೊಳ್ಳಬಹುದು. ಆದರೆ ಇದನ್ನು ಕಲಿತುಕೊಳ್ಳುವಾಗ ಬಹಳ ಜೋಪಾನವಾಗಿರಬೇಕು. ಪಾಶ್ಚಾತ್ಯ ಸಂಸ್ಕೃತಿಯಿಂದ ಪ್ರಯೋಜನ ಪಡೆದವರಲ್ಲಿ ಬಹುಪಾಲು ಜನ ಅಪ್ರಯೋಜಕರು. ಭರತಖಂಡದ ಶ್ರೇಯಸ್ಸಿನ ದಾರಿಯಲ್ಲಿ ಎರಡು ಆತಂಕಗಳಿವೆ. ಒಂದು ಪೂರ್ವಾಚಾರ ಪರಾಯಣೆ, ಮತ್ತೊಂದು ಆಧುನಿಕ ಪಾಶ್ಚಾತ್ಯ ಸಂಸ್ಕೃತಿಯನ್ನು ಅನುಸರಿಸುವವರು. ಇವೆರಡರಲ್ಲಿ ನಾನು ಪೂರ್ವಾಚಾರಿಗಳನ್ನು ಮೆಚ್ಚುತ್ತೇನೆ. ಆಧುನಿಕ ಕೃತಕ ಪಾಶ್ಚಾತ್ಯ ಅನುಕರರನ್ನಲ್ಲ. ಪೂರ್ವಾಚಾರ ಪರಾಯಣರು ಅಜ್ಞರಾಗಿರಬಹುದು, ಅವರಲ್ಲಿ ಅಷ್ಟು ನಯವಿಲ್ಲದೆ ಇರಬಹುದು, ಆದರೆ ಅವನೊಬ್ಬ ಮನುಷ್ಯ, ಅವನಿಗೆ ಶ್ರದ್ಧೆ ಇದೆ, ಶಕ್ತಿ ಇದೆ. ತನ್ನ ಕಾಲಮೇಲೆ ತಾನು ನಿಂತುಕೊಳ್ಳಬಲ್ಲ. ಪಾಶ್ಚಾತ್ಯರನ್ನು ಅನುಕರಿಸುವವನಲ್ಲಿ ವ್ಯಕ್ತಿತ್ವವೇ ಇಲ್ಲ. ಮೂಲೆ ಮೂಲೆಯಿಂದ ಹಲವು ವಿಷಯ ಸಂಗ್ರಹಮಾಡಿ ಮನಸ್ಸನ್ನು ಒಂದು ಉಗ್ರಾಣ ಮಾಡಿಕೊಂಡಿರುವನು. ಆ ವಿಷಯಗಳನ್ನು ಜೀರ್ಣಿಸಿಕೊಂಡಿಲ್ಲ, ಅವುಗಳಲ್ಲಿ ಒಂದು ರೀತಿಯಿಲ್ಲ, ರಚನೆಯಿಲ್ಲ. ಸ್ಥೈರ್ಯದಿಂದ ನಿಲ್ಲಲಾರ, ತತ್ತರಿಸುತ್ತಿರುವನು. ಅವನು

ಮಾಡುವ ಕೆಲಸದ ಪ್ರೋತ್ಸಾಹ ಮೂಲವೆಲ್ಲಾ ಎಲ್ಲಿ? ಆಂಗ್ಲೇಯರು ಭುಜತಟ್ಟಿ ಕೊಡುವ ಸ್ವಲ್ಪ ಶಹಬಾಸ್‌ಗಿರಿಯಲ್ಲಿ. ಅವನ ಸಮಾಜ ಸುಧಾರಣ ರೀತಿಯಲ್ಲಿ, ಅವನು ಸಮಾಜದ ಕೆಲವು ವ್ಯವಹಾರವನ್ನು ಅತಿ ಕಟುವಾಗಿ ಹಳಿಯುವುದರ ಹಿಂದೆ ಯಾರೋ ಕೆಲವು ಆಂಗ್ಲೇಯರು ಉತ್ತೇಜನವನ್ನು ಕೊಡುತ್ತಿರುವರು. ನಮ್ಮ ಕೆಲವು ಆಚಾರವನ್ನು ಹೀನ ವಾದುದೆಂದು ಏತಕ್ಕೆ ಟೀಕಿಸುತ್ತಾರೆ? ಪಾಶ್ಚಾತ್ಯರು ಅದನ್ನು ಹಾಗೆ ಹೇಳುವರು. ಅವನು ಕೊಡುವ ಕಾರಣವೇ ಇದು. ನಾನು ಇದನ್ನು ಒಪ್ಪಿಕೊಳ್ಳುವುದಿಲ್ಲ. ನಿಮ್ಮ ಶಕ್ತಿಯ ಮೇಲೆ ನಿಂತು ಹೋರಾಡಿ. ಈ ಪ್ರಪಂಚದಲ್ಲಿ ಏನಾದರೂ ಪಾತಕವಿದ್ದರೆ ಅದೇ ದುರ್ಬಲತೆ. ಎಲ್ಲಾ ದುರ್ಬಲತೆಯಿಂದ ಪಾರಾಗಿ. ದುರ್ಬಲತೆಯೇ ಮಹಾ ಪಾತಕ, ದುರ್ಬ ಲತೆಯೆ ಮರಣ. ಈ ಸ್ಥಿಮಿತವಿಲ್ಲದ ಮನುಷ್ಯನು ಇನ್ನೂ ಒಂದು ಸ್ಪಷ್ಟ ವ್ಯಕ್ತಿಯಾಗಿಲ್ಲ. ಇವರನ್ನು ನಾವು ಏನೆಂದು ಕರೆಯೋಣ, ಗಂಡಸರೆ ಹೆಂಗಸರೆ ಪ್ರಾಣಿಗಳೆ? ಆದರೆ ಪೂರ್ವಾಚಾರ ಪರಾಯಣರಲ್ಲಿ ಶ್ರದ್ಧೆ ಇತ್ತು. ಅವರು ಧೀರರಾಗಿದ್ದರು. ಇನ್ನೂ ನಮ್ಮಲ್ಲಿ ಕೆಲವು ಅತ್ಯುತ್ತಮ ಉದಾ ಹರಣೆಗಳಿವೆ. ನಿಮ್ಮ ರಾಮನಾಡಿನ ರಾಜರೇ ನಿಮ್ಮೆದುರಿಗೆ ಇರುವ ಒಂದು ಉದಾಹರಣೆ. ಇಡೀ ಭರತ ಖಂಡದಲ್ಲೇ ಇವರಿಗಿಂತ ಹೆಚ್ಚು ಶ್ರದ್ಧಾವಂತ ಹಿಂದೂ ಇಲ್ಲ. ಪ್ರಾಚ್ಯ ಪಾಶ್ಚಾತ್ಯ ವಿಷಯಗಳಲ್ಲಿ ಇವರಿ ಗಿಂತ ಹೆಚ್ಚು ಮತ್ತೊಬ್ಬ ರಾಜರಿಗೆ ತಿಳಿಯದು. ಪ್ರತಿಯೊಂದು ದೇಶ ದಿಂದಲೂ ಒಳ್ಳೆಯದನ್ನು ಸ್ವೀಕರಿಸಬಲ್ಲರು. "ಅತಿನೀಚನಿಂದಲೂ ಶ್ರದ್ಧೆ ಯಿಂದ ಒಳ್ಳೆಯ ವಿಷಯವನ್ನು ಕಲಿ. ಮುಕ್ತಿಮಾರ್ಗ ಒಬ್ಬ ನೀಚನ ಬಾಯಿಂದ ಬಂದರೂ ಶ್ರದ್ಧೆಭಕ್ತಿಯಿಂದ ಕಲಿತುಕೊ. ಸ್ತ್ರೀರತ್ನ ಅತಿನೀಚ ಕುಲದಿಂದ ಬಂದಿದ್ದರೂ ಅವಳನ್ನು ಸತಿಯಾಗಿ ಸ್ವೀಕರಿಸು." ಧರ್ಮಶಾಸ್ತ್ರ ಕರ್ತೃ ಆ ಪ್ರಖ್ಯಾತ ಎಣೆಯಿಲ್ಲದ ಮನು ವಿಧಿಸಿದ ನಿಯಮಗಳು ಇವು. ಇದು ಸತ್ಯ. ಸ್ವತಂತ್ರವಾಗಿ ನಿಮಗೆ ಸಾಧ್ಯವಾದಷ್ಟನ್ನು ಜೀರ್ಣಿಸಿ ಕೊಳ್ಳಿ. ಎಲ್ಲಾ ದೇಶಗಳಿಂದಲೂ ಕಲಿತುಕೊಳ್ಳಿ. ನಿಮಗೆ ಯಾವುದು ಉಪಯೋಗ ವಾಗುವುದೋ ಅದನ್ನು ತೆಗೆದುಕೊಳ್ಳಿ. ಆದರೆ ನಾವು ಹಿಂದೂಗಳಾದುದ ರಿಂದ ಸರ್ವವೂ ನಮ್ಮ ರಾಷ್ಟ್ರಧ್ಯೇಯಕ್ಕೆ ಅಧೀನವಾಗಿರಬೇಕು. ಪ್ರತಿ ಯೊಬ್ಬನಿಗೂ ತನ್ನ ಸಂಸ್ಕಾರಕ್ಕನುಗುಣವಾಗಿ ಒಂದೊಂದು ಧ್ಯೇಯವಿದೆ. ನಿಮ್ಮಲ್ಲಿ ಎಲ್ಲರಲ್ಲಿಯೂ ಅಮೋಘವಾದ ಪಿತ್ರಾರ್ಜಿತ ಆಸ್ತಿ ಇದೆ. ನಿಮ್ಮ

ಚರಿತ್ರಾರ್ಹರಾಷ್ಟ್ರದ ಅನಂತ ಭೂತಕಾಲ ಅದರಲ್ಲಿ ಸುಪ್ತವಾಗಿದೆ. ಕೋಟ್ಯಂತರ ಪೂರ್ವೀಕರು ನಮ್ಮನ್ನು ಇಂದು ನಾವು ಮಾಡುವ ಪ್ರತಿಯೊಂದು ಕೆಲಸವನ್ನು ನೋಡುವಂತಿದೆ. ಅದಕ್ಕೇ ಜಾಗ್ರತರಾಗಿರಿ. ಪ್ರತಿಯೊಬ್ಬ ಹಿಂದೂ ಮಗುವಿನ ಆದರ್ಶ ಯಾವುದು? ಬ್ರಾಹ್ಮಣ್ಯ ಕರ್ತವ್ಯವನ್ನು ಮನು ವಿವರಿಸುವಾಗ, "ಬ್ರಾಹ್ಮಣೊ ಜಾಯಮಾನೊ ಹಿ ಪೃಥಿವ್ಯಾಮಧಿಜಾಯತೆ। ಈಶ್ವರಃ ಸರ್ವಭೂತಾನಾಂ ಧರ್ಮಕೋಶಸ್ಯ ಗುಪ್ತಯೆ" ಎಂದು ಮುಕ್ತ ಕಂಠದಿಂದ ಸಾರುವುದನ್ನು ನೀವು ಓದಿಲ್ಲವೆ? ಧರ್ಮರಕ್ಷಣೆ ಭರತಖಂಡದಲ್ಲಿ ಹುಟ್ಟುವ ಪ್ರತಿಯೊಬ್ಬ ಸ್ತ್ರೀಪುರುಷ ಮಕ್ಕಳ ಕರ್ತವ್ಯ. ಕೇವಲ ಬ್ರಾಹ್ಮಣರ ಕರ್ತವ್ಯಮಾತ್ರವಲ್ಲ. ಜೀವನದ ಪ್ರತಿಯೊಂದು ಕರ್ತವ್ಯವೂ ಈ ಒಂದು ಮಹಾ ಸ್ವರಕ್ಕೆ ಅಧೀನವಾಗಿರಬೇಕು. ಸಂಗೀತದಲ್ಲಿ ಸಮರಸವೆಂದರೆ ಇದೆ. ರಾಜ ನೀತಿ ಪ್ರಧಾನವೇ ಮೂಲಮಂತ್ರವಾಗಿ ಉಳ್ಳ ಕೆಲವು ರಾಷ್ಟ್ರಗಳಿಗೆ ಧರ್ಮಮುಂತಾದುವೆಲ್ಲ ಆ ಒಂದು ಆದರ್ಶಕ್ಕೆ ಅಧೀನವಾಗಬೇಕು. ಹಿಂದೂಗಳ ಪ್ರಧಾನ ಜೀವನೋದ್ದೇಶ ಧರ್ಮ ಮತ್ತು ವೈರಾಗ್ಯ. ಹಿಂದೂಗಳ ಮೂಲಮಂತ್ರವೇ, ಜಗತ್‌ಕ್ಷಣಿಕ ಭ್ರಮೆಮಾತ್ರ, ಮಿಥ್ಯ. ಉಳಿದ ಜ್ಞಾನವೆಲ್ಲ ಅದು ವಿಜ್ಞಾನವಾಗಲಿ ಸಾಹಿತ್ಯವಾಗಲಿ ಭೋಗವಾಗಲಿ ಅಧಿಕಾರವಾಗಲಿ ಐಶ್ವರ್ಯ ಯಶಸ್ ಕೀರ್ತಿಯಾಗಲೀ ಎಲ್ಲಾ ಆ ಒಂದು ಮೂಲಮಂತ್ರಕ್ಕೆ ಅಧೀನವಾಗಿರಬೇಕು. ಜನಾಂಗದ ಆಧ್ಯಾತ್ಮಿಕತೆ ಮತ್ತು ಪರಿಶುದ್ಧತೆಗೆ ಅವನು ಕಲಿತ ಪಾಶ್ಚಾತ್ಯವಿಜ್ಞಾನಶಾಸ್ತ್ರ, ಅವನ ಐಶ್ವರ್ಯ ಅಧಿಕಾರ ಯಶಸ್ಸು ಎಲ್ಲಾ ಅಧೀನವಾಗಿರಬೇಕು. ಇದೇ ನಿಜವಾದ ಹಿಂದೂ ಶೀಲದ ರಹಸ್ಯ. ಪೂರ್ವಾಚಾರ ಶೀಲದವರಲ್ಲಿ ಜನಾಂಗದ ಮೂಲ ಜೀವಾಳವಾದ ಆಧ್ಯಾತ್ಮಿಕತೆ ಇದೆ. ಪಾಶ್ಚಾತ್ಯ ಆದರ್ಶ ಪರವಶರಾದವರ ಕೈಯಲ್ಲಿ ಕೃತಕ ವಜ್ರಗಳಿವೆ, ನಮ್ಮ ಬಾಳಿಗೆ ಬೆಳಕನ್ನು ಕೊಡುವ ಆಧ್ಯಾತ್ಮವಿಲ್ಲ. ಇವರಿಬ್ಬರಲ್ಲಿ ಎಲ್ಲರೂ ಪೂರ್ವಾಚಾರಶೀಲರನ್ನು ಅನುಮೋದಿಸಃವಿರಿ ಎಂದು ನಿಸ್ಸಂಶಯವಾಗಿ ಹೇಳಬಲ್ಲೆ. ಅವನಿಗೆ ಸ್ವಲ್ಪ ಭರವಸೆ ಇದೆ. ಅವನ ಜೀವನದಲ್ಲಿ ಜನಾಂಗದ ಆದರ್ಶ ಹರಿಯುತ್ತಿದೆ, ಅವನ ಬಾಳಿಗೆ ಒಂದು ಆಸರೆ ಇದೆ. ಅವನು ಬದುಕುವನು. ಉಳಿದವರು ನಶಿಸುವರು. ವ್ಯಕ್ತಿಜೀವನದಲ್ಲಿ ಪ್ರಾಣಾಪಾಯವಾಗುವಂತಹ ಕೇಡು ದೇಶಕ್ಕೆ ಆಗಿಲ್ಲದೆ ಇರುವಾಗ, ಉಳಿದ ಗೌಣವ್ಯಾಧಿಗಳು

ಎಷ್ಟಿದ್ದರೂ ಚಿಂತೆಯಿಲ್ಲ. ಅವು ಅವನನ್ನು ಕೊಲ್ಲಲಾರವು. ಇದರಂತೆಯೇ ನಮ್ಮ ಜೀವನದ ಮೂಲ ಮಂತ್ರಕ್ಕೆ ಎಲ್ಲಿಯವರೆವಿಗೂ ಧಕ್ಕೆಬರುವುದಿಲ್ಲವೋ ಅಲ್ಲಿಯವರೆವಿಗೂ ಯಾವುದೂ ನಮ್ಮನ್ನು ನಾಶಮಾಡಲಾರದು. ಆದರೆ ಇದನ್ನು ಲಕ್ಷ್ಯದಲ್ಲಿಡಿ. ನೀವು ಆಧ್ಯಾತ್ಮವನ್ನು ತ್ಯಜಿಸಿ ಪಾಶ್ಚಾತ್ಯ ನಾಗರಿಕತೆಯ ಆಕರ್ಷಣೆಗೆ ಬಿದ್ದರೆ ಮೂರು ತಲೆಮಾರಿನ ಹೊತ್ತಿಗೆ ನಿಮ್ಮ ಜನಾಂಗ ನಾಶವಾಗುವುದು. ಇದರಿಂದ ರಾಷ್ಟ್ರದಸಾರ ನಾಶವಾಗುವುದು. ಯಾವ ತಳಹದಿಯ ಮೇಲೆ ನಿಮ್ಮ ಜನಾಂಗದ ಸೌಧವನ್ನು ಕಟ್ಟಿರುವಿರೋ ಅದೇ ಕುಸಿಯುವುದು. ಇದರ ಪರಿಣಾಮವೆ ಸರ್ವನಾಶ.

ನಮ್ಮ ಜನಾಂಗದ ಶ್ರೇಯಸ್ಸಿಗೆ ಇರುವುದೊಂದೇ ಮಾರ್ಗ: ಅದೇ ಪೂರ್ವಿಕರು ಇತ್ತ ಅಮೂಲ್ಯಧರ್ಮಧನವನ್ನು ರಕ್ಷಿಸುವುದು. ಒಂದು ದೇಶದ ಪ್ರಖ್ಯಾತ ರಾಜರು, ತಮ್ಮ ವಂಶದ ಮೂಲಪುರುಷರು ರಾಜರಲ್ಲ, ಕೋಟೆಕೊತ್ತಲುಗಳಲ್ಲಿ ವಾಸಿಸುತ್ತಿದ್ದ ಸುಲಿಯುವ ಪಾಳೆಯಗಾರರಲ್ಲ, ಕಾಡಿನಲ್ಲಿ ವಾಸಿಸುತ್ತಿದ್ದ ಅರ್ಧ ಬೆತ್ತಲೆ ಋಷಿಗಳು ಎಂದು ನಿಶ್ಕರ್ಷಿಸುವುದಕ್ಕೆ ಪ್ರಯತ್ನಿಸುವುದನ್ನು ಕೇಳಿರುವಿರಾ? ಈ ದೇಶದಲ್ಲಿಮಾತ್ರ ಅದು ಸಾಧ್ಯ. ಉಳಿದ ದೇಶದಲ್ಲಿ ಮಹಾತ್ಮರು ತಮ್ಮ ಪೂರ್ವಿಕರು ರಾಜರಾಗಿದ್ದರೆಂದು ತೋರಲೆತ್ನಿಸುವರು. ಆದರೆ ಇಲ್ಲಿ ಪ್ರಖ್ಯಾತ ರಾಜರು ತಮ್ಮ ಪೂರ್ವಿಕರು ಋಷಿಗಳಾಗಿದ್ದರೆಂದು ಹೇಳುವರು. ನಿಮಗೆ ಆಧ್ಯಾತ್ಮದಲ್ಲಿ ನಂಬಿಕೆ ಇರಲಿ ಇಲ್ಲದಿರಲಿ ಜನಾಂಗದ ಹಿತಕ್ಕಾಗಿ ಆಧ್ಯಾತ್ಮವನ್ನು ನಂಬಿ ಅದನ್ನು ರಕ್ಷಿಸಬೇಕು. ಅನಂತರ ಮತ್ತೊಂದು ಕೈಗಳಿಂದ ಇತರ ದೇಶಗಳಿಂದ ಏನನ್ನು ಬೇಕಾದರೂ ಪಡೆಯಿರಿ, ಆದರೆ ಅವುಗಳು ಯಾವಾಗಲೂ ಪ್ರಧಾನ ಆದರ್ಶಕ್ಕೆ ಅಧೀನವಾಗಿರಬೇಕು. ಇದರಿಂದ ಅದ್ಭುತವಾದ ಪ್ರಖ್ಯಾತ ಭವಿಷ್ಯಭಾರತ ಮೂಡುವುದು. ಹಿಂದಿಗಿಂತ ಹೆಚ್ಚು ಭವ್ಯವಾಗಿರುವುದು. ಅದು ಬರುತ್ತಿದೆ ಎಂದು ನಿಸ್ಸಂದೇಹವಾಗಿ ಹೇಳಬಲ್ಲೆ. ಹಿಂದಿನ ಋಷಿಗಳನ್ನು ಮೀರಿಸಿದ ಋಷಿಗಳು ಉದಿಸುವರು. ನಿಮ್ಮ ಪೂರ್ವಿಕರು ತೃಪ್ತರಾಗುವುದು ಮಾತ್ರವಲ್ಲ, ಇಷ್ಟು ಮಹಿಮಾವಂತರಾದ ಪ್ರಖ್ಯಾತರಾದ ತಮ್ಮ ವಂಶಜರನ್ನು ನೋಡಿದಾಗ ಹೆಮ್ಮೆಪಡುವರು. ಸಹೋದರರೇ ಎಲ್ಲ ಕಷ್ಟಪಟ್ಟು ದುಡಿಯೋಣ, ನಿದ್ರೆಗೆ ಸಮಯವಲ್ಲ ಇದು. ನಮ್ಮ ಇಂದಿನ ಕಾರ್ಯದ ಮೇಲೆ ಭವಿಷ್ಯಭಾರತ ನಿಂತಿದೆ. ನಮಗಾಗಿ ಆಕೆ ಕಾಯುತ್ತಿರುವಳು. ಆಕೆ ಕೇವಲ ನಿದ್ರಿಸುತ್ತಿರುವಳು ಅಷ್ಟೆ.

ಚರಿತ್ರಾರ್ಹರಾಷ್ಟ್ರದ ಅನಂತ ಭೂತಕಾಲ ಅದರಲ್ಲಿ ಸುಪ್ತವಾಗಿದೆ. ಕೋಟ್ಯಂತರ ಪೂರ್ವಿಕರು ನಮ್ಮನ್ನು ಇಂದು ನಾವು ಮಾಡುವ ಪ್ರತಿಯೊಂದು ಕೆಲಸವನ್ನು ನೋಡುವಂತಿದೆ. ಅದಕ್ಕೇ ಜಾಗ್ರತರಾಗಿರಿ. ಪ್ರತಿಯೊಬ್ಬ ಹಿಂದೂ ಮಗುವಿನ ಆದರ್ಶ ಯಾವುದು? ಬ್ರಾಹ್ಮಣ್ಯ ಕರ್ತವ್ಯವನ್ನು ಮನು ವಿವರಿಸುವಾಗ, "ಬ್ರಾಹ್ಮಣೋ ಜಾಯಮಾನೋ ಹಿ ಪೃಥಿವ್ಯಾಮಧಿಜಾಯತೆ। ಈಶ್ವರಃ ಸರ್ವಭೂತಾನಾಂ ಧರ್ಮಕೋಶಸ್ಯ ಗುಪ್ತಯೆ" ಎಂದು ಮುಕ್ತ ಕಂಠದಿಂದ ಸಾರುವುದನ್ನು ನೀವು ಓದಿಲ್ಲವೆ? ಧರ್ಮರಕ್ಷಣೆ ಭರತಖಂಡದಲ್ಲಿ ಹುಟ್ಟುವ ಪ್ರತಿಯೊಬ್ಬ ಸ್ತ್ರೀಪುರುಷ ಮಕ್ಕಳ ಕರ್ತವ್ಯ. ಕೇವಲ ಬ್ರಾಹ್ಮಣರ ಕರ್ತವ್ಯಮಾತ್ರವಲ್ಲ. ಜೀವನದ ಪ್ರತಿಯೊಂದು ಕರ್ತವ್ಯವೂ ಈ ಒಂದು ಮಹಾ ಸ್ವರಕ್ಕೆ ಅಧೀನವಾಗಿರಬೇಕು. ಸಂಗೀತದಲ್ಲಿ ಸಮರಸವೆಂದರೆ ಇದೆ. ರಾಜ ನೀತಿ ಪ್ರಧಾನವೇ ಮೂಲಮಂತ್ರವಾಗಿ ಉಳ್ಳ ಕೆಲವು ರಾಷ್ಟ್ರಗಳಿಗೆ ಧರ್ಮ ಮುಂತಾದುವೆಲ್ಲ ಆ ಒಂದು ಆದರ್ಶಕ್ಕೆ ಅಧೀನವಾಗಬೇಕು. ಹಿಂದೂಗಳ ಪ್ರಧಾನ ಜೀವನೋದ್ದೇಶ ಧರ್ಮ ಮತ್ತು ವೈರಾಗ್ಯ. ಹಿಂದೂಗಳ ಮೂಲಮಂತ್ರವೇ, ಜಗತ್‌ಕ್ಷಣಿಕ ಭ್ರಮೆಮಾತ್ರ, ಮಿಥ್ಯ. ಉಳಿದ ಜ್ಞಾನವೆಲ್ಲ ಅದು ವಿಜ್ಞಾನವಾಗಲಿ ಸಾಹಿತ್ಯವಾಗಲಿ ಭೋಗವಾಗಲಿ ಅಧಿಕಾರವಾಗಲಿ ಐಶ್ವರ್ಯ ಯಶಸ್ ಕೀರ್ತಿಯಾಗಲೀ ಎಲ್ಲಾ ಆ ಒಂದು ಮೂಲಮಂತ್ರಕ್ಕೆ ಅಧೀನವಾಗಿರಬೇಕು. ಜನಾಂಗದ ಆಧ್ಯಾತ್ಮಿಕತೆ ಮತ್ತು ಪರಿಶುದ್ಧತೆಗೆ ಅವನು ಕಲಿತ ಪಾಶ್ಚಾತ್ಯವಿಜ್ಞಾನಶಾಸ್ತ್ರ, ಅವನ ಐಶ್ವರ್ಯ ಅಧಿಕಾರ ಯಶಸ್ಸು ಎಲ್ಲಾ ಅಧೀನವಾಗಿರಬೇಕು. ಇದೇ ನಿಜವಾದ ಹಿಂದೂ ಶೀಲದ ರಹಸ್ಯ. ಪೂರ್ವಾಚಾರ ಶೀಲದವರಲ್ಲಿ ಜನಾಂಗದ ಮೂಲ ಜೀವಾಳವಾದ ಆಧ್ಯಾತ್ಮಿಕತೆ ಇದೆ. ಪಾಶ್ಚಾತ್ಯ ಆದರ್ಶ ಪರವಶರಾದವರ ಕೈಯಲ್ಲಿ ಕೃತಕ ವಜ್ರಗಳಿವೆ, ನಮ್ಮ ಬಾಳಿಗೆ ಬೆಳಕನ್ನು ಕೊಡುವ ಆಧ್ಯಾತ್ಮವಿಲ್ಲ. ಇವರಿಬ್ಬರಲ್ಲಿ ಎಲ್ಲರೂ ಪೂರ್ವಾಚಾರಶೀಲರನ್ನು ಅನುಮೋದಿಸುವಿರಿ ಎಂದು ನಿಸ್ಸಂಶಯವಾಗಿ ಹೇಳಬಲ್ಲೆ. ಅವನಿಗೆ ಸ್ವಲ್ಪ ಭರವಸೆ ಇದೆ. ಅವನ ಜೀವನದಲ್ಲಿ ಜನಾಂಗದ ಆದರ್ಶ ಹರಿಯುತ್ತಿದೆ, ಅವನ ಬಾಳಿಗೆ ಒಂದು ಆಸರೆ ಇದೆ. ಅವನು ಬದುಕುವನು. ಉಳಿದವರು ನಶಿಸುವರು. ವ್ಯಕ್ತಿಜೀವನದಲ್ಲಿ ಪ್ರಾಣಾಪಾಯವಾಗುವಂತಹ ಕೇಡು ದೇಶಕ್ಕೆ ಆಗಿಲ್ಲದೆ ಇರುವಾಗ, ಉಳಿದ ಗೌಣವ್ಯಾಧಿಗಳು

ಎಷ್ಟಿದ್ದರೂ ಚಿಂತೆಯಿಲ್ಲ. ಅವು ಅವನನ್ನು ಕೊಲ್ಲಲಾರವು. ಇದರಂತೆಯೇ ನಮ್ಮ ಜೀವನದ ಮೂಲ ಮಂತ್ರಕ್ಕೆ ಎಲ್ಲಿಯವರೆವಿಗೂ ಧಕ್ಕೆಬರುವುದಿಲ್ಲವೋ ಅಲ್ಲಿಯವರೆವಿಗೂ ಯಾವುದೂ ನಮ್ಮನ್ನು ನಾಶಮಾಡಲಾರದು. ಆದರೆ ಇದನ್ನು ಲಕ್ಷ್ಯದಲ್ಲಿಡಿ. ನೀವು ಆಧ್ಯಾತ್ಮವನ್ನು ತ್ಯಜಿಸಿ ಪಾಶ್ಚಾತ್ಯ ನಾಗರಿಕತೆಯ ಆಕರ್ಷಣೆಗೆ ಬಿದ್ದರೆ ಮೂರು ತಲೆಮಾರಿನ ಹೊತ್ತಿಗೆ ನಿಮ್ಮ ಜನಾಂಗ ನಾಶವಾಗುವುದು. ಇದರಿಂದ ರಾಷ್ಟ್ರದಸಾರ ನಾಶವಾಗುವುದು. ಯಾವ ತಳಹದಿಯ ಮೇಲೆ ನಿಮ್ಮ ಜನಾಂಗದ ಸೌಧವನ್ನು ಕಟ್ಟಿರುವಿರೋ ಅದೇ ಕುಸಿಯುವುದು. ಇದರ ಪರಿಣಾಮವೆ ಸರ್ವನಾಶ.

ನಮ್ಮ ಜನಾಂಗದ ಶ್ರೇಯಸ್ಸಿಗೆ ಇರುವುದೊಂದೇ ಮಾರ್ಗ: ಅದೇ ಪೂರ್ವೀಕರು ಇತ್ತ ಅಮೂಲ್ಯಧರ್ಮಧನವನ್ನು ರಕ್ಷಿಸುವುದು. ಒಂದು ದೇಶದ ಪ್ರಖ್ಯಾತ ರಾಜರು, ತಮ್ಮ ವಂಶದ ಮೂಲಪುರುಷರು ರಾಜರಲ್ಲ, ಕೋಟೆಕೊತ್ತಲುಗಳಲ್ಲಿ ವಾಸಿಸುತ್ತಿದ್ದ ಸುಲಿಯುವ ಪಾಳೆಯಗಾರರಲ್ಲ, ಕಾಡಿನಲ್ಲಿ ವಾಸಿಸುತ್ತಿದ್ದ ಅರ್ಧ ಬೆತ್ತಲೆ ಋಷಿಗಳು ಎಂದು ನಿಶ್ಕರ್ಷಿಸುವುದಕ್ಕೆ ಪ್ರಯತ್ನಿಸುವುದನ್ನು ಕೇಳಿರುವಿರಾ? ಈ ದೇಶದಲ್ಲಿಮಾತ್ರ ಅದು ಸಾಧ್ಯ. ಉಳಿದ ದೇಶದಲ್ಲಿ ಮಹಾತ್ಮರು ತಮ್ಮ ಪೂರ್ವಿಕರು ರಾಜರಾಗಿದ್ದರೆಂದು ತೋರಲೆತ್ನಿಸುವರು. ಆದರೆ ಇಲ್ಲಿ ಪ್ರಖ್ಯಾತ ರಾಜರು ತಮ್ಮ ಪೂರ್ವಿಕರು ಋಷಿಗಳಾಗಿದ್ದರೆಂದು ಹೇಳುವರು. ನಿಮಗೆ ಆಧ್ಯಾತ್ಮದಲ್ಲಿ ನಂಬಿಕೆ ಇರಲಿ ಇಲ್ಲದಿರಲಿ ಜನಾಂಗದ ಹಿತಕ್ಕಾಗಿ ಆಧ್ಯಾತ್ಮವನ್ನು ನಂಬಿ ಅದನ್ನು ರಕ್ಷಿಸಬೇಕು. ಅನಂತರ ಮತ್ತೊಂದು ಕೈಗಳಿಂದ ಇತರ ದೇಶಗಳಿಂದ ಏನನ್ನು ಬೇಕಾದರೂ ಪಡೆಯಿರಿ, ಆದರೆ ಅವುಗಳು ಯಾವಾಗಲೂ ಪ್ರಧಾನ ಆದರ್ಶಕ್ಕೆ ಅಧೀನವಾಗಿರಬೇಕು. ಇದರಿಂದ ಅದ್ಭುತವಾದ ಪ್ರಖ್ಯಾತ ಭವಿಷ್ಯಭಾರತ ಮೂಡುವುದು. ಹಿಂದಿಗಿಂತ ಹೆಚ್ಚು ಭವ್ಯವಾಗಿರುವುದು. ಅದು ಬರುತ್ತಿದೆ ಎಂದು ನಿಸ್ಸಂದೇಹವಾಗಿ ಹೇಳಬಲ್ಲೆ. ಹಿಂದಿನ ಋಷಿಗಳನ್ನು ಮೀರಿಸಿದ ಋಷಿಗಳು ಉದಿಸುವರು. ನಿಮ್ಮ ಪೂರ್ವಿಕರು ತೃಪ್ತರಾಗುವುದು ಮಾತ್ರವಲ್ಲ, ಇಷ್ಟು ಮಹಿಮಾವಂತರಾದ ಪ್ರಖ್ಯಾತರಾದ ತಮ್ಮ ವಂಶಜರನ್ನು ನೋಡಿದಾಗ ಹೆಮ್ಮೆಪಡುವರು. ಸಹೋದರರೇ ಎಲ್ಲ ಕಷ್ಟಪಟ್ಟು ದುಡಿಯೋಣ, ನಿದ್ರೆಗೆ ಸಮಯವಲ್ಲ ಇದು. ನಮ್ಮ ಇಂದಿನ ಕಾರ್ಯದ ಮೇಲೆ ಭವಿಷ್ಯಭಾರತ ನಿಂತಿದೆ. ನಮಗಾಗಿ ಆಕೆ ಕಾಯುತ್ತಿರುವಳು. ಆಕೆ ಕೇವಲ ನಿದ್ರಿಸುತ್ತಿರುವಳು ಅಷ್ಟೆ.

ಜಾಗ್ರತರಾಗಿ, ಏಳಿ, ಎದ್ದು ನೋಡಿ, ಹಿಂದಿಗಿಂತ ಪ್ರಖ್ಯಾತಳಾಗಿ ಬಲಿಷ್ಠಳಾಗಿ ನಮ್ಮ ಮಾತೃಭೂಮಿ ಶೋಭಾಯಮಾನವಾಗಿರುವ ಸನಾತನ ಸಿಂಹಾಸನದ ಮೇಲೆ ಮಂಡಿಸಿರುವುದನ್ನು ನೋಡಿ. ನಮ್ಮ ಮಾತೃಭೂಮಿಯಲ್ಲಿ ಈಶ್ವರನ ಭಾವನೆ ಸ್ಪಷ್ಟವಾಗಿದ್ದಷ್ಟು ಬೇರೆ ದೇಶದಲ್ಲಿ ಇರಲಿಲ್ಲ. ಇಂತಹ ಭಾವನೆ ಅನ್ಯದೇಶಗಳಲ್ಲಿ ಇರಲೇ ಇಲ್ಲ. ನಿಮಗೆ ಇದನ್ನು ಕೇಳಿ ಆಶ್ಚರ್ಯವಾಗಬಹುದು. ಆದರೆ ನಮ್ಮ ಶಾಸ್ತ್ರದಲ್ಲಿ ಇರುವಂತಹ ಭಾವನೆಯನ್ನು ಇತರ ಧರ್ಮಶಾಸ್ತ್ರದಲ್ಲಿ ಎಲ್ಲಿಯಾದರೂ ತೋರಿ ನೋಡೋಣ! ಅವರಲ್ಲಿ ಕೇವಲ ಒಂದು ಕೋಮಿನ ದೇವರುಗಳಿವೆ. ಯಹೂದ್ಯರ ದೇವರು, ಅರಬ್ಬರ ದೇವರು ಇಂತಹ ಭಾವನೆಗಳಿವೆ. ಆ ದೇವರು ಇತರ ಕೋಮಿನ ದೇವರೊಂದಿಗೆ ಹೋರಾಡುತ್ತಿವೆ. ಆದರೆ ಪರಮದಯಾಳು, ತಂದೆ, ತಾಯಿ, ಸಖ, ನಮ್ಮ ಸಖರ ಸಖ, ನಮ್ಮ ಪರಮಾತ್ಮನಾದ ಈಶ್ವರನ ಭಾವನೆ ಇಲ್ಲಿ ಮಾತ್ರ ಸಾಧ್ಯ. ಯಾರು ಶೈವರ ಶಿವನೊ, ವೈಷ್ಣವರ ವಿಷ್ಣುವೊ, ಮೀಮಾಂಸಕರ ಕರ್ಮವೊ, ಬೌದ್ಧರ ಬುದ್ಧನೊ, ಜೈನರ ಜಿನನೊ, ಕ್ರೈಸ್ತರ ಕ್ರಿಸ್ತನೋ, ಯಹೂದ್ಯರ ಜಿಹೋವನೊ, ಮಹಮ್ಮದೀಯರ ಅಲ್ಲನೊ, ಯಾರು ಪ್ರತಿಯೊಂದು ಧರ್ಮದ ದೇವರಾಗಿರುವನೋ, ವೇದಾಂತಿಗಳ ಬ್ರಹ್ಮನಾಗಿರುವನೊ ಅವನು ಸರ್ವವ್ಯಾಪಿಯಾಗಿರುವನು. ಅವನ ಮಹಾತ್ಮೆಯನ್ನು ಈ ದೇಶ ಮಾತ್ರ ತಿಳಿದಿರುವುದು. ಈ ಆದರ್ಶವನ್ನು ಅನುಷ್ಠಾನಕ್ಕೆ ತರುವುದಕ್ಕೆ ಅವನು ನಮ್ಮನ್ನು ಆಶೀರ್ವದಿಸಲಿ, ಸಹಾಯ ನೀಡಲಿ, ಶಕ್ತಿ ನೀಡಲಿ.

ಓಂ ಸಹ ನಾವವತು ಸಹ ನೌ ಭುನಕ್ತು ಸಹ ವೀರ್ಯಂ ಕರವಾವಹೈ
ತೇಜಸ್ವಿನಾವಧೀತಮಸ್ತು ಮಾ ವಿದ್ವಿಷಾವಹೈ ॥

(ನಾವು ಯಾವುದನ್ನು ಕೇಳಿರುವೆವೊ, ಓದಿರುವೆವೊ ಅದು ನಮ್ಮ ಆಹಾರವಾಗಲಿ, ಅದು ನಮ್ಮಲ್ಲಿ ಶಕ್ತಿಯಾಗಲಿ ಮತ್ತೊಬ್ಬರ ಸಹಾಯಕ್ಕೆ ಪೌರುಷವಾಗಲಿ, ಗುರುಶಿಷ್ಯರಲ್ಲಿ ದ್ವೇಷವಿಲ್ಲದಿರಲಿ.)

ಶಾಂತಿಃ ಶಾಂತಿಃ ಶಾಂತಿಃ ಹರಿಃ ಓಂ.

# ಪರಮಕುಡಿ ಅಭಿನಂದನೆಗೆ ಉತ್ತರ

ನೀವು ಇಷ್ಟು ಸ್ನೇಹದಿಂದ ಹೃತ್ಪೂರ್ವಕ ಇತ್ತ ಸ್ವಾಗತಕ್ಕೆ ತಕ್ಕ ಧನ್ಯವಾದ ಅರ್ಪಿಸಲು ಅಸಾಧ್ಯ. ಆದರೆ ಏನನ್ನಾದರೂ ಹೇಳಬೇಕಾದರೆ ಹೀಗೆನ್ನುತ್ತೇನೆ. ಅದೇ ನನ್ನ ದೇಶಬಾಂಧವರಮೇಲೆ ಮತ್ತು ನನ್ನ ದೇಶದ ಮೇಲೆ ಇರುವ ಪ್ರೀತಿ. ಜನರು ನನ್ನನ್ನು ಹೃತ್ಪೂರ್ವಕ ಸ್ವಾಗತಿಸಲಿ ಅಥವಾ ತಿರಸ್ಕಾರದಿಂದ ನೋಡಲಿ, ಚಿಂತೆಯಿಲ್ಲ. ಶ್ರೀ ಕೃಷ್ಣ ಗೀತೆಯಲ್ಲಿ ಕರ್ಮಕ್ಕೋಸ್ಕರ ಕರ್ಮಮಾಡಬೇಕು, ಪ್ರೀತಿಗೋಸುಗ ಪ್ರೀತಿಸಬೇಕು ಎನ್ನುವುದನ್ನು ಓದುವೆವು. ನಾನು ಪಾಶ್ಚಾತ್ಯ ದೇಶದಲ್ಲಿ ಮಾಡಿದ ಕೆಲಸ ಅಲ್ಪ. ನಾನು ಮಾಡಿರುವುದಕ್ಕಿಂತ ನೂರರಷ್ಟು ಮಾಡಲಾರದವರು ಯಾರೂ ಇಲ್ಲ. ಮಹಾಋಷಿಗಳು ವಿಭೂತಿಗಳು ಜನ್ಮವೆತ್ತಿ ಭರತ ಖಂಡಕ್ಕೆ ಸೇರಿದ, ಅದರ ಕಾರಣಾಂತರಗಳಿಂದ ಬಂದ ಆಧ್ಯಾತ್ಮ ಮತ್ತು ತ್ಯಾಗಭಾವನೆಯನ್ನು ಬೋಧಿಸುವುದಕ್ಕಾಗಿ ಭರತಖಂಡದಿಂದ ಪ್ರಪಂಚದ ಮೂಲೆಮೂಲೆಗೆ ಹೋಗುವಂತಹ ಒಂದು ಸಮಯವನ್ನು ನಾನು ಇದಿರು ನೋಡುತ್ತಿರುವೆನು. ಜನಾಂಗದ ಜೀವನದಲ್ಲಿ ಒನ್ನೊಂದು ಸಮಯ ಬರುವುದು. ಇಡೀ ದೇಶಕ್ಕೆ ಬಾಳೆ ಬೇಜಾರಾದಂತೆ ತೋರುವುದು, ತಮ್ಮ ಯೋಜನೆಗಳಾವುವೂ ಪ್ರಯೋಜನಕ್ಕೆ ಬರದಂತೆ ತೋರುವುದು, ಸಂಪ್ರದಾಯಬದ್ಧ ಸಂಸ್ಥೆಗಳು ಕುಸಿದುಬಿದ್ದಂತೆ ತೋರುವುದು, ಅವರ ಭವಿಷ್ಯವೆಲ್ಲ ಮಣ್ಣುಪಾಲಾಗಿ ಅನಾಯಕವಾದಂತೆ ಕಾಣುವ ಒಂದು ಸಮಯ ಬರುವುದು. ಸಮಾಜ ಜೀವನಕ್ಕೆ ಎರಡು ತಳಹದಿಯನ್ನು ಜನರು ಪ್ರಯತ್ನಿಸಿರುವರು. ಒಂದು ಆಧ್ಯಾತ್ಮದ ಮೇಲೆ ಮತ್ತೊಂದು ಸಮಾಜದ ಅವಶ್ಯಕತೆಯ ಮೇಲೆ. ಒಂದು ಧರ್ಮದ ಮೇಲೆ ಇತ್ತು ಮತ್ತೊಂದು ಅರ್ಥದಮೇಲೆ ಇತ್ತು. ಒಂದು ಅತೀಂದ್ರಿಯ ದರ್ಶನದಮೇಲೆ ಮತ್ತೊಂದು ಇಂದ್ರಿಯ ಸತ್ಯದಮೇಲೆ, ಒಂದು ಈ ಕ್ಷುದ್ರ ಪ್ರಪಂಚವನ್ನು ಮೀರಿ ನೋಡುವುದು, ಮತ್ತೊಂದರ ಸಹಾಯವಿಲ್ಲದೆ ಅಲ್ಲಿ ಜೀವನವನ್ನು ಪ್ರಾರಂಭಿಸುವ ಧೈರ್ಯ ಅದಕ್ಕೆ ಇದೆ. ಮತ್ತೊಂದು ಪ್ರಪಂಚದ ಯಥಾರ್ಥ ವಸ್ತುಗಳಮೇಲೆ ನಿಲ್ಲುವುದು. ಅಲ್ಲಿ ಭದ್ರವಾಗಿರುವೆ ಎಂದು ಭಾವಿಸುವುದು. ವಿಚಿತ್ರವಾಗಿ ಕೆಲವು ವೇಳೆ ಆಧ್ಯಾತ್ಮ ಮುಖ್ಯವಾದಂತೆ ತೋರುವುದು, ಮತ್ತೆ ಕೆಲವು ವೇಳೆ ಪ್ರಾಪಂಚಿಕ ದಷ್ಟಿ ಮುಖ್ಯವಾದಂತೆ ತೋರು

ವುದು, ಅಲೆಯಂತೆ ಒಂದಾದ ಮೇಲೊಂದು ಬರುವುದು. ಒಂದೇ ದೇಶ ದಲ್ಲಿ ಎರಡು ಬಗೆ ಅಲೆಗಳಿರುತ್ತವೆ. ಒಂದು ಕಾಲದಲ್ಲಿ ಜಡವಾದ ಅತಿ ಪ್ರಾಮುಖ್ಯವಾಗಿರುವುದು. ಅಭಿವೃದ್ಧಿ ಹೆಚ್ಚು ಸುಖ ಮತ್ತು ಆಹಾರ ಕೊಡುವ ವಿದ್ಯಾಭ್ಯಾಸ ಇವೇ ಪ್ರಥಮದಲ್ಲಿ ಅತಿ ಪ್ರಾಮುಖ್ಯವಾಗಿದ್ದು ಕ್ರಮೇಣ ಅವನತಿಗೆ ಇಳಿಯುವುದು. ಅದರ ಅಭಿವೃದ್ಧಿಯ ಜೊತೆಯಲ್ಲೆ ಮಾನವ ಜನಾಂಗದಲ್ಲಿ ಸುಪ್ತವಾಗಿರುವ ದ್ವೇಷ ಅಸೂಯೆಯೆಲ್ಲ ಹೆಚ್ಚು ವ್ಯಕ್ತವಾಗುತ್ತ ಬರುವುದು. ಪೋಟಾಪೋಟಿ ನಿರ್ದಯ ಕ್ರೌರ್ಯ ಇವೇ ಮೂಲ ಮಂತ್ರವಾಗಿರುವುದು. ಒಂದು ಆಂಗ್ಲೇಯ ಗಾದೆಯನ್ನು ಹೇಳ ಬೇಕಾದರೆ, "ಪ್ರತಿಯೊಬ್ಬರೂ ಅವರವರನ್ನು ನೋಡಿಕೊಳ್ಳಲಿ, ಶೈತಾನ ಹಿಂದೆ ಬಿದ್ದವನನ್ನು ತೆಗೆದುಕೊಂಡು ಹೋಗಲಿ" ಇದೇ ಜನಾಂಗದ ಪಲ್ಲವಿ ಯಾಗುವುದು. ಆಗ ಜೀವನಕ್ರಮವೇ ಪ್ರಯೋಜನವಿಲ್ಲವೆಂದು ಕ್ರಮೇಣ ಅರಿವಾಗುವುದು. ಕುಸಿಯುತ್ತಿರುವ ಜನರಿಗೆ ಆಧ್ಯಾತ್ಮ ಸಹಾಯಕ್ಕೆ ಬರದೇ ಇದ್ದರೆ ಪ್ರಪಂಚ ನಾಶವಾಗುವುದು. ಆಗ ಪ್ರಪಂಚಕ್ಕೆ ಭರವಸೆ ದೊರಕುವುದು, ಹೊಸ ಕಟ್ಟಡಕ್ಕೆ ತಳಪಾಯ ಸಿಕ್ಕುವುದು. ಮತ್ತೊಂದು ಧಾರ್ಮಿಕ ಅಲೆ ಏಳುವುದು, ಅದೂ ಕಾಲಕ್ರಮೇಣ ನಾಶವಾಗುವುದು. ಆಧ್ಯಾತ್ಮದೊಂದಿಗೆ ಪ್ರಪಂಚದಲ್ಲಿ ಅತಿ ಅಮೂಲ್ಯ ಬಾಹ್ಯಶಕ್ತಿಯನ್ನು ಪಡೆದ ಕೆಲವು ವ್ಯಕ್ತಿಗಳು ಪ್ರಖ್ಯಾತಿಗೆ ಬರುವರು. ತಕ್ಷಣ ಪ್ರತಿಫಲವೇ ಜಡವಾದದ ಕಡೆ ಹಲವರು ವಾಲುವರು, ಹಲವು ಬಗೆ ಶಕ್ತಿ ತಮಗೇ ಪ್ರತ್ಯೇಕವಾಗಿದೆ ಎಂಬ ಹಲವರು ಬರುವರು. ಕಾಲಕ್ರಮೇಣ ಆ ಜನಾಂ ಗದ ಆಧ್ಯಾತ್ಮ ಶಕ್ತಿ ಮಾತ್ರವಲ್ಲ ಪ್ರಪಂಚದ ಐಶ್ವರ್ಯಭೋಗಗಳೆಲ್ಲ ಹಕ್ಕುಗ ಳೆಲ್ಲ ಕೆಲವು ವ್ಯಕ್ತಿಗಳಲ್ಲಿ ಅಡಗುವುವು. ಇಂತಹ ಕೆಲವು ವ್ಯಕ್ತಿಗಳು ಜನ ಸಮೂಹದ ಮೇಲೆ ನಿಂತು ದಬ್ಬಾಳಿಕೆ ನಡೆಸಲು ಯತ್ನಿಸುವರು. ಆಗ ಸಮಾಜ ತನ್ನನ್ನು ರಕ್ಷಿಸಿಕೊಳ್ಳಬೇಕಾಗುವುದು. ಜಡವಾದ ಅದರ ರಕ್ಷ ಣೆಗೆ ಬರುವುದು. ನಮ್ಮ ಮಾತೃಭೂಮಿ ಭರತಖಂಡವನ್ನು ನೋಡಿದರೆ ಈಗ ಹೀಗೆ ಆಗುತ್ತಿರುವುದು ಕಾಣುವುದು. ವೇದಾಂತ ಬೋಧನೆಗೆ ಪಾಶ್ಚಾತ್ಯ ದೇಶಗಳಿಗೆ ಹೋದವನೊಬ್ಬನನ್ನು ನೀವಿಂದು ಸ್ವಾಗತಿಸುವು ದಕ್ಕೆ, ಪಾಶ್ಚಾತ್ಯದೇಶ ಇದಕ್ಕೆ ಬಾಗಿಲನ್ನು ತೆರೆಯದಿದ್ದರೆ ಸಾಧ್ಯವಾಗುತ್ತಿ ರಲಿಲ್ಲ. ಜಡವಾದ ಒಂದು ರೀತಿಯಿಂದ ಭರತಖಂಡದ ಸಹಾಯಕ್ಕೆ ಬಂದಿದೆ. ವರ್ಣಗಳ ಪ್ರತ್ಯೇಕ ಹಕ್ಕುಬಾಧ್ಯತೆಗಳನ್ನು ಅಲ್ಲಗಳೆದು ಜೀವನ

ವನ್ನು ಎಲ್ಲರಿಗೂ ತೆರೆದಿದೆ. ಎಲ್ಲೋ ಕೆಲವರಲ್ಲಿ ಅನರ್ಘ್ಯತತ್ತ್ವರತ್ನಗಳು ಉಳಿದಿದ್ದುವು. ಅವರು ಕೂಡ ಅದರ ಉಪಯೋಗವನ್ನು ಮರೆತಿದ್ದರು. ಅದನ್ನು ಇಂದು ಎಲ್ಲರೂ ಚರ್ಚಿಸಬಲ್ಲ ವಿಷಯವನ್ನಾಗಿಮಾಡಿದೆ. ಅರ್ಥ ನಾಶವಾಯಿತು. ಉಳಿದರ್ಥ ತಮಗೆ ಪ್ರಯೋಜನವಿಲ್ಲದೆ ಇದ್ದರೂ ಇತರ ರಿಗೆ ಅದನ್ನು ಕೊಡದೆ ಗೊಂತಿನಲ್ಲಿರುವ ನಾಯಿಯಂತಹ ಜನರ ಕೈಲಿರುವುದು. ಮತ್ತೊಂದು ಕಡೆ ನಾವು ರಾಜಕೀಯ ಸಂಸ್ಥೆಗೆ ಇಂದು ಹೋರಾಡುತ್ತಿರುವೆವು. ಅವು ಪಾಶ್ಚಾತ್ಯ ದೇಶಗಳಲ್ಲಿ ಹಿಂದಿನಿಂದಲೂ ಜಾರಿಯಲ್ಲಿವೆ. ಅವುಗಳಲ್ಲಿ ಎಷ್ಟೋ ಕುಂದುಕೊರತೆಗಳು ಕಾಣುತ್ತಿವೆ. ರಾಜಕೀಯಕ್ಕೆ ಸಂಬಂಧಪಟ್ಟ ಸಂಸ್ಥೆ ರೀತಿನೀತಿಗಳೆಲ್ಲ ಪ್ರಯೋಜನವಿಲ್ಲ ವೆಂದು ಸಾರಿ ತ್ಯಜಿಸಿದೆ. ಯೂರೋಪ್ ಅಶಾಂತವಾಗಿ ಈಗ ಏನು ಮಾಡ ಬೇಕು, ಯಾವ ಪ್ರಣಾಳಿಯಲ್ಲಿ ಶರಣಾಗಬೇಕು ಎಂದು ಪರಿತಪಿಸುತ್ತಿದೆ. ಐಶ್ವರ್ಯ ಸಂಪತ್ತಿನ ಅತ್ಯಾಚಾರ ಅಸಹ್ಯಕರ. ಕೆಲಸಮಾಡದ ಕೆಲವರ ಕೈಲಿ ದೇಶದ ಐಶ್ವರ್ಯ ಅಧಿಕಾರವೆಲ್ಲ ಏಕಾಗ್ರವಾಗುವುದು. ಅವರೇ ಕೆಲಸ ಮಾಡುವ ಲಕ್ಷಾಂತರ ಮಾನವರ ಮೇಲೆ ತಮ್ಮ ಅಧಿಕಾರವನ್ನು ಚಲಾ ಯಿಸುವರು. ಈ ಅಧಿಕಾರ ಬಲದಿಂದ ಪ್ರಪಂಚವನ್ನು ರಕ್ತದಲ್ಲಿ ತೋಯಿ ಸಬಹುದು. ಧರ್ಮ ಮುಂತಾದುವೆಲ್ಲ ಅವರ ಅಧೀನ. ಅವರೇ ಆಳುವವರು ಅವರೇ ಸರ್ವಾಧಿಕಾರಿಗಳು. ಪಾಶ್ಚಾತ್ಯ ಪ್ರಪಂಚವನ್ನು ಕೆಲವು ಶ್ರೀಮಂತ ವರ್ತಕರು ಆಳುವರು. ಅವರ ಸಂವಿಧಾನಬದ್ಧ ಶಾಸನ, ಸ್ವಾತಂತ್ರ್ಯ ಪಾರ್ಲಿಮೆಂಟ್ ಮುಂತಾದುವೆಲ್ಲ ತಮಾಷೆ. ಪಾಶ್ಚಾತ್ಯರು ವರ್ತಕರ ದಬ್ಬಾಳಿಕೆಯಲ್ಲಿ ನರಳುತ್ತಿರುವರು, ಪೌರಾತ್ಯರು ಪುರೋಹಿತರ ದಬ್ಬಾಳಿಕೆಯಲ್ಲಿ ನರಳುತ್ತಿರುವರು. ಪ್ರತಿಯೊಬ್ಬರೂ ಮತ್ತೊಬ್ಬರನ್ನು ತಡೆಯಬೇಕಾಗಿದೆ. ಇದರಲ್ಲಿ ಯಾರೋ ಒಬ್ಬರೇ ಪ್ರಪಂಚಕ್ಕೆ ಸಹಾಯ ಮಾಡುತ್ತಾರೆ ಎಂದು ಭಾವಿಸಬೇಡಿ. ನಿಷ್ಪಕ್ಷಪಾತ ಈಶ್ವರ ಪ್ರಪಂಚ ದಲ್ಲಿ ಪ್ರತಿಯೊಂದನ್ನು ಸರಿಸಮನಾಗಿ ಸೃಷ್ಟಿಸಿರುವನು. ಅತಿಹೀನ ಆಸುರೀ ವೃತ್ತಿಯವನಲ್ಲಿಯೂ, ಒಬ್ಬ ಮಹಾತ್ಮನಲ್ಲಿಯೂ ಇಲ್ಲದ ಕೆಲವು ಸುಗುಣಗಳಿರುತ್ತವೆ. ಅತಿ ಕ್ಷುದ್ರಕೀಟದಲ್ಲಿ ಅತ್ಯುತ್ತಮ ಮಾನವನಲ್ಲಿ ಇಲ್ಲದ ಸುಗುಣವಿರಬಹುದು. ಒಬ್ಬ ಕೂಲಿ ತೆಗೆದುಕೊಳ್ಳಿ. ಅವನ ಪಾಲಿಗೆ ದೊರುಕುವ ಸುಖ ಅತ್ಯಲ್ಪ, ಅವನಿಗೆ ನಿಮ್ಮಷ್ಟು ಬಧ್ಧಿಯಿಲ್ಲ, ವೇದಾಂತ ತಿಳಿದುಕೊಳ್ಳಲಾರ. ಆದರೆ ನಿಮ್ಮ ದೇಹದೊಂದಿಗೆ ಅವನ ದೇಹವನ್ನು

ಹೋಲಿಸಿ ನೋಡಿ. ನಿಮ್ಮ ದೇಹದಷ್ಟು ಸೂಕ್ಷ್ಮವಲ್ಲ ಅವನ ದೇಹ; ಕಷ್ಟವನ್ನು ಸಹಿಸಬಲ್ಲನೆಂಬುದು ಕಾಣುವುದು. ಅವನಿಗೆ ಗಾಯವಾದರೆ ನಿಮ್ಮ ಗಾಯಕ್ಕಿಂತ ಬೇಗ ವಾಸಿಯಾಗುವುದು. ಅವನ ಆನಂದ ಪಂಚೇಂದ್ರಿಯಗಳಲ್ಲಿದೆ. ಅವನು ಅಲ್ಲಿ ಆನಂದಿಸುವನು. ಅವನ ಜೀವನದಲ್ಲೂ ಒಂದು ಸಮತ್ವವಿದೆ. ಒಬ್ಬ ಜಡ ಪ್ರಪಂಚದ ಕಾರ್ಯಕ್ಷೇತ್ರದಲ್ಲಿರಲಿ, ಬುದ್ಧಿಗೆ ಸಂಬಂಧಪಟ್ಟಿರಲಿ, ಆಧ್ಯಾತ್ಮಕ್ಕೆ ಸಂಬಂಧಪಟ್ಟಿರಲಿ, ದೇವರು ಪಕ್ಷಪಾತವಿಲ್ಲದೆ ಒಂದೇ ಬಗೆಯ ತೃಪ್ತಿಯನ್ನು ಕೊಟ್ಟಿರುವನು. ಆದಕಾರಣವೇ ನಾವು ಪ್ರಪಂಚವನ್ನು ಉದ್ಧಾರಮಾಡುವವರು ಎಂದು ತಿಳಿಯಬೇಕಾಗಿಲ್ಲ. ನಾವು ಅನ್ಯರಿಗೆ ಎಷ್ಟೋ ವಿಷಯ ಹೇಳಿಕೊಡಬಹುದು, ಅನ್ಯರಿಂದ ಎಷ್ಟೋ ವಿಷಯ ಕಲಿಯಬಹುದು. ಆಯಾ ದೇಶಕ್ಕೆ ಏನು ಆವಶ್ಯಕವೊ ಅದನ್ನು ಮಾತ್ರ ನಾವು ಕಲಿಸಬಹುದು. ಆಧ್ಯಾತ್ಮಿಕ ತಳಹದಿ ಇಲ್ಲದೆ ಇದ್ದರೆ ಪಾಶ್ಚಾತ್ಯ ಸಂಸ್ಕೃತಿ ಇನ್ನು ಐವತ್ತು ವರ್ಷಗಳಲ್ಲಿ ನಾಶವಾಗುವುದು. ಕೇವಲ ಕತ್ತಿಯ ಬಲದಿಂದ ಜನಾಂಗವನ್ನು ಆಳಿ ಪ್ರಯೋಜನವಿಲ್ಲ. ಯಾವ ಮೂಲದಿಂದ ಒತ್ತಾಯದ ಸರ್ಕಾರ ಬಂದಿತೋ ಅದೇ ಕುಲಗೆಟ್ಟು ನಾಶವಾಗುವುದು. ಬಾಹ್ಯಶಕ್ತಿಯ ಆವಿರ್ಭಾವನೆಯ ಮೂಲವಾದ ಯುರೋಪು, ಆಧ್ಯಾತ್ಮವನ್ನು ತನ್ನ ಜೀವನದ ಮುಖ್ಯ ಆಧಾರವಾಗಿ ಮಾಡಿಕೊಳ್ಳದೆಹೋದರೆ ಇನ್ನು ಐವತ್ತು ವರ್ಷಗಳಲ್ಲಿ ನಿರ್ನಾಮವಾಗುವುದು. ಯುರೋಪನ್ನು ಸಂರಕ್ಷಿಸುವುದೇ ಉಪನಿಷತ್ತಿನ ಧರ್ಮ. ಭಿನ್ನ ಭಿನ್ನ ಪಂಗಡದ ತತ್ತ್ವಶಾಸ್ತ್ರದಲ್ಲೆಲ್ಲಾ ಒಂದು ಸರ್ವಸಾಮಾನ್ಯ ಸಿದ್ಧಾಂತವಿದೆ. ಅದೇ ಮಾನವನ ಆತ್ಮನಲ್ಲಿ ನಂಬಿಕೆ. ಇದು ಎಲ್ಲಾ ಪಂಗಡಕ್ಕೂ ಸಾಮಾನ್ಯಭಾವನೆ. ಅದು ಪ್ರಪಂಚದ ಸ್ವಭಾವವನ್ನೇ ಬದಲಾಯಿಸಬಲ್ಲದು. ಹಿಂದೂಗಳಾಗಲಿ ಜೈನರಾಗಲಿ ಬೌದ್ಧರಾಗಲಿ ಎಲ್ಲರೂ ಎಲ್ಲಾ ಶಕ್ತಿಗೂ ಮೂಲವಾದ ಒಂದು ಆಧ್ಯಾತ್ಮದಲ್ಲಿ ನಂಬುವರು. ಭರತಖಂಡದ ಯಾವ ತತ್ತ್ವವಾಗಲೀ ದರ್ಶನವಾಗಲೀ ಯಾವುದೂ, ಶಕ್ತಿ ಪವಿತ್ರತೆ ಪೂರ್ಣತೆಯನ್ನು ಹೊರಗಿನಿಂದ ಸ್ವೀಕರಿಸುತ್ತೇವೆ ಎಂದು ಸಾರುವುದಿಲ್ಲ. ಅವೆಲ್ಲ ನಿಮ್ಮ ಸ್ವಭಾವ, ಆಜನ್ಮಸಿದ್ಧ ಹಕ್ಕು ಎಂದು ಘೋಷಿಸುವುವು. ಅಜ್ಞಾನ ಒಂದು ಭ್ರಮೆ. ಅದರಲ್ಲಿ ನಿಮ್ಮ ನಿಜವಾದ ಸ್ವಭಾವ ಮುಚ್ಚಿ ಹೋಗಿದೆ. ಆದರೆ ನಿಮ್ಮ ನೈಜಸ್ವಭಾವ ಆಗಲೇ ಪೂರ್ಣವಾಗಿದೆ, ಶಕ್ತಿಯಿಂದ ತುಂಬಿದೆ. ನಿಮ್ಮನ್ನು ನೀವು ನಿಗ್ರಹಿಸುವುದಕ್ಕೆ ಯಾವ

ಸಹಾಯವೂ ಬೇಕಿಲ್ಲ. ನೀವಾಗಲೇ ಅದನ್ನು ಆಳುತ್ತಿರುವಿರಿ. ಒಂದು ವ್ಯತ್ಯಾಸವೆ ಅದನ್ನು ತಿಳಿಯುವುದು ಅಥವಾ ತಿಳಿಯದೇ ಇರುವುದು. ಈ ತೊಂದರೆಯನ್ನೆಲ್ಲಾ ಅವಿದ್ಯೆ ಎಂಬ ಒಂದು ಪದದಲ್ಲಿ ವಿವರಿಸುವರು. ದೇವರಿಗೂ ಮನುಷ್ಯನಿಗೂ ವ್ಯತ್ಯಾಸವನ್ನು ತರುವುದಾವುದು, ಪಾಪಿಗೂ ಯತಿಗೂ ಭಿನ್ನತೆಯನ್ನುಂಟುಮಾಡುವುದಾವುದು? ಅಜ್ಞಾನ ಒಂದೆ. ಅತಿ ಪವಿತ್ರಾತ್ಮ ಮಾನವನಿಗೂ ನಿಮ್ಮ ಪಾದದಡಿ ಹರಿಯುತ್ತಿರುವ ಕೀಟಕ್ಕೂ ವ್ಯತ್ಯಾಸವೇನು? ಅಜ್ಞಾನ. ಅದೊಂದೇ ವ್ಯತ್ಯಾಸಕ್ಕೆ ಕಾರಣ. ಆ ಹರಿಯುತ್ತಿರುವ ಕ್ಷುದ್ರಕೀಟದ ಅಂತರಾಳದಲ್ಲಿ ಸಾಕ್ಷಾತ್ ಭಗವಂತನ ಅನಂತ ಶಕ್ತಿ ಜ್ಞಾನ ಪವಿತ್ರತೆ ಸುಪ್ತವಾಗಿದೆ. ಅದು ವ್ಯಕ್ತವಾಗ ಬೇಕಷ್ಟೆ. ಈ ಒಂದು ಮಹಾ ಸತ್ಯವನ್ನು ಭರತಖಂಡ ಪ್ರಪಂಚಕ್ಕೆ ಬೋಧಿಸಬೇಕಾಗಿದೆ. ಈ ಭಾವನೆ ಮತ್ತೆಲ್ಲಿಯೂ ಇಲ್ಲ. ಇದೇ ಆಧ್ಯಾತ್ಮ, ತತ್ತ್ವ, ಆತ್ಮವಿಜ್ಞಾನ. ಮನುಷ್ಯನನ್ನು ಯಾವುದು ಕಾರ್ಯೋನ್ಮುಖ ನನ್ನಾಗಿಮಾಡುವುದು? ಶಕ್ತಿ. ಶಕ್ತಿಯೇ ಪುಣ್ಯ, ಅಶಕ್ತಿಯೇ ಪಾಪ. ಯಾವುದಾದರೊಂದು ಪದ ಉಪನಿಷತ್ತಿನ ಮಹಾಗಣಿಯಿಂದ ಸಿಡಿ ಮದ್ದಿನಂತೆ ಹಾರುತ್ತಿದ್ದರೆ, ಸಿಡಿಮದ್ದಿನಂತೆ ಅಜ್ಞಾನಿಗಳ ಮೊತ್ತದ ಮೇಲೆ ಸಿಡಿಯುತ್ತಿದ್ದರೆ ಅದೇ "ಅಭೀಃ" ಎಂಬ ಪದ. ಈ ನಿರ್ಭಯತೆ "ಅಭೀಃ" ಎಂಬ ಒಂದು ಧರ್ಮವನ್ನು ಮಾತ್ರ ಬೋಧಿಸಬೇಕು. ಸಾಂಸಾರಿಕ ಪ್ರಪಂಚದಲ್ಲಾಗಲೀ ಧಾರ್ಮಿಕಪ್ರಪಂಚದಲ್ಲಾಗಲೀ ಅಂಜಿಕೆಯೆ ಪಾಪ ಮತ್ತು ಅವನತಿಗೆಲ್ಲಾ ಮೂಲ ಎನ್ನುವುದರಲ್ಲಿ ಸಂದೇಹವಿಲ್ಲ. ಅಂಜಿ ಕೆಯೇ ದುಃಖಕ್ಕೆ ಮೂಲ, ಸಾವಿಗೆ ಮೂಲ, ಅನಂತ ಪಾಪಕ್ಕೆ ಮೂಲ. ಈ ಅಂಜಿಕೆಗೆ ಕಾರಣ ಯಾವುದು? ನಮ್ಮ ಸ್ವಭಾವದ ಅಜ್ಞಾನ. ನಾವೆ ಲ್ಲರೂ ರಾಜಾಧಿರಾಜನ ಸಿಂಹಾಸನಕ್ಕೆ ಅರ್ಹರು. ನಾವೆಲ್ಲ ಭಗವಂತನಿಗೆ ಸಮಾನ. ಅದ್ವೈತ ಸಿದ್ಧಾಂತದ ಪ್ರಕಾರ ನೀವೇ ಬ್ರಹ್ಮ, ಕ್ಷುದ್ರ ಮಾನವ ರೆಂದು ತಿಳಿದು ಅದನ್ನು ಮರೆತಿರುವಿರಿ. ನಾವು ಆ ಉನ್ನತ ಸ್ಥಿತಿಯಿಂದ ಭ್ರಷ್ಟರಾಗಿರುವೆವು. ಅದಕ್ಕೇ ನಾನು ನಿನಗಿಂತ ಸ್ವಲ್ಪಮೇಲು, ಅಥವಾ ನೀನು ನನಗಿಂತ ಸ್ವಲ್ಪಮೇಲು ಎಂಬ ತಾರತಮ್ಯವನ್ನು ಮಾಡುವುದು. ಭರತಖಂಡ ಪ್ರಪಂಚಕ್ಕೆ ಸಾರಬೇಕಾದ ಒಂದು ಮಹಾಸಂದೇಶ ಈ ಏಕತ್ವ. ಇದನ್ನು ನಾವು ತಿಳಿದುಕೊಂಡರೆ ಪರಿಸ್ಥಿತಿ ಬದಲಾಯಿಸುವುದು. ನೀವು ಇದುವರೆವಿಗೆ ಯಾವ ದೃಷ್ಟಿಯಿಂದ ಪ್ರಪಂಚವನ್ನು ನೋಡು

ತ್ತಿದ್ದಿರೊ ಇನ್ನು ಮೇಲೆ ಹಾಗೆ ನೋಡುವುದಿಲ್ಲ. ಪ್ರತಿಯೊಬ್ಬನು ಮತ್ತೊಬ್ಬನೊಂದಿಗೆ ಹೋರಾಡಿ ಬಲಾಢ್ಯರು ಜಯಹೊಂದಿ ದುರ್ಬಲರು ನಾಶವಾಗುವ ಸಮರಭೂಮಿಯಾಗುವುದಿಲ್ಲ. ಇದೊಂದು ಲೀಲಾಭೂಮಿ ಯಾಗುವುದು. ಭಗವಂತ ಶಿಶುವಿನಂತೆ ಆಡುತ್ತಿರುವನು. ನಾವೆಲ್ಲಾ ಅವನ ಸಖರು, ಸಹ ಉದ್ಯೋಗಿಗಳು. ಇದೆಲ್ಲಾ ಒಂದು ಆಟ. ಕ್ರೂರ ವಾಗಿರಲಿ ಅಪಾಯದಿಂದ ಕೂಡಿರಲಿ ನಾವು ಇದನ್ನು ಮರೆತಿರುವೆವು. ಆತ್ಮಸ್ವರೂಪ ನಮಗೆ ತಿಳಿದಮೇಲೆ, ಅತಿ ದುಃಖಿಗೆ ದುರ್ಬಲನಿಗೆ ಪಾಪಿಗೆ ಭರವಸೆ ದೊರಕುವುದು. ನಿರಾಶರಾಗಬೇಡಿ ಎಂದು ನಮ್ಮ ಶಾಸ್ತ್ರ ಸಾರು ವುದು. ನೀನು ಏನು ಮಾಡಿದರೂ ನಿನ್ನ ಸ್ವಭಾವ ಬದಲಾಯಿಸು ವಂತೆ ಇಲ್ಲ. ಪ್ರಕೃತಿಯೇ ಪ್ರಕೃತಿಯನ್ನು ನಾಶಮಾಡಲಾರದು. ಪರಿ ಶುದ್ಧತೆಯೇ ನಿನ್ನ ಸ್ವಭಾವ. ಲಕ್ಷಾಂತರ ವರ್ಷಗಳು ಅದು ಹುದುಗಿರ ಬಹುದು. ಕೊನೆಗೆ ಅದು ಜಯಿಸಿ ಮೇಲೆದ್ದೇ ಏಳುವುದು. ಅದ್ವೈತ ಸಿದ್ಧಾಂತ ಎಲ್ಲರಿಗೂ ಭರವಸೆಯನ್ನು ತರುವುದು, ನಿರಾಶೆಯನ್ನು ಅಲ್ಲ. ಅದು ಅಂಜಿಕೆಯ ಮೂಲಕ ಬೋಧಿಸುವುದಿಲ್ಲ. ನೀವು ಕಾಲು ಜಾರಿದರೆ ಮೆಟ್ಟಿಕೊಳ್ಳಲು ಹವಣಿಸುತ್ತಿರುವ ದೆವ್ವಗಳನ್ನು ಹಳಿಯುವುದಿಲ್ಲ. ದೆವ್ವ ಗಿವ್ವವನ್ನು ಅದು ಲೆಕ್ಕಿಸುವುದಿಲ್ಲ. ನಿಮ್ಮ ಅದೃಷ್ಟ ನಿಮ್ಮ ಕೈಯಲ್ಲಿ ಇರುವುದೆಂದು ಅದು ಹೇಳುವುದು. ಈ ದೇಹಕ್ಕೆ ಕಾರಣ ನಿಮ್ಮ ಕರ್ಮ ಮತ್ತಾವುದೂ ಅಲ್ಲವೆನ್ನುವುದು. ಅಜ್ಞಾನದಿಂದ ಸರ್ವವ್ಯಾಪಿಯಾದ ಭಗವಂತ ಮರೆಯಾಗಿರುವನು. ಇದಕ್ಕೆ ನೀನೆ ಕಾರಣ. ನಿನ್ನ ಇಚ್ಛೆ ಇಲ್ಲದೆ ನೀನು ಈ ಭಯಾನಕ ಪ್ರಪಂಚಕ್ಕೆ ಬೀಳಲಿಲ್ಲ. ನೀನೆ ಈಗ ಮಾಡುತ್ತಿರುವಂತೆ ಕ್ರಮೇಣ ನಿನ್ನ ದೇಹವನ್ನು ತಯಾರು ಮಾಡಿಕೊಂಡೆ ಎಂದು ತಿಳಿಯಬೇಕು. ನಿನಗೆ ನೀನೆ ಊಟಮಾಡುವೆ. ಇತರರು ನಿನ ಗಾಗಿ ಮಾಡುವುದಿಲ್ಲ. ತಿಂದದ್ದನ್ನು ನೀನೇ ಅರಗಿಸಿಕೊಳ್ಳುವೆ, ಇತರರು ಅಲ್ಲ. ನೀನೆ ಆಹಾರದಿಂದ ರಕ್ತ ಮಾಂಸ ದೇಹ ಮಾಡಿಕೊಳ್ಳುವೆ, ಇತರರು ಅಲ್ಲ. ಇದರಂತೆಯೇ ಹಿಂದಿನಿಂದಲೂ ನೀನು ಇರುವುದು. ಅನಂತ ಸರಪಳಿಯ ಒಂದು ಕೊಂಡಿಯನ್ನು ತಿಳಿದರೆ ಎಲ್ಲವನ್ನೂ ತಿಳಿ ದಂತೆ. ನಿನ್ನ ದೇಹಕ್ಕೆ ಈಗ ನೀನು ಕಾರಣ ಎಂದು ಗೊತ್ತಾದರೆ, ಅದೇ ಹಿಂದಿನ ಮತ್ತು ಮುಂದಿನ ದೇಹಕ್ಕೆ ಕಾರಣವೆಂದು ಗೊತ್ತಾಗುವುದು. ಎಲ್ಲಾ ಒಳ್ಳೆಯ ಮತ್ತು ಕೆಟ್ಟುದರ ಜವಾಬ್ದಾರಿಯೂ ನಿನ್ನಮೇಲೆ ಇರು

ವುದು. ಇದು ಆಶಾಜನಕ ಸಂಗತಿ. ನಾನು ಏನನ್ನು ಕಟ್ಟಿರುವೆನೋ ಅದನ್ನು ಧ್ವಂಸ ಮಾಡಬಲ್ಲೆ. ಜತೆಗೆ ಭಗವಂತನ ಕೃಪೆಯನ್ನು ನಮ್ಮ ಧರ್ಮ ಅಪಹರಿಸುವುದಿಲ್ಲ. ಅವನ ಕೃಪೆ ಯಾವಾಗಲೂ ಇರುವುದು. ಈ ಒಳ್ಳೆಯ ಕೆಟ್ಟ ಮಹಾಪ್ರವಾಹದ ಪಕ್ಕದಲ್ಲೇ ಇರುವನು. ಬಂಧನಾತೀತನಾದ ಅನವರತ ದಯಾಮೂರ್ತಿಯಾದ ಭಗವಂತ ಯಾವಾಗಲೂ ನಮ್ಮನ್ನು ಪಾರುಗಾಣಿಸಲು ಸಿದ್ಧನಾಗಿರುವನು. ಅವನ ಕೃಪೆ ಅಪಾರವಾದುದು. ಪರಿಶುದ್ಧಾತ್ಮರಿಗೆಲ್ಲಾ ಅದು ಲಭಿಸುವುದು.

ನಿಮ್ಮ ಆಧ್ಯಾತ್ಮಿಕತೆ ಸಮಾಜದ ನವವಿಧಾನಕ್ಕೆ ಆಧಾರ ಸ್ವರೂಪವಾಗಬೇಕು. ನನಗೆ ಹೆಚ್ಚು ಸಮಯವಿದ್ದಿದ್ದರೆ ಪಾಶ್ಚಾತ್ಯರು ನಮ್ಮ ಅದ್ವೈತ ಸಿದ್ಧಾಂತ ನಿರ್ಣಯಗಳಿಂದ ಹಲವು ವಿಷಯಗಳನ್ನು ಇನ್ನೂ ಕಲಿಯಬೇಕು ಎಂಬುದನ್ನು ತೋರುತ್ತಿದ್ದೆ. ವಿಜ್ಞಾನದ ನವನವ ಆವಿಶ್ಕಾರ ಯುಗದಲ್ಲಿ ಸಾಕಾರ ದೇವರಿಂದ ಹೆಚ್ಚು ಪ್ರಯೋಜನವಿಲ್ಲ. ಆದರೆ ಎಂತಹ ಮೂಢ ಧರ್ಮವಿರಲಿ, ಅವನಿಗೆ ಆಕಾರ ದೇವಸ್ಥಾನ ಬೇಕಾದರೆ ತನಗೆ ಸಾಕಾಗುವಷ್ಟನ್ನು ಇಟ್ಟುಕೊಂಡಿರಬಹುದು. ಪ್ರೀತಿಸುವುದಕ್ಕೆ ಒಬ್ಬ ಪರಮೇಶ್ವರಬೇಕಾಗಿದ್ದರೆ, ಪ್ರಪಂಚದಲ್ಲಿ ಇನ್ನೂ ಇದುವರೆಗೆ ಕಲ್ಪಿಸಿಕೊಳ್ಳದಂತಹ ಪರಮೋತ್ಕೃಷ್ಟ ಪರಮೇಶ್ವರನ ಭಾವನೆ ಇಲ್ಲಿದೆ. ಒಬ್ಬ ವಿಚಾರಪರನಾಗಿ ಯುಕ್ತಿಯನ್ನು ತೃಪ್ತಿಪಡಿಸಿಕೊಳ್ಳಬೇಕೆಂದು ಬಯಸಿದರೆ ನಿರ್ಗುಣ ಬ್ರಹ್ಮನ ವಿಚಾರವಾಗಿ ಯುಕ್ತಿಯುಕ್ತ ಭಾವನೆಗಳನ್ನು ಪಡೆಯಬಹುದು.



# ಮನಮಧುರ ಬಿನ್ನವತ್ತಳೆಗೆ ಉತ್ತರ

ನೀವು ಹಾರ್ದಿಕ ದಯಾಪೂರ್ಣ ಅಭಿನಂದನೆಯದ್ವಾರ ತೋರಿದ ಸುಖಾಗಮನಕ್ಕೆ ತಕ್ಕ ಕೃತಜ್ಞತೆಯನ್ನು ನಾನು ವ್ಯಕ್ತಪಡಿಸಲಾರೆ. ನಾನು ಎಷ್ಟೇ ಪ್ರಯತ್ನಪಟ್ಟರೂ ದೊಡ್ಡ ಉಪನ್ಯಾಸ ಕೊಡುವ ಸ್ಥಿತಿಯಲ್ಲಿ ಇಲ್ಲ. ನಮ್ಮ ಸಂಸ್ಕೃತ ಸ್ನೇಹಿತರು ಬೇಕಾದಷ್ಟು ಸುಂದರ ವಿಶೇಷಣಗಳ ಮಾಲೆಯನ್ನು ನನ್ನ ಮೇಲೆ ಹೇರಿದ್ದರೂ ನನಗೆ ಒಂದು ದೇಹವಿದೆ. ಅದು ಎಷ್ಟೆ ಮೌಢ್ಯವಾದರೂ ಸ್ಥೂಲ ಶರೀರ. ಜಡನಿಯಮವನ್ನು ಅನುಸರಿಸುವುದು. ಆದ್ದರಿಂದ ಸ್ಥೂಲದೇಹಕ್ಕೆ ಸುಸ್ತು ದಣಿವು ಎಂಬುದು ಇದೆ. ಪಾಶ್ಚಾತ್ಯ ದೇಶದಲ್ಲಿ ನಾನು ಮಾಡಿದ ಅಲ್ಪ ಕೆಲಸಕ್ಕೆ ದೇಶಾದ್ಯಂತವೂ ತೋರುವ ಅಪೂರ್ವ ಆನಂದ ಸಹಾನುಭೂತಿಯನ್ನು ನೋಡುವುದು ಆನಂದದಾಯಕ ಸರಿ. ನಾನು ಇದನ್ನು ಈ ದೃಷ್ಟಿಯಿಂದ ಮಾತ್ರ ನೋಡುತ್ತೇನೆ. ಇದನ್ನೆಲ್ಲಾ ಭವಿಷ್ಯದಲ್ಲಿ ಬರುವ ಮಹಾವ್ಯಕ್ತಿಗಳಿಗೆ ಮೀಸಲಾಗಿಡುವೆನು. ನಾನು ಮಾಡಿದ ಅಲ್ಪಕ್ಕೇ ಇಷ್ಟೊಂದು ಪ್ರಶಂಸೆ ದೊರೆತರೆ, ನಮ್ಮ ನಂತರ ಬರುವ ಧರ್ಮವೀರರು, ಜಗತ್ತನ್ನೇ ಜಾಗ್ರತಗೊಳಿಸಬಲ್ಲ ಮಹಾವ್ಯಕ್ತಿಗಳಿಗೆ ನಮ್ಮ ದೇಶ ಎಷ್ಟು ಪ್ರಶಂಸೆಯನ್ನು ಕೊಡಬಹುದು! ಹಿಂದೂಗೆ ಧರ್ಮ ಒಂದೇ ತಿಳಿಯುವುದು. ಶತಮಾನಗಳ ನಮ್ಮ ಶಿಕ್ಷಣ ಈ ದಾರಿಯಲ್ಲಿ ಆಗಿದೆ. ಇದರ ಪರಿಣಾಮವಾಗಿ ಧರ್ಮವೇ ನಮ್ಮ ಜೀವನದ ಚರಮ ಗುರಿಯಾಗಿದೆ. ಇದು ಸತ್ಯವೆಂಬುದು ನಿಮಗೆ ಗೊತ್ತು. ಪ್ರತಿಯೊಬ್ಬನೂ ವರ್ತಕನಾಗಬೇಕಾಗಿಲ್ಲ. ಶಾಲಾ ಉಪಾಧ್ಯಾಯನಾಗಬೇಕಾಗಿಲ್ಲ. ಪ್ರತಿಯೊಬ್ಬರೂ ಯೋಧರಾಗಬೇಕಾಗಿಲ್ಲ. ಪ್ರಪಂಚದಲ್ಲಿ ಪ್ರತಿಯೊಂದು ದೇಶದವರೂ ಸಾಮರಸ್ಯಕ್ಕೆ ತಮ್ಮ ತಮ್ಮ ಪಾಲಿನದನ್ನು ನಿವೇದಿಸುವರು. ಭಗವಂತನ ಇಚ್ಛೆಯಂತೆ ಬಹುಶಃ ನಾವು ಈಶ್ವರ ಸಮ್ಮೇಳನದಲ್ಲಿ ಆಧ್ಯಾತ್ಮವನ್ನು ಹಾಡಬೇಕಾಗಿದೆ. ಯಾವ ದೇಶವಾದರೂ ಹೆಮ್ಮೆ ಪಡುವಂತಹ ಪ್ರಖ್ಯಾತ ಪೂರ್ವಿಕರು ನಮಗಿತ್ತ ಆ ಪರಂಪರೆ ಮಾಯವಾಗಿಲ್ಲವೆಂಬುದನ್ನು ನೋಡಿ ಅತ್ಯಾನಂದವಾಗುವುದು. ಜನಾಂಗದ ಭವಿಷ್ಯದಲ್ಲಿ ಆಶಾಜನಕವಾಗಿರುವೆ. ದೃಢ ಶ್ರದ್ಧೆಯನ್ನು ಇದು ನೀಡುವುದು. ವ್ಯಕ್ತಿಶಃ ನೀವು ನನಗೆ ನೀಡುವ ಆದರಣೆ ನೋಡಿ ಮೆಚ್ಚದೇ ಇದ್ದರೂ ಜನಾಂಗದ ಹೃದಯ ಅಲ್ಲಿರುವುದು, ಅದು ಆರೋಗ್ಯವಾಗಿರುವುದು ಎಂಬುದಕ್ಕೆ

ಸಂತೋಷ. ಭರತಖಂಡ ಇನ್ನೂ ಜೀವಿಸಿದೆ. ಅದು ಸತ್ತಿರುವುದೆಂದು ಹೇಳುವರು ಯಾರು? ಪಾಶ್ಚಾತ್ಯರು ಕರ್ಮಪಟುಗಳಂತೆ ನಮ್ಮನ್ನು ನೋಡ ಬಯಸುವರು. ಸಮರಾಂಗಣದಲ್ಲಿ ನಮ್ಮ ಚಟುವಟಿಕೆಯನ್ನು ಅವರು ನೋಡ ಬಯಸಿದರೆ ನಿರಾಶರಾಗುವರು. ಅದು ನಮ್ಮ ಕ್ಷೇತ್ರವಲ್ಲ. ಯೋಧಜನಾಂಗ ಧಾರ್ಮಿಕ ಕ್ಷೇತ್ರದಲ್ಲಿ ಜಾಗ್ರತವಾಗಿರುವುದನ್ನು ನೋಡ ಬಯಸಿದರೆ ಹೇಗೆ ನಿರಾಶರಾಗುತ್ತೇವೆಯೊ ಹಾಗೆ. ಅವರು ಬಂದು ನಮ್ಮನ್ನು ಇಲ್ಲಿ ನೋಡಲಿ, ನಾವೂ ಕರ್ಮಶೀಲರಾಗಿರುವೆವು, ಜನಾಂಗ ಹಿಂದಿನಂತೆಯೇ ಜೀವಿಸಿದೆ. ನಾವು ಅಧೋಗತಿಗೆ ಬಂದಿರುವೆವು ಎಂಬ ಭಾವನೆಯನ್ನೇ ನಾನು ಕಿತ್ತೊಗೆಯಲಿಚ್ಛಿಸುವೆನು. ಅದೊಳ್ಳೆಯದೆ. ಆದರೆ ನಾನು ಸ್ವಲ್ಪ ಕಟುವಾಗಿ ವಿಮರ್ಶಿಸಬೇಕಾಗಿದೆ. ನೀವು ಅದನ್ನು ನಿರ್ದಯದಿಂದ ನೋಡುವುದಿಲ್ಲವೆಂದು ಭಾವಿಸುತ್ತೇನೆ. ಪಾಶ್ಚಾತ್ಯ ಜಡ ವಾದ ನಮ್ಮನ್ನು ಮುಳುಗಿಸಿದೆ ಎಂಬ ವಿಷಯವೇ ಅದು. ಇದೆಲ್ಲಾ ಪಾಶ್ಚಾತ್ಯರ ತಪ್ಪಲ್ಲ. ನಮ್ಮದೇ ಬಹುಪಾಲು. ವೇದಾಂತಿಗಳಾದ ನಾವು ಎಲ್ಲವನ್ನೂ ಆತ್ಮಪರೀಕ್ಷಾ ದೃಷ್ಟಿಯಿಂದ, ವ್ಯಕ್ತಿಯ ದೃಷ್ಟಿಯಿಂದ ನೋಡ ಬೇಕು. ನಮಗೆ ನಾವೇ ಹಾನಿಮಾಡಿಕೊಳ್ಳುವವರೆಗೆ ಪ್ರಪಂಚದಲ್ಲಿ ಯಾವುದೂ ನಮ್ಮನ್ನು ಹಾನಿಗೆ ಗುರಿ ಮಾಡಲಾರದೆಂದು ವೇದಾಂತಿಗಳಾದ ನಮಗೆ ವೇದ್ಯ. ಭರತಖಂಡದಲ್ಲಿ ಐದನೇ ಒಂದು ಭಾಗ ಮಹಮ್ಮದೀಯ ರಾಗಿರುವರು. ಸ್ವಲ್ಪ ಹಿಂದೆ ಹೋದರೆ ಮೂರನೆ ಎರಡು ಭಾಗ ಬೌದ್ಧ ರಾಗಿದ್ದರು. ಈಗ ಐದನೆ ಒಂದು ಭಾಗ ಮಹಮ್ಮದೀಯರು. ಕ್ರೈಸ್ತ ರಾಗಲೆ ಹತ್ತು ಲಕ್ಷದ ಮೇಲೆ ಇರುವರು. ಇದು ಯಾರ ತಪ್ಪು? ಎಂದಿಗೂ ಮರೆಯದ ಭಾಷೆಯಲ್ಲಿ ಇತಿಹಾಸಜ್ಞರೊಬ್ಬರು, "ಎಂದಿಗೂ ಬತ್ತದ ಅಮೃತ ಪ್ರವಾಹ ಪಕ್ಕದಲ್ಲೇ ಹರಿಯುತ್ತಿರುವಾಗ ಈ ದುರ್ಭಾಗ್ಯರು ಏಕೆ ಉಪವಾಸದಿಂದ ನರಳಿ ಸಾಯಬೇಕು. ನಮ್ಮ ಧರ್ಮವನ್ನು ತ್ಯಜಿಸಿದ ಈ ಜನರಿಗೆ ನಾವು ಏನು ಮಾಡಿದೆವು? ಅವರು ಏತಕ್ಕೆ ಮಹಮ್ಮದೀಯರಾದರು?" ವೇಶ್ಯಾವೃತ್ತಿಗೆ ಕೈಹಾಕುವುದರಲ್ಲಿದ್ದ ಒಬ್ಬ ಹುಡುಗಿ ಇಂಗ್ಲೇಂಡಿನಲ್ಲಿ ಯಾರೋ ಹಾಗೆ ಮಾಡಬೇಡವೆಂದಾಗ ಹೀಗೆ ಹೇಳಿದಳು: "ಸಹಾನುಭೂತಿ ಪಡೆಯುವುದಕ್ಕೆ ಅದೊಂದೆ ಮಾರ್ಗ. ಈಗ ಯಾರೂ ನನ್ನ ಸಹಾಯಕ್ಕೆ ಬರುವುದಿಲ್ಲ. ನಾನು ಪತಿತಳಾದಮೇಲೆ ಮರುಗುವ ಸ್ತ್ರೀಯರು ನನ್ನ ನೆರವಿಗೆ ಬಂದು ಎಲ್ಲ ಸಹಾಯವನ್ನೂ

ಒದಗಿಸುವರು''. ನಮ್ಮ ಧರ್ಮದಿಂದ ಹೋದವರಿಗಾಗಿ ನಾವಿಂದು ಅಳು ತ್ತಿರುವೆವು. ಅವರಿಗೆ ಹಿಂದೆ ಏನು ಮಾಡಿದೆವು? ನಾವು ಏನು ಕಲಿತಿರುವೆವು? ಈ ಪ್ರಶ್ನೆಯನ್ನು ಪ್ರತಿಯೊಬ್ಬನೂ ಹಾಕಿಕೊಳ್ಳಲಿ. ನಾವು ಸತ್ಯಜ್ಯೋತಿ ಯನ್ನು ಹಿಡಿದುಕೊಂಡೆವೆ? ಎಷ್ಟು ದೂರ ಅದನ್ನು ಹೊತ್ತೆವು? ನಾವು ಆಗ ಅವರಿಗೆ ಸಹಾಯಮಾಡಲಿಲ್ಲ. ಇಂದು ನಾವು ಈ ಪ್ರಶ್ನೆಯನ್ನು ಹಾಕಿ ಕೊಳ್ಳಬೇಕು. ನಾವು ಅವರಿಗೆ ಸಹಾಯಮಾಡಲಿಲ್ಲ, ಅದೇ ನಮ್ಮ ಮಹಾ ಪಾತಕ ಮತ್ತು ಕರ್ಮ. ನಾವು ಯಾರನ್ನೂ ದೂರಬೇಕಾಗಿಲ್ಲ. ಅದು ನಮ್ಮ ಕರ್ಮ. ಜಡವಾದ, ಮಹಮ್ಮದೀಯರು, ಕ್ರೈಸ್ತರು, ಇವು ಯಾವುವೂ ಭರತಖಂಡದಲ್ಲಿ ನಾವು ಅದಕ್ಕೆ ಅವಕಾಶ ಕೊಡದೆ ಇದ್ದರೆ ಅಭಿವೃದ್ಧಿಯಾಗುತ್ತಿರಲಿಲ್ಲ. ಕೆಟ್ಟ ಆಹಾರ ಉಪವಾಸ ಮುಂತಾದುವು ಗಳಿಂದ ನಮ್ಮ ದೇಹಾರೋಗ್ಯ ಹಾಳಾಗದೇ ಇದ್ದಿದ್ದರೆ ಯಾವ ವಿಷಕ್ರಿಮಿ ಗಳೂ ನಮ್ಮನ್ನು ಧಾಳಿ ಇಡಲಾಗುತ್ತಿರಲಿಲ್ಲ. ಆರೋಗ್ಯವಂತ ವಿಷಕ್ರಿಮಿ ಗಳ ಪರಂಪರೆಯಲ್ಲಿ ಸ್ವಲ್ಪವೂ ಅದರ ಪ್ರಭಾವಕ್ಕೆ ಬೀಳದೆ ಪಾರಾಗಬಲ್ಲ. ನಾವು ಉತ್ತಮರಾಗುವುದಕ್ಕೆ ಇನ್ನೂ ಸಮಯವಿದೆ. ಕೆಲಸಕ್ಕೆ ಬಾರದ ವಿಷಯ ಕುರಿತು ಚರ್ಚಿಸುವುದನ್ನು ತ್ಯಜಿಸಿ. ಕಳೆದ ಆರು ಏಳು ಶತಮಾನ ಗಳಿಂದಲೂ ನಮ್ಮ ಅವನತಿಯ ಕಾಲದಲ್ಲಿ, ನೂರಾರು ಜನ ವಿದ್ಯಾ ವಂತರು, ನಾವು ನೀರನ್ನು ಎಡಗೈಯಿಂದ ಕುಡಿಯಬಹುದೆ ಬಲಗೈಯಿಂದ ಕುಡಿಯುವುದೆ, ಅದನ್ನೇ ಮೂರುಸಲ ತೊಳೆಯುವುದೆ ನಾಲ್ಕುಸಲ ತೊಳೆ ಯುವುದೆ, ಬಾಯನ್ನು ಐದುಸಲ ಮುಕ್ಕಳಿಸುವುದೇ ಆರುಸಲ ಮುಕ್ಕಳಿ ಸುವುದೆ, ಇದನ್ನು ಚರ್ಚಿಸುವುದನ್ನು ನೋಡಿ. ಇಂತಹ ಪ್ರಮುಖ ವಿಷಯ ಗಳನ್ನು ಚರ್ಚಿಸುತ್ತ, ಇದರಮೇಲೆ ಬೇಕಾದಷ್ಟು ತತ್ತ್ವಶಾಸ್ತ್ರವನ್ನೇ ಬರೆಯುವವರಿಂದ ನೀವು ಏನನ್ನು ನಿರೀಕ್ಷಿಸಬಲ್ಲಿರಿ! ನಮ್ಮ ಧರ್ಮ ಅಡಿಗೆ ಮನೆಗೆ ಹೋಗುವ ಅಪಾಯವಿದೆ. ಮುಕ್ಕಾಲುಪಾಲು ಜನ ಈಗ ವೇದಾಂತಿ ಗಳೂ ಅಲ್ಲ, ಪೌರಾಣಿಕರೂ ಅಲ್ಲ, ಶಾಕ್ತರೂ ಅಲ್ಲ. ನಾವು ''ಮುಟ್ಟ ಬೇಡಿ ಎನ್ನುವವರು'' ಆಗಿರುವೆವು. ನಮ್ಮ ಧರ್ಮ ಅಡಿಗೆ ಮನೆಯಲ್ಲಿದೆ. ಅಡಿಗೆ ಮಾಡುವ ಪಾತ್ರೆಯೇ ನಮ್ಮ ದೇವರು. ''ನಾನು ಮಡಿ ಮುಟ್ಟಬೇಡಿ'' ಇದೇ ನಮ್ಮ ಧರ್ಮವಾಗಿದೆ. ಹೀಗೆ ಮತ್ತೊಂದು ಶತಮಾನ ಕಳೆದರೆ ನಾವೆಲ್ಲಾ ಹುಚ್ಚರ ಆಸ್ಪತ್ರೆಯಲ್ಲಿರುವೆವು. ಜೀವ ನದ ಗಹನ ವಿಷಯಗಳನ್ನು ತಿಳಿದುಕೊಳ್ಳಲಾರದ ಬುದ್ಧಿ ಮಂದ

ವಾಗುತ್ತಿದೆ. ಮನಸ್ಸು ಎಲ್ಲಾ ಸ್ವಾತಂತ್ರ್ಯವನ್ನೂ ಕಳೆದುಕೊಂಡು ದುರ್ಬಲವಾಗಿ ಜಡವಾಗಿ ಅಚಲವಾಗುವುದು. ಯಾವುದೋ ಒಂದು ಹಿಂದಿನ ಅಭ್ಯಾಸದ ವೃತ್ತದ ಸುತ್ತಲೂ ಸುತ್ತುತ್ತಿರುವುದು. ಮೊದಲು ಈ ಸ್ವಭಾವದಿಂದ ಪಾರಾಗಬೇಕು. ನಂತರ ಜಾಗ್ರತರಾಗಿ ಬಲಶಾಲಿಗಳಾಗಿ ಕಾರ್ಯಶೀಲರಾಗಬೇಕು. ಆಗ ನಮ್ಮ ಪುರಾತನ ಪಿತೃಗಳು ನಮಗಾಗಿ ಬಿಟ್ಟ ಅನರ್ಘ್ಯ ರತ್ನರಾಶಿಗೆ ಪಾಲುದಾರರಾಗುವೆವು. ಇಡೀ ಪ್ರಪಂಚಕ್ಕೆ ಇಂದು ಆ ನಿಧಿ ಬೇಕಾಗಿದೆ. ಇದನ್ನು ಹಂಚದೆ ಇದ್ದರೆ ಪ್ರಪಂಚ ನಾಶವಾಗುವುದು. ಇದನ್ನು ಹೊರಗೆ ತನ್ನಿ, ಪ್ರಚಾರಮಾಡಿ ಹಂಚಿ. ವ್ಯಾಸಮಹಾನುಭಾವರು ದಾನ ಒಂದೇ ಧರ್ಮ ಕಲಿಯುಗಕ್ಕೆ ಎನ್ನುವರು. ಎಲ್ಲಾ ದಾನಕ್ಕಿಂತ ಆಧ್ಯಾತ್ಮದಾನ ಪರಮೋತ್ಕೃಷ್ಟ ದಾನ, ನಂತರ ಸಾಧಾರಣ ವಿದ್ಯಾದಾನ, ಪ್ರಾಣದಾನ, ಅನ್ನದಾನ. ಅನ್ನದಾನವನ್ನು ನಾವು ಬೇಕಾದಷ್ಟು ಮಾಡಿರುವೆವು. ಮತ್ತಾವ ರಾಷ್ಟ್ರವೂ ನಮ್ಮಷ್ಟು ಧರ್ಮಿಗಳಲ್ಲ. ಭಿಕ್ಷುಕನ ಮನೆಯಲ್ಲಿ ಒಂದು ಚೂರು ರೊಟ್ಟಿ ಇರುವವರೆಗೆ ಅವನು ಅದರಲ್ಲಿ ಅರ್ಧವನ್ನು ಮತ್ತೊಬ್ಬನಿಗೆ ಕೊಡುವನು. ಇದನ್ನು ನಾವು ಭರತ ಖಂಡದಲ್ಲಿ ಮಾತ್ರ ನೋಡಬಹುದು. ನಾವು ಇದನ್ನು ಬೇಕಾದಷ್ಟು ಮಾಡಿರುವೆವು. ಈಗ ಜ್ಞಾನದಾನ ಧರ್ಮದಾನವನ್ನು ತೆಗೆದುಕೊಳ್ಳೋಣ. ನಾವೆಲ್ಲಾ ಧೀರರಾಗಿದ್ದರೆ, ಅಂಜದೇ ಇದ್ದರೆ, ನಿರ್ವಂಚನೆಯಿಂದ ಕೆಲಸಕ್ಕೆ ಕೈ ಹಾಕಿದರೆ ಇನ್ನು ಇಪ್ಪತ್ತೈದು ವರ್ಷಗಳಲ್ಲಿ ಈ ಸಮಸ್ಯೆಗಳನ್ನೆಲ್ಲಾ ಪರಿಹರಿಸಬಹುದು. ಇನ್ನಾವ ಆತಂಕವೂ ಇರುವುದಿಲ್ಲ. ಭರತಖಂಡವೆಲ್ಲಾ ಪುನಃ ಆರ್ಯಾವರ್ತವಾಗುವುದು. ನಾನು ನಿಮಗೆ ಹೇಳಬೇಕೆಂಬುದು ಇಷ್ಟೆ. ನಾನು ಹಂಚಿಕೆಯನ್ನು ಕುರಿತು ಹೆಚ್ಚು ಮಾತನಾಡುವವನಲ್ಲ. ಮಾತನಾಡುವ ಬದಲು ಮಾಡಿತೋರಿಸಲು ಇಚ್ಛಿಸುವೆನು. ನನ್ನ ಹಂಚಿಕೆಗಳೂ ಎಷ್ಟೋ ಇವೆ. ದೇವರದಯೆ ಇದ್ದರೆ ಆಯುಸ್ಸು ಕೊಟ್ಟರೆ ಅನುಷ್ಠಾನಕ್ಕೆ ತರುವೆನು. ನಾನು ಇದರಲ್ಲಿ ಜಯಿಸುವೆನೊ ಇಲ್ಲವೊ ತಿಳಿಯದು. ಆದರೆ ಜೀವನದಲ್ಲಿ ಒಂದು ಮಹಾ ಆದರ್ಶವನ್ನು ತೆಗೆದುಕೊಂಡು ಅದಕ್ಕಾಗಿ ಬಾಳನ್ನು ಅರ್ಪಿಸುವುದೊಂದು ಸೌಭಾಗ್ಯ. ಇಲ್ಲದೇ ಇದ್ದರೆ ಗಿಡಮರಗಳಂತೆ ಕ್ಷುದ್ರ ಮಾನವನ ಅಲ್ಪ ಜೀವನದಿಂದ ಪ್ರಯೋಜನವೇನು? ಅದನ್ನು ಯಾವುದಾದರೊಂದು ಮಹಾ ಧ್ಯೇಯಕ್ಕೆ ಮೀಸಲಾಗಿಡುವುದೇ ಒಂದು ಭಾಗ್ಯ. ಭರತ

ಖಂಡದಲ್ಲಿ ಸಾಧಿಸಬೇಕಾದ ಮಹತ್ಕಾರ್ಯವೇ ಇದು. ಈಗಿನ ಧಾರ್ಮಿಕ ಜಾಗ್ರತಿಯನ್ನು ನಾನು ಸ್ವಾಗತಿಸುವೆನು. ಕಬ್ಬಿಣ ಕಾದಾಗ ಹೊಡೆಯುವ ಅವಕಾಶ ಕಳೆದುಕೊಂಡರೆ ಅನಂತರ ಪಶ್ಚಾತ್ತಾಪ ಪಡಬೇಕಾಗುವುದು.



# ಮಧುರ ಬಿನ್ನವತ್ತಳೆಗೆ ಉತ್ತರ

ನಿಮ್ಮ ಗೌರವ ಅಧ್ಯಕ್ಷರು ಸೂಚಿಸಿದಂತೆ ನಿಮ್ಮೊಂದಿಗೆ ಹಲವು ದಿನಗಳಿದ್ದು ನಾನು ಪಾಶ್ಚಾತ್ಯದೇಶದಲ್ಲಿ ಮಾಡಿದ ಕೆಲಸ ಅದರ ಪರಿಣಾಮ ಮುಂತಾದುವನ್ನು ಕುರಿತು ನನ್ನ ನಾಲ್ಕು ವರ್ಷದ ಅನುಭವ ಹೇಳಬೇಕೆಂದು ಆಸೆಯೇನೋ ಇರುವುದು. ಆದರೆ ದುರದೃಷ್ಟವಶಾತ್ ಸನ್ಯಾಸಿಗೂ ದೇಹವಿದೆ. ಕಳೆದ ಮೂರುವಾರಗಳಿಂದ ಬಿಡುವಿಲ್ಲದ ಸಂಚಾರ ಮತ್ತು ಉಪನ್ಯಾಸದಿಂದ ಸಾಕಾಗಿರುವೆನು. ಇಂದು ಸಂಜೆ ದೀರ್ಘ ಉಪನ್ಯಾಸಮಾಡುವಂತೆ ಇಲ್ಲ. ನೀವು ನನಗೆ ತೋರಿದ ಸ್ವಾಗತಕ್ಕೆ ಕೃತಜ್ಞತೆ ಅರ್ಪಿಸುವೆನು. ಮುಂದೆ ಯಾವಾಗಲಾದರೂ ಆರೋಗ್ಯ ಉತ್ತಮಗೊಂಡರೆ ಸಮಯ ಬಂದಾಗ ಇಂದಿಗಿಂತ ಹೆಚ್ಚು ಮಾತಾಡಬಹುದು. ಮಧುರೆಯಲ್ಲಿ ಪ್ರಖ್ಯಾತ ರಾಮನಾಡಿನ ರಾಜರ ಅಥಿತಿಯಾಗಿರುವಾಗ ಒಂದು ವಿಷಯ ನನ್ನ ಮನಸ್ಸಿಗೆ ಪ್ರಮುಖವಾಗಿ ಬರುವುದು. ಮೊದಲು ಚಿಕಾಗೋ ನಗರಕ್ಕೆ ಹೋಗುವಂತೆ ಸಲಹೆ ಕೊಟ್ಟವರು ರಾಮನಾಡಿನ ಮಹಾರಾಜರು ಎಂಬುದು ನಿಮ್ಮಲ್ಲಿ ಹಲವರಿಗೆ ಗೊತ್ತಿರಬಹುದು. ಅವರೇ ಇದುವರೆವಿಗೂ ತಮ್ಮ ಪ್ರೋತ್ಸಾಹ ಸಹಾಯದಿಂದ ನೆರವನ್ನು ಇತ್ತರು. ನಿಮ್ಮ ಬಿನ್ನವತ್ತಳೆಯಲ್ಲಿ ನನಗಾಗಿ ಮಾಡಿದ ಹೊಗಳಿಕೆಯಲ್ಲಿ ಬಹುಪಾಲು ದಕ್ಷಿಣ ಭರತಖಂಡದ ಆ ಪ್ರಖ್ಯಾತ ವ್ಯಕ್ತಿಗೆ ಸಲ್ಲುವುದು. ಅವರು ರಾಜರಾಗುವುದಕ್ಕಿಂತ ಸನ್ಯಾಸಿಗಳಾಗಿದ್ದರೆ ಮೇಲಾಗುತ್ತಿತ್ತೆಂದು ಆಶಿಸುತ್ತೇನೆ. ಅವರು ನಿಜವಾಗಿ ಇದಕ್ಕೆ ಪಾತ್ರರು.

ಪ್ರಪಂಚದ ಯಾವುದಾದರೊಂದೆಡೆಯಲ್ಲಿ ಏನಾದರೂ ಕೊರತೆಯಿದ್ದರೆ ಅದನ್ನು ಪೂರ್ಣಮಾಡುವ ವಸ್ತು ಅಲ್ಲಿ ಬಂದು ಸೇರಿ ಹೊಸ ಸ್ಫೂರ್ತಿಯನ್ನು ಕೊಡುವುದು. ಇದು ಸಂಸಾರದಲ್ಲೂ ಸತ್ಯ, ಧಾರ್ಮಿಕ ವಿಷಯದಲ್ಲಿಯೂ ಸತ್ಯ. ಪ್ರಪಂಚದ ಒಂದು ಕಡೆ ಆಧ್ಯಾತ್ಮಿಕ ಕೊರತೆ ಇದ್ದು, ಮತ್ತೊಂದು ಕಡೆ ಅದು ವಿಶೇಷವಾಗಿದ್ದರೆ, ನಾವು ಪ್ರತ್ಯಕ್ಷ ಅದನ್ನು ಇಚ್ಛಿಸಲಿ ಬಿಡಲಿ ಆಧ್ಯಾತ್ಮ ಅಲ್ಲಿಗೆ ಬರುವುದು. ಆ ಕೊರತೆಯನ್ನು ಹೋಗಲಾಡಿಸುವುದು. ಇತಿಹಾಸದಲ್ಲಿ ಒಂದು ವೇಳೆಯಲ್ಲ ಎರಡು ವೇಳೆಯಲ್ಲ, ಹಲವು ವೇಳೆ ಭರತಖಂಡ ಪ್ರಪಂಚಕ್ಕೆ ಆಧ್ಯಾತ್ಮ

ವನ್ನು ಧಾರೆ ಎರೆದಿದೆ. ಜಯದಿಂದಲೋ, ಆರ್ಥಿಕ ಪ್ರಭಾವದಿಂದಲೋ, ಪ್ರಪಂಚದ ಭಿನ್ನ ಭಿನ್ನ ಭಾಗಗಳು ಒಂದುಗೂಡಿದಾಗ, ಒಂದು ಕಡೆಯಿಂದ ಮತ್ತೊಂದು ಕಡೆಗೆ ಹಲವು ವಿಷಯಗಳು ಹೋಗಿವೆ. ಪ್ರತಿಯೊಂದು ದೇಶವೂ ತನ್ನಪಾಲಿಗೆ ಬಂದ ರಾಜಕೀಯ, ಸಾಮಾಜಿಕ, ಆಧ್ಯಾತ್ಮಿಕ ವಿಷಯಗಳನ್ನು ಕೊಟ್ಟಿವೆ. ಮಾನವಜ್ಞಾನನಿಧಿಗೆ ಭರತಖಂಡದ ದಾನ, ದರ್ಶನ ಮತ್ತು ತತ್ತ್ವ. ಪಾರ್ಸಿ ಚಕ್ರಾಧಿಪತ್ಯ ಪ್ರವರ್ಧಮಾನಕ್ಕೆ ಬರುವುದಕ್ಕೆ ಮುಂಚೆಯೇ ಭರತಖಂಡ ಇದನ್ನು ಕೊಟ್ಟಿತು. ಎರಡನೆ ವೇಳೆ ಪರ್ಸಿಯಾ ಚಕ್ರಾಧಿಪತ್ಯದ ಕಾಲದಲ್ಲಿ, ಮೂರನೆ ಆವೃತ್ತಿ ಗ್ರೀಕರ ಉಚ್ಛ್ರಾಯದ ಕಾಲದಲ್ಲಿ, ಈಗ ಆಂಗ್ಲೇಯರು ಪ್ರಖ್ಯಾತರಾಗಿರುವಾಗ ನಾಲ್ಕನೇ ಬಾರಿ ಆಗಿದೆ. ಹಿಂದಿನಂತೆ ಈಗಲೂ ಭರತಖಂಡ ತನ್ನ ಪಾತ್ರವನ್ನು ನಿರ್ವಹಿಸುವುದು. ಪಾಶ್ಚಾತ್ಯರ ಸಂಘಟನಾಕ್ರಮ, ಅವರ ನಾಗರಿಕತೆ ಹೇಗೆ ನಮ್ಮ ಮೇಲೆ ಇಚ್ಛಿಸಲಿ ಬಿಡಲಿ ತಮ್ಮ ಪ್ರಭಾವ ವನ್ನು ಬೀರುತ್ತಿದೆಯೋ ಹಾಗೆಯೇ, ಭರತಖಂಡದ ದರ್ಶನ ಮತ್ತು ತತ್ತ್ವ ಪಾಶ್ಚಾತ್ಯದೇಶದಮೇಲೆ ತಮ್ಮ ಪ್ರಭಾವವನ್ನು ಬೀರುತ್ತಿವೆ. ಅದನ್ನು ಯಾರೂ ತಡೆಯಲಾರರು. ನಾವೂ ಕೂಡ ಕೊಂಚ ಪಾಶ್ಚಾತ್ಯ ಜಡವಾದ ವನ್ನು ತಡೆಯಲಾರೆವು. ಬಹುಶಃ ಸ್ವಲ್ಪ ಅವರ ನಾಗರಿಕತೆ ನಮಗೆ ಹಿತ ಕಾರಿ, ಸ್ವಲ್ಪ ಆಧ್ಯಾತ್ಮ ಅವರಿಗೆ ಹಿತಕಾರಿ. ಸಮತ್ವ ಹೀಗೆ ಸರಿ ಹೋಗುವುದು. ನಾವು ಪಾಶ್ಚಾತ್ಯರಿಂದ ಎಲ್ಲವನ್ನೂ ಕಲಿತುಕೊಳ್ಳಬೇಕೆಂದು ಅಲ್ಲ, ಅಥವಾ ಅವರು ನಮ್ಮಿಂದ ಎಲ್ಲವನ್ನೂ ಕಲಿತುಕೊಳ್ಳಬೇಕೆಂದು ಅಲ್ಲ. ಪ್ರತಿಯೊಬ್ಬರೂ ಮುಂದೆ ಬರುವವರಿಗೆ ತಮಲ್ಲಿರುವುದನ್ನು ಹಲವು ಶತಮಾನಗಳಿಂದ ಕನಸುಕಾಣುತ್ತಿದ್ದ ಜನಾಂಗದ ಸಾಮರಸ್ಯವೆಂಬ ಭವಿಷ್ಯ ಆದರ್ಶಕ್ಕೆ ಧಾರೆ ಎರೆದು ಕೊಡಬೇಕು. ಆ ಆದರ್ಶಜಗತ್ತು ಎಂದಾದರೂ ಪ್ರಪಂಚದಲ್ಲಿ ಸಾಧ್ಯವೇ ನನಗೆ ತಿಳಿಯದು, ಸಮಾಜ ಪೂರ್ಣತೆಯನ್ನು ಮುಟ್ಟುವುದಕ್ಕೆ ಸಾಧ್ಯವೇ ಎಂಬುದರಲ್ಲಿ ನನಗೇನೋ ಸಂದೇಹವಿದೆ. ಅದು ಸಾಧ್ಯವಾಗಲಿ ಆಗದಿರಲಿ, ಅದು ನಾಳೆಯೆ ಬರ ಬಹುದು, ಅದು ನನ್ನ ಕರ್ತವ್ಯದ ಮೇಲೆ ನಿಂತಿರುವುದೆಂದು ತಿಳಿದು ಕಾರ್ಯೋನ್ಮುಖನಾಗಬೇಕು. ಪ್ರತಿಯೊಬ್ಬರೂ ತಮ್ಮ ಪಾಲಿನ ಕರ್ತವ್ಯ ವನ್ನು ಮಾಡಿರುವರು, ಮಿಕ್ಕಿರುವುದೇ ತನ್ನ ಪಾಲಿನದು ಎಂದು ಎಲ್ಲರೂ ಭಾವಿಸಬೇಕು. ನಾವು ವಹಿಸಬೇಕಾದ ಜವಾಬ್ದಾರಿ ಇದು.

ಈಚೆಗೆ ಭರತಖಂಡದಲ್ಲಿ ಪ್ರಚಂಡ ಧಾರ್ಮಿಕ ಜಾಗ್ರತಿಯಾಗಿದೆ. ಮುಂದೆ ಕೀರ್ತಿಇರುವಂತೆ ಅಪಾಯವೂ ಇದೆ. ಕೆಲವುವೇಳೆ ಜಾಗ್ರತಿಯಿಂದ ಮತಭ್ರಾಂತಿ ಜನಿಸುವುದು. ಕೆಲವುವೇಳೆ ಅದು ಮಿತಿಮೀರಿ ಹೋಗುವುದು. ಯಾರು ಈ ಜಾಗ್ರತಿಗೆ ಕಾರಣಕರ್ತರೋ ಅವರಿಗೆ ಅದನ್ನು ನಿಗ್ರಹಿಸಲು ಸ್ವಲ್ಪದೂರ ಹೋದಮೇಲೆ ಅಸಾಧ್ಯವಾಗುವುದು. ಅದಕ್ಕೆ ಮುಂಚೆಯೇ ಜೋಪಾನವಾಗಿರುವುದು ಒಳ್ಳೆಯದು. ಪೂರ್ವಾಚಾರ ಪರಾಯಣರು ಒಂದುಕಡೆ, ಪಾಶ್ಚಾತ್ಯ ಸಂಸ್ಕೃತಿಯ ಅಂತರಾಳಕ್ಕೆ ಧಾಳಿ ಇಟ್ಟ ಜಡನಿರೀಶ್ವರ ವಾದ ಒಂದುಕಡೆ ಇದೆ. ಇದರ ಮಧ್ಯದಲ್ಲಿ ನಾವು ಹೋಗಬೇಕಾಗಿದೆ. ನಾವು ಪಾಶ್ಚಾತ್ಯರಾಗಲಾರೆವು. ಪಾಶ್ಚಾತ್ಯರನ್ನು ಅನುಕರಿಸಿ ಪ್ರಯೋಜನವಿಲ್ಲ. ನೀವು ಪಾಶ್ಚಾತ್ಯರನ್ನು ಅನುಕರಿಸುವುದಕ್ಕೆ ಪ್ರಯತ್ನಪಟ್ಟೊಡನೆಯೆ ನಾಶವಾಗುವಿರಿ. ನಿಮ್ಮಲ್ಲಿ ಜೀವನವೇ ಇರುವುದಿಲ್ಲ. ಎರಡನೆಯದಾಗಿ ಇದು ಅಸಾಧ್ಯ. ಅನಾದಿಕಾಲದಲ್ಲಿ ಒಂದೆಡೆ ನದಿ ಉಗಮಿಸಿದೆ. ಅದು ಸಹಸ್ರಾರುವರ್ಷಗಳು ಹರಿಯುತ್ತಿದೆ. ಆ ನದಿಯನ್ನು ಹಿಮಾಲಯದ ಮೂಲಕ್ಕೆ ತಳ್ಳಬಲ್ಲಿರಾ? ಒಂದು ವೇಳೆ ಅದು ಸಾಧ್ಯವಾದರೂ ನೀವು ಪಾಶ್ಚಾತ್ಯರಾಗಲಾರಿರಿ. ಪಾಶ್ಚಾತ್ಯ ದೇಶದಲ್ಲಿರುವ ಕೆಲವು ಶತಮಾನಗಳ ಸಂಸ್ಕೃತಿಯನ್ನೇ ಅವರು ಕಿತ್ತೊಗೆಯಲು ಸಾಧ್ಯವಿಲ್ಲದೆ ಇದ್ದರೆ ಸಹಸ್ರಾರು ವರ್ಷಗಳಿಂದ ಬಂದ ಸಂಸ್ಕೃತಿಯನ್ನು ಕಿತ್ತೊಗೆಯಬಲ್ಲಿರಾ? ಇದು ಸಾಧ್ಯವಿಲ್ಲ. ಈಗ ಸಾಧಾರಣವಾಗಿ ಯಾವುದನ್ನು ನಾವು ಧಾರ್ಮಿಕಶ್ರದ್ಧೆ ಎನ್ನುವೆವೋ ಅದು ಪ್ರತಿಯೊಂದು ಲೋಕಾಚಾರದಲ್ಲೂ ಪಂಗಡಗಳ ದೇವರಲ್ಲಿ ನಂಬಿಕೆಯಾಗಿದೆ. ಲೋಕಾಚಾರಗಳು ಹಲವು ಇವೆ, ಪರಸ್ಪರವಿರೋಧವಾಗಿವೆ. ಯಾವುದನ್ನು ಅನುಸರಿಸಬೇಕು ಯಾವುದನ್ನು ವಿರೋಧಿಸಬೇಕು? ದಕ್ಷಿಣದೇಶದ ಬ್ರಾಹ್ಮಣ ಮತ್ತೊಬ್ಬ ಬ್ರಾಹ್ಮಣ ಮಾಂಸ ತಿನ್ನುವುದನ್ನು ನೋಡಿದರೆ ಜಿಗುಪ್ಸೆಯಿಂದ ತಲೆತಿರುಗಿಸುವನು. ಔತ್ತರೇಯ ಬ್ರಾಹ್ಮಣ ಇದು ಪರಮಪವಿತ್ರವೆಂದು ಭಾವಿಸಿ, ನೂರಾರು ಪ್ರಾಣಿಗಳನ್ನು ಬಲಿ ಕೊಡುವನು. ನೀವು ನಿಮ್ಮ ಆಚಾರವನ್ನು ತಂದರೆ ಅವರು ಅವರ ಆಚಾರವನ್ನು ತರುವರು. ಭರತ ಖಂಡದಲ್ಲಿ ಎಷ್ಟೋ ಬಗೆಯ ಲೋಕಾಚಾರಗಳಿವೆ. ಆದರೆ ಇವೆಲ್ಲಾ ಲೋಕಾಚಾರ. ನಾವು ಮಾಡುವ ದೊಡ್ಡ ತಪ್ಪು ಲೋಕಾಚಾರವನ್ನೇ ಧರ್ಮಸಾರವೆಂದು ಭಾವಿಸುವುದು.

ಇದರಾಚೆ ಇನ್ನೂ ಹೆಚ್ಚು ಕಷ್ಟವಿದೆ. ಎರಡು ಬಗೆಯ ಸತ್ಯ ನಮ್ಮ ಶಾಸ್ತ್ರದಲ್ಲಿದೆ. ಒಂದು ಮನುಷ್ಯನ ನಿತ್ಯಸ್ವರೂಪಕ್ಕೆ ಸಂಬಂಧಪಟ್ಟ ದೇವರು ಆತ್ಮ ಪ್ರಕೃತಿಯ ಪರಸ್ಪರ ಸಂಬಂಧವನ್ನು ವಿವರಿಸುವುದು. ಎರಡನೆಯದು ದೇಶಕಾಲ ಅವಸ್ಥಾಭೇದದ ಮೇಲೆ ನಿಂತ ಲೋಕಾಚಾರ ಗಳು. ಮೊದಲನೆಯದು ನಮ್ಮ ವೇದದಲ್ಲಿ ಬರುವುದು. ಎಲ್ಲಾ ಕಾಲಕ್ಕೂ ವೇದಗಳೇ ಪರಮ ಪ್ರಮಾಣವೆಂಬುದನ್ನು ಒಪ್ಪಬೇಕು. ಪುರಾಣ ವೇದಕ್ಕೆ ವಿರೋಧವಾಗಿದ್ದರೆ ಆ ಭಾಗವನ್ನು ತಿರಸ್ಕರಿಸಬೇಕು. ಸ್ಮೃತಿ ಬೇರೊಂದು ವಿಚಾರವನ್ನು ಹೇಳುವುದು. ಒಂದು ಸತ್ಯ ಯುಗದ ಆಚಾರ ಮತ್ತೊಂದು ಕಲಿಯುಗದ ಆಚಾರವೆನ್ನುವುದು. ಮನುಷ್ಯನ ನೈಜ ಸ್ವಭಾವದ ಮೇಲೆ ನಿಂತ ನಿತ್ಯಸತ್ಯ ಎಂದಿಗೂ ಬದಲಾಯಿಸುವು ದಿಲ್ಲವೆನ್ನುವುದು ಪ್ರಖ್ಯಾತ ಸಿದ್ಧಾಂತ. ಅದು ಎಲ್ಲಾ ದೇಶಕ್ಕೂ ಅನ್ವಯಿ ಸುವ ಸನಾತನ ತತ್ತ್ವಗಳು. ಸ್ಮೃತಿಗಳು ಆಯಾದೇಶ ಕಾಲಕ್ಕೆ ಅನ್ವಯಿ ಸುವ ಆಚಾರಗಳನ್ನು ಮಾತ್ರ ಹೇಳುವುವು. ಅವು ಕಾಲ ಕಾಲಕ್ಕೆ ಬದ ಲಾಯಿಸುವುವು. ಇದನ್ನು ನೀವು ಯಾವಾಗಲೂ ಜ್ಞಾಪಕದಲ್ಲಿಟ್ಟಿರಬೇಕು. ಕೆಲವು ಸಮಾಜಕ್ಕೆ ಅನ್ವಯಿಸುವ ಆಚಾರವ್ಯತ್ಯಾಸವಾದರೆ ಧರ್ಮ ವ್ಯತ್ಯಾಸ ವಾಗುವುದಿಲ್ಲ. ಈ ಆಚಾರಗಳು ಎಷ್ಟೋ ಬದಲಾಯಿಸಿವೆ ಎಂಬುದನ್ನು ಗಮನದಲ್ಲಿಡಿ. ಹಿಂದೆ ದನದ ಮಾಂಸ ತಿನ್ನದ ಬ್ರಾಹ್ಮಣನಿರಲಿಲ್ಲ. ಸನ್ಯಾಸಿ ರಾಜ ಮಹಾತ್ಮರು ಮನೆಗೆ ಬಂದರೆ ಗೌರವಾರ್ಥವಾಗಿ ಕುರಿ ಎತ್ತನ್ನು ಕೊಂದು ಅಡಿಗೆ ಮಾಡುತ್ತಿದ್ದರು. ಕಾಲಕ್ರಮೇಣ ನಮ್ಮದು ಕೃಷಿಪ್ರಾಧಾನ್ಯ ಜೀವನವಾಗಿದ್ದರಿಂದ ಅತ್ಯುತ್ತಮ ಎತ್ತುಗಳನ್ನು ಕೊಂದರೆ ಕ್ರಮೇಣ ದನದಜಾತಿಯೇ ನಾಶವಾಗುವುದೆಂದು ತಿಳಿದು ಗೋಹತ್ಯ ಮಹಾ ಪಾಪವೆಂದು ಪರಿಗಣಿಸಲು ಪ್ರಾರಂಭಿಸಿದರು. ಈ ಮಹಾ ಪಾಪವೆಂದು ಪರಿಗಣಿಸಿದ ಕೆಲವು ಕೃತ್ಯಗಳು ಹಿಂದೆ ಧಾರ್ಮಿಕ ವಾಗಿದ್ದವು. ಕ್ರಮೇಣ ಬೇರೆ ಆಚಾರಗಳು ರೂಢಿಗೆ ಬಂದವು. ಕೆಲವು ಕಾಲದ ಮೇಲೆ ಇವೂ ಹೋಗಿ ಬೇರೆ ಸ್ಮೃತಿಗಳು ಬರುವುವು. ವೇದಗಳು ನಿತ್ಯವಾದುದರಿಂದ ಎಲ್ಲಾ ಕಾಲಕ್ಕೂ ಒಂದೇ ಸಮನಾಗಿರುವುವು. ಸ್ಮೃತಿ ಗಳು ಕಾಲಕಾಲಕ್ಕೆ ಬದಲಾಯಿಸುವುವು. ಕಾಲ ಕಳೆದಂತೆ ಹೆಚ್ಚು ಹೆಚ್ಚು ಹಿಂದಿನ ಸ್ಮೃತಿಭಾಗ ಹೋಗುವುದು. ಋಷಿಗಳು ಬಂದು ಆಯಾ ಕಾಲಕ್ಕೆ ತಕ್ಕ ಬದಲಾವಣೆ ಮಾಡಿ ಹೊಸಮಾರ್ಗ ಮತ್ತು ಕರ್ತವ್ಯವನ್ನು

ಜನರಿಗೆ ಬೋಧಿಸುವರು. ಎರಡು ಅಪಾಯಗಳಿಂದ ಪಾರಾಗಿ ನಾವು ಮುಂದುವರಿಯಬೇಕು. ಇದನ್ನು ತಿಳಿದುಕೊಳ್ಳುವಷ್ಟು ಶ್ರದ್ಧೆ ಮತ್ತು ಔದಾರ್ಯತೆ ಎಲ್ಲರಲ್ಲಿಯೂ ಇರುವುದೆಂದು ಊಹಿಸುತ್ತೇನೆ. ನಾವು ಎಲ್ಲಾ ಒಳ್ಳೆಯದನ್ನೂ ಸ್ವೀಕರಿಸಬೇಕು, ಯಾವುದನ್ನೂ ಅಲ್ಲಗಳೆಯಕೂಡದು. ಮತಭ್ರಾಂತನ ಉದ್ವೇಗದೊಂದಿಗೆ ಜಡವಾದಿಯ ವಿಶಾಲತೆ ಇರಲಿ. ಸಾಗರದಷ್ಟು ಆಳವಾಗಿ ಗಗನದಷ್ಟು ವಿಶಾಲವಾಗಿರಬೇಕು ನಮ್ಮ ಹೃದಯ. ಇತರ ರಾಷ್ಟ್ರಗಳಂತೆ ನಾವೂ ಮುಂದುವರಿಯೋಣ. ಆದರೆ ಜತೆಗೆ ಹಿಂದೂಗಳಿಗೆ ಮಾತ್ರ ಸಾಧ್ಯವಾದ ಸಂಪ್ರದಾಯಗೌರವ ಮತ್ತು ಶ್ರದ್ಧೆ ಇರಲಿ. ಪ್ರತಿಯೊಂದರಲ್ಲಿಯೂ ಮುಖ್ಯ ಯಾವುದು ಅಮುಖ್ಯ ಯಾವುದು ಇದನ್ನು ನಾವು ಅರಿಯಬೇಕು. ಮುಖ್ಯವಾದುವು ಎಲ್ಲಾ ಕಾಲಕ್ಕೂ ಅನ್ವಯಿಸುವುವು. ಅಮುಖ್ಯವಾದುವು ಕೆಲವುಕಾಲಕ್ಕೆ ಮಾತ್ರ ಅನ್ವಯಿಸುವುದು, ಅನಂತರ ಅದು ಬದಲಾಯಿಸದೆ ಇದ್ದರೆ ಅದರಿಂದ ಅಪಾಯವೇ ಸಿದ್ಧ. ನಿಮ್ಮ ಹಿಂದಿನ ಆಚಾರ ಸಂಸ್ಥೆ ಇದನ್ನು ಅಲ್ಲಗಳೆಯಬೇಕೆಂದು ಅಲ್ಲ. ನಿಜವಾಗಿ ಇಲ್ಲ. ನೀವು ಅತಿ ನೀಚವಾದುದನ್ನೂ ಅಲ್ಲಗಳೆಯಕೂಡದು. ಯಾವುದನ್ನೂ ನಿಂದಿಸಬೇಡಿ. ಯಾವುದು ಈಗ ಪಾಪದಂತೆ ಕಾಣುತ್ತಿದೆಯೋ ಅದು ಹಿಂದೆ ಒಂದಾನೊಂದು ಕಾಲದಲ್ಲಿ ಉಪಯೋಗವಾಗಿತ್ತು. ಈಗ ನಾವು ಅದನ್ನು ತೆಗೆಯಬೇಕಾದರೆ ನಿಂದಿಸಿ ಆ ಕೆಲಸ ಮಾಡಬೇಕಾಗಿಲ್ಲ. ನಮ್ಮ ಜನಾಂಗದ ರಕ್ಷಣೆಗೆ ಇವು ಹಿಂದೆ ಮಾಡಿದ ಉಪಕಾರವನ್ನು ಸ್ಮರಿಸಿ ಕೃತಜ್ಞತೆ ತೋರಬೇಕು. ಅವನ್ನು ನಿಂದಿಸಿ ಕಾರ್ಯಸಾಧಿಸದೆ ಇರುವುದಕ್ಕಿಂತ ಗೌರವಿಸಿ ಮುಂದುವರಿಯೋಣ. ನಮ್ಮ ಸಮಾಜದ ಮುಂದಾಳುಗಳು ಯಾವಾಗಲೂ ರಾಜರಾಗಿರಲಿಲ್ಲ, ಯೋಧರಾಗಿರಲಿಲ್ಲ, ಋಷಿಗಳಾಗಿದ್ದರು. ಈ ಋಷಿಗಳು ಯಾರು? ಉಪನಿಷತ್ತಿನಲ್ಲಿ ಹೇಳಿರುವಂತೆ ಋಷಿ ಎಂದರೆ ಸಾಮಾನ್ಯನಲ್ಲ ಮಂತ್ರ ದ್ರಷ್ಟ. ಅವನು ಧರ್ಮವನ್ನು ನೋಡುವವನು. ಅವನಿಗೆ ಧರ್ಮವೆಂದರೆ ಪಾಂಡಿತ್ಯವಲ್ಲ ತರ್ಕವಲ್ಲ ಊಹೆಯಲ್ಲ, ಬರಿ ಮಾತೂ ಅಲ್ಲ, ಅದು ಸತ್ಯ ಸಾಕ್ಷಾತ್ಕಾರ ಇಂದ್ರಿಯಾತೀತ ಆತ್ಮಾನುಭೂತಿ. ಇವರೇ ಋಷಿವರ್ಯರು. ಇವರು ಯಾವುದೋ ಕಾಲ ದೇಶ ಪಂಗಡಕ್ಕೆ ಸೇರಿದವರಲ್ಲ. ಸತ್ಯ ಸಾಕ್ಷಾತ್ಕಾರ ಮಾಡಿಕೊಳ್ಳಬೇಕೆಂದು ವಾತ್ಸ್ಯಾಯನ ಹೇಳುವನು. ನಾನು ನೀವು ಎಲ್ಲರೂ ಋಷಿಗಳಾಗಬೇಕು. ಆತ್ಮಶ್ರದ್ಧೆ ಇರಬೇಕು. ನಾವು ಪ್ರಪಂಚಚಾಲಕರಾಗಬೇಕು. ಅನಂತಶಕ್ತಿ ನಮ್ಮಲ್ಲಿದೆ.

ನಾವು ಸತ್ಯವನ್ನು ಅನುಭವಿಸಬೇಕು, ಸಾಕ್ಷಾತ್ಕಾರಮಾಡಿಕೊಳ್ಳಬೇಕು. ಅದರಮೇಲಿನ ಅನುಮಾನವನ್ನು ಹೀಗೆ ಕಳೆದುಕೊಳ್ಳಬೇಕು. ಋಷಿ ದರ್ಶನದ ಮೇಲೆ ನಿಂತ ನಮ್ಮಲ್ಲಿ ಪ್ರತಿಯೊಬ್ಬರೂ ಮಹಾವ್ಯಕ್ತಿಗಳಾಗುವೆವು. ನಮ್ಮ ಬಾಯಿಂದ ಬಿದ್ದ ನುಡಿಯೊಂದೂ ವ್ಯರ್ಥವಾಗಲಾರದು. ಯಾರಿಗೂ ಶಾಪಕೊಡದೆ ಯಾರನ್ನೂ ದೂರದೆ ಯಾರೊಂದಿಗೂ ಕಾದಾಡದೆ ಪಾಪ ತನಗೆ ತಾನೆ ಮಾಯವಾಗುವುದು. ನಮ್ಮ ಮತ್ತು ಇತರರ ಮುಕ್ತಿಗೆ ಋಷಿಗಳಾಗುವಂತೆ ಭಗವಂತ ನಮ್ಮೆಲ್ಲರನ್ನೂ ಆಶೀರ್ವದಿಸಲಿ!



# ವೇದಾಂತದ ಉದ್ದೇಶ

## (ಕುಂಭಕೋಣದ ಬಿನ್ನವತ್ತಳೆಗೆ ಉತ್ತರ)

"ಸ್ವಲ್ಪ ಧರ್ಮಮಾಡಿದರೂ ಮಹಾಪರಿಣಾಮಕಾರಿಯಾಗುವುದು." ಎಂಬ ಗೀತೆಯ ಸಂದೇಶಕ್ಕೆ ಉದಾಹರಣೆ ಬೇಕಾದರೆ ಅದನ್ನು ನನ್ನ ಅಲ್ಪ ಜೀವನದಲ್ಲಿ ಪ್ರತಿದಿನ ನೋಡುತ್ತಿರುವೆನು. ನಾನು ಮಾಡಿದ ಕೆಲಸ ಅತ್ಯಲ್ಪ. ಆದರೆ ನಾನು ಕೊಲಂಬೊ ನಗರದಿಂದ ಇಲ್ಲಿಯವರೆಗೆ ನನ್ನ ಪ್ರಯಾಣದ ಹಂತದಲ್ಲಿ ಸಿಕ್ಕಿದ ಹಾರ್ದಿಕ ದಯಾಪೂರಿತ ಸ್ವಾಗತ ಎಲ್ಲಾ ನಿರೀಕ್ಷಣೆಯನ್ನೂ ಮೀರಿದೆ. ಇದು ಸಂಸ್ಕೃತಿಗೆ ಯೋಗ್ಯವಾಗಿದೆ. ಅವರ ಜನಾಂಗಕ್ಕೆ ತಕ್ಕ ಗೌರವ ತರತಕ್ಕದ್ದಾಗಿದೆ. ಏಕೆಂದರೆ ನೀವೆಲ್ಲಾ ಹಿಂದೂಗಳು, ನಮ್ಮ ಜೀವನ ಮೂಲ, ನಮ್ಮ ಕ್ರಿಯೆ, ನಮ್ಮ ಜೀವಾಳ ಎಲ್ಲಾ ಧರ್ಮವಾಗಿದೆ. ನಾನು ಸ್ವಲ್ಪ ಪ್ರಪಂಚವನ್ನು ನೋಡಿರುವೆನು. ಪೂರ್ವ ಪಾಶ್ಚಾತ್ಯ ದೇಶಗಳಲ್ಲಿ ಸಂಚರಿಸಿರುವೆನು. ಪ್ರತಿಯೊಂದು ಜನಾಂಗ ದಲ್ಲಿಯೂ ಯಾವುದಾದರೊಂದು ಆದರ್ಶ ಅದಕ್ಕೆ ಪ್ರಧಾನವಾಗಿದೆ. ಕೆಲವರಲ್ಲಿ ಇದು ರಾಜಕೀಯವಾಗಿದೆ, ಕೆಲವರಲ್ಲಿ ಸಾಮಾಜಿಕವಾಗಿದೆ, ಕೆಲವರಲ್ಲಿ ಇದು ಪಾಂಡಿತ್ಯಕ್ಕೆ ಸಂಬಂಧಪಟ್ಟಿದೆ. ಆದರೆ ಭರತಖಂಡದಲ್ಲಿ ಆ ಮೂಲ ಕೇಂದ್ರ ತಳಹದಿಯೇ ಧರ್ಮ. ಅಮೆರಿಕಾದಿಂದ ಮದ್ರಾಸಿನ ಬಿನ್ನವತ್ತಳೆಗೆ ನಾನು ಬರೆದು ಕಳುಹಿಸಿದ ಉತ್ತರದಲ್ಲಿ ನಾನು ಹೇಳಿದ ಇಂಡಿಯಾ ದೇಶದ ಸಾಮಾನ್ಯ ಬೇಸಾಯಗಾರನಿಗೆ ಪಾಶ್ಚಾತ್ಯ ಭದ್ರಮನುಷ್ಯ ನಿಗಿಂತ ಹೆಚ್ಚು ಧರ್ಮ ಗೊತ್ತಿದೆ ಎಂಬುದು ನಿಮ್ಮಲ್ಲಿ ಕೆಲವರಿಗೆ ಗೊತ್ತಿದೆ. ಇಂದು ನಿಸ್ಸಂಶಯವಾಗಿ ನಾನು ಇದನ್ನು ನೋಡುತ್ತಿರುವೆನು. ಇಂಡಿಯಾ ದೇಶದ ಜನಸಾಮಾನ್ಯರಲ್ಲಿ ವಿಷಯ ಕುತೂಹಲವಿಲ್ಲದಿರುವುದು, ಅವ ರಲ್ಲಿರುವ ಅಜ್ಞಾನ ಇವನ್ನು ನೋಡಿ ನಾನು ಕೆಲವು ವೇಳೆ ಅಸಂತುಷ್ಟ ನಾಗಿದ್ದೆ. ಆದರೆ ನನಗೆ ಇದು ಈಗ ತಿಳಿಯಿತು. ಎಲ್ಲಿ ಅವರಿಗೆ ಕುತೂ ಹಲವಿದೆ ಅಲ್ಲಿ ಅವರಿಗೆ ವಿಷಯ ಕುತೂಹಲ ನಾನು ನೋಡಿದ ಇತರ ದೇಶದವರಿಗಿಂತ ಹೆಚ್ಚಾಗಿದೆ. ಪಾಶ್ಚಾತ್ಯ ದೇಶಗಳಲ್ಲಿ ಆಗುತ್ತಿರುವ ಅದ್ಭುತ ರಾಜಕೀಯ ಬದಲಾವಣೆಗಳ ವಿಚಾರವಾಗಿ ನಮ್ಮವರನ್ನು ಕೇಳಿ. ಅವರಿಗೆ ಏನೂ ಗೊತ್ತಿಲ್ಲ. ಆದರೆ ಭರತಖಂಡದಿಂದ ಬೇರ್ಪಟ್ಟ ಸಿಲೋನಿ ನಲ್ಲಿರುವ ರೈತಾಪಿ ಜನರಿಗೂ ಅಮೆರಿಕಾದಲ್ಲಿ ಒಂದು ವಿಶ್ವಧರ್ಮ ಸಮ್ಮೇ

ಳನ ನಡೆಯಿತೆಂದೂ, ಅಲ್ಲಿಗೆ ಒಬ್ಬ ಹಿಂದೂ ಸನ್ಯಾಸಿ ಹೋದನೆಂದೂ, ಅಲ್ಲಿ ಆತನಿಗೆ ಸ್ವಲ್ಪ ಜಯ ಲಭಿಸಿತೆಂದೂ ಗೊತ್ತಿದೆ. ಅವರ ಉತ್ಸಾಹ ಎಲ್ಲಿದೆಯೊ ಅಲ್ಲಿ ಅವರು ಇತರರಂತೆ ವಿಷಯ ಕುತೂಹಲಿಗಳಾಗಿರುವರು. ಧರ್ಮವೊಂದೇ ಹಿಂದೂಗಳ ಏಕಮಾತ್ರ ಆಸಕ್ತಿ. ನಮ್ಮ ರಾಷ್ಟ್ರಜೀವಾಳ ಧರ್ಮದಲ್ಲಿರುವುದು ಒಳ್ಳೆಯದೆ, ರಾಜಕೀಯದಲ್ಲಿರುವುದು ಒಳ್ಳೆಯದೆ, ಎಂಬ ವಿಚಾರವಾಗಿ ಈಗ ನಾನು ಮಾತನಾಡುತ್ತಿಲ್ಲ. ಒಳ್ಳೆಯದಕ್ಕೊ, ಕೆಟ್ಟದಕ್ಕೊ ಅಂತೂ ನಮ್ಮ ಜನಾಂಗದ ಜೀವ ಧರ್ಮದಲ್ಲಿದೆ. ಅದನ್ನು ಈಗ ಬದಲಾಯಿಸುವುದಕ್ಕೆ ಆಗುವುದಿಲ್ಲ. ಅದನ್ನು ನಾಶಮಾಡಿ ಬೇರೊಂದನ್ನು ಅಲ್ಲಿ ಪ್ರತಿಷ್ಠಾಪನೆ ಮಾಡಲಾರಿರಿ. ಒಂದು ದೊಡ್ಡ ಮರವನ್ನು ಒಂದು ಕಡೆ ಕಿತ್ತು ಮತ್ತೊಂದು ಕಡೆ ತಕ್ಷಣ ಬೇರು ಬಿಡಿಸುವುದಕ್ಕೆ ಆಗುವುದಿಲ್ಲ. ಒಳ್ಳೆಯದಕ್ಕೊ ಕೆಟ್ಟದಕ್ಕೊ ಧರ್ಮದ ಭಾವನೆ ಹಲವು ಸಹಸ್ರ ವರುಷಗಳಿಂದ ಹರಿದುಬರುತ್ತಿದೆ. ಒಳ್ಳೆಯದಕ್ಕೊ ಕೆಟ್ಟದಕ್ಕೊ ನಾವು ಅದೇ ವಾತಾವರಣದಲ್ಲಿ ಹುಟ್ಟಿ ಬೆಳೆದಿರುವೆವು. ಅದು ಈಗ ರಕ್ತದಲ್ಲಿ ಮಿಶ್ರವಾಗಿ ಪ್ರತಿಯೊಂದು ಬಿಂದುವಿನಲ್ಲಿಯೂ ಓತಪ್ರೋತವಾಗಿ, ದೇಹದ ಅಂಗೋಪಾಂಗದಲ್ಲಿ ಹರಿದು ಈಗ ಅದು ನಮ್ಮ ಬಾಳ ಉಸಿರಾಗಿರುವುದು. ನೀವು ಅಷ್ಟೇ ಪ್ರತಿಭಟನೆ ಇಲ್ಲದೆ ಅದನ್ನು ತ್ಯಜಿಸಬಲ್ಲಿರಾ? ಆ ಅದ್ಭುತ ಮಹಾನದಿ ಸಹಸ್ರವರುಷಗಳಿಂದ ಹರಿದ ಪಾತ್ರವನ್ನು ಬದಲಾಯಿಸಬಲ್ಲಿರಾ? ಗಂಗಾನದಿ ಪುನಃ ಹಿಮಾಲಯಕ್ಕೆ ಹೋಗಿ ಬೇರೆ ಪಾತ್ರದಲ್ಲಿ ಹರಿಯಲು ಸಾಧ್ಯವೆ? ಅದು ಒಂದು ವೇಳೆ ಸಾಧ್ಯವಾದರೂ ಹಿಂದೂಗಳ ಜಾತಿಧರ್ಮವಾದ ಆಧ್ಯಾತ್ಮವನ್ನು ತೊರೆದು ರಾಜಕೀಯ ಮುಂತಾದುವನ್ನು ಪಡೆದುಕೊಳ್ಳಲು ಅಸಾಧ್ಯ. ಎಲ್ಲಿ ವಿರೋಧ ಕಡಿಮೆ ಇದೆಯೊ ಅಲ್ಲಿ ಮಾತ್ರ ಕೆಲಸಮಾಡಬಹುದು. ಭರತಖಂಡದಲ್ಲಿ ಧರ್ಮಕ್ಕೆ ಎಲ್ಲಕ್ಕಿಂತ ಕಡಿಮೆ ವಿರೋಧ. ಧರ್ಮವನ್ನು ಅನುಸರಿಸುವುದೇ ಜೀವನದ ಮಾರ್ಗ, ಏಳ್ಗೆಯ ಮಾರ್ಗ, ಶ್ರೇಯಸ್ಸಿನ ಮಾರ್ಗ. ಉಳಿದ ದೇಶಗಳಲ್ಲಿ ಧರ್ಮ ಹಲವು ಆವಶ್ಯಕ ವಸ್ತುಗಳಲ್ಲಿ ಒಂದು. ಈಗಿನಕಾಲದಲ್ಲಿ ಒಂದು ಜಪಾನಿ ಹೂವಿನ ಜಾಡಿ ಇಡುವುದೊಂದು ಷೋಕಿ. ಅದನ್ನು ಗೃಹಿಣಿ ಪಡೆಯಲೇಬೇಕು. ಅದಿಲ್ಲದೆ ಚೆನ್ನಾಗಿ ಮನೆ ಕಾಣುವುದಿಲ್ಲ. ಭದ್ರಮನುಷ್ಯ ಮಹಿಳೆಯರಿಗೆ ಜೀವನದಲ್ಲಿ ಎಷ್ಟೋ ಕೆಲಸಕಾರ್ಯಗಳಿವೆ. ಅದು ಪೂರ್ಣವಾಗಬೇಕಾದರೆ ಸ್ವಲ್ಪ ಧರ್ಮ ಬೇಕು.

ಅದಕ್ಕೆ ಅವರಲ್ಲಿ ಸ್ವಲ್ಪ ಧರ್ಮವಿದೆ. ರಾಜಕೀಯ ಸಮಾಜ ಮತ್ತು ಒಂದು ಮಾತಿನಲ್ಲಿ ಹೇಳುವುದಾದರೆ ಈ ಪ್ರಪಂಚವೇ ಪಾಶ್ಚಾತ್ಯರ ಜೀವನದ ಗುರಿ. ಈ ಪ್ರಪಂಚದಲ್ಲಿ ನಮ್ಮ ಸಹಾಯಕ್ಕೆ ದೇವರು ಧರ್ಮ ಸ್ವಲ್ಪಬೇಕು. ಈ ಪ್ರಪಂಚದಲ್ಲಿ ಇವರಿಗೆ ಬೇಕಾದುದನ್ನು ಕೊಟ್ಟು, ಪ್ರಪಂಚವನ್ನು ಶುಚಿಯಾಗಿಟ್ಟಿರುವವನೇ ಅವರ ದೇವರು. ದೇವರು ಎಂದರೆ ಅವರಿಗೆ ಇದೊಂದೇ ಭಾವನೆ. ಕಳೆದ ಒಂದೆರಡು ಮೂರು ವರುಷಗಳಿಂದ ಇನ್ನೂ ಹೆಚ್ಚು ಅನುಭವವಿಲ್ಲದವರು ಅಥವಾ ತಮಗೆ ಹೆಚ್ಚು ಗೊತ್ತಿದೆ ಎಂದು ಭಾವಿಸುವವರು, ಭರತಖಂಡದ ಧರ್ಮವನ್ನು ಹೀಗೆ ಟೀಕಿಸಿರುವರು: ನಮ್ಮ ಧರ್ಮ ಇಹಲೋಕಸುಖಕ್ಕೆ ಸಹಾಯಮಾಡುವುದಿಲ್ಲ, ಇದು ನಮಗೆ ಐಶ್ವರ್ಯ ಕೊಡುವುದಿಲ್ಲ, ಇತರ ರಾಷ್ಟ್ರಗಳ ಐಶ್ವರ್ಯವನ್ನು ದೋಚುವಂತೆ ಮಾಡಲಾರದು. ದುರ್ಬಲರಮೇಲೆ ಬಲಿಷ್ಟರು ನಿಂತು ಅವರ ಬಾಳನ್ನು ಹೀರುವಂತೆ ಮಾಡಲಾರದು ಎನ್ನುವರು. ಹೌದು ನಿಜ, ನಮ್ಮ ಧರ್ಮ ಇದನ್ನು ಮಾಡುವುದಿಲ್ಲ. ಇತರ ದೇಶಗಳನ್ನು ನಾಶಮಾಡಿ ಸುಲಿಗೆ ಮಾಡುವುದಕ್ಕೆ ಸೇನೆಯನ್ನು ನಮ್ಮ ಧರ್ಮ ಕಳುಹಿಸಲಾರದು. ಅದಕ್ಕೇ ಅವರು ಈ ಧರ್ಮದಲ್ಲಿ ಏನಿದೆ ಎನ್ನುವರು. ಇದು ಹೊಟ್ಟೆಗೆ ಕೂಳು ಕೊಡಲಾರದು. ದೇಹಕ್ಕೆ ಶಕ್ತಿ ಕೊಡಲಾರದು. ಧರ್ಮದಲ್ಲಿ ಏನಿದೆ? ಈ ವಾದದ ಮೂಲಕವೇ ನಾವು ನಮ್ಮ ಧರ್ಮವನ್ನು ಸಾಧಿಸುತ್ತೇವೆ ಎಂಬುದು ಅವರಿಗೆ ಗೊತ್ತೇ ಇಲ್ಲ. ನಮ್ಮ ಧರ್ಮ ಇಹಲೋಕದ ಭೋಗಕ್ಕಲ್ಲ. ನಮ್ಮದೊಂದೇ ನಿಜವಾದ ಧರ್ಮ. ಮೂರು ದಿನ ಬಾಳುವ ಈ ಪ್ರಪಂಚವನ್ನೇ ನಮ್ಮ ಜೀವನದ ಪರಮಗುರಿಯನ್ನಾಗಿ ಮಾಡಲಾಗದು. ಈ ಕೆಲವು ಅಡಿಯ ಸಂಸಾರ ಪಂಕವೇ ನಮ್ಮ ಧರ್ಮದ ಗುರಿಯಲ್ಲ. ನಮ್ಮದು ಇದನ್ನೆಲ್ಲಾ ಅತಿಕ್ರಮಿಸುವುದು. ಆಚೆ, ಆಚೆ, ಇಂದ್ರಿಯಪರಿಮಿತಿ ಆಚೆ, ಕಾಲದೇಶಗಳಾಚೆ, ಎಲ್ಲದರಾಚೆ, ಈ ಪ್ರಪಂಚ ಲವಲೇಶವು ಇರುವುದಿಲ್ಲ. ಅಲ್ಲಿ ಆತ್ಮಜ್ಯೋತಿಯ ಮಹಾಸಾಗರದಲ್ಲಿ ಈ ಬ್ರಹ್ಮಾಂಡವೇ ಒಂದು ಬಿಂದುವಿನಂತೆ ತೋರುವುದು. ನಮ್ಮದೇ ನಿಜವಾದ ಧರ್ಮ. ದೇವರೊಬ್ಬನೇ ಸತ್ಯ, ಈ ಸಂಸಾರ ಕ್ಷಣಿಕ. ನಿಮ್ಮ ಐಶ್ವರ್ಯವೆಲ್ಲಾ ಮಣ್ಣಿನ ಸಮಾನ. ನಿಮ್ಮ ಅಧಿಕಾರಕ್ಕೆಲ್ಲಾ ಒಂದು ಮೇರೆ ಇದೆ. ಈ ಸಂಸಾರವೇ ಬಹುಪಾಲು ದುಃಖಮಯ ಎಂದು ಸಾರುವುದು ನಮ್ಮ ಧರ್ಮ. ಅದಕ್ಕೇ ನಮ್ಮ ಧರ್ಮವೇ ನಿಜವಾದ ಧರ್ಮವೆನ್ನು

ವುದು. ನಮ್ಮದೇ ನಿಜವಾದ ಧರ್ಮ. ಎಲ್ಲಕ್ಕಿಂತ ಹೆಚ್ಚಾಗಿ ಇದು ತ್ಯಾಗ ವನ್ನು ಸಾರುವುದು. ಭರತಖಂಡದ ಅತಿಪುರಾತನ ಮಹರ್ಷಿಗಳು ಕಂಡು ಹಿಡಿದ ಅನರ್ಘ್ಯ ಧರ್ಮ ಭಂಡಾರಕ್ಕೆ ಅಧಿಕಾರಿಗಳಾದ ಹಿಂದೂಗಳೊಂದಿಗೆ ಇತರರನ್ನು ಹೋಲಿಸಿ ನೋಡಿದರೆ, ಅವರು ನೆನ್ನೆಯ ಮಕ್ಕಳಂತೆ ಇರುವರು. ಅವರಿಗೆ ಮುಕ್ತಕಂಠದಿಂದ ಬಹಿರಂಗವಾಗಿ, "ಮಕ್ಕಳೆ ನೀವು ವಿಷಯಸುಖಕ್ಕೆ ಗುಲಾಮರು, ಇಂದ್ರಿಯ ಸುಖ ಪರಿಮಿತಿ ಯುಳ್ಳದ್ದು. ಈ ಮಾರ್ಗದಲ್ಲಿ ಹೋದರೆ ನಾಶ ಸಿದ್ಧ. ಮೂರು ದಿನದ ಸುಖದಿಂದ ಕೊನೆಗೆ ಸರ್ವನಾಶ ಪ್ರಾಪ್ತಿ. ಇದನ್ನೆಲ್ಲಾ ತ್ಯಜಿಸಿ, ಇಂದ್ರಿಯ ಸುಖವನ್ನು ತ್ಯಜಿಸಿ, ಪ್ರಪಂಚವನ್ನು ತ್ಯಜಿಸಿ. ಅದೇ ಧರ್ಮಮಾರ್ಗ" ಎಂದು ಸಾರುವುದು. ತ್ಯಾಗದಿಂದ ಮಾತ್ರ ಅಮೃತಪ್ರಾಪ್ತಿ. ಭೋಗ ದಿಂದ ಅಲ್ಲ. ಅದಕ್ಕೇ ನಮ್ಮದೊಂದೇ ನಿಜವಾದ ಧರ್ಮ. ಇದೊಂದು ಸೋಜಿಗದ ಸಂಗತಿ. ತಿರೆಯ ರಂಗಭೂಮಿಯ ಮೇಲೆ ರಾಷ್ಟ್ರಗಳಾದ ಮೇಲೆ ರಾಷ್ಟ್ರಗಳು ಬಂದು ಕೆಲವು ಕ್ಷಣ ಬಿಡುವಿಲ್ಲದೆ ಮೆರೆದಾಡಿ ಕೊನೆಗೆ ಯಾವುದೊಂದು ಪರಿಣಾಮವನ್ನೂ ಪ್ರಪಂಚದ ಮೇಲೆ ಬಿಡದೆ ಮಾಯ ವಾಗಿ ಹೋಗಿವೆ. ಆದರೆ ಇಂದಿಗೂ ನಾವು ಚ್ಯುತಿ ಇಲ್ಲದ ಪಾತ್ರದಲ್ಲಿ ಮಗ್ನರಾಗಿರುವೆವು. ಯಾರು ಬಲಾಢ್ಯರೊ ಅವರು ಮಾತ್ರ ಕೊನೆಗೆ ಉಳಿ ಯುವರೆಂಬ ಹೊಸ ಸಿದ್ಧಾಂತವನ್ನು ಪಾಶ್ಚಾತ್ಯರಿಂದು ಸಾರುತ್ತಿರುವರು. ಕೇವಲ ದೈಹಿಕ ಶಕ್ತಿಯೇ ಬಲಾಢ್ಯರ ಲಕ್ಷಣವೆಂದು ತಿಳಿಯುವರು. ಇದು ನಿಜವಾಗಿದ್ದರೆ ಹಿಂದಿನ ಕಾಲದ ಪ್ರಖ್ಯಾತ ಬಲಾಢ್ಯ ಜನಾಂಗಗಳು ಇಂದು ಇರಬೇಕಾಗಿತ್ತು. ಅನ್ಯರನ್ನು ಎಂದಿಗೂ ಗೆಲ್ಲದ ದೀನ ಹಿಂದೂ ನಾಶ ವಾಗಿ ಹೋಗಬೇಕಾಗಿತ್ತು. ಆದರೆ ನಾವು ಮೂವತ್ತು ಕೋಟಿ ಈಗಲೂ ಇರುವೆವು. (ಒಬ್ಬ ಆಂಗ್ಲೇಯ ತರುಣಿ ಒಮ್ಮೆ "ಹಿಂದೂಗಳು ಏನು ಮಾಡಿರುವರು? ಯಾವ ರಾಷ್ಟ್ರವನ್ನೂ ಅವರು ಗೆದ್ದಿಲ್ಲ!" ಎಂದು ಪ್ರಶ್ನಿಸಿ ದಳು) ಭರತಖಂಡದ ಶಕ್ತಿಯೆಲ್ಲಾ ವ್ಯರ್ಥವಾಗಿ ಈಗ ಮುದಿತನ ಬಂದಿದೆ ಎಂಬುದು ಸುಳ್ಳು. ಬೇಕಾದಷ್ಟು ಶಕ್ತಿ ಇದೆ. ಸಮಯಬಂದಾಗ ಪ್ರವಾಹದಂತೆ ಬಂದು ಪ್ರಪಂಚವನ್ನೆ ಮುಳುಗಿಸಬಲ್ಲದು.

ಹಿಂದಿನ ಕಾಲದಿಂದ ನಾವು ಪ್ರಪಂಚಕ್ಕೆ ಒಂದು ಸವಾಲನ್ನು ಹಾಕಿರು ವೆವು. ಮನುಷ್ಯ ಎಷ್ಟು ವಸ್ತುಗಳನ್ನು ಹೊಂದಬಹುದೆಂಬುದನ್ನು ಪಾಶ್ಚಾತ್ಯರು ನಿರ್ಣಯಿಸಲು ಕಾತುರರಾಗಿರುವರು. ಭಾರತೀಯರು ಎಷ್ಟು

ಅಲ್ಪ ಸಾಕಾಗಬಹುದು ಮಾನವನ ಜೀವನಕ್ಕೆ ಎಂಬುದನ್ನು ಬಗೆ ಹರಿಸಲು ಯತ್ನಿಸುತ್ತಿರುವರು. ಶತಮಾನಗಳವರೆಗೆ ಈ ವ್ಯತ್ಯಾಸ ಹೋರಾಟ ನಡೆಯು ವುದು. ಆದರೆ ಚರಿತ್ರೆಯಲ್ಲಿ ಏನಾದರೂ ಸತ್ಯವಿದ್ದರೆ, ತಾಳ್ಮೆ ಏನನ್ನಾದರೂ ನಮಗೆ ಕಲಿಸುವುದಿದ್ದರೆ, ಅದೇ, ಯಾರು ಅತಿ ಕಡಿಮೆಯ ಮೇಲೆ ಜೀವಿಸು ವರೊ, ಯಾರು ಸಂಯಮಿಗಳೊ, ಅವರೇ ಕೊನೆಗೆ ಜಯಶಾಲಿಗಳು. ಯಾರು ಸುಖಭೋಗಗಳನ್ನು ಬೆನ್ನಟ್ಟಿಹೋಗುವರೋ ಅವರು ತಾತ್ಕಾಲಿಕ ವಾಗಿ ಎಷ್ಟೇ ಬಲಾಢ್ಯರಾಗಿ ಕಂಡರೂ ಕೊನೆಗೆ ನಾಶವಾಗಲೇಬೇಕು. ವ್ಯಕ್ತಿ ಜೀವನದಲ್ಲಿ ಮತ್ತು ಜನಾಂಗದ ಜೀವನದಲ್ಲಿ ಕೆಲವು ವೇಳೆ ಪ್ರಪಂಚದ ಮೇಲೆ ಜಿಗುಪ್ಸೆ ಅತಿ ಪ್ರಾಮುಖ್ಯವಾಗಿ ಎದ್ದು ಕಾಣುತ್ತವೆ. ಈಗ ಪಾಶ್ಚಾತ್ಯ ದೇಶಗಳಲ್ಲಿ ಅಂತಹ ಕಾಲ ಪ್ರಾಪ್ತವಾಗಿದೆ. ಅವರಲ್ಲಿಯೂ ಮೇಧಾವಿ ಗಳಿರುವರು. ಐಶ್ವರ್ಯ ಅಧಿಕಾರವನ್ನು ಬೇಟೆಯಾಡುವುದು ನಿರರ್ಥಕವೆಂದು ಅವರು ತಿಳಿಯುತ್ತಿರುವರು. ಅವರಲ್ಲಿ ಎಷ್ಟೋ ಸುಸಂಸ್ಕೃತ ಸ್ತ್ರೀ ಪುರುಷರಿರುವರು. ಅವರಿಗೆ ಆಗಲೇ ಈ ಹೋರಾಟ ಸ್ಪರ್ಧೆ ಯಂತ್ರ ಪ್ರಧಾನ ಮೃಗೀಯ ಜೀವನ ಸಾಕಾಗಿದೆ. ಅದಕ್ಕಿಂತ ಉತ್ತಮವಾದು ದನ್ನು ನಿರೀಕ್ಷಿಸುತ್ತಿರುವರು. ಪಾಶ್ಚಾತ್ಯ ಸಮಸ್ಯೆಗಳಿಗೆಲ್ಲ ರಾಜಕೀಯ ಮತ್ತು ಸಾಮಾಜಿಕ ಸುಧಾರಣೆಯೊಂದೆ ಪರಮೌಷಧಿ ಎಂದು ನಂಬುವ ಕೆಲವರು ಇನ್ನೂ ಇರುವರು. ಆದರೆ ಅವರಲ್ಲೂ ಆಲೋಚನಾಶೀಲರು ಬೇರೆ ವಿಷಯಗಳನ್ನು ಕುರಿತು ಚಿಂತಿಸುತ್ತಿರುವರು. ಕೇವಲ ಆರ್ಥಿಕ ಅಥವಾ ಸಮಾಜಿಕ ಚಿಕಿತ್ಸೆಯಿಂದಲೇ ಮಾನವನ ಸಮಸ್ಯೆಯನ್ನು ಬಗೆ ಹರಿಸಲು ಅಸಾಧ್ಯ. ಮಾನವಜೀವನವನ್ನು ಉತ್ತಮ ಪರಿಸ್ಥಿತಿಗೆ ತರುವುದ ರಿಂದ ಮಾತ್ರ ಇದು ಸಾಧ್ಯ. ಬಲಾತ್ಕಾರ ಸರ್ಕಾರದ ನಿರ್ದಯ ಕಾನೂನು ಎಷ್ಟೇ ಬಂದರೂ ಮಾನವನನ್ನು ಉತ್ತಮನನ್ನಾಗಿ ಮಾಡಲಾರವು. ಜನಾಂಗದಲ್ಲಿರುವ ದೋಷಗಳನ್ನು ಆಧ್ಯಾತ್ಮ ಮತ್ತು ನೈತಿಕ ಆದರ್ಶಗಳು ಮಾತ್ರ ನಿರ್ಮೂಲಮಾಡಬಲ್ಲವು. ಪಾಶ್ಚಾತ್ಯ ಜನಾಂಗಗಳು ಹೊಸ ಆದರ್ಶಕ್ಕೆ ಕಾಯುತ್ತಿವೆ. ಅವರ ಕ್ರೈಸ್ತಧರ್ಮ ಹಲವು ರೀತಿಯಿಂದ ಎಷ್ಟೇ ಮೇಲಾಗಿದ್ದರೂ ಅದನ್ನು ಪೂರ್ಣವಾಗಿ ತಿಳಿದುಕೊಂಡಿಲ್ಲ. ಅವರು ಬಯಸುವ ಆಧ್ಯಾತ್ಮ ಭಾವನೆಗಳು ನಮ್ಮ ಪುರಾತನ ದರ್ಶನ ಗಳಲ್ಲಿ ಅದರಲ್ಲೂ ವೇದಾಂತದಲ್ಲಿ ದೊರತಿವೆ. ಇದರಲ್ಲಿ ಏನೂ ಆಶ್ಚರ್ಯವಿಲ್ಲ.

ಪ್ರತಿಯೊಬ್ಬರೂ ತಮ್ಮ ತಮ್ಮ ಧರ್ಮದ ಪರವಾಗಿ ಹಲವು ಅದ್ಭುತ ವಿಷಯುಗಳನ್ನು ಹೇಳುವುದನ್ನು ನಾನು ಕೇಳುತ್ತಿರುವೆನು. ಇತ್ತೀಚಿಗೆ ನಮ್ಮ ಸ್ನೇಹಿತರಾದ ಡಾಕ್ಟರ್ ಬರೋಸ್‌ರು ಕ್ರೈಸ್ತಧರ್ಮ ಒಂದೇ ವಿಶ್ವಕ್ಕೆಲ್ಲಾ ಅನ್ವಯಿಸುವ ಧರ್ಮವೆಂದು ಹೇಳಿದುದನ್ನು ಕೇಳಿರುವಿರಿ. ಆದರೆ ಆ ಪಾತ್ರ ವಹಿಸಲು ವೇದಾಂತ ತತ್ತ್ವಕ್ಕೆ ಮಾತ್ರ ಅಧಿಕಾರವಿದೆ ಎಂಬುದನ್ನು ನಾನು ಸ್ವಲ್ಪ ವಿಮರ್ಶಿಸುವೆನು. ನಮ್ಮ ಧರ್ಮ ವಿನಃ ಉಳಿದ ಧರ್ಮಗಳೆಲ್ಲ ಆಯಾ ಮತಸ್ಥಾಪಕರ, ಒಬ್ಬರ ಅಥವಾ ಹಲವು ಜೀವಿಗಳಮೇಲೆ ನಿಂತಿದೆ. ಅವರ ಸಿದ್ಧಾಂತ ಬೋಧನೆ ಮತ್ತು ನೀತಿಯೆಲ್ಲಾ ಆ ವ್ಯಕ್ತಿಯ ಜೀವನದ ಮೇಲೆ ನಿಂತಿದೆ. ಅವರಿಂದ ಅನುಯಾಯಿಗಳಿಗೆ ಪ್ರಮಾಣ ಅಧಿಕಾರ ಶಕ್ತಿ ದೊರೆಯುವುದು. ಅವರ ಜೀವನ ಸೌಧ ಆಯಾ ಧರ್ಮಸ್ಥಾಪಕರ ಐತಿಹ್ಯದ ಮೇಲೆ ನಿಂತಿದೆ. ಅಂತಹ ಐತಿಹ್ಯಕ್ಕೆ ಒಂದು ಪೆಟ್ಟು ಬಿದ್ದರೆ (ಆಧುನಿಕ ಕಾಲದಲ್ಲಿ ಮುಕ್ಕಾಲುಪಾಲು ಧರ್ಮ ಸಂಸ್ಥಾಪಕ ವ್ಯಕ್ತಿಗಳಿಗೆಲ್ಲಾ ಈ ಘರ್ಷಣೆ ತಗಲುತ್ತಿದೆ) ಅವರ ಜೀವನದ ಅರ್ಧಭಾಗವನ್ನು ನಂಬುವುದಕ್ಕೇ ಆಗುವುದಿಲ್ಲ, ಉಳಿದರ್ಧವನ್ನು ಅನುಮಾನಿಸುವರು. ಅವರ ಇತಿಹಾಸ ಎಂಬ ವಜ್ರತಳಹದಿ ಕುಸಿದುಬಿದ್ದರೆ ಇಡೀ ಕಟ್ಟಡ ಚೂರುಚೂರಾಗಿ ನೆಲಕ್ಕೆ ಬೀಳುವುದು. ಪುನಃ ಚೇತರಿಸಿಕೊಳ್ಳಲಾರದು. ನಮ್ಮ ಧರ್ಮ ವಿನಃ ಪ್ರಪಂಚದ ಉಳಿದ ಪ್ರಮುಖ ಧರ್ಮಗಳೆಲ್ಲ ಅಂತಹ ವ್ಯಕ್ತಿಯ ಐತಿಹ್ಯದಮೇಲೆ ನಿಂತಿವೆ. ನಮ್ಮ ಧರ್ಮ ನಿಂತಿರುವುದು ತತ್ತ್ವಗಳಮೇಲೆ. ಯಾರೂ ವೇದವನ್ನು ಸೃಷ್ಟಿಸಿರುವರೆಂದು ನಂಬುವುದಿಲ್ಲ. ಅಲ್ಲಿರುವುದು ಸನಾತನ ತತ್ತ್ವಗಳು. ಋಷಿಗಳು ಅದನ್ನು ಕಂಡುಹಿಡಿದರು. ಮಧ್ಯೆ ಮಧ್ಯೆ ಈ ಋಷಿಗಳ ಹೆಸರುಗಳು ಬರುತ್ತವೆ. ಬರೀ ಹೆಸರು, ಅವರು ಯಾರು ಎಲ್ಲಿದ್ದರು ಎಂಬುದೇ ಇಲ್ಲ. ಅವರ ತಂದೆ ಯಾರು ಎಂಬುದೇ ಅನೇಕವೇಳೆ ಗೊತ್ತಾಗುವುದಿಲ್ಲ. ಅವರು ಹುಟ್ಟಿದುದೆಲ್ಲಿ ಯಾವಾಗ ಎಂಬುದು ಎಲ್ಲಿಯೂ ನಮಗೆ ಕಾಣುವುದಿಲ್ಲ. ಈ ಋಷಿಗಳು ಕೀರ್ತಿಯನ್ನು ಲೆಕ್ಕಿಸಲಿಲ್ಲ. ಅವರು ತತ್ತ್ವಬೋಧಕರು. ಸಾಧ್ಯವಾದಷ್ಟೂ ಅವರ ಬೋಧನೆಗೆ ತಾವೇ ಉದಾಹರಣೆಯಾಗಲು ಪ್ರಯತ್ನಪಟ್ಟರು. ಜೊತೆಗೆ ನಮ್ಮ ದೇವರು ಹೇಗೆ ಸಗುಣ ಮತ್ತು ನಿರ್ಗುಣವಾಗಿದೆಯೊ ಹಾಗೆಯೇ ನಮ್ಮ ಧರ್ಮ ಶುದ್ಧ ನಿರ್ಗುಣವಾಗಿ ತತ್ತ್ವಗಳ ಮೇಲೆ ಮಾತ್ರ ನಿಂತಿರುವುದು. ಆದರೂ ಬೇಕಾದಷ್ಟು ಸಗುಣೋ

ಪಾಸನೆಗೆ ಅವಕಾಶವಿದೆ. ಯಾವ ಧರ್ಮ ಇಷ್ಟೊಂದು ಅವತಾರ, ಮಹಾತ್ಮ, ದೇವದೂತರನ್ನು ಇದುವರೆವಿಗೂ ಕೊಟ್ಟು ಮುಂದೆ ಬರುವ ಅನಂತಮಂದಿಗೂ ಕಾದು ಕುಳಿತಿರುವುದು? ಅವತಾರಗಳು ಅಸಂಖ್ಯಾತವಾಗಿವೆ ಎನ್ನುವುದು ಭಾಗವತ ಪುರಾಣ. ನಿಮ್ಮ ಇಚ್ಛೆ ಇದ್ದಷ್ಟು ಅವತಾರಕ್ಕೆ ಅಲ್ಲಿ ಅವಕಾಶವಿದೆ. ಆದಕಾರಣ ನಮ್ಮ ಧಾರ್ಮಿಕ ಇತಿಹಾಸದಲ್ಲಿರುವ ಇಂತಹ ಕೆಲವು ಅವತಾರ ಅಥವಾ ದೇವ ದೂತರು ಇತಿಹಾಸ ವ್ಯಕ್ತಿಗಳಲ್ಲವೆಂದರೆ ನಮ್ಮ ಧರ್ಮಕ್ಕೆ ಇದರಿಂದ ನಷ್ಟವೇನೂ ಇಲ್ಲ. ಆಗಲೂ ಅದು ಎಂದಿನಂತೆ ಅಚಲವಾಗಿಯೇ ನಿಂತಿರುವುದು. ಏಕೆಂದರೆ ವ್ಯಕ್ತಿಗಳಲ್ಲ ಅದಕ್ಕೆ ಪ್ರಾಮುಖ್ಯ, ತತ್ತ್ವ. ಯಾವುದೋ ಒಂದು ವ್ಯಕ್ತಿಯ ಅಧೀನಕ್ಕೆ ಪ್ರಪಂಚದಲ್ಲಿರುವುದನ್ನೆಲ್ಲ ತರಲೆತ್ನಿಸುವುದು ವೃಥಾ ವ್ಯರ್ಥ. ಸನಾತನ ಸರ್ವವ್ಯಾಪಕ ತತ್ತ್ವಗಳಡಿ ಯಲ್ಲೇ ನಾವು ಅವರನ್ನು ತರಲಾರೆವು. ಧರ್ಮಕ್ಷೇತ್ರದಲ್ಲಿ ಪ್ರಪಂಚದ ಮುಕ್ಕಾಲು ಪಾಲು ಜನರನ್ನು ಒಂದು ರೀತಿ ಆಲೋಚಿಸುವಂತೆ ಮಾಡಲು ಸಾಧ್ಯವಾದರೆ ಅದು ತತ್ತ್ವದ ಮೂಲಕ ಮಾತ್ರ ಸಾಧ್ಯ; ವ್ಯಕ್ತಿಯ ಮೂಲಕ ಅಲ್ಲ. ಆದರೂ ನಮ್ಮ ಧರ್ಮದಲ್ಲಿ ವ್ಯಕ್ತಿಯ ಪ್ರಭಾವ ಮತ್ತು ಅಧಿಕಾರಕ್ಕೆ ಬೇಕಾದಷ್ಟು ಅವಕಾಶವಿದೆ. ನೀವು ಇಂತಹ ಧಾರ್ಮಿಕ ವ್ಯಕ್ತಿಗಳಲ್ಲಿ ಯಾರನ್ನು ಬೇಕಾದರೂ ಸ್ವೀಕರಿಸಬಹುದು. ನೀವು ಇವರಲ್ಲಿ ಯಾರಾದರೂ ಒಬ್ಬರನ್ನು ಗುರುಗಳಂತೆ ಮಾರ್ಗದರ್ಶಕರಂತೆ ಪ್ರೀತಿಸಿ ಪೂಜಿಸಬಹುದು. ಯಾರನ್ನು ನೀವು ಸ್ವೀಕರಿಸಿರುವಿರೋ ಅವರನ್ನು ನೀವು ಅವತಾರಶ್ರೇಷ್ಠ ಅತ್ಯುತ್ತಮ ದೇವದೂತನೆಂದು ಬೇಕಾದರೆ ತಿಳಿಯಬಹುದು. ಅದರಲ್ಲಿ ಏನೂ ತೊಂದರೆಯಿಲ್ಲ. ಆದರೆ ಎಲ್ಲಕ್ಕೂ ಅವ್ಯಕ್ತತತ್ತ್ವದ ಹಿನ್ನೆಲೆ ಇರಬೇಕು. ನಮ್ಮಲ್ಲಿರುವ ಒಂದು ವಿಶೇಷವೇನೆಂದರೆ ನಮ್ಮ ಅವತಾರ ಎಲ್ಲಿಯವರೆವಿಗೂ ವೇದಾಂತ ತತ್ತ್ವ ಗಳ ದೃಷ್ಟಾಂತವೋ ಅಲ್ಲಿಯವರೆಗೆ ಮಾತ್ರ ಅವರಿಗೆ ನಮ್ಮ ಮೇಲೆ ಅಧಿಕಾರ. ಶ್ರೀಕೃಷ್ಣನ ಮಹಿಮೆ ಇರುವುದು ಅವನು ನಮ್ಮ ಪುರಾತನ ತತ್ತ್ವಗಳ ಅತಿ ಪ್ರಖ್ಯಾತ ಬೋಧಕ ಮತ್ತು ವೇದಾಂತಗಳ ಮೇಲೆ ಭರತಖಂಡದಲ್ಲೆಲ್ಲಾ ಸರ್ವೋತ್ಕೃಷ್ಟ ವ್ಯಾಖ್ಯಾನಕಾರ ಎನ್ನುವುದರ ಮೇಲೆ.

ಪ್ರಪಂಚದ ದೃಷ್ಟಿ ವೇದಾಂತದ ಕಡೆಗೆ ಬರಬೇಕಾದರೆ ಎರಡನೆಯ ಕಾರಣವೇ ಎಲ್ಲಾ ಧರ್ಮ ಶಾಸ್ತ್ರಗಳಿಗಿಂತ ಹೆಚ್ಚಾಗಿ ಬಾಹ್ಯಪ್ರಕೃತಿ

ವೈಜ್ಞಾನಿಕ ನಿಯಮಾವಳಿಗಳೊಂದಿಗೆ ಇದಕ್ಕೆ ಸಾಮರಸ್ಯವಿದೆ. ಅತ್ಯಂತ ಪ್ರಾಚೀನ ಕಾಲದಲ್ಲಿ ಸಮಾನ ಆಕಾರ ಪ್ರಕಾರ ಸಹಾನುಭೂತಿಗಳಿಂದ ಕೂಡಿದ ಎರಡು ಜನಾಂಗಗಳು ಬೇರೆ ಬೇರೆ ಮಾರ್ಗದಿಂದ ಹೊರಟವು. ಒಂದು ಪುರಾತನ ಹಿಂದೂ, ಮತ್ತೊಂದು ಪುರಾತನ ಯುವನರು. ಹಿಂದೂಗಳು ಆಂತರಿಕ ಪ್ರಪಂಚ ವಿಭಜನಾಮಾರ್ಗದಲ್ಲಿ ಹೊರಟರು. ಯುವನರು ಬಾಹ್ಯಪ್ರಪಂಚದ ವಿಭಜನೆ ಮೂಲಕ ಗುರಿಸೇರಲು ಹೊರಟರು. ಎರಡು ದೇಶಗಳೂ ಎಷ್ಟೋ ಬದಲಾವಣೆಯ ಮೂಲಕ ಸಾಗಿಹೋಗಿದ್ದವು. ಮಾನವನ ಪರಮಗುರಿಗೆ ಸೇರಿದ ಸರಿಸಮಾನವಾದ ಎರಡು ಧ್ವನಿಗಳ ಪ್ರತಿಧ್ವನಿಯನ್ನು ಕೇಳುತ್ತೇವೆ. ಆಧುನಿಕ ವೈಜ್ಞಾನಿಕ ಸಿದ್ಧಾಂತಗಳನ್ನು ಹಿಂದೂ ಧರ್ಮದ ವೇದಾಂತಿಗಳು ಮಾತ್ರ ತಮ್ಮ ಧರ್ಮಕ್ಕೆ ಅನುಗುಣವಾಗಿ ವಿರೋಧವಿಲ್ಲದೆ ಸ್ವೀಕರಿಸಬಲ್ಲರು. ಆಧುನಿಕ ವಿಜ್ಞಾನ ಕೂಡ ತನ್ನ ವ್ಯಕ್ತಿತ್ವವನ್ನು ಕಳೆದುಕೊಳ್ಳದೆ ವೇದಾಂತದ ಸಿದ್ಧಾಂತಗಳ ಮೂಲಕ ಆಧ್ಯಾತ್ಮವನ್ನು ಒಪ್ಪಿಕೊಳ್ಳಲು ಸಾಧ್ಯ. ನಮಗೆ ಮತ್ತು ಯಾರು ವಿಚಾರ ಮತಿಗಳೊ ಅವರೆಲ್ಲರಿಗೂ ವೇದಾಂತ ಹಲವು ಸಹಸ್ರ ವರುಷಗಳ ಹಿಂದೆ ಯಾವ ಸಿದ್ಧಾಂತವನ್ನು ಸಾರಿತೋ ಅದನ್ನೇ ಈಗ ಆಧುನಿಕ ವಿಜ್ಞಾನ ಸಾರುತ್ತಿದೆ. ಆಧುನಿಕ ವಿಜ್ಞಾನದಲ್ಲಿ ವೈಜ್ಞಾನಿಕ ಪಾರಿಭಾಷೆಯ ಮೂಲಕ ಇದನ್ನು ವಿವರಿಸುವುದು.

ವರ್ತಮಾನ ಪಾಶ್ಚಾತ್ಯ ಜನಾಂಗಕ್ಕೆ ಮೆಚ್ಚುಗೆಯಾಗುವಂತಹ ಮತ್ತೊಂದು ವೇದಾಂತದ ಅಪೂರ್ವ ವಿಷಯವೇ, ಇದು ಅದ್ಭುತ ಯುಕ್ತಿಯುಕ್ತವಾಗಿರುವುದು. ವೇದಾಂತದ ನಿರ್ಣಯಗಳು ಎಷ್ಟು ಅದ್ಭುತವಾಗಿ ಯುಕ್ತಿಯುಕ್ತವಾಗಿದೆ ಎಂದು ಪಾಶ್ಚಾತ್ಯ ಅತಿಶ್ರೇಷ್ಠ ವೈಜ್ಞಾನಿಕರು ನನಗೆ ಹೇಳಿರುವರು. ಅವರಲ್ಲಿ ಒಬ್ಬರ ಪರಿಚಯ ನನಗೆ ಇದೆ. ಆತನಿಗೆ ತನ್ನ ಪ್ರಯೋಗಶಾಲೆಯಿಂದ ಹೊರಗೆ ಹೋಗುವುದಕ್ಕೆ ಸಮಯವೇ ಇರುತ್ತಿರಲಿಲ್ಲ. ಇಂತಹವರು ನನ್ನ ವೇದಾಂತ ಉಪನ್ಯಾಸಗಳನ್ನು ಹಲವು ಗಂಟೆ ನಿಂತು ಕೇಳುತ್ತಿದ್ದರು. ಅವರೇ ಹೇಳುವಂತೆ ಅದು ವೈಜ್ಞಾನಿಕವಾಗಿದೆ. ಆಧುನಿಕ ವಿಜ್ಞಾನ ಇಂದು ಬರುತ್ತಿರುವ ನಿರ್ಣಯಗಳ ಮನೋಧರ್ಮಕ್ಕೆ ಸಮಂಜಸವಾಗಿದೆ.

ವಿಭಿನ್ನ ಧರ್ಮಗಳ ತುಲನಾತ್ಮಕ ಸಮಾಲೋಚನೆಯಿಂದ ದೊರೆತ ಎರಡು ವೈಜ್ಞಾನಿಕ ನಿಯಮಗಳನ್ನು ನಾನು ಇಂದು ನಿಮ್ಮ ಮುಂದೆ

ಇಡುವೆನು; ಒಂದು ಎಲ್ಲಾ ಧರ್ಮಗಳೂ ಸತ್ಯವೆನ್ನುವುದು, ಮತ್ತೊಂದು ಪ್ರಪಂಚದಲ್ಲಿರುವುದೊಂದೇ ವಸ್ತು ಎಂಬುದು. ಬ್ಯಾಬಿಲೋನ್ ಮತ್ತು ಯಹೂದಿಗಳ ಧರ್ಮದಲ್ಲಿ ಒಂದು ವಿಶೇಷ ಧರ್ಮ ಘಟನೆ ನೋಡುವೆವು. ಈ ಎರಡು ಜನಾಂಗಗಳು ಹಲವು ಪಂಗಡಗಳಾಗಿ ಕವಲೊಡೆದವು. ಪ್ರತಿಯೊಂದು ಪಂಗಡಕ್ಕೆ ಬೇರೆ ಬೇರೆ ದೇವರುಗಳಿದ್ದುವು. ಈ ಎಲ್ಲಾ ದೇವರಿಗೂ ಒಂದು ಸಾಮಾನ್ಯ ಹೆಸರು ರೂಢಿಯಲ್ಲಿತ್ತು. ಬ್ಯಾಬಿಲೋನಿನ ದೇವತೆಗಳಿಗೆಲ್ಲಾ ಬಾಲ್ ಎಂದು ಹೆಸರು. ಅವರಲ್ಲಿ ಬಾಲ್ ಮಾರಡೆಕ್ ಎಂಬುವನು ಮುಖ್ಯ. ಕ್ರಮೇಣ ಒಂದು ಮತ್ತೊಂದು ಪಂಗಡದವರನ್ನು ಗೆಲ್ಲುತ್ತಿದ್ದುವು. ಆಗ ಗೆದ್ದ ಜನಾಂಗದ ದೇವರು ಉಳಿದ ಎಲ್ಲಾ ದೇವತೆಗಳಿಗಿಂತಲೂ ಶ್ರೇಷ್ಠನಾಗುತ್ತಿದ್ದನು. ಸಿಮಿಟಿಕ್‌ಜನರು ಜಂಭಕೊಚ್ಚಿಕೊಳ್ಳುವ ಒಂದು ದೇವರು ಆದುದು ಹೀಗೆ. ಯಹೂದ್ಯರಲ್ಲಿ ದೇವರಿಗೆ ಮೊಲಾಕ್ ಎಂದು ಹೆಸರು. ಇಸ್ರೇಲ್ ಪಂಗಡಕ್ಕೆ ಸೇರಿದ ಮೊಲಾಕಿಗೆ "ಮೊಲಾಕ್ ಯಾವ" ಎಂದು ಹೆಸರು. ಕ್ರಮೇಣ ಯಹೂದ್ಯ ಪಂಗಡ ಇತರ ಪಂಗಡಗಳನ್ನೆಲ್ಲಾ ಸೋಲಿಸಿ ತಮ್ಮ ಮೊಲಾಕನೇ ಇತರ ಮೊಲಾಕರಿಗಿಂತ ಶ್ರೇಷ್ಠ ಎಂದು ಸಾರಿತು. ಈ ಧಾರ್ಮಿಕ ಜಯದ ಹಿಂದೆ ಇದ್ದ ರಕ್ತಪಾತ ದೌರ್ಜನ್ಯ ಹಿಂಸೆ ನಿಮಗೆಲ್ಲ ಗೊತ್ತಿರಬಹುದು. ನಂತರ ಬ್ಯಾಬಿಲೋನಿನವರು ಮೊಲಾಕ್‌ಯಾವನ ಸರ್ವಾಧಿಕಾರವನ್ನು ಕಸಿದುಕೊಳ್ಳಲು ಯತ್ನಿಸಿ ನಿರಾಶರಾದರು. ಧಾರ್ಮಿಕ ವಿಷಯಗಳಲ್ಲಿ ಹಲವು ಪಂಗಡಗಳ ಘರ್ಷಣೆ ಭರತಖಂಡದ ಸರಹದ್ದಿನಲ್ಲಿಯೂ ಆಗಿರಬಹುದೆಂದು ನನಗೆ ತೋರುವುದು. ಇಲ್ಲಿಯು ಆರ್ಯರ ದೇವತೆಗಳಲ್ಲಿ ಆಯಾ ಪಂಗಡದವರು ತಮ್ಮ ತಮ್ಮ ದೇವತೆಗಳ ಸಾರ್ವಭೌಮತ್ವಕ್ಕೆ ಪ್ರಯತ್ನಪಟ್ಟಿರಬಹುದು. ಆದರೆ ಭರತಖಂಡದ ಇತಿಹಾಸ ಬೇರೆ ರೂಪು ತಾಳಬೇಕಾಗಿತ್ತು. ಯಹೂದ್ಯರಿಗಿಂತ ಭಿನ್ನವಾಗಿರಬೇಕಾಗಿತ್ತು. ಸಹಾನುಭೂತಿ ಮತ್ತು ಆಧ್ಯಾತ್ಮಕ್ಕೆ ಪ್ರಪಂಚದಲ್ಲೆಲ್ಲಾ ಭರತಖಂಡ ತೌರುಮನೆಯಾಗಬೇಕಾಗಿತ್ತು. ಅದಕ್ಕೆ ಬಹಳಕಾಲ ಇಲ್ಲಿ ಆ ಘರ್ಷಣೆ ನಡೆಯಲಿಲ್ಲ. ಭರತಖಂಡದಲ್ಲಿ ಜನಿಸಿದ ಋಷಿಶ್ರೇಷ್ಠರು, ಐತಿಹ್ಯದ ಕಲ್ಪನೆಗೆ ನಿಲುಕದ ಕಲ್ಪನೆಯು ಬಗೆಗೂ ಅಸಾಧ್ಯವಾದ ಅತಿ ಪ್ರಾಚೀನಕಾಲದಲ್ಲಿ "ಏಕಂಸದ್ವಿಪ್ರಾ ಬಹುದಾ ವದಂತಿ" ಇರುವವನೊಬ್ಬ, ಋಷಿಗಳು ಹಲವು ವಿಧಧಲ್ಲಿ ಅವನನ್ನು ಕರೆಯುವರು ಎಂದು ಸಾರಿದರು. ಇಂತಹ ಚಿರಸ್ಮರಣೀಯ

ಪವಿತ್ರವಾಣಿಯನ್ನು ಪ್ರಪಂಚದಲ್ಲಿ ಇದುವರೆಗೆ ಯಾರೂ ಉಚ್ಚರಿಸಿರಲಿಲ್ಲ. ಇಂತಹ ಮಹಾಸತ್ಯವನ್ನು ಇದುವರೆಗೆ ಯಾರೂ ಆವಿಷ್ಕಾರ ಮಾಡಿರಲಿಲ್ಲ. ಈ ಮಹಾಸತ್ಯ ನಮ್ಮ ಜನಜೀವನದ ಬಾಳ ಉಸಿರಾಗಿದೆ. ಈ ಸತ್ಯ ನಮ್ಮಲ್ಲಿ ಪ್ರಚಾರವಾಗುತ್ತ ಆಗುತ್ತ ನಮ್ಮ ಜೀವನದಲ್ಲಿ ಓತಪ್ರೋತವಾಗಿದೆ, ನಮ್ಮ ರಕ್ತಬಿಂದುವಿನಲ್ಲಿ ಅನುರಣಿತವಾಗುತ್ತಿದೆ. ಎಲ್ಲಾ ವಿಧದಲ್ಲಿಯೂ ನಾವು ಆ ಮಹಾಸತ್ಯವನ್ನು ಪ್ರೀತಿಸುತ್ತೇವೆ. ನಮ್ಮ ದೇಶ ಧರ್ಮಸಹಿಷ್ಣುತೆಗೆ ಪ್ರಖ್ಯಾತವಾಗಿದೆ. ನಮ್ಮ ಧರ್ಮವನ್ನು ಅಲ್ಲಗಳೆಯುವುದಕ್ಕೆ ಬಂದ ಕ್ರೈಸ್ತರಿಗೆ ಮತ್ತು ಮಹಮ್ಮದೀಯರಿಗೆ ಚರ್ಚು ಮಸೀದಿಗಳನ್ನೂ ಕಟ್ಟಿರುವರು. ಪ್ರಪಂಚ ಈ ಒಂದು ಮಹಾ ಸತ್ಯವನ್ನು ನಮ್ಮಿಂದ ಕಲಿಯುವುದಕ್ಕೆ ಕಾಯುತ್ತಿದೆ. ಹೊರಗೆ ಎಷ್ಟು ಧರ್ಮದ್ವೇಷವಿದೆ ಎಂಬುದು ನಿಮಗೆ ತಿಳಿಯದು. ಇಷ್ಟು ಧರ್ಮದ್ವೇಷವಿರುವುದರಿಂದ ನಾನು ಅನ್ಯದೇಶಗಳಲ್ಲಿ ಮರಣಕ್ಕೆ ತುತ್ತಾಗುವೆನೆಂದು ಭಾವಿಸಿದ್ದೆ. ಧರ್ಮಕ್ಕಾಗಿ ಮತ್ತೊಬ್ಬರನ್ನು ಕೊಲ್ಲುವುದನ್ನು ಅವರು ಗಣನೆಗೆ ತರುವುದಿಲ್ಲ. ಇಂದು ಹಾಗೆ ಮಾಡದೆ ಇದ್ದರೆ ನಾಳೆ ಪಾಶ್ಚಾತ್ಯ ಸಭ್ಯತಾಕೇಂದ್ರದಲ್ಲಿಯೇ ಅದನ್ನು ಮಾಡಬಹುದು. ತನ್ನ ದೇಶದ ಧರ್ಮಕ್ಕೆ ವಿರೋಧವಾಗಿ ಯಾರಾದರೂ ಮಾತನಾಡಿದರೆ ಅತಿ ಭಯಾನಕ ಬಹಿಷ್ಕಾರ ಆತನಿಗೆ ಅನೇಕ ವೇಳೆ ಕಾದುಕುಳಿತಿದೆ. ಅವರು ಇಲ್ಲಿರುವ ನಮ್ಮ ವರ್ಣಾಶ್ರಮಗಳನ್ನು ಕುರಿತು ತಮಗೆ ತೋರಿದಂತೆ ಮಾತನಾಡುವರು. ನೀವು ಪಾಶ್ಚಾತ್ಯ ದೇಶಗಳಿಗೆ ಹೋಗಿ ಅಲ್ಲಿ ನನ್ನಂತೆ ನೀವು ಇದ್ದರೆ ಪರಿಚಿತ ಪ್ರಖ್ಯಾತ ವಿದ್ವಾಂಸರೆ ಜನರಿಗಂಜಿ ಹೇಡಿಗಳಂತೆ ತಮ್ಮ ಮನಸ್ಸಿಗೆ ತೋಚಿದ ನೂರನೆ ಒಂದುಪಾಲು ಸತ್ಯವನ್ನೂ ವ್ಯಕ್ತಪಡಿಸಲಾರರೆಂಬುದು ಗೊತ್ತಾಗುವುದು.

ಅನ್ಯಧರ್ಮಸಹಿಷ್ಣುತೆ ಎಂಬ ಮಹಾ ಸತ್ಯಕ್ಕಾಗಿ ಪ್ರಪಂಚ ಕಾಯುತ್ತಿದೆ. ಸಂಸ್ಕೃತಿಗೆ ಇದರಿಂದ ಶ್ರೇಯಸ್ಕರ. ಯಾವ ನಾಗರಿಕತೆಯೂ ಇದಿಲ್ಲದೆ ಬಾಳಲಾರದು. ಯಾವ ನಾಗರಿಕತೆಯೂ ಮತಭ್ರಾಂತಿ ರಕ್ತಪಾತ ಹಿಂಸೆ ನಿಂತಲ್ಲದೆ ಅಭಿವೃದ್ಧಿಯಾಗಲಾರದು. ನಾವು ಮತ್ತೊಬ್ಬರನ್ನು ಉದಾರ ಭಾವದಿಂದ ನೋಡುವವರೆಗೆ ಯಾವ ನಾಗರಿಕತೆಯೂ ಗೌರವದಿಂದ ತಲೆ ಎತ್ತಲಾರದು. ಆ ಉದಾರಭಾವಕ್ಕೆ ಮೊದಲನೆ ಗುಣವೇ ಅನ್ಯಧರ್ಮದ ನಂಬಿಕೆಗಳನ್ನು ಗೌರವದಿಂದ ಕಾಣು

ವುದು. ನಾವು ಅದನ್ನು ಅರ್ಥಮಾಡಿಕೊಳ್ಳುವುದು ಮಾತ್ರವಲ್ಲ. ನಮ್ಮ ಧರ್ಮ ನಂಬಿಕೆ ಸಿದ್ಧಾಂತ ಅವರ ಧರ್ಮಕ್ಕಿಂತ ಎಷ್ಟೋ ಭಿನ್ನ ವಾಗಿದ್ದರೂ ಒಬ್ಬರು ಇನ್ನೊಬ್ಬರಿಗೆ ಸಹಾಯಮಾಡಬೇಕು. ನಾನು ನಿಮಗೆ ಈಗ ತಾನೇ ಹೇಳಿದಂತೆ ಭರತಖಂಡದಲ್ಲಿ ನಾವು ಮಾಡುತ್ತಿರು ವುದೇ ಇದನ್ನು. ಭರತಖಂಡದಲ್ಲಿ ಹಿಂದೂಗಳು ಕ್ರೈಸ್ತರಿಗೆ ಚರ್ಚನ್ನು ಮಹಮ್ಮದೀಯರಿಗೆ ಮಸೀದಿಯನ್ನು ಕಟ್ಟಿಕೊಟ್ಟಿರುವರು. ಅವರು ನಮ್ಮನ್ನು ಅತಿ ಹೀನವಾಗಿ ನಿಂದಿಸುತ್ತಿರಲಿ, ಹಿಂಸಿಸಲಿ, ಮೃಗಗಳಂತೆ ವರ್ತಿಸಲಿ, ಚಿಂತೆಯಿಲ್ಲ. ಪ್ರೀತಿಯಿಂದ ಅವರನ್ನು ಗೆಲ್ಲುವವರೆಗೆ, ಪ್ರೀತಿಯೊಂದೇಬಾಳಲು ಯೋಗ್ಯ, ದ್ವೇಷವಲ್ಲ, ಸಾಧುಸ್ವಭಾವದಲ್ಲಿ ಮಾತ್ರ ನಾವು ಸೌಹಾರ್ದದಿಂದ ಬಾಳಬಹುದು, ಕೇವಲ ಮೃಗೀಯ ಬಲಪ್ರದರ್ಶನ ದಿಂದ ಅಲ್ಲ ಎಂಬುದನ್ನು ಪ್ರದರ್ಶಿಸುವುದಕ್ಕಾಗಿ ಕ್ರೈಸ್ತರಿಗೆ ಚರ್ಚನ್ನು ಕಟ್ಟುತ್ತಾಹೋಗೋಣ, ಮಹಮ್ಮದೀಯರಿಗೆ ಮಸೀದಿಯನ್ನು ಕಟ್ಟುತ್ತಾ ಹೋಗೋಣ.

ಪ್ರಪಂಚ ಯೂರೋಪು ಇಡೀ ವಿಶ್ವದ ವಿಚಾರಶೀಲ ಮನುಜರು ಮತ್ತೊಂದು ಮಹಾ ಸತ್ಯವನ್ನು ನಮ್ಮಿಂದ ನಿರೀಕ್ಷಿಸುತ್ತಿರುವರು. ಅದೇ ಸೃಷ್ಟಿಯಲ್ಲೆಲ್ಲಾ ಆಧ್ಯಾತ್ಮಿಕ ಏಕತ್ವ ಎಂಬ ಸನಾತನ ಮಹಾ ತತ್ತ್ವ. ಅದು ಇಂದು ಉಚ್ಚ ವರ್ಗದಲ್ಲಿರುವವರಿಗಿಂತ ನೀಚರಿಗೆ ಬೇಕಾಗಿದೆ. ಬಲಾಢ್ಯರಿಗಿಂತ ಬಲಹೀನರಿಗೆ ಬೇಕಾಗಿದೆ. ಮದ್ರಾಸಿನ ವಿಶ್ವವಿದ್ಯಾ ನಿಲಯದ ಪದವೀಧರರೆ, ಪಾಶ್ಚಾತ್ಯ ವೈಜ್ಞಾನಿಕ ಅನ್ವೇಷಣೆ ಸ್ಥೂಲವಸ್ತು ವಿನ ಮೂಲಕ ಪ್ರಪಂಚವೆಲ್ಲಾ ಒಂದೇ ಅಭಿನ್ನ ಎಂಬುದನ್ನು ಹೇಗೆ ಪ್ರದರ್ಶಿಸುತ್ತಿದೆ ಎಂದು ನಿಮಗೆ ಹೇಳಬೇಕಾಗಿಲ್ಲ. ಅನಂತವಸ್ತು ಮಹೋದಧಿಯೆಲ್ಲ, ನಾನು ನೀವು ಎಲ್ಲರೂ, ಬಾಹ್ಯಸ್ಥೂಲಭಾಷೆಯಲ್ಲಿ ಹೇಳಬೇಕಾದರೆ ಬರಿ ಅಲೆಗಳೆಂಬುದನ್ನು ವಿಜ್ಞಾನ ಸಾರಿದೆ. ಇದರಂತೆಯೇ ಹಿಂದೂ ಮಾನಸಿಕ ಶಾಸ್ತ್ರ ಹಲವು ಶತಮಾನಗಳ ಹಿಂದೆಯೇ ಸಮಷ್ಠಿ ಎಂಬ ವಸ್ತು ಮಹಾಸಾಗರದಲ್ಲಿ ಜಡ ಮತ್ತು ಚೇತನಗಳೆರಡೂ ಅಲೆಗಳೆಂದು ಸಾರಿತು. ವೇದಾಂತ ಮತ್ತೊಂದು ಹೆಜ್ಜೆ ಮುಂದುಹೋಗಿ ಪ್ರಕೃತಿಯ ಏಕತ್ವದ ಭಾವನೆ ಹಿಂದೆ ಇರುವುದೊಂದೆ ಆತ್ಮವೆಂದು ಸಾರಿತು. ಸೃಷ್ಟಿಯಲ್ಲೆಲ್ಲಾ ಇರುವುದೊಂದೆ ಆತ್ಮ. ಎಲ್ಲಾ ಒಂದೇ ಅಸ್ತಿತ್ವ. ಪ್ರಪಂಚದ ಮೂಲದಲ್ಲಿ ಒಂದು ಏಕತ್ವವಿದೆ ಎಂಬ ಮಹಾಭಾವನೆ

ಈ ದೇಶದಲ್ಲಿಯೂ ಹಲವರ ಅಂಜಿಕೆಗೆ ಕಾರಣವಾಗಿದೆ. ಈಗಲೂ ಇದರ ಅನುಯಾಯಿಗಳಿಗಿಂತ ವಿರೋಧಿಸುವವರೇ ಹೆಚ್ಚು. ಆದರೆ ಇಂದು ಪ್ರಪಂಚ ಈ ಜೀವನ ಸಂಜೀವಿನಿಯನ್ನು ನಮ್ಮಿಂದ ನಿರೀಕ್ಷಿಸುತ್ತಿದೆ ಎಂದು ಹೇಳುವೆನು. ಇಂದು ಭರತ ಖಂಡದ ಮೂಕ ಜನಕೋಟಿಯ ಉದ್ಧಾರಕ್ಕೆ ಇದು ಬೇಕಾಗಿದೆ. ಏಕತ್ವದ ಮಹಾ ಭಾವನೆಯನ್ನು ಶ್ರೇಯಸ್ಕರವಾಗಿ ಅನುಷ್ಠಾನಕ್ಕೆ ತರುವ ಪರಿಯಂತರ ನಾವು ಮಾತೃ ಭೂಮಿಯನ್ನು ಮೇಲೆತ್ತಲಾರೆವು. ವಿಚಾರಪರ ಪಾಶ್ಚಾತ್ಯ ತನ್ನ ಧರ್ಮ ಮತ್ತು ನೀತಿಯ ವಿಚಾರವನ್ನು ಇಂದು ಅರಸುತ್ತಿದೆ. ಒಂದು ವ್ಯಕ್ತಿ ಎಷ್ಟೇ ಮಹಾತ್ಮನಾಗಿರಲಿ ದೈವಿಕವಾಗಿರಲಿ ಅವನ ನುಡಿಯೊಂದೆ ನೀತಿಯ ತಳಹದಿಗೆ ಪರಮಪ್ರಮಾಣವಾಗಲಾರದು. ಪ್ರಪಂಚದ ಪ್ರಖ್ಯಾತ ಮೇಧಾವಿಗಳಿಗೆ ನೀತಿನೆಲೆಗೆ ಇಂತಹ ಪ್ರಮಾಣ ಹಿಡಿಸುವುದಿಲ್ಲ. ಕೇವಲ ಮಾನವನ ಒಪ್ಪಿಗೆಗಿಂತ ಅಭೇದ್ಯವಾದ ಮತ್ತೊಂದು ಅವರಿಗೆ ಬೇಕಾಗಿದೆ. ನಿನ್ನಲ್ಲಿ ನನ್ನಲ್ಲಿ ಪ್ರಪಂಚದ ಸರ್ವದರಲ್ಲಿಯೂ ಇರುವ ಏಕಾತ್ಮನಲ್ಲಿ ಅಲ್ಲದೆ ಆ ಸನಾತನ ಅಧಿಕಾರ ಮತ್ತೆಲ್ಲಿ ನಮಗೆ ದೊರಕುವುದು? ಆತ್ಮ ಸರ್ವವ್ಯಾಪಿ ಏಕವೆಂಬುದೇ ಎಲ್ಲಾ ನೀತಿಗೆ ಅನುಮೋದನೆ ಕೊಡುವುದು. ನಾನು ನೀವು ಕೇವಲ ಸಹೋದರರು ಮಾತ್ರವಲ್ಲ ಸ್ವಾತಂತ್ರ್ಯಕ್ಕೆ ಹೋರಾಡಿದ ಮಾನವ ಜನಾಂಗದ ಸಾಹಿತ್ಯವೆಲ್ಲ ಇದನ್ನು ಸಾರಿರುವುದು. ಆದರೆ ನಿಜವಾಗಿ ನಾನು ನೀನು ಒಬ್ಬನೇ. ಇದೇ ಭಾರತೀಯ ತತ್ತ್ವ ಸಿದ್ಧಾಂತ. ಈ ಏಕತ್ವವೇ ಎಲ್ಲಾ ಆಧ್ಯಾತ್ಮ ಮತ್ತು ನೀತಿಗೆ ಯುಕ್ತಿಯ ತಳಹದಿಯನ್ನು ಕೊಡಬಲ್ಲುದು. ಪದದಳಿತರಾದ ನಮ್ಮ ಜನಸಾಮಾನ್ಯರಿಗೆ ಇದು ಇಂದು ಎಷ್ಟು ಬೇಕೋ ಅಷ್ಟೇ ಯುರೋಪಿಗೂ ಬೇಕಾಗಿದೆ. ಈಗಲೂ ಅವರಿಗೆ ತೋರದಂತೆ ಈ ಮಹಾ ಸಿದ್ಧಾಂತವೇ ಇಂಗ್ಲೆಂಡ್ ಜರ್ಮನಿ ಫ್ರಾನ್ಸ್ ಅಮೇರಿಕಾದೇಶದ ಆಧುನಿಕ ರಾಜಕೀಯ ಮತ್ತು ಸಾಮಾಜಿಕ ಚಳುವಳಿಯ ಮೂಲತತ್ತ್ವವಾಗಿದೆ. ಮಾನವನ ಸ್ವತಂತ್ರ ಸಾಧನಾ ಉದ್ಯಮವನ್ನು ವಿವರಿಸುವ ಸಾಹಿತ್ಯದ ಹಿಂದೆಲ್ಲ ಪುನಃ ಪುನಃ ವೇದಾಂತದ ಆದರ್ಶಪ್ರಮುಖವಾಗಿ ಕಾಣುತ್ತಿರುವುದು. ಸ್ನೇಹಿತರೆ, ಇದನ್ನು ಗಮನಿಸಿ! ಕೆಲವು ವೇಳೆ ಈ ಭಾವನೆಯನ್ನು ವ್ಯಕ್ತಪಡಿಸುವ ಗ್ರಂಥಕರ್ತರಿಗೆ ಇದರ ಮೂಲ ತಿಳಿಯದು. ಕೆಲವು ವೇಳೆ ಇವು ಅವರ ಸ್ವತಂತ್ರ ಭಾವನೆಯಂತೆ ತೋರುವುದು. ಮತ್ತೆ ಕೆಲವು ಧೀರ

ಮಹಾವ್ಯಕ್ತಿಗಳಿರುವರು. ಅವರು ಈ ಭಾವನೆಯ ಮೂಲಕ್ಕೆ ತಮ್ಮ ಚಿರಕೃತಜ್ಞತೆಯನ್ನು ವ್ಯಕ್ತಪಡಿಸಿರುವರು.

ನಾನು ಅಮೇರಿಕಾದಲ್ಲಿ ಇದ್ದಾಗ ಹೆಚ್ಚು ಅದ್ವೈತವನ್ನೇ ಬೋಧಿಸುತ್ತಿದ್ದೆ, ಬಹಳ ಅಲ್ಪ ದ್ವೈತವನ್ನು ಬೋಧಿಸಿದೆ ಎಂಬ ಆಕ್ಷೇಪಣೆ ಕೇಳಿದೆ. ದ್ವೈತ ತತ್ತ್ವ ಮತ್ತು ಉಪಾಸನೆಯಲ್ಲಿ ಪ್ರೇಮ ಭಕ್ತಿ ಅಪೂರ್ವ ಆನಂದ ಇವು ನನಗೆ ಗೊತ್ತಿದೆ. ಸುಖದಲ್ಲಿಯೂ ಆನಂದಾಶ್ರುವನ್ನು ಸುರಿಸುವ ಸಮಯವಿದಲ್ಲ. ನಾವೊಂದು ಹತ್ತಿಯ ಮುದ್ದೆಯಾಗಿ ಸಾಯುವಸ್ಥಿತಿಗೆ ಬರುವವರೆಗೂ ಮೃದುವಾಗಿರುವೆವು. ನಮ್ಮ ದೇಶಕ್ಕೆ ಇಂದು ಬೇಕಾಗಿರುವುದು ಕಬ್ಬಿಣದಂತಹ ಮಾಂಸಖಂಡ, ಉಕ್ಕಿನಂತಹ ನರ, ಯಾವುದನ್ನೂ ಲೆಕ್ಕಿಸದೆ ವಿಶ್ವದ ರಹಸ್ಯತಮ ಸತ್ಯಗಳನ್ನು ಭೇದಿಸಿ, ಸಾಧ್ಯವಾದರೆ ಕಡಲಿನಾಳಕ್ಕಾದರೂ ಹೋಗಿ ಮೃತ್ಯುವಿನೊಂದಿಗೆ ಹೋರಾಡಿ ತಮ್ಮ ಗುರಿಯನ್ನು ಸಾಧಿಸಬಲ್ಲ ಪ್ರಚಂಡ ಇಚ್ಛಾ ಶಕ್ತಿ. ನಮಗೆ ಇಂದು ಬೇಕಾಗಿರುವುದು ಅದು. ಎಲ್ಲರೂ ಒಂದು ಎಂಬ ಅದ್ವೈತ ಸಿದ್ಧಾಂತವನ್ನು ತಿಳಿದುಕೊಳ್ಳುವುದರಿಂದ ಮಾತ್ರ ಆ ಪ್ರಚಂಡ ಇಚ್ಛಾಶಕ್ತಿಯನ್ನು ಸೃಷ್ಟಿಸಬಹುದು. ಅದಕ್ಕೆ ಪ್ರಾಣಪ್ರತಿಷ್ಠೆಮಾಡಿ ಶಕ್ತಿ ತುಂಬಬಹುದು. ಶ್ರದ್ಧೆ, ಶ್ರದ್ಧೆ, ಆತ್ಮಶ್ರದ್ಧೆ; ಶ್ರದ್ಧೆ, ಶ್ರದ್ಧೆ, ಈಶ್ವರನಲ್ಲಿ ಶ್ರದ್ಧೆ, ಇದೇ ಮಹಾತ್ಮೆಯ ಮೂಲ. ನೀವು ನಿಮ್ಮ ಮೂವತ್ತುಮೂರು ಕೋಟಿ ದೇವರಲ್ಲಿ ನಂಬಿ ಜೊತೆಗೆ ಪಾಶ್ಚಾತ್ಯರು ಆಮದುಮಾಡಿರುವ ದೇವರಲ್ಲಿ ನಂಬಿದ್ದರೂ ನಿಮ್ಮಲ್ಲಿ ಆತ್ಮ ಶ್ರದ್ಧೆ ಇಲ್ಲದೆ ಇದ್ದರೆ ನಿಮಗೆ ಮೋಕ್ಷವಿಲ್ಲ. ಮೊದಲು ಆತ್ಮಶ್ರದ್ಧೆ ಇರಲಿ. ಆ ಶ್ರದ್ಧೆಯಮೇಲೆ ನಿಂತು ವೀರರಾಗಿ. ನಿಮಗೆ ಇಂದು ಬೇಕಾಗಿರುವುದು ಅದು. ಕಳೆದ ಒಂದು ಸಾವಿರ ವರುಷಗಳಿಂದ ಎಲ್ಲೋ ಕೆಲವು ಮಂದಿ ಮೂವತ್ತು ಮೂರು ಕೋಟಿ ತೆಪ್ಪಗಿರುವ ನಮ್ಮನ್ನು ತುಳಿದು ಆಳುವುದಕ್ಕೆ ಹೇಗೆ ಸಾಧ್ಯವಾಯಿತು? ಅವರಲ್ಲಿ ಆತ್ಮಶ್ರದ್ಧೆ ಇತ್ತು ನಮ್ಮಲ್ಲಿ ಇರಲಿಲ್ಲ. ಪಾಶ್ಚಾತ್ಯದೇಶದಲ್ಲಿ ನಾನು ಏನು ಕಲಿತೆ? ಮಾನವ ಪತಿತನಾದ ಗತಿಯೇ ಇಲ್ಲದ ಪಾಪಿ ಎಂದು ಸಾರುವ ಕ್ರೈಸ್ತಧರ್ಮದ ಒಣಹರಟೆಯಹಿಂದೆ ಇರುವುದೇನು? ಯೂರೋಪ್ ಮತ್ತು ಅಮೆರಿಕಾದೇಶದ ಅಂತರಾಳದಲ್ಲಿ ಪ್ರಚಂಡ ಆತ್ಮಶ್ರದ್ಧಾ ಶಕ್ತಿ ಉರಿಯುತ್ತಿದೆ. ಇಂಗ್ಲೀಷ್ ಹುಡುಗ, "ನಾನೊಬ್ಬ ಇಂಗ್ಲೀಷಿನವನು. ಏನನ್ನು ಬೇಕಾದರೂ ಸಾಧಿಸಬಲ್ಲೆ" ಎನ್ನುವನು. ಅಮೆರಿಕಾದೇಶದ

ಹುಡುಗನೂ ಹೀಗೆಯೇ ಹೇಳುವನು. ಯೂರೋಪಿನವನೂ ಹೀಗೆಯೇ ಹೇಳುವನು. ನಮ್ಮ ಹುಡುಗರು ಹೀಗೆ ಹೇಳಬಲ್ಲರೆ? ಇಲ್ಲ, ಹುಡುಗರ ತಂದೆ ಕೂಡ ಹೇಳಲಾರ. ನಾವು ಆತ್ಮಶ್ರದ್ಧೆಯನ್ನು ಕಳೆದುಕೊಂಡಿರುವೆವು. ಮನುಷ್ಯರನ್ನು ಜಾಗ್ರತಗೊಳಿಸುವುದಕ್ಕೆ, ಅವರ ಆತ್ಮದ ಕೀರ್ತಿಯನ್ನು ಪ್ರಕಾಶಮಾಡುವುದಕ್ಕೆ ಅದ್ವೈತ ಸಿದ್ಧಾಂತ ಬೋಧನೆ ಆವಶ್ಯಕ. ಅದಕ್ಕೇ ನಾನು ಅದ್ವೈತವನ್ನು ಸಾರುವುದು. ನಾನು ಅದನ್ನು ಸಣ್ಣ ಕೋಮಿನ ದೃಷ್ಟಿಯಿಂದ ವಿವರಿಸುವುದಿಲ್ಲ. ಎಲ್ಲರ ಒಪ್ಪಿಗೆಗೂ ಪಾತ್ರವಾದ ಸರ್ವಸಾಮಾನ್ಯ ತತ್ತ್ವಗಳ ಮೂಲಕ ಬೋಧಿಸುತ್ತೇನೆ.

ದ್ವೈತ ವಿಶಿಷ್ಟಾದ್ವೈತಾನುಯಾಯಿಗಳನ್ನು ನೋಯಿಸದ ಒಂದು ರಾಜಿಯ ಮಾರ್ಗವಿದೆ. ದೇವರು ಅಂತರ್ಯಾಮಿ, ಪವಿತ್ರತೆ ಎಲ್ಲದರಲ್ಲಿಯೂ ಇದೆ ಎಂಬುದನ್ನು ಒಪ್ಪದ ಒಂದು ಪಂಗಡವೂ ಭರತ ಖಂಡದಲ್ಲಿ ಇಲ್ಲ. ಪ್ರತಿಯೊಂದು ವೇದಾಂತದರ್ಶನವೂ, ಪವಿತ್ರತೆ, ಪರಿಪೂರ್ಣತೆ, ಶಕ್ತಿ ಆಗಲಿ ಎಲ್ಲರಲ್ಲಿಯೂ ಇದೆ ಎಂದು ಒಪ್ಪಿಕೊಳ್ಳುವುವು. ಕೆಲವರ ದೃಷ್ಟಿಯಲ್ಲಿ ಈ ಪವಿತ್ರತೆ ಕೆಲವುವೇಳೆ ವಿಕಾಸವಾಗುವುದು, ಕೆಲವುವೇಳೆ ಸಂಕೋಚವಾಗುವುದು. ಆದರೂ ಆ ಪವಿತ್ರತೆ ಅಲ್ಲೇ ಇರುವುದು. ಅದ್ವೈತದ ದೃಷ್ಟಿಯಲ್ಲಿ ಅದು ಸಂಕೋಚವಿಕಾಸವಾಗುವುದಿಲ್ಲ. ಆದರೆ ಕೆಲವು ವೇಳೆ ಸುಪ್ತವಾಗುವುದು, ಮತ್ತೆ ಕೆಲವು ವೇಳೆ ವ್ಯಕ್ತವಾಗುವುದು. ಪರಿಣಾಮದಲ್ಲಿ ಎರಡೂ ಒಂದೆ. ಒಂದು ಮತ್ತೊಂದಕ್ಕಿಂತ ಯುಕ್ತಿಯುಕ್ತವಾಗಿರಬಹುದು. ಆದರೆ ಪರಿಣಾಮದ ದೃಷ್ಟಿಯಿಂದ, ಅನುಷ್ಠಾನ ದೃಷ್ಟಿಯಿಂದ ಎರಡೂ ಒಂದೇ. ಪ್ರಪಂಚಕ್ಕೆ ಇಂದು ಅತ್ಯಾವಶ್ಯಕವಾಗಿ ಬೇಕಾಗಿರುವ ಮುಖ್ಯ ಭಾವನೆ ಇದು. ಈ ಭಾವನೆಯ ಆವಶ್ಯಕತೆ ಎಲ್ಲ ಕಡೆಗಿಂತ ಹೆಚ್ಚಾಗಿ ಈ ದೇಶದಲ್ಲಿ ಹೆಚ್ಚು. ನನ್ನ ಸ್ನೇಹಿತರೆ, ನಾನು ನಿಮಗೆ ಕೆಲವು ಕಟು ಸತ್ಯಗಳನ್ನು ಹೇಳಬೇಕಾಗಿದೆ. ನಮ್ಮ ದೇಶ ಬಾಂಧವನೊಬ್ಬನನ್ನು ಇಂಗ್ಲೀಷಿನವರು ಅನ್ಯಾಯವಾಗಿ ಹಿಂಸಿಸಿದರೆ ಅಥವಾ ಕೊಲೆಮಾಡಿದರೆ ಇಡೀ ಸಮಾಜ ಅವರಿಗೆ ಕೊಡುವ ಶಾಪದಿಂದ ಭರತಖಂಡವೆಲ್ಲ ತುಂಬುವುದು. ನಾನು ಅದನ್ನು ಓದಿ ಕಣ್ಣೀರು ಸುರಿಸಿರುವೆನು. ಮಾರನೆ ಕ್ಷಣವೆ ಇದಕ್ಕೆ ಕಾರಣ ಯಾರು ಎಂಬ ಪ್ರಶ್ನೆ ಏಳುವುದು. ವೇದಾಂತಿಯಾಗಿರುವುದರಿಂದ ಆ ಪ್ರಶ್ನೆಯನ್ನು ನಾನೇ ಹಾಕಿಕೊಳ್ಳಬೇಕಾಗಿದೆ. ಹಿಂದೂ ಅಂತರ್ಮುಖಿ. ಅವನು ಪ್ರತಿಯೊಂದನ್ನೂ

ತನ್ನ ಮೂಲಕ ನೋಡಲಿಚ್ಛಿಸುವನು. ಇದಕ್ಕೆ ಜವಾಬ್ದಾರರು ಯಾರು ಎಂದು ಹಾಕುವ ಪ್ರಶ್ನೆಗೆ ಪ್ರತಿಸಲವೂ ಇಂಗ್ಲೀಷರಲ್ಲವೆಂಬ ಉತ್ತರ ಬರುವುದು. ನಮ್ಮ ದುಃಖಕ್ಕೆ ನಮ್ಮ ಅವನತಿಗೆ ನಾವೇ ಕಾರಣಕರ್ತರು. ನಮ್ಮ ಅದೃಷ್ಟಕ್ಕೆ ನಾವೆ ಹೊಣೆ. ನಮ್ಮ ಶ್ರೀಮಂತ ಕುಲೀನ ವಂಶಸ್ಥರು ಜನ ಸಾಮಾನ್ಯರನ್ನು ತುಳಿಯುತ್ತಾ ಹೋದರು. ಅವರು ನಿರಾಶರಾಗಿ ಈ ಕೋಟಲೆಯಲ್ಲಿ ತಾವು ಮನುಷ್ಯರೆಂಬುದನ್ನೂ ಮರೆತರು. ಹಲವು ಶತಮಾನಗಳು ಅವರು ಕಟ್ಟಿಗೆ ಒಡೆಯುವ ನೀರೆಳೆಯುವ ಶ್ರಮಜೀವಿಗಳಾಗಿರುವರು. ಈಗ ಅವರು ಹುಟ್ಟು ಗುಲಾಮರು. ಅವರ ಕೆಲಸವೇ ಜೀತಮಾಡುವುದು ಎಂಬ ದೃಢನಂಬಿಕೆ ಇಂದು ಅವರಿಗೆ ಬಂದು ಹೋಗಿದೆ. ನಾವು ಈಗ ಎಷ್ಟೋ ವಿದ್ಯಾವಂತರಾಗಿದ್ದರೂ ಆ ಶ್ರಮಜೀವಿಗಳಿಗೆ ಒಂದು ಒಳ್ಳೆಯ ಮಾತನ್ನು ಆಡಿದರೆ? ಆ ಬಡವರನ್ನು ಮೇಲೆತ್ತುವ ಕೆಲಸಕ್ಕೇ ಕೈ ಹಾಕುವುದಿಲ್ಲ. ಇದು ಮಾತ್ರವಲ್ಲ. ಪಾಶ್ಚಾತ್ಯರಿಂದ ಅನುವಂಶಿಕತೆ ಮುಂತಾದ ಕೆಲಸಕ್ಕೆ ಬಾರದ ಸಿದ್ಧಾಂತಗಳ ಸಹಾಯದಿಂದ ರಾಕ್ಷಸೀ ಸಿದ್ಧಾಂತಗಳನ್ನು ತಯಾರು ಮಾಡುತ್ತಿರುವರು. ದೀನರನ್ನು ಮತ್ತೂ ಹೆಚ್ಚಾಗಿ ಪೀಡಿಸುವುದಕ್ಕೆ ಇದು. ಅಮೆರಿಕಾದೇಶದಲ್ಲಿ ವಿಶ್ವಧರ್ಮ ಸಮ್ಮೇಳನಕ್ಕೆ ಆಫ್ರಿಕಾದೇಶದಲ್ಲಿ ಹುಟ್ಟಿದ ಒಬ್ಬ ನೀಗ್ರೋ ಬಂದು ಮಾತನಾಡಿದನು. ಅವನು ಸುಂದರವಾದ ಭಾಷಣಮಾಡಿದನು. ಅವನಲ್ಲಿ ಆಸಕ್ತನಾಗಿ ಹಲವುವೇಳೆ ಅವನ ವಿಚಾರವನ್ನು ಕುರಿತು ಕೇಳಿದೆ. ಆದರೆ ಆತ ಏನನ್ನೂ ಹೇಳಲಿಲ್ಲ. ನಾನು ಇಂಗ್ಲೆಂಡಿನಲ್ಲಿ ಕೆಲವು ಆಫ್ರಿಕಾದವರನ್ನು ಕಂಡೆ. ಅವರು ಈ ಹುಡುಗನ ವಿಚಾರವಾಗಿ ಹೀಗೆ ಹೇಳಿದರು: ಈತ ಒಬ್ಬ ನೀಗ್ರೊ ಜನಾಂಗದ ಅಧಿಪತಿಯ ಮಗ. ಮತ್ತೊಂದು ಪಂಗಡದ ದಳಪತಿ ಇವನ ಮೇಲೆ ಕೋಪಗೊಂಡು ಇವನ ತಾಯಿಯನ್ನು ಕೊಂದು ಮಾಂಸ ಬೇಯಿಸಿ ತಿಂದನು. ಮಗುವನ್ನು ಕೊಂದು ತಿನ್ನುವಂತೆ ಆಜ್ಞಾಪಿಸಿದನು. ಆದರೆ ಮಗು ಹೇಗೊ ತಪ್ಪಿಸಿಕೊಂಡಿತು. ಬಹಳ ಕಷ್ಟ ಅನುಭವಿಸಿ ನೂರಾರು ಮೈಲಿ ನಡೆದು ಸಮುದ್ರದ ಕರೆ ಸೇರಿದನು. ಅಲ್ಲಿ ಒಂದು ಹಡಗಿನಲ್ಲಿ ಅಮೆರಿಕಾದೇಶ ಸೇರಿದನು. ಈ ಹುಡುಗ ಆ ಭಾಷಣವನ್ನು ಮಾಡಿದ ಎಂದನು. ಇದನ್ನು ನೋಡಿ ಆನಮೇಲೆ ನಿಮ್ಮ ಅನುವಂಶಿಕತೆ ಸಿದ್ಧಾಂತ ಏನಾಯಿತು ನೋಡಿ! ಹೇ ಬ್ರಾಹ್ಮಣರೆ! ಅನುವಂಶಿಕವಾಗಿ ಬಂದ ಗುಣಗಳ ಪ್ರಕಾರ ಬ್ರಾಹ್ಮಣನಿಗೆ

ಪರೆಯನಿಗಿಂತ ಹೆಚ್ಚು ವಿದ್ಯಾಭ್ಯಾಸಕ್ಕೆ ಮನಸ್ಸಿದ್ದರೆ ಪರೆಯನ ವಿದ್ಯಾಭ್ಯಾಸಕ್ಕೆ ಹೆಚ್ಚು ಖರ್ಚುಮಾಡಿ, ಬ್ರಾಹ್ಮಣನಿಗೆ ಖರ್ಚುಮಾಡಬೇಡಿ. ದುರ್ಬಲರಿಗೆ ಕೊಡಿ. ಅಲ್ಲಿ ನಿಮ್ಮ ದಾನವೆಲ್ಲ ಬೇಕಾಗಿದೆ. ಬ್ರಾಹ್ಮಣ ಹೆಚ್ಚು ಬುದ್ಧಿವಂತನಾಗಿದ್ದರೆ ಹೆಚ್ಚು ಸಹಾಯವಿಲ್ಲದೆ ಬುದ್ಧಿವಂತನಾಗಬಲ್ಲ. ಉಳಿದವರು ಬುದ್ಧಿವಂತರಾಗಿಲ್ಲದೆ ಇದ್ದರೆ ಅವರಿಗೆ ಶಿಕ್ಷಣ ಗುರುಗಳೆಲ್ಲ ಮೀಸಲಾಗಿರಲಿ. ಇದು ನನಗೆ ಗೋಚರಿಸುವ ಮಟ್ಟಿಗೆ ಯುಕ್ತವಾದುದು. ಭರತಖಂಡದಲ್ಲಿ ದಬ್ಬಾಳಿಕೆಗೆ ತುತ್ತಾದ ಈ ನಿರ್ಭಾಗ್ಯರು ತಮ್ಮ ನಿಜ ಸ್ವರೂಪವನ್ನು ತಿಳಿದುಕೊಳ್ಳಬೇಕಾಗಿದೆ. ಪ್ರತಿಯೊಬ್ಬ ಸ್ತ್ರೀ ಪುರುಷ ಮಕ್ಕಳು ಜಾತಿಕುಲಗೋತ್ರಗಳ ಭೇದವಿಲ್ಲದೆ, ದುರ್ಬಲರು ಬಲಾಢ್ಯರು ಎಂಬ ಭೇದಭಾವವಿಲ್ಲದೆ ಸಬಲದುರ್ಬಲರ ಹಿಂದೆ ಉಚ್ಚನೀಚರ ಹಿಂದೆ ಪ್ರತಿಯೊಬ್ಬರಲ್ಲಿಯೂ ಅನಂತಾತ್ಮನಿರುವನು. ಎಲ್ಲರೂ ಸತ್ಪುರುಷರಾಗುವುದಕ್ಕೆ ಪ್ರಖ್ಯಾತರಾಗುವುದಕ್ಕೆ ಅನಂತ ಅವಕಾಶವಿದೆ. ಅನಂತ ಶಕ್ತಿ ಇದೆ. ಪ್ರತಿಯೊಬ್ಬರಿಗೂ "ಉತ್ತಿಷ್ಠತ, ಜಾಗ್ರತ, ಪ್ರಾಪ್ಯವರಾನ್ನಿಬೋಧತ" "ಏಳಿ ಜಾಗ್ರತರಾಗಿ ಗುರಿ ಸೇರುವವರಿಗೂ ನಿಲ್ಲಬೇಡಿ" ಎಂದು ಬೋಧಿಸುವ. ಏಳಿ, ಜಾಗ್ರತರಾಗಿ ದುರ್ಬಲತೆಯ ಪರವಶತೆಯಿಂದ. ಯಾರೂ ದುರ್ಬಲರಲ್ಲ. ಆತ್ಮ ಸರ್ವಶಕ್ತ, ಸರ್ವಜ್ಞ. ಏಳಿ, ಯಾರಿಗೂ ಮಣಿಯಬೇಡಿ. ನಿಮ್ಮಲ್ಲಿರುವ ಬ್ರಹ್ಮನನ್ನು ವ್ಯಕ್ತಗೊಳಿಸಿ, ಅವನನ್ನು ಅಲ್ಲಗಳೆಯಬೇಡಿ. ಬೇಕಾದಷ್ಟು ಅಕರ್ಮ ದುರ್ಬಲತೆ ಪರವಶತೆ ನಮ್ಮ ಜನಾಂಗದ ಮೇಲೆ ಇತ್ತು; ಈಗಲೂ ಇದೆ. ಆಧುನಿಕ ಹಿಂದೂಗಳೇ, ಆ ಪರವಶತೆಯಿಂದ ಪಾರಾಗಿ. ಹಾಗೆ ಆಗುವುದಕ್ಕೆ ಮಾರ್ಗ ನಿಮ್ಮ ಶಾಸ್ತ್ರದಲ್ಲಿಯೇ ಇದೆ. ನಿಜವಾದ ಆತ್ಮನ ವಿಷಯವನ್ನು ನೀವು ಕೇಳಿ, ಇತರರಿಗೆ ಬೋಧಿಸಿ. ನಿದ್ರಿಸುವವರನ್ನು ಎಬ್ಬಿಸಿ. ಅವರು ಹೇಗೆ ಜಾಗ್ರತರಾಗುತ್ತಾರೆ ಎಂಬುದನ್ನು, ನೋಡಿ. ಆಗ ಶಕ್ತಿ ಬರುವುದು, ಮಹಿಮೆ ಬರುವುದು, ಶ್ರೇಯಸ್ಸು ಬರುವುದು, ಪವಿತ್ರತೆ ಬರುವುದು. ಈಗ ನಿದ್ರಿಸುತ್ತಿರುವ ಜೀವ ಜಾಗೃತನಾಗಿ ಕಾರ್ಯೋನ್ಮುಖನಾಗುವಾಗ ಎಲ್ಲಾ ಕಲ್ಯಾಣಗುಣಗಳೂ ಬರುವುವು. ಗೀತೆಯಲ್ಲಿ ನಾನು ಯಾವುದನ್ನಾದರೂ ಅತಿಮೆಚ್ಚುವುದಿದ್ದರೆ ಅದೇ ಶ್ರೀಕೃಷ್ಣನ ಬೋಧನೆಯ ಸಾರದಂತಿರುವ ಈ ಎರಡು ಶ್ಲೋಕದಲ್ಲಿ ಬರುವುದು.

"ಸಮಂ ಸರ್ವೇಷು ಭೂತೇಷು ತಿಷ್ಠನ್ತಂ ಪರಮೇಶ್ವರಂ

ವಿನಶ್ಯತ್ಸ್ವವಿನಶ್ಯನ್ತಂ ಯಃಪಶ್ಯತಿ ಸ ಪಶ್ಯತಿ ।
ಸಮಂ ಪಶ್ಯನ್ ಹಿ ಸರ್ವತ್ರ ಸಮವಸ್ಥಿತಮೀಶ್ವರಮ್
ನ ಹಿನಸ್ತ್ಯಾತ್ಮನಾತ್ಮಾನಂ ತತೋ ಯಾತಿಪರಾಂ ಗತಿಂ ॥

ಯಾರು ಅವಿನಾಶಿಯಾಗಿರುವಂತಹ ಪರಮೇಶ್ವರನನ್ನು ವಿನಾಶವಾಗಿರುವ ವಸ್ತುಗಳಲ್ಲಿ ನೋಡುವರೋ ಅವರೇ ನಿಜವಾಗಿ ನೋಡುವರು.

ಯಾರು ದೇವರನ್ನು ಎಲ್ಲಾ ಕಡೆಯಲ್ಲೂ ಒಂದೇ ಸಮನಾಗಿ ನೋಡುತ್ತಿರುವರೋ ಅವರು ಆತ್ಮನಿಂದ ಆತ್ಮನನ್ನು ನಾಶಮಾಡದೆ ಪರಮಗತಿಯನ್ನು ಹೊಂದುವರು.

ವೇದಾಂತದ ತತ್ತ್ವ ಪ್ರಚಾರದಿಂದ ಭರತಖಂಡದಲ್ಲಿ ಮತ್ತು ಹೊರಗೆ ಪರೋಪಕಾರವನ್ನು ಮಾಡುವುದಕ್ಕೆ ಒಳ್ಳೆಯ ಅವಕಾಶ ದೊರೆತಿದೆ. ಇಲ್ಲಿ ಮತ್ತು ಹೊರಗೆ ಮಾನವಕೋಟಿಯ ದುಃಖ ದೂರಮಾಡಿ ಅವನನ್ನು ಶ್ರೇಯಸ್ಸಿನ ಮಾರ್ಗದಕಡೆ ಹೋಗುವಂತೆ ಮಾಡುವುದಕ್ಕಾಗಿ, ಪರಮಾತ್ಮನ ಸರ್ವವ್ಯಾಪಿತ್ವ ಮತ್ತು ಅವನು ಸರ್ವರಲ್ಲಿ ಒಂದೇ ಸಮನಾಗಿರುವನು ಎಂಬ ಮಹಾಸಿದ್ಧಾಂತವನ್ನು ಪ್ರಚಾರಮಾಡಬೇಕು. ಎಲ್ಲಿ ಪಾಪವಿದೆ ಅಜ್ಞಾನವಿದೆ ಅದಕ್ಕೆಲ್ಲಾ ನಮ್ಮ ಶಾಸ್ತ್ರರೀತಿ ಕಾರಣ ಭಿನ್ನತೆಯನ್ನು ಒತ್ತಿ ಹೇಳುವುದು. ಸರ್ವ ಸಮಾನತೆಯಲ್ಲಿ ಶ್ರದ್ಧೆ ಮತ್ತು ನಂಬಿಕೆ ಒಳ್ಳೆಯದನ್ನು ನಮಗೆ ನೀಡುವುದು. ಇದೇ ವೇದಾಂತದ ಪ್ರಖ್ಯಾತ ಸಿದ್ಧಾಂತ. ಇದನ್ನು ಆದರ್ಶವಾಗಿಟ್ಟುಕೊಂಡಿರುವುದೊಂದು, ಅದನ್ನು ಅನುಷ್ಠಾನಕ್ಕೆ ತರುವುದು ಮತ್ತೊಂದು. ಒಂದು ಆದರ್ಶವನ್ನು ತೋರುವುದು. ಇದು ಸುಲಭ. ಅದನ್ನು ಸಾಧಿಸುವುದಕ್ಕೆ ಮಾರ್ಗ ಯಾವುದು ?

ನಮ್ಮದೇಶದ ಜನರ ಮನದಲ್ಲಿ ಹಲವು ಶತಮಾನಗಳಿಂದ ಬಹಳ ಕಷ್ಟವಾದ ಜಾತಿ ಮತ್ತು ಸಮಾಜ ಸುಧಾರಣೆಗೆ ಸಂಬಂಧಪಟ್ಟ ಜಟಿಲ ಸಮಸ್ಯೆ ಬರುವುದು. ನಾನು ಸಮಾಜ ಸುಧಾರಕನೂ ಅಲ್ಲ, ವರ್ಣಭೇದಕನೂ ಅಲ್ಲವೆಂದು ಖಂಡಿತ ಹೇಳುವೆನು. ನಿಮ್ಮ ಜಾತಿ ಮತ್ತು ಸಮಾಜ ಸುಧಾರಣೆಗೂ ನನಗೂ ಯಾವ ಸಂಬಂಧವೂ ಇಲ್ಲ. ನೀವು ಯಾವ ಜಾತಿಯಲ್ಲಿ ಆದರೂ ಇರಿ. ಆದರೆ ಬೇರೆ ಜಾತಿಯವರನ್ನು ಅಥವಾ ಅನ್ಯರನ್ನು ನೀವು ಏತಕ್ಕೆ ದ್ವೇಷಿಸಬೇಕು? ಪ್ರೀತಿ ಪ್ರೀತಿಯೊಂದನ್ನೇ ನಾನು ಬೋಧಿಸುವುದು. ಸರ್ವವ್ಯಾಪಿತ್ವ ಮತ್ತು ಸಮಾನತೆಯ ವೇದಾಂತದ ತಳಹದಿಯೇ ನನ್ನ ಬೋಧನೆಗೆ ಮೂಲ. ಕಳೆದ ನೂರು ವರ್ಷಗಳಿಂದ ಸಮಾಜ ಸುಧಾರಕರು ಮತ್ತು ಸಮಾಜ

ಸುಧಾರಣೆ ದೇಶದಲ್ಲೆಲ್ಲಾ ತುಂಬಿಕೊಂಡಿದೆ. ನನಗೆ ಯಾರಮೇಲೂ ದ್ವೇಷ ವಿಲ್ಲ. ಮುಕ್ಕಾಲುಪಾಲು ಅವರೆಲ್ಲಾ ಒಳ್ಳೆಯವರು; ಒಳ್ಳೆ ಆಶೆ ಆಕಾಂಕ್ಷೆ ಗಳಿವೆ ಕೆಲವು ವಿಷಯಗಳಲ್ಲಿ. ಆದರೆ ಒಂದು ನೂರು ವರ್ಷದ ಸುಧಾರಣೆ ಯಿಂದ ಸ್ಪಷ್ಟವಾಗಿ ಯಾವ ಪ್ರತಿಫಲವೂ ದೊರೆತಿಲ್ಲ. ಹಿಂದೂ ಜನಾಂಗ ಮತ್ತು ಸಂಸ್ಕೃತಿಯ ಅನುಯಾಯಿಗಳ ಮೇಲೆ ಬೇಕಾದಷ್ಟು ಅಪವಾದ ವನ್ನು ಹೊರಿಸುವರು. ಆದರೂ ಸ್ಪಷ್ಟವಾಗಿ ಯಾವ ಹಿತಸಾಧನೆಯೂ ಆಗಿಲ್ಲ. ಇದಕ್ಕೆ ಕಾರಣವೇನು? ಇದನ್ನು ಹುಡುಕುವುದು ಅಷ್ಟು ಕಷ್ಟ ವಲ್ಲ. ಇದು ಅವರ ತಿರಸ್ಕಾರದಲ್ಲಿದೆ. ಮೊದಲನೆಯದಾಗಿ ಇತಿಹಾಸ ಕಾಲದಿಂದಲೂ ಬಂದ ಜಾತಿಗುಣವನ್ನು ಕಾಪಾಡಿಕೊಳ್ಳಬೇಕು. ನಾವು ಅನ್ಯರಿಂದ ಎಷ್ಟೋ ವಸ್ತುಗಳನ್ನು ತೆಗೆದುಕೊಳ್ಳಬೇಕಾಗಿದೆ. ಎಷ್ಟೋ ವಿಷಯ ಕಲಿತುಕೊಳ್ಳಬೇಕಾಗಿದೆ ಎಂದು ನಾನು ನಂಬುತ್ತೇನೆ. ಆದರೆ ಮುಕ್ಕಾಲುಪಾಲು ನಮ್ಮ ಸುಧಾರಕರು ವಿವೇಚನೆಯಿಲ್ಲದೆ ಪಾಶ್ಚಾತ್ಯರ ಮಾರ್ಗವನ್ನು ಅನುಸರಿಸುತ್ತಿರುವುದನ್ನು ನೋಡಿದರೆ ಶೋಚನೀಯವಾಗು ವುದು. ಇದು ಭರತಖಂಡಕ್ಕೆ ಹಿತಕಾರಿಯಲ್ಲ. ಆದಕಾರಣ ನಮ್ಮ ಇತ್ತೀಚಿನ ಸುಧಾರಣಾ ಕಾರ್ಯಗಳು ವಿಫಲವಾಗಿವೆ. ಎರಡನೆಯದಾಗಿ ಕೇವಲ ಅಲ್ಲಗಳೆಯುವುದಲ್ಲ ಒಳ್ಳೆಯದಕ್ಕೆ ದಾರಿ. ನಮ್ಮ ಸಮಾಜದಲ್ಲಿ ಹಲವು ಕುಂದುಕೊರತೆಗಳಿವೆ ಎಂಬುದು ಮಗುವಿಗೂ ಗೊತ್ತು. ಯಾವ ಸಮಾಜದಲ್ಲಿ ಇಲ್ಲ? ನನ್ನ ದೇಶಬಾಂಧವರೇ ನಾನು ಇದನ್ನು ಹೇಳುತ್ತೇನೆ ಗಮನಿಸಿ. ನಮ್ಮ ದೇಶವನ್ನು ಇತರ ದೇಶ ಜನಾಂಗಗಳೊಂದಿಗೆ ಹೋಲಿ ಸಿದರೆ ನಮ್ಮ ಜನ ಹೆಚ್ಚು ಧಾರ್ಮಿಕರು, ದೈವ ಭಕ್ತರು. ನಮ್ಮ ಸಮಾಜ ಸಂಸ್ಥೆ ಮಾನವ ಕೋಟಿಯ ಕಲ್ಯಾಣಕ್ಕೆ ಅನುಕೂಲವಾಗಿದೆ. ನಮಗೆ ಇಂದು ಯಾವ ಕ್ರಾಂತಿಯೂ ಬೇಕಾಗಿಲ್ಲ. ನಮ್ಮ ದೇಶದ ಸಂಸ್ಕೃತಿಗೆ ತಕ್ಕಂತೆ ಬೆಳೆಯಬೇಕು. ಅಭಿವೃದ್ಧಿಯಾಗಬೇಕು. ನಮ್ಮ ದೇಶದ ಇತಿ ಹಾಸವನ್ನು ನೋಡಿದರೆ ಮತ್ತಾವ ದೇಶವೂ ಜನರ ಉದ್ಧಾರಕ್ಕೆ ಇಷ್ಟೊಂದು ಪ್ರಯತ್ನಪಟ್ಟಿಲ್ಲವೆಂಬುದು ಗೊತ್ತಾಗುವುದು. ಆದಕಾರಣ ನಾನು ನನ್ನ ದೇಶವನ್ನು ಅಲ್ಲಗಳೆಯುವುದಿಲ್ಲ. "ನೀವು ಚೆನ್ನಾಗಿ ಮಾಡಿರುವಿರಿ, ಇನ್ನೂ ಉತ್ತಮವಾಗಿ" ಎನ್ನುವೆನು. ಈ ದೇಶದಲ್ಲಿ ಹಿಂದೆ ಅದ್ಭುತ ಕಾರ್ಯಗಳು ನೆರವೇರಿವೆ. ಅದನ್ನು ಮೀರಿದ ಕಾರ್ಯಸಾಧನೆಗೆ ಅವಕಾಶವಿದೆ, ಕಾಲವಿದೆ. ನಾವು ಒಂದೇಕಡೆ ನಿಲ್ಲಲಾರೆವು ಎಂಬುದು

ನಿಮಗೆ ಗೊತ್ತಿರಬಹುದೆಂದು ಊಹಿಸುತ್ತೇನೆ. ನಾವು ನಿಂತಕಡೆಯೇ ನಿಂತರೆ ಸಾಯಬೇಕಾಗುವುದು. ನಾವು ಮುಂದೆ ಹೋಗಬೇಕು, ಇಲ್ಲವೇ ಹಿಂದೆ ಸರಿಯಬೇಕು. ನಾವು ಮುಂದುವರಿಯಬೇಕು, ಇಲ್ಲವೇ ಹಿಂದೆ ಬೀಳಬೇಕು. ನಮ್ಮ ಪೂರ್ವಿಕರು ಹಿಂದೆ ಮಹತ್ಕಾರ್ಯಗಳನ್ನು ಸಾಧಿಸಿದರು. ನಾವು ಇನ್ನೂ ಪೂರ್ಣ ವಿಕಾಸವಾಗಬೇಕಾಗಿದೆ. ಅವರು ಗಳಿಸಿದುದಕ್ಕಿಂತಲೂ ಹೆಚ್ಚು ಗಳಿಸಬೇಕಾಗಿದೆ. ನಾವು ಹೇಗೆ ಹಿಂದೆ ಸರಿದು ಅವನತಿಗೆ ಬೀಳೋಣ? ಅದು ಸಾಧ್ಯವಿಲ್ಲ. ಅದು ಆಗಕೂಡದು. ಹಿಂದೆ ಸರಿದರೆ ಜನಾಂಗದ ಅವನತಿ ಮರಣ ಸನ್ನಿಹಿತವಾಗಿದೆ. ಮುಂದೆ ಮುಂದೆ ಹೋಗಿ ಮತ್ತೂ ಮಹತ್ಕಾರ್ಯಗಳನ್ನು ಸಾಧಿಸೋಣ. ನಾನು ನಿಮಗೆ ಹೇಳಬೇಕಾದುದು ಇದು. ನಾನು ಯಾವ ಕ್ಷಣಿಕ ಸಮಾಜ ಸುಧಾರಣೆಯನ್ನೂ ಬೋಧಿಸುವವನಲ್ಲ. ನಾನು ದೋಷಗಳನ್ನು ನಿವಾರಿಸಲು ಕೈಹಾಕುವುದಿಲ್ಲ. ನಮ್ಮ ಪೂರ್ವಿಕರು ಮಾನವ ಕಲ್ಯಾಣಕ್ಕೆ ತೋರಿದ ಅತಿ ಶ್ರೇಷ್ಠ ಮಾರ್ಗದೆಡೆಸಾಗಿ. ಆದರ್ಶವನ್ನು ಅನುಷ್ಠಾನದಲ್ಲಿ ವ್ಯಕ್ತಪಡಿಸಿ ಎನ್ನುವೆನು. ಮನುಷ್ಯರ ಏಕತ್ವ, ಅವನು ಸ್ವಭಾವತಃ ಪರಿಶುದ್ಧನೆಂಬ ವೇದಾಂತ ಸಿದ್ಧಾಂತವನ್ನು ಹೆಚ್ಚು ಹೆಚ್ಚು ಅನುಷ್ಠಾನಕ್ಕೆ ತನ್ನಿ ಎನ್ನುವೆನು. ನನಗೆ ಇಂದು ಸಮಯವಿದ್ದರೆ, ನಾವು ಇಂದು ಮಾಡಬೇಕಾದುದನ್ನೆಲ್ಲಾ ನಮ್ಮ ಹಿಂದಿನ ಸ್ಮೃತಿಕಾರರು ಬಹಳ ಹಿಂದೆಯೇ ಹೇಳಿದ್ದರು, ಸಮಾಜದಲ್ಲಿ ಆಗಿರುವ ಮತ್ತು ಆಗುವ ಬದಲಾವಣೆಯನ್ನೆಲ್ಲಾ ಅವರು ನಿರೀಕ್ಷಿಸಿದ್ದರು ಎಂಬುದನ್ನು ತೋರುತ್ತಿದ್ದೆ. ಅವರೂ ಜಾತಿಯನ್ನು ವಿರೋಧಿಸಿದರು. ಆದರೆ ಅವರು ಇಂದಿನ ಆಧುನಿಕರಂತೆ ಅಲ್ಲ. ಜಾತಿಯನ್ನು ರದ್ದುಮಾಡುವುದೆಂದರೆ, ಊರಿನ ಜನರೆಲ್ಲಾ ಒಟ್ಟಿಗೆ ಕುಳಿತು ದನದ ಮಾಂಸ ತಿಂದು ಸಾರಾಯಿ ಕುಡಿಯಬೇಕೆಂದು ಅಲ್ಲ. ದೇಶದ ಮೂರ್ಖರು, ಮುಠ್ಠಾಳರು, ಹುಚ್ಚರೆಲ್ಲಾ ಎಲ್ಲಿ, ಯಾವಾಗ, ಯಾರನು ಬೇಕಾದರೆ ಮದುವೆ ಮಾಡಿಕೊಂಡು ಇಡೀ ದೇಶವನ್ನೆ ಒಂದು ಹುಚ್ಚರ ಆಸ್ಪತ್ರೆಯನ್ನಾಗಿ ಮಾಡಬೇಕೆಂದು ಅಲ್ಲ. ಅಥವಾ ಒಂದು ದೇಶದ ವಿಧವೆಯರಿಗೆ ಸಿಕ್ಕುವ ಗಂಡಂದಿರ ಸಂಖ್ಯೆಯ ಮೇಲೆ ಒಂದು ದೇಶದ ಅಭ್ಯುದಯ ನಿಂತಿದೆ ಎಂದೂ ಅವರು ತಿಳಿಯಲಿಲ್ಲ. ನಾನು ಇನ್ನೂ ಅಂಥಹ ಅಭ್ಯುದಯ ದೇಶವನ್ನು ನೋಡಬೇಕಾಗಿದೆ.

ನಮ್ಮ ಪೂರ್ವಿಕರ ಆದರ್ಶ ಮನುಷ್ಯ ಬ್ರಾಹ್ಮಣ. ನಮ್ಮ ಶಾಸ್ತ್ರ

ದಲ್ಲೆಲ್ಲಾ ಈ ಆದರ್ಶ ಪ್ರಮುಖವಾಗಿ ನಿಲ್ಲುವುದು. ಯೂರೋಪಿನಲ್ಲಿ ಪಾದ್ರಿಗಳು ಇರುವರು. ಅವರ ಪೂರ್ವಿಕರು ಯಾವ ಗೌರವಸ್ಥವಂಶಕ್ಕೆ ಸೇರಿದವರೆಂಬುದನ್ನು ತೋರುವುದಕ್ಕೆ ಸಹಸ್ರಾರು ಪೌಂಡು ವೆಚ್ಚಮಾಡುತ್ತಿರುವರು. ಅದಕ್ಕಾಗಿ ತುಂಬಾ ಶ್ರಮಪಡುತ್ತಿರುವರು. ಆ ಪೂರ್ವಿಕರೇ ಯಾವುದೋ ಗುಡ್ಡದ ಮೇಲೆ ಇದ್ದ ದುಷ್ಟ ಪಾಳೆಯಗಾರರು. ಜನರು ಹೋಗುವುದನ್ನು ಕಾಯುತ್ತಾ ಕೊಳ್ಳೆಹೊಡೆಯುತ್ತಿದ್ದರು. ಅಂತಹವರ ವಂಶಕ್ಕೆ ತಾವು ಸೇರಿದವರೆಂಬುದನ್ನು ಪ್ರಮಾಣ ಸಹಿತ ವಿವರಿಸುವವರೆಗೆ ಅವರಿಗೆ ತೃಪ್ತಿಯೇ ಇಲ್ಲ. ನಮಗೆ ಗೌರವ ಸ್ಥಾನವನ್ನು ದಾನಮಾಡುವ ಪೂರ್ವಿಕರ ಕೆಲಸವಿದು. ಇಂತಹ ಒಬ್ಬ ತುಂಟ ಪಾಳೆಯಗಾರನ ವಂಶಕ್ಕೆ ತಾವು ಸೇರಿದವರೆನ್ನುವವರೆಗೂ ಅವರಿಗೆ ತೃಪ್ತಿಯೇ ಇಲ್ಲ. ಆದರೆ ಭರತಖಂಡದಲ್ಲಿ ಪ್ರಖ್ಯಾತ ಚಕ್ರವರ್ತಿ ಕೂಡ ತಮ್ಮ ಪೂರ್ವಿಕರು ಕಾಡಿನಲ್ಲಿ ವಾಸಮಾಡುತ್ತಾ ಗೆಡ್ಡೆಗೆಣಸು ತಿಂದು ನಾರು ಬಟ್ಟೆ ಉಟ್ಟು ವೇದಾಧ್ಯಯನ ಮಾಡುತ್ತಿದ್ದ ಋಷಿಗಳು ಎಂದು ತೋರುವುದಕ್ಕೆ ಪ್ರಯತ್ನಪಡುವನು. ಭರತಖಂಡದ ರಾಜ ತನ್ನ ಪೂರ್ವಿಕರ ಮೂಲವನ್ನು ಕಂಡು ಹಿಡಿಯುವುದು ಹೀಗೆ. ನೀವೊಬ್ಬ ಋಷಿಯ ಕುಲಕ್ಕೆ ಸೇರಿದವರೆಂದರೆ ಕುಲೀನ ವಂಶಸ್ಥರು, ಇಲ್ಲದೆ ಇದ್ದರೆ ಇಲ್ಲ. ನಮ್ಮ ದೇಶದ ಕುಲೀನ ಜಾತಿಯ ಆದರ್ಶ ಇತರ ದೇಶಗಳಂತೆ ಅಲ್ಲ. ತ್ಯಾಗ ಮತ್ತು ಆಧ್ಯಾತ್ಮ ಸಂಪನ್ನ ಬ್ರಾಹ್ಮಣ ನಮ್ಮ ಆದರ್ಶ. ಬ್ರಾಹ್ಮಣ ಆದರ್ಶವೆಂದರೆ ಏನು ಅರ್ಥ? ಆದರ್ಶ ಬ್ರಾಹ್ಮಣನಲ್ಲಿ ಸಾಂಸಾರಿಕತೆ ಸಂಪೂರ್ಣ ಮಾಯವಾಗಿ ಜ್ಞಾನ ತುಂಬಿ ತುಳುಕಾಡುತ್ತಿರುವುದು. ಇದೇ ಹಿಂದೂ ಜನಾಂಗದ ಆದರ್ಶ. ಬ್ರಾಹ್ಮಣ ಯಾವ ನಿಯಮಕ್ಕೂ ಒಳಪಟ್ಟಿಲ್ಲ, ಅವನಿಗೆ ಯಾವ ನಿಯಮವೂ ಇಲ್ಲ, ಅವನು ಯಾವ ರಾಜರ ಅಧೀನವಲ್ಲೂ ಇಲ್ಲ. ಅವನಿಗೆ ತೊಂದರೆ ಕೊಡಕೂಡದು ಎಂಬುದನ್ನು ನಮ್ಮ ಶಾಸ್ತ್ರ ಸಾರುವುದು. ಇದು ಅಕ್ಷರಶಃ ಸತ್ಯ. ಏನೂ ತಿಳಿಯದ ದುರುದ್ದೇಶ ಪ್ರೇರೇಪಿತ ಜನರ ಅಭಿಪ್ರಾಯವನ್ನು ಕೇಳಿ ಆಲೋಚಿಸಬೇಡಿ. ಮೂಲ ವೇದಾಂತದ ಬೆಳಕಿನಲ್ಲಿ ನಿಶ್ಚಯಿಸಿ. ಯಾರು ತಮ್ಮ ಸ್ವಾರ್ಥವನ್ನು ನಾಶಮಾಡಿ, ಧರ್ಮ ಮತ್ತು ಪ್ರೇಮ ಸಂಪಾದನೆ ಮತ್ತು ಪ್ರಚಾರಕ್ಕೆ ಮಾತ್ರ ಬಾಳುತ್ತಾರೋ ಅವನು ಬ್ರಾಹ್ಮಣನಾದರೆ, ಇಂತಹ ಆಧ್ಯಾತ್ಮಿಕ ಸಂಪನ್ನರಾದ ಸ್ತ್ರೀ ಪುರುಷರಿಂದ ಕೂಡಿದ ಬ್ರಾಹ್ಮಣ ಜನಾಂಗ ಎಲ್ಲಾ ನಿಯಮಗಳನ್ನೂ ಮೀರಿ ಹೋಗುವುದರಲ್ಲಿ ಆಶ್ಚರ್ಯ

ವೇಸಿದೆ. ಅವರನ್ನು ಆಳುವುದಕ್ಕೆ ಪೋಲೀಸು ಏತಕ್ಕೆ? ಸಿಪಾಯಿ ಪಡೆ ಏತಕ್ಕೆ? ಅವರನ್ನು ಏತಕ್ಕೆ ಯಾರಾದರೂ ಆಳಬೇಕು? ಅವರು ಒಂದು ಸರ್ಕಾರದ ಅಧೀನದಲ್ಲಿ ತಾನೆ ಏತಕ್ಕೆ ಇರಬೇಕು? ಅವರು ಸತ್ಪುರುಷರು, ಮಹಾ ವ್ಯಕ್ತಿಗಳು, ಭಗವಂತನ ಮಕ್ಕಳು. ಇವರೇ ನಮ್ಮ ಆದರ್ಶ ಬ್ರಾಹ್ಮಣರು. ಸತ್ಯಯುಗದಲ್ಲಿ ಒಂದೇ ಜಾತಿ ಇತ್ತು, ಅದೇ ಬ್ರಾಹ್ಮಣರು ಎಂದು ಓದುತ್ತೇವೆ. ಮಹಾಭಾರತದಲ್ಲಿ ಆದಿಯಲ್ಲಿ ಬ್ರಾಹ್ಮಣರೊಬ್ಬರೇ ಇದ್ದರು, ಅವರು ಅಧೋಗತಿಗೆ ಬರುತ್ತಾ ಹಲವು ವರ್ಣಗಳಾದರೆಂದೂ ಪುನಃ ಕೊನೆಯಲ್ಲಿ ಅವರೆಲ್ಲಾ ಬ್ರಾಹ್ಮಣರಾಗುವರೆಂದೂ ಹೇಳಿದೆ. ಈಗ ಅದು ಹಾಗೆ ಆಗುತ್ತಿದೆ. ಅದನ್ನು ಗಮನಿಸಿ. ವರ್ಣ ಸಮಸ್ಯೆಗೆ ಪರಿಹಾರ ಆಗಲೇ ಮೇಲೆ ಇರುವವರನ್ನು ಕೆಳಗೆ ಎಳೆಯುವುದಲ್ಲ. ಕೈಗೆ ಸಿಕ್ಕಿದುದನ್ನು ತಿಂದು ಕುಡಿಯುವುದಲ್ಲ. ಮಿತಿಮೀರಿ ಸುಖಭೋಗವನ್ನು ಅರಸುವುದಲ್ಲ. ವೇದಾಂತ ತತ್ತ್ವದ ಸಿದ್ಧಾಂತಗಳನ್ನು ಪರಿಪಾಲಿಸುವುದರಿಂದ ಅದು ಸಾಧ್ಯ. ಆದರ್ಶ ಬ್ರಾಹ್ಮಣರಾಗಿ ಆಧ್ಯಾತ್ಮ ಸಂಪನ್ನರಾದರೆ ಮಾತ್ರ ಸಾಧ್ಯ. ನಮ್ಮ ಪೂರ್ವಿಕರು ಈ ಮಾತೃಭೂಮಿಯಲ್ಲಿರುವ ಎಲ್ಲರಿಗೂ ಅವರು ಆರ್ಯರಾಗಲೀ ಅನಾರ್ಯರಾಗಲೀ ಋಷಿಗಳಾಗಲೀ ಬ್ರಾಹ್ಮಣರಾಗಲೀ ಅಥವಾ ನೀಚ ಚಂಡಾಲನಾಗಲೀ ಪ್ರತಿಯೊಬ್ಬರೂ ಒಂದು ನಿಯಮವನ್ನು ಪರಿಪಾಲಿಸಬೇಕೆಂದು ಹೇಳಿದರು. ಅವರ ಆಜ್ಞೆ ಎಲ್ಲರಿಗೂ ಅನ್ವಯಿಸುವುದು. ಅದೆ, ನೀವು ನಿಲ್ಲದೆ ಯಾವಾಗಲೂ ಮುಂದುವರಿಯುತ್ತಿರಬೇಕು. ಪರಮೋತ್ಕೃಷ್ಟನಿಂದ ಹಿಡಿದು ಅತಿ ನೀಚ ಚಂಡಾಲನವರೆಗೆ ಪ್ರತಿಯೊಬ್ಬರೂ ಆದರ್ಶ ಬ್ರಾಹ್ಮಣನಾಗಲು ಯತ್ನಿಸಬೇಕು. ಈ ವೇದಾಂತ ನಿಯಮ ಇಲ್ಲಿ ಮಾತ್ರವಲ್ಲ, ಪ್ರಪಂಚದ ಮೇಲೆಲ್ಲಾ ಇದು ಅನುಷ್ಠಾನಕ್ಕೆ ಸಾಧ್ಯ. ಅದರ ಉದ್ದೇಶ ಇದು. ನಿಧಾನವಾಗಿ ಎಲ್ಲ ಮಾನವ ಸಮಾಜದ ಆದರ್ಶ ಧಾರ್ಮಿಕವಾಗಬೇಕು. ಧೃತಿ, ಕ್ಷಮೆ, ಶೌಚ ಶಾಂತಿ ಉಪಾಸನ ಮತ್ತು ಧ್ಯಾನ ನಿರತರಾಗಬೇಕು. ಈ ಸ್ಥಿತಿಯಲ್ಲಿ ಈಶ್ವರ ಸಾಯುಜ್ಯ ಪದವಿ ಇರುವುದು.

ಇದನ್ನು ಹೇಗೆ ಸಾಧಿಸಬೇಕು? ಶಾಪಕೊಡುವುದು ನಿಂದೆ ಇವುಗಳಿಂದ ನಾವು ಏನನ್ನೂ ಸಾಧಿಸಲಾರೆವು. ಇದನ್ನು ನೀವು ಲಕ್ಷ್ಯದಲ್ಲಿಡಿ. ಹಲವು ವರ್ಷಗಳಿಂದ ಹೀಗೆ ಮಾಡಿರುವರು. ಇದರಿಂದ ಯಾವ ಪ್ರಯೋಜನವೂ ಆಗಲಿಲ್ಲ. ಸಹಾನುಭೂತಿ ಮತ್ತು ಪ್ರೀತಿಯಿಂದ ಮಾತ್ರ ಒಳ್ಳೆ ಪರಿಣಾಮ

ದೊರಕುವುದು. ಇದು ದೊಡ್ಡ ವಿಷಯ. ನನ್ನ ಮನಸ್ಸಿನಲ್ಲಿರುವ ಹಂಚಿಕೆ, ನನ್ನ ಮನಸ್ಸಿನಲ್ಲಿ ಪ್ರತಿದಿನವೂ ಬರುತ್ತಿರುವ ಇದಕ್ಕೆ ಸಂಬಂಧಪಟ್ಟ ಭಾವನೆ. ಇವನ್ನು ವಿವರಿಸಬೇಕಾದರೆ ಹಲವು ಉಪನ್ಯಾಸ ಕೊಡಬೇಕಾಗಿದೆ. ನನ್ನ ಭ್ರಾತೃಗಳೇ, ಮಾತೃಭೂಮಿ ಎಂಬ ಹಡಗು ಹಲವು ಸಹಸ್ರಾರು ವರ್ಷ ಗಳಿಂದಲೂ ಸಂಚರಿಸುತ್ತಿದೆ. ಇಂದು ಎಲ್ಲೋ ಸ್ವಲ್ಪ ಸೋರುತ್ತಿರ ಬಹುದು; ಯಾವುದೋ ಭಾಗ ಸ್ವಲ್ಪ ಸವೆದು ಹೋಗಿರಬಹುದು. ಇಂತಹ ಪರಿಸ್ಥಿತಿಯಲ್ಲಿ ಸಾಧ್ಯವಾದ ಮಟ್ಟಿಗೆ ಆ ರಂಧ್ರವನ್ನು ಮುಚ್ಚು ವುದು ನಿಮ್ಮ ಮತ್ತು ನನ್ನ ಪವಿತ್ರ ಕರ್ತವ್ಯ. ನಮ್ಮ ದೇಶದ ಜನರಿಗೆ ಈ ಅಪಾಯವನ್ನು ಗಮನಕ್ಕೆ ತರುವ; ಅವರು ಜಾಗ್ರತರಾಗಿ ನಮ್ಮ ಸಹಾಯಕ್ಕೆ ಬರಲಿ. ಜನರಿಗೆ ಅಪಾಯವನ್ನು ಮನಗಾಣಿಸಲು, ಕರ್ತವ್ಯವನ್ನು ಜ್ಞಾಪಿ ಸಲು, ದೇಶದ ಒಂದು ಮೂಲೆಯಿಂದ ಮತ್ತೊಂದು ಮೂಲೆಗೆ ತಾರ ಸ್ವರದಲ್ಲಿ ಕೂಗುತ್ತಾ ಹೋಗುವೆನು. ಅವರು ನನ್ನನ್ನು ಕೇಳಲಿಲ್ಲ ಎಂದು ಭಾವಿಸೋಣ. ಆದರೂ ಅವರನ್ನು ದೂರುವುದಿಲ್ಲ ಶಪಿಸುವುದಿಲ್ಲ. ಪೂರ್ವ ದಲ್ಲಿ ನಮ್ಮ ದೇಶ ಮಹತ್ಕಾರ್ಯಗಳನ್ನು ಸಾಧಿಸಿತು. ನಾವು ಅದಕ್ಕೂ ಮಹತ್ಕಾರ್ಯಗಳನ್ನು ಮುಂದೆ ಮಾಡದೇ ಇದ್ದರೆ ನಾವೆಲ್ಲಾ ನೀರಿನಲ್ಲಿ ಒಟ್ಟಿಗೆ ಮುಳುಗಿ ಸಾಯಬಲ್ಲೆವೆಂಬ ಶಾಂತಿಯಾದರೂ ಇರಲಿ. ದೇಶಭಕ್ತ ರಾಗಿ; ನಮಗಾಗಿ ಹಿಂದೆ ಇಷ್ಟೊಂದು ಉಪಕಾರವನ್ನು ಮಾಡಿದ ಜನಾಂಗ ವನ್ನು ಪ್ರೀತಿಸಿ. ನನ್ನ ದೇಶಬಾಂಧವರೆ, ನಾನು ಹೆಚ್ಚು ಹೋಲಿಸಿದಷ್ಟೂ ನಿಮ್ಮನ್ನು ಹೆಚ್ಚು ಪ್ರೀತಿಸುತ್ತೇನೆ. ನೀವು ಒಳ್ಳೆಯವರು, ಶುದ್ಧರು, ಸಾಧು ಸ್ವಭಾವದವರು. ಈ ಮಾಯಾ ಪ್ರಪಂಚದ ಒಂದು ವಿಚಿತ್ರವೇ ಯಾವಾಗಲೂ ನಿಮ್ಮನ್ನು ತುಳಿದಿರುವುದು. ಅದನ್ನು ಗಮನಿಸಬೇಕಾಗಿಲ್ಲ. ಕೊನೆಗೆ ಆತ್ಮ ಜಯಿಸಲೇ ಬೇಕು. ಅಲ್ಲಿಯವರೆವಿಗೂ ಕಾರ್ಯೋನ್ಮುಖ ರಾಗುವ, ನಮ್ಮ ದೇಶವನ್ನು ದೂರದೇ ಇರುವ. ಹಲವು ಶತಮಾನಗಳ ಪೆಟ್ಟಿತಿಂದು ಜರ್ಝರಿತವಾದ ಜನಾಂಗದ ಮೇಲೆ ನಿಂದೆಯ ಮಳೆ ಕರೆಯ ಬೇಡಿ. ನಮ್ಮ ಸಮಾಜದಲ್ಲಿರುವ ಅತಿ ಮೌಢ್ಯವಾಗಿರುವ ಅವಿಚಾರ ವಾಗಿರುವ ಯಾವ ಆಚಾರ ವ್ಯವಹಾರವನ್ನೂ ದೂರಬೇಡಿ. ಅವೂ ಕೂಡ ಹಿಂದೆ ಉಪಕಾರ ಮಾಡಿದ್ದುವು. ಮತ್ತಾವ ದೇಶದಲ್ಲಿ ಇರುವ ಸಂಸ್ಥೆಯ ಆದರ್ಶವೂ ಇಲ್ಲಿಗಿಂತ ಉತ್ತಮವಾಗಿಲ್ಲವೆಂಬುದನ್ನು ಗಮನದಲ್ಲಿಡಿ. ನಾನು ಎಲ್ಲಾ ದೇಶದಲ್ಲಿಯೂ ಜಾತಿಗಳನ್ನು ನೋಡಿರುವೆನು. ಆದರೆ ಎಲ್ಲಿಯೂ

ಇಲ್ಲಿರುವಂತಹ ಯೋಜನೆಯಾಗಲೀ, ಆದರ್ಶವಾಗಲೀ ಇಲ್ಲ. ಜಾತಿ ಆವಶ್ಯಕವಾದರೆ ಪವಿತ್ರತೆ, ಸಂಸ್ಕೃತಿ ತ್ಯಾಗದ ಮೇಲೆ ನಿಂತ ಜಾತಿ ಕೇವಲ ಹಣದ ಮೇಲೆ ನಿಂತ ಜಾತಿಗಿಂತ ಮೇಲು. ಯಾರನ್ನೂ ದೂರಬೇಡಿ. ನಿಮ್ಮ ಬಾಯಿ ಸುಮ್ಮನಿರಲಿ, ಹೃದಯ ತೆರೆಯಲಿ. ನಿಮ್ಮ ದೇಶದ ಮತ್ತು ಇಡೀ ಜಗತ್ತಿನ ಕಲ್ಯಾಣ ನಿಮ್ಮ ಮೇಲೆ ನಿಂತಿದೆ ಎಂದು ಭಾವಿಸಿ ಕಾರ್ಯೋನ್ಮುಖರಾಗಿ. ವೇದಾಂತದ ಸಂದೇಶವನ್ನು ಪ್ರತಿ ಮನೆಗೂ ಸಾರಿ. ಪ್ರತಿಯೊಂದು ಆತ್ಮನಲ್ಲಿರುವ ಸುಪ್ತ ಪವಿತ್ರತೆಯನ್ನು ಜಾಗ್ರತಗೊಳಿಸಿ. ಅನಂತರ ನೀವು ಎಷ್ಟೇ ಅಲ್ಪವನ್ನು ಸಾಧಿಸಿದ್ದರೂ, ನೀವು ಒಂದು ಮಹಾ ಆದರ್ಶಕ್ಕಾಗಿ ಬಾಳಿ ದುಡಿದು ಮಡಿದಿರಿ ಎಂಬ ತೃಪ್ತಿಯಾದರೂ ಇರುವುದು. ಈ ಮಹತ್ಕಾರ್ಯ ಯಾವರೀತಿಯಿಂದಲಾದರೂ ಸಿದ್ಧಿಸಿದರೂ ಅದರಮೇಲೆ ಮಾನವ ಕೋಟಿಯ ಇಂದಿನ ಮತ್ತು ಮುಂದಿನ ಕಲ್ಯಾಣ ನಿಂತಿದೆ.



# ಮದ್ರಾಸಿನ ಬಿನ್ನವತ್ತಳೆಗೆ ಉತ್ತರ

ಮನುಷ್ಯನ ಇಚ್ಛೆ ಒಂದು, ದೈವೇಚ್ಛೆಯೊಂದು. ಆಂಗ್ಲೇಯ ರೀತಿಯಲ್ಲಿ ಬಿನ್ನವತ್ತಳೆ ಅರ್ಪಿಸುವುದು ಉತ್ತರ ಕೊಡುವುದು ಇವನ್ನು ನೆರವೇರಿಸಬೇಕೆಂದು ಇತ್ತು. ಆದರೆ ದೈವೇಚ್ಛೆ ಬೇರೆ ಇತ್ತು. ನಾನು ಗೀತೆಯ ಶ್ರೀ ಕೃಷ್ಣನಂತೆ ರಥದ ಮೇಲೆ ನಿಂತು ಚದುರಿರುವ ಪ್ರೇಕ್ಷಕರಿಗೆ ಮಾತನಾಡುತ್ತಿರುವೆನು. ಅದು ಹೀಗೆ ಆದುದಕ್ಕೆ ಒಂದು ಸಂತೋಷವೇ ಸರಿ. ಇದು ಭಾಷಣಕ್ಕೆ ಒಂದು ಸ್ಫೂರ್ತಿ ಕೊಡುವುದು. ನಾನು ಏನು ಏನು ಹೇಳಬೇಕೆಂದು ಇರುವೆನೊ ಅದಕ್ಕೆ ಒಂದು ಶಕ್ತಿ ಕೊಡುವುದು. ನನ್ನ ಧ್ವನಿ ನಿಮಗೆಲ್ಲಾ ಕೇಳುವುದೊ ಇಲ್ಲವೊ ಗೊತ್ತಿಲ್ಲ. ಆದರೆ ನಾನು ಸಾಧ್ಯವಾದಮಟ್ಟಿಗೆ ಪ್ರಯತ್ನಪಡುವೆನು. ನಾನು ಇದುವರೆಗೆ ಭಾರಿ ಬಹಿರಂಗ ಸಭೆಯಲ್ಲಿ ಮಾತನಾಡಿಲ್ಲ. ಕೊಲಂಬೊ ಇಂದ ಮದ್ರಾಸಿನವರೆಗೆ ಜನರು ನನ್ನನ್ನು ಅದ್ಭುತ ಪ್ರೇಮ, ಉತ್ಸಾಹ, ಸಂತೋಷದಿಂದ ಸ್ವಾಗತಿಸಿರುವರು. ಭರತಖಂಡದಲ್ಲೆಲ್ಲಾ ಹೀಗೆಯೇ ಆಗುವ ಸೂಚನೆ ಕಾಣುತ್ತಿರುವುದು. ಇದನ್ನು ನಾನು ಕನಸಿನಲ್ಲಿಯೂ ನಿರೀಕ್ಷಿಸಿರಲಿಲ್ಲ. ನಾನು ಹಿಂದೆ ಒತ್ತಿ ಒತ್ತಿಹೇಳಿದ ಒಂದು ವಿಷಯವನ್ನು ಇದು ದೃಢಪಡಿಸುವುದು. ಆದೇ ಪ್ರತಿಯೊಂದು ದೇಶಕ್ಕೂ ಒಂದು ಆದರ್ಶಕೇಂದ್ರವಿದೆ. ಪ್ರತಿಯೊಂದು ದೇಶವೂ ಒಂದು ನಿರ್ದಿಷ್ಟಮಾರ್ಗದಲ್ಲಿ ಹೋಗಬೇಕಾಗಿದೆ. ಹಾಗೆಯೇ ಭರತಖಂಡದ ವಿಶೇಷ ಆದರ್ಶ ಆಧ್ಯಾತ್ಮ. ಪ್ರಪಂಚದ ಇತರ ಭಾಗದಲ್ಲಿ ಧರ್ಮ ಹಲವು ವಿಷಯಗಳಲ್ಲಿ ಒಂದು. ಅದು ನಿಜವಾಗಿ ಗೌಣಸ್ಥಾನದಲ್ಲೇ ಇದೆ. ಇಂಗ್ಲೆಂಡಿನಲ್ಲಿ ಧರ್ಮ ರಾಜನೀತಿಗೆ ಅಧೀನವಾಗಿದೆ. ಇಂಗ್ಲೆಂಡಿನ ಚರ್ಚು ಆಳರಸರ ಅಧೀನ. ಆದಕಾರಣ ಅದರಲ್ಲಿ ನಂಬುವರೊ ಇಲ್ಲವೊ ಅದು ತಮ್ಮ ಚರ್ಚು ಎಂದು ಎಲ್ಲರೂ ಆದಕ್ಕೆ ಬೆಂಬಲ ಕೊಡುವರು. ಪ್ರತಿಯೊಬ್ಬ ಭದ್ರಮಹಿಳೆ ಮತ್ತು ಮನುಷ್ಯ ಆ ಚರ್ಚಿಗೆ ಸೇರಿರಬೇಕು. ಇದು ಗೌರವ ಚಿಹ್ನೆ. ಇದರಂತೆಯೇ ಇತರ ದೇಶಗಳಲ್ಲಿ ಕೂಡ. ರಾಜನೀತಿಯ ಅಥವಾ ಕೆಲವು ಪಾಂಡಿತ್ಯದ ಅಂಗವಾಗಿರುವುದು. ಅದರ ಹಿಂದೆ ಸೇನಾಶಕ್ತಿ ಅಥವಾ ಆರ್ಥಿಕಶಕ್ತಿ ನಿಂತಿರುವುದು. ಜನಾಂಗದ ಭಾವನಾಡಿ ಮಿಡಿಯುತ್ತಿರುವುದಲ್ಲಿ. ಧರ್ಮವೆಂಬುದು ಹಲವು ವಸ್ತುಗಳಲ್ಲಿ ಅದೂ ಒಂದು ಅಲಂಕಾರಿಕ

ವಸ್ತು. ಆದರೆ ಭರತಖಂಡದಲ್ಲಿ ಧರ್ಮವೇ ಜನರ ಜೀವಾಳ. ಇದೇ ಮೂಲ, ಅಸ್ತಿಭಾರ. ಇದರ ಮೇಲೆ ರಾಷ್ಟ್ರಸೌಧ ನಿಂತಿರುವುದು. ಇಲ್ಲಿ ರಾಜಕೀಯ ಅಧಿಕಾರ ಪಾಂಡಿತ್ಯ ಕೂಡ ಗೌಣ. ಭರತಖಂಡದಲ್ಲಿ ಧರ್ಮವೊಂದನ್ನೇ ಲಕ್ಷ್ಯದಲ್ಲಿಟ್ಟಿರುವರು. ಭಾರತದ ಜನಸಾಮಾನ್ಯರಿಗೆ ತಿಳಿವಳಿಕೆಯ ಅಭಾವ ಎಂದು ಸಾವಿರಾರು ವೇಳೆ ನಾನು ಹಿಂದೆ ತಿಳಿದಿದ್ದೆ. ಅದು ನಿಜ. ಕೊಲಂಬೊಕ್ಕೆ ಬಂದ ಮೇಲೆ ಅಲ್ಲಿನ ಜನರಿಗೆ, ಯೂರೋಪಿನಲ್ಲಿ ಆಗುತ್ತಿರುವ ರಾಜಕೀಯ ಕ್ರಾಂತಿಯೊಂದೂ ಗೊತ್ತಿಲ್ಲ, ಮಂತ್ರಿಗಳ ಸತತ ಬದಲಾವಣೆ ಮುಂತಾದುವು ಯಾವುದೂ ಗೊತ್ತಿಲ್ಲ. ಯೂರೋಪಿನಲ್ಲಿ ಆಗುತ್ತಿರುವ ಸೋಷಿಯಲಿಸಮ್, ಅನಾರ್ಕಿಸಮ್ ಯಾವುದೂ ಅವರಿಗೆ ಗೊತ್ತಿಲ್ಲ. ಆದರೆ ಎಲ್ಲರೂ ವಿಶ್ವಧರ್ಮ ಸಮ್ಮೇಳನಕ್ಕೆ ಭರತಖಂಡದಿಂದ ಸನ್ಯಾಸಿಯೊಬ್ಬನು ಹೋಗಿದ್ದನು. ಅವನು ಯಶಸ್ಸನ್ನು ಗಳಿಸಿದನು ಎಂಬುದು ಪ್ರತಿಯೊಬ್ಬ ಸ್ತ್ರೀ ಪುರುಷ ಶಿಶುಗಳಿಗೂ ಗೊತ್ತಿದೆ. ಇದರಿಂದ ಜನರಿಗೆ ವಿಷಯ ಗೊತ್ತಿಲ್ಲವೆಂದು ಅಲ್ಲ. ಅಥವಾ ತಿಳಿದುಕೊಳ್ಳಬೇಕೆಂಬ ಕುತೂಹಲವಿಲ್ಲವೆಂತಲೂ ಅಲ್ಲ. ಅವರ ಜೀವನಕ್ಕೆ ಆವಶ್ಯಕವಾದ ವಿಷಯಗಳನ್ನು ಕುರಿತದ್ದಾದರೆ ಅವರ ಸ್ವಭಾವಕ್ಕೆ ಅನುಗುಣವಾದ ವಿಷಯವೆಂದರೆ ಕುತೂಹಲ ವ್ಯಕ್ತಪಡಿಸುವರು. ರಾಜಕೀಯ ಮುಂತಾದುವು ಎಂದಿಗೂ ನಮ್ಮ ರಾಷ್ಟ್ರದ ಮುಖ್ಯವಸ್ತುವಾಗಿರಲಿಲ್ಲ. ಅದು ಜೀವಿಸಿದ್ದು ಧರ್ಮ ಮತ್ತು ಆಧ್ಯಾತ್ಮದ ಮೇಲೆ. ಮುಂದೆಯೂ ಇದರ ಆಧಾರದ ಮೇಲೆಯೇ ಜೀವಿಸಬೇಕಾಗಿದೆ. ಎರಡು ಮುಖ್ಯ ವಿಷಯಗಳನ್ನು ಪ್ರಪಂಚದ ರಾಷ್ಟ್ರಗಳು ನಿರ್ಣಯಿಸುತ್ತಿವೆ. ಅದರಲ್ಲಿ ಭರತಖಂಡ ಒಂದು ಕಡೆ, ಇತರ ರಾಷ್ಟ್ರಗಳು ಒಂದು ಕಡೆ. ಸಮಸ್ಯೆ ಇದು. ಯಾರು ಗೆಲ್ಲುವರು ಎಂಬುದು? ಒಂದು ರಾಷ್ಟ್ರ ಏಕೆ ಉಳಿಯುವುದು ಮತ್ತೊಂದು ಅಳಿಯುವದು? ಜೀವನದ ಹೋರಾಟದಲ್ಲಿ ದ್ವೇಷ ಅಥವಾ ಪ್ರೇಮ ಉಳಿಯಬೇಕೆ? ಭೋಗ ಉಳಿಯಬೇಕೆ ಅಥವಾ ತ್ಯಾಗ ಉಳಿಯಬೇಕೆ? ಜಡ ಉಳಿಯಬೇಕೆ ಚೇತನ ಉಳಿಯಬೇಕೆ? ಇತಿಹಾಸಪೂರ್ವದಲ್ಲಿ ನಿಮ್ಮ ಪೂರ್ವಿಕರು ಹೇಗೆ ಆಲೋಚನೆ ಮಾಡುತ್ತಿದ್ದರೊ ನಾವೂ ಹಾಗೆ ಮಾಡುವೆವು. ಕಲ್ಪನೆಕೂಡ ಆ ಅಭೇದ್ಯ ಪೂರ್ವವನ್ನು ನಿಶ್ಚಯಿಸಲಾರದು. ಅಲ್ಲಿ ಪ್ರಖ್ಯಾತ ನಮ್ಮ ಪೂರ್ವೀಕರು ಒಂದು ಭಾಗವನ್ನು ಆರಿಸಿಕೊಂಡು ಪ್ರಪಂಚವನ್ನೆ ಪ್ರತಿಭಟಿಸಿರುವರು. ನಮ್ಮ ಉತ್ತರವೆ

ತ್ಯಾಗ ನಿರ್ಭಯತೆ ಪ್ರೇಮ. ಇವೇ ಉಳಿಯಲು ಯೋಗ್ಯವಾದುವು. ಇದನ್ನು ನಿದರ್ಶಿಸುವುದಕ್ಕೆ ಚರಿತ್ರೆ ಇದೆ. ಹೀಗೆ ಹಲವು ದೇಶಗಳು ನಾಯಿ ಬಣವೆಗಳಂತೆ ಪ್ರತಿ ಶತಮಾನದಲ್ಲಿಯೂ ಎದ್ದು, ಕೆಲವು ಕಾಲ ಅಟ್ಟಹಾಸದಿಂದ ಬಾಳಿ, ಕೊನೆಗೆ ನಿರ್ನಾಮವಾಗಿ ಹೋದುದನ್ನು ಅದು ತೋರುತ್ತದೆ. ಪ್ರಪಂಚದಲ್ಲಿ ಇತರರಿಗೆ ಅಸಾಧ್ಯವಾದ ದುರ್ಗತಿ ಅಪಾಯ ಬದಲಾವಣೆಗಳನ್ನು ಎದುರಿಸಿದಾಗಲೂ ಕೆಲವು ಮಹಾ ಜನಾಂಗಗಳು ಇನ್ನೂ ಜೀವಂತವಾಗಿವೆ. ಅದಕ್ಕೆ ಕಾರಣ ಅವರು ತ್ಯಾಗವನ್ನು ಆರಿಸಿ ಕೊಂಡರು. ತ್ಯಾಗವಿಲ್ಲದೆ ಧರ್ಮ ಹೇಗೆ ಇರಬಲ್ಲದು. ಯೂರೋಪು ಬೇರೆ ದೃಷ್ಟಿಯಿಂದ ಈ ಸಮಸ್ಯೆಯನ್ನು ಎದುರಿಸುತ್ತಿದೆ. ಅದೇ ಮನುಷ್ಯ ಎಷ್ಟೊಂದನ್ನು ಹೊಂದಬಹುದು, ನ್ಯಾಯವಾಗಿಯೊ, ಅನ್ಯಾಯ ವಾಗಿಯೊ, ಹೆಚ್ಚು ಅಧಿಕಾರವನ್ನು ಹೇಗೆ ಸಂಪಾದಿಸುವುದು? ಪಾಶ್ಚಾತ್ಯರ ನಿಯಮ ನಿರ್ದಯ ಕ್ರೂರ ಸ್ಪರ್ಧೆ. ನಮ್ಮ ನಿಯಮ ವರ್ಣ, ಸ್ಪರ್ಧೆಯನ್ನು ನಿರೋಧಿಸುವುದು, ಅದರ ಶಕ್ತಿಯನ್ನು ಕುಗ್ಗಿಸುವುದು, ಇದರಿಂದ ಬರುವ ಅನ್ಯಾಯಗಳನ್ನು ಕಡಿಮೆಮಾಡುವುದು. ಈ ಜೀವನದ ಸಮಸ್ಯೆಯನ್ನು ಎದುರಿಸುವ ಮಾನವನ ಮಾರ್ಗವನ್ನು ಸುಗಮನ ಮಾಡುವುದು.

ಈ ಸಮಯದಲ್ಲಿ ಪ್ರೇಕ್ಷಕರ ಸಂದಣಿ ಹೆಚ್ಚಿ, ಸ್ವಾಮಿಜಿ ಧ್ವನಿ ಕೇಳಲು ಆಗಲಿಲ್ಲ. ಕೊನೆಗೆ ಕೆಲವು ಮಾತಿನಿಂದ ಸ್ವಾಮಿಜಿ ಭಾಷಣವನ್ನು ಮುಕ್ತಾಯಗೊಳಿಸಿದರು.

ಸ್ನೇಹಿತರೇ, ನಿಮ್ಮ ಉತ್ಸಾಹ ನೋಡಿ ನನಗೆ ಪರಮ ಸಂತೋಷ. ಇದು ಅತ್ಯದ್ಭುತವಾಗಿದೆ. ನನಗೆ ನಿಮ್ಮಮೇಲೆ ಅತೃಪ್ತಿ ಎಂದು ಎಣಿಸ ಬೇಡಿ. ನಿಮ್ಮ ಉತ್ಸಾಹ ನೋಡಿ ನನಗೆ ಅತ್ಯಾನಂದವಾಗಿದೆ. ಅದ್ಭುತ ಉತ್ಸಾಹ, ನಮಗೆ ಅದು ಬೇಕಾಗಿರುವುದು. ಆದರೆ ಅದನ್ನು ಸ್ಥಾಯಿ ಮಾಡಿ. ಕುಗ್ಗಿ ಹೋಗದಂತೆ ನೋಡಿಕೊಳ್ಳಿ. ಉತ್ಸಾಹ ಆರದೆ ಇರಲಿ. ಭರತಖಂಡದಲ್ಲಿ ನಾವು ಮಹತ್ಕಾರ್ಯಗಳನ್ನು ಸಾಧಿಸಬೇಕಾಗಿದೆ. ಅದಕ್ಕೆ ನಿಮ್ಮ ಸಹಾಯ ಅತ್ಯಾವಶ್ಯಕ, ಸ್ಫೂರ್ತಿ ಅಗತ್ಯ. ಈ ಸಭೆಯನ್ನು ಮುಂದುವರಿಸುವುದಕ್ಕೆ ಅಸಾಧ್ಯ. ನಿಮ್ಮ ಹಾರ್ದಿಕ ಉತ್ಸಾಹಪೂರಿತ ಸ್ವಾಗತಕ್ಕೆ ನಿಮಗೆ ಧನ್ಯವಾದ. ಪ್ರಶಾಂತ ಸಮಯದಲ್ಲಿ ಒಳ್ಳೆಯ ಆಲೋಚನೆ ಭಾವನೆಗಳನ್ನು ವ್ಯಕ್ತಪಡಿಸಬಹುದು. ಸ್ನೇಹಿತರೆ, ಸಧ್ಯಕ್ಕೆ ಧನ್ಯವಾದ.

ಎಲ್ಲಾ ಕಡೆಯಲ್ಲಿಯೂ ಮಾತನಾಡಲು ಆಗುವುದಿಲ್ಲ. ಇಂದು ನೀವು ನನ್ನ ದರ್ಶನದಿಂದಲೇ ತೃಪ್ತರಾಗಿ ಹೋಗಬೇಕಾಗಿದೆ. ಬೇರೊಂದು ಸಮಯದಲ್ಲಿ ಭಾಷಣಮಾಡುವೆನು. ನಿಮ್ಮ ಉತ್ಸಾಹಪೂರಿತ ಸ್ವಾಗತಕ್ಕೆ ಅನಂತ ಧನ್ಯವಾದ.



# ನನ್ನ ಸಮರ ನೀತಿ

## (ಮದ್ರಾಸ್ ವಿಕ್ಟೋರಿಯ ಹಾಲಿನಲ್ಲಿ ಮಾಡಿದ ಭಾಷಣ)

ಹಿಂದಿನ ದಿನ ನಾನು ಹೆಚ್ಚು ಜನ ಸಂದಣಿಯಿಂದ ಉಪನ್ಯಾಸ ಪೂರೈಸಲು ಸಾಧ್ಯವಾಗಲಿಲ್ಲ. ಮದ್ರಾಸಿನ ಪುರಜನರು ಏಕ ಪ್ರಕಾರವಾಗಿ ತೋರಿದ ದಯೆಗೆ ನಾನು ಧನ್ಯವಾದ ಅರ್ಪಿಸುತ್ತೇನೆ. ನೀವು ಅಭಿನಂದನ ಪತ್ರದಲ್ಲಿ ನನ್ನ ವಿಷಯವಾಗಿ ವ್ಯಕ್ತಪಡಿಸಿರುವ ಸುಂದರ ಭಾವನೆಗಳಿಗೆ ನಾನು ಹೇಗೆ ನಿಮಗೆ ಕೃತಜ್ಞತೆ ತೋರಬೇಕೆಂದು ತಿಳಿಯದು. ಭಗವಂತ ನಡಿದಾವರೆಯಲ್ಲಿ ನಿಮ್ಮ ಪ್ರಶಂಸನೆಗೆ ನನ್ನನ್ನು ಯೋಗ್ಯನನ್ನಾಗಿ ಮಾಡು, ನಮ್ಮ ಧರ್ಮಕ್ಕೆ ಮತ್ತು ಮಾತೃಭೂಮಿಗೆ ಬದುಕಿರುವ ತನಕ ದುಡಿಯಲು ಶಕ್ತಿ ನೀಡು, ಎಂದು ಪ್ರಾರ್ಥನೆಯನ್ನು ಮಾತ್ರ ಮಾಡುವೆನು.

ನನ್ನಲ್ಲಿ ಎಷ್ಟೋ ದೋಷಗಳಿದ್ದರೂ ಸ್ವಲ್ಪ ಸಾಹಸವಿದೆ. ಭರತ ವರ್ಷದಿಂದ ಪಾಶ್ಚಾತ್ಯ ದೇಶಗಳಿಗೆ ಒಂದು ಸಂದೇಶವಿತ್ತು. ಅದನ್ನೇ ನಾನು ನಿರ್ಭೀತಿಯಿಂದ ಕೊಟ್ಟೆ. ನಾನು ಇಂದು ಉಪನ್ಯಾಸ ಮಾಡ ಬೇಕೆಂಬ ವಿಷಯವನ್ನು ಪ್ರಸ್ತಾಪಿಸುವುದಕ್ಕೆ ಮುಂಚೆ ಕೆಲವು ಸಾಹಸ ಪೂರ್ಣ ಶಬ್ದಗಳನ್ನು ನಿಮ್ಮಲ್ಲಿ ನಿವೇದಿಸಬೇಕೆಂದಿರುವೆನು. ನನ್ನ ಜಯಕ್ಕೆ ಪ್ರತಿಬಂಧಕವನ್ನು ತಂದೊಡ್ಡಿ ಸಾಧ್ಯವಾದರೆ ನನ್ನನ್ನು ನಿರ್ನಾಮ ಮಾಡು ವಂತಹ ಕೆಲವು ಸನ್ನಿವೇಶ ನನ್ನ ಸುತ್ತಲೂ ಬೆಳೆಯುತ್ತಿತ್ತು. ದೇವರಿಗೆ ಧನ್ಯವಾದ. ಇಂತಹ ಪ್ರಯತ್ನಗಳು ಯಾವಾಗಲೂ ನಿಷ್ಫಲವಾಗುವಂತೆ ಇದೂ ಆಯಿತು. ಕಳೆದ ಮೂರುವರುಷಗಳಿಂದಲೂ ಕೆಲವು ಭಿನ್ನಾಭಿ ಪ್ರಾಯಗಳು ಇವೆ. ನಾನು ಎಲ್ಲಿಯವರೆವಿಗೂ ಪಾಶ್ಚಾತ್ಯ ದೇಶ ದಲ್ಲಿದ್ದೆನೊ ಅಲ್ಲಿಯವರೆಗೆ ನಾನು ಮಾತನಾಡಲಿಲ್ಲ. ಈ ವಿಷಯದಲ್ಲಿ ಮೌನವಾಗಿದ್ದೆ. ನಾನೀಗ ಮಾತೃಭೂಮಿಯ ಮೇಲೆ ನಿಂತಿರುವಾಗ ಅದನ್ನು ವಿವರಿಸುವೆನು. ಈ ಮಾತಿನ ಪರಿಣಾಮವನ್ನು ನಾನು ಲೆಕ್ಕಿಸುವು ದಿಲ್ಲ. ಇದರಿಂದ ಯಾವ ಭಾವನೆ ನಿಮ್ಮಲ್ಲಿ ಮೂಡುವುದೊ ಅದನ್ನು ಲೆಕ್ಕಿಸುವುದಿಲ್ಲ. ನಾಲ್ಕು ವರುಷಗಳ ಹಿಂದೆ ದಂಡ ಕಮಂಡಲು ಧಾರಿ ಯಾಗಿ ನಿಮ್ಮ ನಗರವನ್ನು ಪ್ರವೇಶಿಸಿದ ಸನ್ಯಾಸಿಯಂತೆಯೇ ಇರುವೆನು. ಇಡೀ ಪ್ರಪಂಚ ನನಗೆ ತೆರೆದಿರುವುದು. ಹೆಚ್ಚು ಭೂಮಿಕೆ ಇಲ್ಲದೆ ನಾನಿನ್ನು ಪ್ರಾರಂಭಿಸುವೆ.

ಪ್ರಥಮತಃ ಥಿಯಾಸಫಿ ಸೊಸೈಟಿ ವಿಷಯದಲ್ಲಿ ನಾನು ಸ್ವಲ್ಪ ಹೇಳಬೇಕಾಗಿದೆ. ಆ ಸಮಾಜ ಭರತಖಂಡಕ್ಕೆ ಸ್ವಲ್ಪ ಸಹಾಯಮಾಡಿದೆ. ಅದಕ್ಕಾಗಿ ಎಲ್ಲಾ ಹಿಂದೂಗಳೂ ಅವರಿಗೆ ಋಣಿಗಳು. ಅದರಲ್ಲೂ ಶ್ರೀಮತಿ ಆನಿಬೆಸಂಟರಿಗೆ ಹೆಚ್ಚು ಋಣಿಗಳು. ನನಗೆ ಆಕೆ ವಿಷಯ ಹೆಚ್ಚು ತಿಳಿಯದು. ಆದರೆ ತಿಳಿದ ಸ್ವಲ್ಪದರಿಂದಲೇ ಆಕೆ ಹೃತ್ಪೂರ್ವಕ ನಮ್ಮ ಭರತಖಂಡದ ಹಿತೈಷಿಣಿ, ನಮ್ಮ ಮಾತೃಭೂಮಿಯ ಉದ್ಧಾರಕ್ಕೆ ತನ್ನ ಕೈಲಾದುದನ್ನೆಲ್ಲಾ ಅವರು ಮಾಡುತ್ತಿರುವರು. ಅದಕ್ಕಾಗಿ ಪ್ರತಿಯೊಬ್ಬ ಭಾರತೀಯನೂ ಅವರಿಗೆ ಕೃತಜ್ಞನು. ಈಶ್ವರನ ಆಶೀರ್ವಾದ ಸದಾ ಅವರ ಮೇಲೆ ಮಳೆಗರಿಯಲಿ. ಇದು ಬೇರೆ, ಥಿಯಾಸಫಿ ಸಂಘವನ್ನು ಸೇರುವುದು ಬೇರೆ. ಅಭಿಮಾನ ಗೌರವ ಪ್ರೀತಿ ಬೇರೆ, ಹೇಳಿದುದನ್ನೆಲ್ಲ ವಿವೇಚನೆ ಇಲ್ಲದೆ ವಿಮರ್ಶೆ ಇಲ್ಲದೆ ವಿಭಜನೆಯಿಲ್ಲದೆ ಒಪ್ಪಿಕೊಳ್ಳುವುದು ಬೇರೆ. ಥಿಯಾಸಫಿಸ್ಟರು ನನಗೆ ಅಮೆರಿಕಾ ಯೂರೋಪ್ ದೇಶದಲ್ಲಿ ದೊರೆತ ಜಯಕ್ಕೆ ಸಹಾಯ ಮಾಡಿದರೆಂದು ವದಂತಿ ಹಬ್ಬುತ್ತಿವೆ. ಆದರೆ ಆ ಮಾತೆಲ್ಲ ತಪ್ಪು; ಅಸತ್ಯವೆಂದು ಹೇಳಬೇಕಾಗಿದೆ. ಉದಾರಭಾವನೆ ಭಿನ್ನಾಭಿಪ್ರಾಯಗಳಿಗೆ ಮನ್ನಣೆ ಕೊಡುವುದು ಎಂಬ ಹಲವು ಮಾತನ್ನು ನಾವು ಕೇಳುವೆವು. ಅದೇನೊ ಒಳ್ಳೆಯದೆ. ಆದರೆ ನಿಜಾಂಶ ಬೇರೆ. ನಾನು ಹೇಳುವುದನ್ನೆಲ್ಲ ಎಲ್ಲಿಯವರೆವಿಗೂ ಮತ್ತೊಬ್ಬ ನಂಬುತ್ತಾನೆಯೊ ಅಲ್ಲಿಯವರೆಗೆ ಮಾತ್ರ ನಮ್ಮ ಸಹಾನುಭೂತಿ. ಆದರೆ ಯಾವಾಗ ಅವನು ನಂಬುವುದಿಲ್ಲವೊ ಆಗ ಸಹೃದಯತೆ ಮಾಯವಾಗುವುದು, ಪ್ರೀತಿ ಮಾಯವಾಗುವುದು. ಸ್ವಾರ್ಥಾಕಾಂಕ್ಷಿಗಳಾದ ಮತ್ತೆ ಕೆಲವರು ಇರುವರು. ದೇಶದಲ್ಲಿ ಯಾವುದಾದರೂ ಘಟನೆ ಇವಕ್ಕೆ ಅಡ್ಡಿಯಾದರೆ ಅಸೂಯಾ ಜ್ವಾಲೆ ಏಳುವುದು. ಅದಕ್ಕೆ ಮಿತಿ ಇಲ್ಲ. ಏನುಮಾಡಬೇಕೊ ಅವರಿಗೆ ಗೊತ್ತಾಗುವುದಿಲ್ಲ. ಹಿಂದೂಗಳು ತಮ್ಮ ಧರ್ಮದ ಕಳೆ ಕೀಳಲು ಪ್ರಯತ್ನಪಟ್ಟರೆ ಇದರಿಂದ ಕ್ರೈಸ್ತರಿಗೆ ಏನು ತೊಂದರೆ? ಹಿಂದೂಗಳು ತಮ್ಮ ಸಮಾಜವನ್ನು ಶುಚಿಯಾಗಿಡಲು ಪ್ರಯತ್ನಪಟ್ಟರೆ ಬ್ರಹ್ಮ ಸಮಾಜದವರಿಗೇನು ತೊಂದರೆ? ಅವರೇಕೆ ವಿರೋಧಿಸಬೇಕು? ಅವರೇಕೆ ಈ ಚಟುವಟಿಕೆಗೆ ಪರಮ ಶತ್ರುಗಳಾಗಬೇಕು? ಅವರ ಅಸೂಯೆ ದ್ವೇಷ ಅಷ್ಟು ಕಟುವಾಗಿದೆ. ಏತಕ್ಕೆ, ಹೇಗೆ, ಎಂದು ಕೇಳಲು ಆಗುವುದಿಲ್ಲ.

ನಾಲ್ಕು ವರುಷಗಳ ಹಿಂದೆ ನಾನು ಭಿಕಾರಿಯಾಗಿ ಅಜ್ಞಾತನಾಗಿ

ಸ್ನೇಹಿತನಿಲ್ಲದ ಸನ್ಯಾಸಿಯಾಗಿದ್ದಾಗ ಸಮುದ್ರದಮೇಲೆ ಅಮೆರಿಕಾ ದೇಶಕ್ಕೆ ಯಾವ ಪರಿಚಯಪತ್ರವಿಲ್ಲದೆ ಸ್ನೇಹಿತರಿಲ್ಲದೆ ಹೋಗುತ್ತಿದ್ದಾಗ ನಾನು ಥಿಯಾಸಫಿಸ್ಟ್ ಸೊಸೈಟಿ ಅಧ್ಯಕ್ಷರನ್ನು ಕಂಡೆ. ಆತ ಅಮೆರಿಕಾದೇಶದವರಾಗಿದ್ದುದರಿಂದ ಭರತಖಂಡದ ಹಿತೈಷಿಗಳಾದುದರಿಂದ ಅಮೆರಿಕಾ ದೇಶದಲ್ಲಿ ಯಾರಿಗಾದರೂ ಒಂದು ಪರಿಚಯ ಪತ್ರವನ್ನು ಕೊಡುವರು ಎಂದು ಊಹಿಸಿದ್ದೆ. ಆತ, "ನೀನು ನಮ್ಮ ಸಂಘಕ್ಕೆ ಸೇರುವೆಯಾ?" ಎಂದು ಕೇಳಿದ. ನಾನು, "ಇಲ್ಲ ಹೇಗೆ ಸೇರಲಿ. ನಿಮ್ಮ ನಂಬಿಕೆಗಳನ್ನೆಲ್ಲ ನಾನು ಒಪ್ಪುವುದಿಲ್ಲ" ಎಂದೆ. ಆತ, "ಹಾಗಾದರೆ ನಿನಗೇನೂ ನಾನು ಮಾಡಲಾರೆ ಕ್ಷಮಿಸಿ" ಎಂದರು. ಇದು ನನಗೆ ಸಹಾಯ ಮಾಡಿದಂತೆ ಆಗಲಿಲ್ಲ. ನಾನು ನಿಮಗೆ ತಿಳಿದಿರುವಂತೆ ಮದ್ರಾಸಿನ ಕೆಲವು ಸ್ನೇಹಿತರ ಸಹಾಯದಿಂದ ಅಮೆರಿಕಾ ಸೇರಿದೆ. ಅವರಲ್ಲಿ ಬಹುಪಾಲು ಜನ ಇಲ್ಲಿರುವರು. ಅವರಲ್ಲಿ ಒಬ್ಬರು ಮಾತ್ರ ಇಲ್ಲ. ಅವರೇ ನ್ಯಾಯಪತಿಗಳಾದ ಸುಬ್ರಹ್ಮಣ್ಯ ಅಯ್ಯರ್. ಅವರು ನನ್ನ ಚಿರಕೃತಜ್ಞತೆಗೆ ಪಾತ್ರರು. ಅವರಲ್ಲಿ ಮಹಾವ್ಯಕ್ತಿಗೆ ಸಲ್ಲುವ ಮುಂದಾಲೋಚನೆ ಇದೆ. ನನ್ನ ಜೀವನದ ಅತಿ ನಿಕಟ ಸ್ನೇಹಿತರಲ್ಲಿ ಒಬ್ಬರು ಅವರು. ನಿಜವಾದ ಸ್ನೇಹಿತರು, ಭರತ ಮಾತೆಯ ಪುತ್ರರು. ವಿಶ್ವಧರ್ಮ ಸಮ್ಮೇಳನ ಪ್ರಾರಂಭವಾಗುವುದಕ್ಕೆ ಮುಂಚೆ ಅಮೆರಿಕಾ ದೇಶಕ್ಕೆ ಬಂದೆ. ನನ್ನಲ್ಲಿದ್ದ ಹಣ ಅಲ್ಪ, ಅದು ಬೇಗ ಮುಗಿಯಿತು. ಚಳಿಗಾಲ ಬಂತು. ಬೇಸಿಗೆ ಕಾಲದ ತೆಳುಬಟ್ಟೆ ಮಾತ್ರ ನನ್ನಲ್ಲಿ ಇತ್ತು. ಆ ಚಳಿದೇಶದಲ್ಲಿ ಏನುಮಾಡಬೇಕೊ ಗೊತ್ತಾಗಲಿಲ್ಲ. ನಾನೇನಾದರೂ ಭಿಕ್ಷೆ ಎತ್ತಲು ಹೋದರೆ ನನ್ನನ್ನು ಸೆರೆಮನೆಗೆ ಒಯ್ಯುತ್ತಿದ್ದರು. ಅಲ್ಲಿ ಜೇಬಿನಲ್ಲಿ ಕೆಲವು ಕಾಸುಗಳು ಮಾತ್ರ ಉಳಿದಿತ್ತು. ಮದ್ರಾಸಿನ ನನ್ನ ಸ್ನೇಹಿತರಿಗೆ ತಂತಿ ಕಳುಹಿಸಿದೆ. ಇದು ಥಿಯಾಸಫಿಗಳಿಗೆ ಗೊತ್ತಾಗಿ, "ಈಗ ಈ ಪಿಶಾಚಿ ಸಾಯುತ್ತಿದೆ. ದೇವರು ಈ ಪೀಡೆಯಿಂದ ತಪ್ಪಿಸಿದ" ಎಂದರು. ಇದೇ ನನಗೆ ಮಾಡಿದ ಸಹಾಯ! ಇದನ್ನು ನಾನು ವ್ಯಕ್ತಪಡಿಸುತ್ತಿರಲಿಲ್ಲ. ಆದರೆ ನನ್ನ ದೇಶಬಾಂಧವರು ಇಚ್ಛೆಪಟ್ಟ ಕಾರಣ ಹೇಳಬೇಕಾಯಿತು. ಮೂರು ವರ್ಷದಿಂದ ಈ ಸುದ್ದಿಯನ್ನು ಎತ್ತಲಿಲ್ಲ. ಮೌನವಾಗಿದ್ದೆ. ಇಂದು ಅದು ಹೊರಗೆ ಬಂದಿದೆ. ಇಷ್ಟು ಮಾತ್ರವಲ್ಲ. ವಿಶ್ವಧರ್ಮ ಸಮ್ಮೇಳನದಲ್ಲಿ ಕೆಲವು ಥಿಯಾಸಫಿಸ್ಟರನ್ನು ನೋಡಿದೆ. ಅವರ ಹತ್ತಿರ ಕಲೆತು ಮಾತನಾಡಲು ಪ್ರಯತ್ನಪಟ್ಟೆ. ಆದರೆ

ಅವರ ಮೊಗದಮೇಲೆ, “ದೇವತೆಗಳೊಂದಿಗೆ ಇರಬಯಸುವ ಈ ಕ್ಷುದ್ರ ಕೀಟವಾವುದು !” ಎಂಬ ಭಾವ ಮುದ್ರಿತವಾದಂತೆ ಇತ್ತು. ವಿಶ್ವಧರ್ಮ ಸಮ್ಮೇಳನದಲ್ಲಿ ಕೀರ್ತಿ ಲಭಿಸಿದಮೇಲೆ ನಾನು ಪ್ರಚಂಡ ಕೆಲಸ ಮಾಡ ಬೇಕಾಯಿತು. ಆದರೆ ಥಿಯಾಸಫಿಸ್ಟರು ಎಲ್ಲಾ ಕಡೆಯಲ್ಲಿಯೂ ಆತಂಕ ವನ್ನು ತಂದೊಡ್ಡಲು ಪ್ರಯತ್ನಿಸಿದರು. ಯಾರಾದರೂ ಥಿಯಾಸಫಿಸ್ಟರು ನನ್ನ ಉಪನ್ಯಾಸ ಕೇಳಿದರೆ ಅವರಿಗೆ ಸಂಘದಿಂದ ಬಹಿಷ್ಕಾರವಾಗುವುದೆಂದು ಹೆದರಿಸಿದರು. ಯಾರು ಥಿಯಾಸಫಿಯ ಅಂತರಂಗಕ್ಕೆ ಸೇರಿದವರೊ ಅವರು ಕುತುಮಿ ಮತ್ತು ಮೋರಿಯಾ ಇವರಿಂದಲೇ ಉಪದೇಶ ಪಡೆಯ ಬೇಕು. ಅವರ ಜೀವಂತ ಪ್ರತಿನಿಧಿಗಳೇ ಮಿಸ್ಟರ್ ಜಡ್ಜ್ ಮತ್ತು ಮಿಸರ್ಸ್ ಆನಿಬೆಸೆಂಟ್. ಅಂತರಂಗಕ್ಕೆ ಸೇರುವುದು ಎಂದರೆ ತಮ್ಮ ಸ್ವಾತಂತ್ರ್ಯಕ್ಕೆ ತಿಲಾತರ್ಪಣ ಕೊಡುವುದೆಂದರ್ಥ. ನಿಜವಾಗಿ ನಾನು ಇಂತಹ ಯಾವುದನ್ನೂ ಮಾಡಲಾರೆ. ಇದನ್ನು ಯಾರಾದರೂ ಮಾಡಿದರೆ ಅವರನ್ನು ಹಿಂದೂಗಳೆಂದೂ ಕರೆಯಲಾರೆ. ನನಗೆ ಮಿಸ್ಟರ್ ಜಡ್ಜ್ ಮೇಲೆ ಬಹಳ ಗೌರವವಿತ್ತು. ಆತ ಗುಣವಂತ ಉದಾರಿ ಸರಳಸ್ವಭಾವದವನು. ಥಿಯಾಸಫಿಸ್ಟರ ಯೋಗ್ಯತಮ ಪ್ರತಿನಿಧಿ. ಅವರಿಗೂ ಆನಿಬೆಸೆಂಟರಿಗೂ ತಮ್ಮ ಮಹಾತ್ಮನೆ ಸರಿ ಎಂಬ ವಿಷಯದಲ್ಲಿರುವ ಚರ್ಚೆಯನ್ನು ದೂರಲು ನನಗೆ ಅಧಿಕಾರವಿಲ್ಲ. ಇದರ ವಿಚಿತ್ರವೇನೆಂದರೆ ಇಬ್ಬರೂ ಒಬ್ಬ ಮಹಾತ್ಮನನ್ನೇ ಹೇಳುವರು. ನಿಜಾಂಶ ದೇವರಿಗೇ ಗೊತ್ತು. ಆತನೇ ನ್ಯಾಯಾಧಿಪತಿಯಾಗಿರುವಾಗ, ಎದುರಿಗೆ ಇರುವ ತಕ್ಕಡಿ ಒಂದು ಸಮ ನಾಗಿರುವಾಗ, ಯಾರಿಗೂ ಯಾರ ಪರವಾಗಿಯೂ ತೀರ್ಪನ್ನು ಕೊಡಲು ಅಧಿಕಾರವಿಲ್ಲ.

ಅಮೆರಿಕಾ ದೇಶದಲ್ಲೆಲ್ಲಾ ಅವರು ನನಗೆ ಮಾರ್ಗ ಮಾಡಿದ್ದು ಹೀಗೆ. ಅವರು ಕ್ರೈಸ್ತ ಪಾದ್ರಿಗಳ ಗುಂಪಿಗೆ ಸೇರಿ ವಿರೋಧಿಸಿದರು. ಕ್ರೈಸ್ತಪಾದ್ರಿ ಗಳು ನನಗೆ ವಿರೋಧವಾಗಿ ಹೇಳದೆ ಇರುವ ಅಸತ್ಯವೇ ಇಲ್ಲ. ನಾನು ಅಪರಿಚಿತ ದೇಶದಲ್ಲಿ ಯಾವ ಸ್ನೇಹಿತರೂ ಇಲ್ಲದೆ ಇರುವಾಗ ಪ್ರತಿ ಊರಿ ನಲ್ಲಿಯೂ ಅವರು ನನ್ನ ಶೀಲದಲ್ಲಿ ದೋಷಾರೋಪಣೆ ಮಾಡಿದರು. ಪ್ರತಿ ಯೊಂದು ಮನೆಯಿಂದಲೂ ನನ್ನನ್ನು ಓಡಿಸುವುದಕ್ಕೆ ಪ್ರಯತ್ನಿಸಿದರು. ನನ್ನ ಪ್ರತಿಯೊಬ್ಬ ಸ್ನೇಹಿತನನ್ನೂ ವೈರಿಯನ್ನಾಗಿ ಮಾಡಲು ಪ್ರಯತ್ನಿಸಿ ದರು. ನನ್ನ ಅನ್ನವನ್ನು ಕಸಿಯಲು ಪ್ರಯತ್ನಿಸಿದರು. ಈ ಪ್ರಸಂಗದಲ್ಲಿ

ನಮ್ಮ ದೇಶದವರೊಬ್ಬರೂ ಭಾಗಿಯಾಗಿದ್ದರು ಎನ್ನುವುದಕ್ಕೆ ದುಃಖವಾಗು ವುದು. ಆತ ಹಿಂದೂ ಸುಧಾರಕ ಸಂಘದ ಮುಂದಾಳು. ಪ್ರತಿದಿನ ಕ್ರಿಸ್ತ ಭರತಖಂಡಕ್ಕೆ ಬಂದನು ಎಂದು ಬೋಧಿಸುತ್ತಿರುವನು. ಕ್ರಿಸ್ತ ಭರತಖಂಡಕ್ಕೆ ಹೀಗೆ ಬರುವುದು ? ಭರತಖಂಡವನ್ನು ಸುಧಾರಿಸುವುದು ಹೀಗೆಯೇ? ಈ ಭದ್ರಮನುಷ್ಯ ಬಾಲ್ಯದಿಂದಲೂ ನನಗೆ ಪರಿಚಿತ. ನನ್ನ ಆಪ್ತಮಿತ್ರರಲ್ಲಿ ಒಬ್ಬ. ನಾನು ಆತನನ್ನು ನೋಡಿದಾಗ ತುಂಬಾ ಸಂತೋಷ ವಾಯಿತು. ಹಲವು ಕಾಲದಿಂದ ನಮ್ಮ ದೇಶದವರನ್ನು ನಾನು ಕಂಡಿರ ಲಿಲ್ಲ. ಆದರೆ ಆತ ನನಗೆ ಮಾಡಿದ ಉಪಕಾರ ಇದು. ವಿಶ್ವಧರ್ಮ ಸಮ್ಮೇಳನ ನನ್ನನ್ನು ಕೊಂಡಾಡಲು ಪ್ರಾರಂಭಿಸಿದ ದಿನದಿಂದಲೇ, ಚಿಕಾಗೊ ನಗರದಲ್ಲಿ ನಾನು ಪ್ರಖ್ಯಾತನಾದ ದಿನದಿಂದಲೇ ಆತನ ಧ್ವನಿ ಬದಲಾಯಿ ಸಿತು. ಗೋಪ್ಯವಾಗಿ ನನ್ನ ಪತನಕ್ಕೆ ಸಾಧ್ಯವಾದುದನ್ನೆಲ್ಲ ಆತ ಮಾಡಿದ. ಕ್ರಿಸ್ತ ಭರತಖಂಡಕ್ಕೆ ಬರುವ ರೀತಿಯೆ ಇದು ? ಇಪ್ಪತ್ತು ವರುಷ ಕ್ರಿಸ್ತನ ಅಡಿದಾವರೆಯಲ್ಲಿ ಕುಳಿತು ಇದನ್ನೆ ಆತ ಕಂಡಿರುವುದು ? ನಮ್ಮ ಪ್ರಖ್ಯಾತ ಸುಧಾರಕರು ಕ್ರೈಸ್ತ ಧರ್ಮ ಮತ್ತು ಕ್ರೈಸ್ತ ಶಕ್ತಿ ಭರತಖಂಡವನ್ನು ಉದ್ಧರಿ ಸುವುದೆಂದು ಸಾರುತ್ತಿರುವರು. ಇದೇ ಅದನ್ನು ಸಾಧಿಸುವ ರೀತಿ ? ನಿಜ ವಾಗಿ ಈತ ಅದಕ್ಕೆ ಉದಾಹರಣೆಯಾದರೆ ಪರಿಸ್ಥಿತಿ ಆಶಾಜನಕವಾಗಿಲ್ಲ.

ಮತ್ತೊಂದು ವಿಷಯ. ಸಮಾಜ ಸುಧಾರಕರ ಒಂದು ಮಾಸ ಪತ್ರಿಕೆ ಯಲ್ಲಿ ನನ್ನನ್ನು ಶೂದ್ರನೆಂದು ಕರೆದು ಸನ್ಯಾಸಿಯಾಗಲು ನನಗೆ ಅಧಿಕಾರವಿಲ್ಲ ವೆಂದು ಹೇಳಿರುವರು. ಇದಕ್ಕೆ ಉತ್ತರವಾಗಿ ಬ್ರಾಹ್ಮಣರು " ಯಮಾಯ ಧರ್ಮರಾಜಾಯ ಚಿತ್ರಗುಪ್ತಾಯ ವೈ ನಮಃ " ಎಂದು ಉಚ್ಚರಿಸಿ ಯಾರ ಪಾದಗಳನ್ನು ಪೂಜಿಸುವರೊ ಅವರು ನನ್ನ ವಂಶದಮೂಲಪುರುಷರು, ಪರಿ ಶುದ್ಧ ಕ್ಷತ್ರಿಯರು ಅವರು ಎನ್ನುವೆನು. ನೀವು ನಿಮ್ಮ ಪುರಾಣ ಪುಣ್ಯಕಥೆ ನಂಬಿದರೆ, ನನ್ನ ವರ್ಣ ಮಾಡಿದ ಇತರ ಸೇವೆಯನ್ನು ಬಿಟ್ಟರೂ, ಅದು ಹಲವು ಶತಮಾನಗಳು ಅರ್ಧ ಭರತಖಂಡವನ್ನೇ ಆಳಿತೆಂಬುದು ಗೊತ್ತಾಗು ವುದು. ನನ್ನ ವರ್ಣವನ್ನು ನೀವು ಬಿಟ್ಟರೆ ಭರತಖಂಡದ ಇಂದಿನ ಸಂಸ್ಕೃತಿ ಯಲ್ಲಿ ಉಳಿಯುವುದೇನು ? ವಂಗಭೂಮಿಯಲ್ಲೆ ನಮ್ಮ ಕುಲ ಶ್ರೇಷ್ಠ ತತ್ತ್ವ ಜ್ಞಾನಿಗಳು ಕವಿಗಳು ಇತಿಹಾಸಕಾರರು ಪ್ರಾಕೃತವಿಮರ್ಶಕರು ಪ್ರಖ್ಯಾತ ಧರ್ಮ ಬೋಧಕರನ್ನು ಕೊಟ್ಟಿರುವುದು. ಆಧುನಿಕ ಭರತಖಂಡದ ಪ್ರಖ್ಯಾತ ವಿಜ್ಞಾನಿ ನಮ್ಮ ಕುಲೋದ್ಭವನು. ಇದನ್ನು ಚರ್ಚಿಸುವವರಿಗೆ ಚರಿತ್ರೆ ಸ್ವಲ್ಪ

ಗೊತ್ತಿರಬೇಕಾಗಿತ್ತು. ಮೂರು ವರ್ಣಗಳ ವಿಷಯ ಗೊತ್ತಿರಬೇಕಾಗಿತ್ತು. ಬ್ರಾಹ್ಮಣ ಕ್ಷತ್ರಿಯ ವೈಶ್ಯರೆಂಬ ತ್ರಿವರ್ಣದವರಿಗೂ ಸನ್ಯಾಸದ ಹಕ್ಕಿದೆ ಎಂಬುದು ಅವರಿಗೆ ಗೊತ್ತಿರಬೇಕಾಗಿತ್ತು. ಇದನ್ನು ಸುಮ್ಮನೆ ಹೇಳುತ್ತಿರುವೆನು. ಆದರೆ ಇದರಿಂದ ನನಗೆ ವ್ಯಥೆಯಾಗುವುದಿಲ್ಲ. ನಮ್ಮ ಪೂರ್ವಿಕರು ದೀನರನ್ನು ನಿಕೃಷ್ಟ ದೃಷ್ಟಿಯಿಂದ ನೋಡಿದುದಕ್ಕೆ ಇದೊಂದು ಪ್ರಾಯಶ್ಚಿತ್ತವೆಂದು ತಿಳಿಯುತ್ತೇನೆ. ನಾನೊಬ್ಬ ಪರೆಯನಾದರೂ ಪರಮ ಸಂತೋಷ. ಚಂಡಾಲನ ಮನೆಯನ್ನು ಗುಡಿಸಬೇಕೆಂದ ಬ್ರಾಹ್ಮಣ ಶ್ರೇಷ್ಠನ ಶಿಷ್ಯ ನಾನು. ಚಂಡಾಲ ಇದಕ್ಕೆ ಒಪ್ಪಿಗೆ ಕೊಡಲಿಲ್ಲ. ಬ್ರಾಹ್ಮಣ ಸನ್ಯಾಸಿ ಇವನ ಮನೆ ಗುಡಿಸಲು ಹೇಗೆ ಒಪ್ಪಿಗೆ ಕೊಡುವನು? ಇವರು ಅರ್ಧರಾತ್ರಿ ಎದ್ದು ಚಂಡಾಲನ ಮನೆಯನ್ನು ಯಾರಿಗೂ ತಿಳಿಯದೆ ಪ್ರವೇಶಿಸಿ ಅವನ ಕಕ್ಕಸ್ಸನ್ನು ಗುಡಿಸಿ ತಮ್ಮ ಕೇಶರಾಶಿಯಿಂದ ಆ ಸ್ಥಳವನ್ನು ಒರೆಸಿದರು. ಇದನ್ನು ಅವರು ಹಲವು ದಿನಗಳು ಮಾಡಿದರು. ದೀನರಲ್ಲಿ ದೀನರಾಗಬೇಕೆಂಬುದೇ ಅವರ ಇಚ್ಛೆ. ಅವರ ಪಾದಗಳನ್ನು ನಾನು ಶಿರದಲ್ಲಿ ಧರಿಸಿರುವೆ. ಅವರೇ ನನ್ನ ಗುರುಗಳು. ಆ ಗುರುಗಳ ಜೀವನವನ್ನು ಅನುಕರಿಸಲು ಪ್ರಯತ್ನಿಸುತ್ತೇನೆ. ಎಲ್ಲರ ಸೇವಕನಾಗಿ ಹಿಂದು ತಾನು ಉತ್ತಮನಾಗಲು ಪ್ರಯತ್ನಿಸುವನು. ಹಿಂದುಗಳು ಜನಸಾಧಾರಣರನ್ನು ಉದ್ಧರಿಸುವುದು ಹೀಗೆ. ಬಾಹ್ಯ ಸಹಾಯವನ್ನು ನಿರೀಕ್ಷಿಸುವುದರಿಂದ ಅಲ್ಲ. ಇಪ್ಪತ್ತು ವರುಷಗಳ ಪಾಶ್ಚಾತ್ಯ ಸಂಸ್ಕೃತಿಯ ಪರಿಣಾಮವಾಗಿ ಆತ ಪರದೇಶದಲ್ಲಿ ತನ್ನ ಸ್ನೇಹಿತನನ್ನು ಉಪವಾಸವಿರುವಂತೆ ಮಾಡಿರುವುದು. ಇದಕ್ಕೆ ಕಾರಣ ಆತನಿಗಿಂತ ಹೆಚ್ಚು ಜನಾದರಣೀಯವಾಗಿದ್ದು ದುಡ್ಡು ಮಾಡುವುದಕ್ಕೆ ನಾನು ಆತಂಕವೆಂದು ಭಾವಿಸುವನು. ಮತ್ತೊಂದೇ ಶುದ್ಧ ಸನಾತನ ಹಿಂದುಗಳು ತಮ್ಮ ದೇಶದಲ್ಲಿ ನನಗೆ ಯಾವ ಸತ್ಕಾರ ಮಾಡಿರುವುದು ಎಂಬುದಕ್ಕೆ ಉದಾಹರಣೆ. ನಮ್ಮ ಸುಧಾರಕರು ಚಂಡಾಲನನ್ನು ಕೂಡ ಸೇವಿಸುವಂತಹ ಜೀವನವನ್ನು ವ್ಯಕ್ತಗೊಳಿಸಲಿ. ಆಗ ನಾನು ಅವರ ಪದತಳದಲ್ಲಿ ಕುಳಿತು ಕಲಿತುಕೊಳ್ಳುತ್ತೇನೆ. ಅದಕ್ಕೆ ಮುಂಚೆ ಇಲ್ಲ. ಎಳ್ಳಿನಷ್ಟು ಅನುಷ್ಠಾನ ಹೊರೆ ಮಾತಿಗಿಂತ ಮೇಲು.

ಈಗ ಮದ್ರಾಸಿನಲ್ಲಿರುವ ಸಮಾಜಸುಧಾರಕ ಸಮೂಹಗಳಿಗೆ ಬರುತ್ತೇನೆ. ಅವರು ನನ್ನನ್ನು ದಯೆಯಿಂದ ಕಂಡಿರುವರು. ಅವರು ನನ್ನನ್ನು

ಶ್ಲಾಘಿಸಿರುವರು. ಮದ್ರಾಸಿನ ಸುಧಾರಕರಿಗೂ ಬಂಗಾಳದ ಸುಧಾರಕರಿಗೂ ವ್ಯತ್ಯಾಸವಿದೆ ಎಂದು ಅವರು ಹೇಳುವುದನ್ನು ನಾನೂ ಒಪ್ಪುತ್ತೇನೆ. ನಾನು ಹಲವು ಬಾರಿ ಹೇಳಿರುವಂತೆ ಮದ್ರಾಸು ಈಗ ಒಳ್ಳೆಯ ಸ್ಥಿತಿಯಲ್ಲಿದೆ ಎಂಬುದು ಎಲ್ಲರಿಗೂ ಗೊತ್ತಿರಬಹುದು. ಬಂಗಾಳದಂತೆ ಇದು ಕ್ರಿಯೆ ಮತ್ತು ಪ್ರತಿಕ್ರಿಯೆಯ ಘರ್ಷಣಕ್ಕೆ ಸಿಕ್ಕಿಲ್ಲ. ಇಲ್ಲಿ ಮೊದಲಿನಿಂದಲೂ ನಿಧಾನವಾದ ಬೆಳೆವಣಿಗೆ ಇದೆ. ಇಲ್ಲಿ ಪ್ರತಿಕ್ರಿಯೆಯಲ್ಲ ಇರುವುದು ಬೆಳೆವಣಿಗೆ. ವಂಗದೇಶದಲ್ಲಿ ಹಲವು ಕಡೆ ಒಂದು ನವಜಾಗೃತಿ ಆಗಿದೆ. ಆದರೆ ಮದ್ರಾಸಿನಲ್ಲಿರುವುದು ಸ್ವಾಭಾವಿಕ ಬೆಳೆವಣಿಗೆ. ಸುಧಾರಕರು ಹೇಳುವಂತೆ ಎರಡು ಜನಾಂಗಗಳಿಗೂ ಇರುವ ವ್ಯತ್ಯಾಸ ಇದು ಎಂಬುದನ್ನು ನಾನು ಒಪ್ಪಿಕೊಳ್ಳುವೆನು. ಆದರೆ ಅವರಿಗೆ ಅರಿಯದ ಒಂದು ವ್ಯತ್ಯಾಸವಿದೆ. ಕೆಲವು ಇಂತಹ ಸಮಾಜಗಳು ನನ್ನನ್ನು ಅವರ ಸಂಘಕ್ಕೆ ಸೇರುವಂತೆ ಹೆದರಿಸುವುವು ಎಂದು ತೋರುವುದು. ಆದರೆ ಹೀಗೆ ಮಾಡುವುದೊಂದು ವಿಚಿತ್ರ. ಹದಿನಾಲ್ಕು ವರುಷ ಉಪವಾಸವನ್ನು ಎದುರಿಸಿದವನನ್ನು, ಮಾರನೆಯದಿನ ಎಲ್ಲಿ ಊಟಸಿಕ್ಕುವುದು ಎಲ್ಲಿ ಮಲಗುವುದು ಎಂದು ಗೊತ್ತಿಲ್ಲದವನನ್ನು, ಇಷ್ಟು ಸುಲಭವಾಗಿ ಅಂಜಿಸುವುದಕ್ಕೆ ಆಗುವುದಿಲ್ಲ. ಶಾಖವಾದ ಬಟ್ಟೆಯಿಲ್ಲದೆ, ಸೊನ್ನೆ ಕೆಳಗೆ ಮೂವತ್ತು ಡಿಗ್ರಿ ಥರ್ಮಾಮಿಟರ್ ತೋರಿಸುತ್ತಿದ್ದಕಡೆ ಬಾಳಿದವನನ್ನು, ಮತ್ತೊಂದು ಹೊತ್ತು ಊಟ ಎಲ್ಲಿ ಸಿಗುವುದೆಂದು ಗೊತ್ತಿಲ್ಲದವನನ್ನು, ಇಂಡಿಯಾ ದೇಶದಲ್ಲಿ ಅಷ್ಟು ಸುಲಭವಾಗಿ ಅಂಜಿಸುವುದಕ್ಕೆ ಆಗುವುದಿಲ್ಲ. ನಾನು ಅವರಿಗೆ ಹೇಳುವ ಮೊದಲನೆಯ ಮಾತು ಇದು: ನನ್ನ ಸ್ವಂತ ಇಚ್ಛೆಯೊಂದು ಇದೆ. ಸ್ವಲ್ಪ ಅನುಭವವೂ ಇದೆ. ಪ್ರಪಂಚಕ್ಕೆ ಕೊಡಬೇಕಾದ ಒಂದು ಸಂದೇಶವೂ ಇದೆ. ಅದನ್ನು ದಯಾದಾಕ್ಷಿಣ್ಯವಿಲ್ಲದೆ, ಮುಂದೆ ಏನಾಗಬಲ್ಲದು ಎಂಬುದನ್ನು ಗಮನಿಸದೆ ಆ ಸಂದೇಶವನ್ನು ಸಾರುತ್ತೇನೆ. ಸುಧಾರಕರಿಗೆ ನಾನು ಅವರಿಗಿಂತ ದೊಡ್ಡ ಸುಧಾರಕ ಎಂದು ಹೇಳುತ್ತೇನೆ. ಅವರು ಚೂರು ಪಾರುಗಳನ್ನು ಸುಧಾರಿಸಲು ಯತ್ನಿಸುವರು. ನನಗೆ ಆಮೂಲಾಗ್ರವಾದ ಸುಧಾರಣೆ ಬೇಕು. ಮಾರ್ಗದಲ್ಲಿ ಮಾತ್ರ ನಮಗೆ ವ್ಯತ್ಯಾಸ. ಅವರದು ಧ್ವಂಸಮಾರ್ಗ. ನನ್ನದು ನಿರ್ಮಾಣಮಾರ್ಗ. ನಾನು ಸುಧಾರಣೆಯಲ್ಲಿ ನಂಬುವುದಿಲ್ಲ. ನಾನು ಬೆಳವಣಿಗೆಯಲ್ಲಿ ನಂಬುತ್ತೇನೆ. ನಾನು ದೇವರಸ್ಥಾನದಲ್ಲಿ ನಿಂತು ಸಮಾಜಕ್ಕೆ "ಹೀಗೆ ಚಲಿಸಬೇಕು" ಎಂದು

ಅಪ್ಪಣೆ ಮಾಡಲಾರೆ. ರಾಮ ಸೇತುವೆ ಕಟ್ಟುವಾಗ ಅಳಲಿನಂತೆ ನಾನು ಇರಬೇಕೆಂದು ಬಯಸುವೆನು. ತನ್ನ ಪಾಲಿಗೆ ಬಂದ ಮರಳನ್ನು ಸೇತುವೆಗೆ ಕೊಡಹಿ ಧನ್ಯವಾಗುತ್ತಿತ್ತು. ಇದು ನನ್ನ ಸ್ಥಿತಿ. ಸಮಾಜವೆಂಬ ಮಹಾ ಯಂತ್ರ ಹಲವು ಶತಮಾನಗಳಿಂದ ಕೆಲಸಮಾಡಿದೆ. ಜನಾಂಗ ಜೀವನದ ಮಹಾನದಿ ನಮ್ಮ ಕಣ್ಣೆದುರಿಗೆ ಹರಿಯುತ್ತಿದೆ. ಇದು ಒಳ್ಳೆಯದೆ, ಇದರ ಗತಿಯಾವುದು ಎಂದು ಯಾರಿಗೆ ಗೊತ್ತಿದೆ, ಇದನ್ನು ಹೇಳುವುದಕ್ಕೆ ಯಾರಿಗೆ ಎದೆಗಾರಿಕೆ ಇದೆ? ಸಹಸ್ರಾರು ಸನ್ನಿವೇಶಗಳು ಇದರಲ್ಲಿ ಸಮಿಲನವಾಗಿ ಕೆಲವುವೇಳೆ ಮಂದವಾಗಿ ಕೆಲವುವೇಳೆ ವೇಗವಾಗಿ ಚಲಿಸು ವಂತೆ ಮಾಡುತ್ತಿದೆ. ಅದರ ಗತಿಯನ್ನು ಆಳುವುದಕ್ಕೆ ಯಾರಿಗೆ ಧೈರ್ಯ ವಿದೆ? ಗೀತೆ ಹೇಳುವಂತೆ ನಮ್ಮ ಕರ್ತವ್ಯ ಫಲಾಪೇಕ್ಷೆ ಇಲ್ಲದೆ ಕರ್ಮ ಮಾಡುವುದು. ಜನಜೀವನಕ್ಕೆ ಬೇಕಾದ ಸಾಮಗ್ರಿ ಒದಗಿದೆ. ಬೆಳವಣಿಗೆ ಅದರ ನಿಯಮಾನುಸಾರ ಆಗುವುದು. ಹೇಗೆ ಬೆಳೆಯಬೇಕೆಂದು ಯಾರೂ ಅದಕ್ಕೆ ಬಲಾತ್ಕರಿಸಲಾರರು. ನಮ್ಮ ಸಮಾಜದಲ್ಲಿ ಬೇಕಾದಷ್ಟು ಲೋಪ ದೋಷಗಳಿವೆ. ಹಾಗೆಯೇ ಎಲ್ಲಾ ಸಮಾಜದಲ್ಲಿಯೂ. ಇಲ್ಲಿ ವಿಧವೆಯರ ಕಂಬನಿಯಿಂದ ಕೆಲವು ವೇಳೆ ತಿರೆ ತೊಯ್ದಿರುವುದು. ಅಲ್ಲಿ ಪಾಶ್ಚಾತ್ಯರಲ್ಲಿ ಮದುವೆಯಾಗದ ಹೆಂಗಸರ ಬಿಸಿಯುಸಿರಿನಿಂದ ಆಕಾಶ ತುಂಬಿದೆ. ದಾರಿದ್ರ್ಯ ಮಹಾ ದುಃಖವಿಲ್ಲಿ, ಆ ಜನಾಂಗದಲ್ಲಿ ವಿಲಾಸೋನ್ಮಾದದ ಜೀವನದಿಂದ ಬರುವ ಜುಗುಪ್ಸೆ ಅಲ್ಲಿ. ಇಲ್ಲಿ ತಿನ್ನಲು ಏನೂ ಸಿಕ್ಕದೆ ಜನ ಆತ್ಮಹತ್ಯೆ ಮಾಡಿಕೊಳ್ಳಬೇಕೆನ್ನುವರು. ಅಲ್ಲಿ ತಿನ್ನಲು ಜನರಿಗೆ ಯಥೇಚ್ಛವಾಗಿರುವುದರಿಂದ ಆತ್ಮಹತ್ಯೆಮಾಡಿಕೊಳ್ಳುವರು. ದೋಷ ಎಲ್ಲಾ ಕಡೆಯಲ್ಲಿಯೂ ಇದೆ. ಅದೊಂದು ಬಹಳ ಕಾಲದಿಂದ ಇರುವ ವಾತರೋಗದಂತೆ; ಕಾಲಿನಿಂದ ಓಡಿಸಿದರೆ ತಲೆಗೆ ಹೋಗುವುದು, ಅಲ್ಲಿಂದ ಓಡಿಸಿದರೆ ಮತ್ತೆಲ್ಲೋ ಓಡುವುದು. ಸ್ಥಳದಿಂದ ಸ್ಥಳಕ್ಕೆ ಓಡಿಸುವುದು ಮಾತ್ರ. ಆ ದೋಷವನ್ನೆಲ್ಲಾ ನಿವಾರಣೆಮಾಡುವುದಲ್ಲ ಸರಿಯಾದ ಮಾರ್ಗ. ಒಳ್ಳೆಯದು ಕೆಟ್ಟುದು ಎರಡೂ ಒಂದೇ ನಾಣ್ಯದ ಎರಡು ಕಡೆಯಂತೆ ಎಂದು ನಮ್ಮ ತತ್ತ್ವಶಾಸ್ತ್ರಜ್ಞರು ಹೇಳುವರು. ನಿಮಗೆ ಒಂದು ಬೇಕಾದರೆ ಮತ್ತೊಂದನ್ನು ಸ್ವೀಕರಿಸಬೇಕು. ಸಮುದ್ರದ ಒಂದು ಕಡೆ ಉಬ್ಬರವಿದ್ದರೆ ಮತ್ತೊಂದುಕಡೆ ಇಳಿತವಿರಲೇಬೇಕು. ಜೀವನವೇ ದೋಷ ಮಯ. ಮತ್ತಾವುದನ್ನೂ ಕೊಲ್ಲದೆ ಉಸಿರನ್ನು ಎಳೆಯಲಾರೆವು.

ಮತ್ತೊಂದು ಬಾಯಿನಿಂದ ಕಿತ್ತುಕೊಳ್ಳದೆ ನಾವು ಒಂದು ತುತ್ತನ್ನೂ ಊಟ ಮಾಡಲಾರೆವು. ಇದೇ ನಿಯಮ, ಇದೇ ತತ್ತ್ವ. ನಾವು ತಿಳಿದುಕೊಳ್ಳ ಬೇಕಾದ ಏಕಮಾತ್ರ ವಿಷಯವೆ, ದೋಷಕ್ಕೆ ವಿರೋಧವಾಗಿ ಮಾಡುವ ಕೆಲಸವೆಲ್ಲ ವ್ಯಕ್ತಿ ದೃಷ್ಟಿಯಿಂದ ಮಾತ್ರ, ಬಾಹ್ಯ ಜಗತ್ತಿನ ದೃಷ್ಟಿಯಿಂದಲ್ಲ. ದೋಷಕ್ಕೆ ವಿರೋಧವಾಗಿ ನಾವು ಎಷ್ಟು ಮಾತನಾಡಿದರೂ ಅವು ಕೇವಲ ವ್ಯಕ್ತಿ ಶಿಕ್ಷಣದ ದೃಷ್ಟಿಯಿಂದ ಮಾತ್ರ. ದೋಷವನ್ನು ವಿರೋಧಿಸಿ ಕೆಲಸ ಮಾಡುವುದು ಎಂದರೆ ಇದು. ಇದು ನಮ್ಮ ಉದ್ವಿಗ್ನತೆ ಪರಿಹರಿಸಿ ಮತ ಭ್ರಾಂತಿಯನ್ನು ಹೋಗಲಾಡಿಸಬೇಕು. ಎಲ್ಲಿ ಮತಭ್ರಾಂತರಾದ ಸುಧಾರಕ ರಿದ್ದಾರೊ ಅವರೆಲ್ಲಾ ತಮ್ಮ ಗುರಿಯನ್ನೇ ಕಳೆದುಕೊಂಡರು ಎಂಬುದನ್ನು ಚರಿತ್ರೆ ತೋರುವುದು. ಅಮೆರಿಕಾ ದೇಶದಲ್ಲಿ ಗುಲಾಮಗಿರಿಯನ್ನು ಕೊನೆ ಗಾಣಿಸಿ ನೀಗ್ರೋಜನರಿಗೆ ಸ್ವಾತಂತ್ರ್ಯ ಮತ್ತು ಅವರ ಹಕ್ಕನ್ನು ಅವರಿಗೆ ಕೊಡುವುದಕ್ಕೆ ಮಾಡಿದ ಸಾಹಸದಷ್ಟು ಮಹಾ ಸಮಾಜಸುಧಾರಣೆಗೆ ಮಿಗಿಲಾದುದನ್ನು ನಾವು ಆಲೋಚಿಸಲಾರೆವು. ನಿಮಗೆ ಆ ವಿಷಯವೆಲ್ಲ ತಿಳಿದಿದೆ. ಇದರ ಪ್ರತಿಫಲವೇನಾಯಿತು? ಗುಲಾಮಗಿರಿ ರದ್ದಾದಮೇಲೆ ಅವರ ಸ್ಥಿತಿ ಹಿಂದಿಗಿಂತ ನೂರುಪಾಲು ಕಠಿಣವಾಗಿದೆ. ರದ್ದಾಗುವುದಕ್ಕೆ ಮುಂಚೆ ನೀಗ್ರೋಗಳು ಮತ್ತೊಬ್ಬರ ಅಧೀನದಲ್ಲಿದ್ದರು. ಆದಕಾರಣ ಅವರು ಸಾಯದಂತೆ ಅವರನ್ನು ನೋಡಿಕೊಳ್ಳಬೇಕಾಗಿತ್ತು. ಇಂದು ಅವರು ಯಾರಿಗೂ ಸೇರಿಲ್ಲ. ಅವರ ಜೀವನಕ್ಕೆ ಬೆಲೆಯೇ ಇಲ್ಲ. ಯಾವು ದಾದರೊಂದು ಆರೋಪಣೆಯ ಮೇಲೆ ಅವರನ್ನು ಜೀವಸಹಿತ ಸುಡುವರು. ಅವರನ್ನು ಬಂದೂಕಿನಿಂದ ಹೊಡೆಯುವರು. ಕೊಂದವರನ್ನು ಹಿಡಿಯುವು ದಕ್ಕೆ ಯಾವ ಕಾನೂನೂ ಇಲ್ಲ. ಏಕೆಂದರೆ ಅವರು ನೀಗ್ರೋಗಳು, ಮನು ಷ್ಯರೂ ಅಲ್ಲ, ಮೃಗಗಳೂ ಅಲ್ಲ. ಭ್ರಾಂತಿ ಅಥವಾ ಕಾನೂನಿನಿಂದ ದೋಷನಿವಾರಣೆಮಾಡಲು ಪ್ರಯತ್ನಪಟ್ಟ ಪರಿಣಾಮ ಇದು. ಭ್ರಾಂತಿ ಪ್ರೇರಣೆಯಿಂದ ಆದ ಎಲ್ಲಾ ಒಳ್ಳೆಯ ಕಾರ್ಯಗಳ ಪರಿಣಾಮವೂ ಅಷ್ಟೇ ಎಂದು ಚರಿತ್ರೆ ತೋರುವುದು. ನಾನು ಇದನ್ನು ಕಣ್ಣಾರೆ ನೋಡಿರುವೆನು. ನನ್ನ ಸ್ವಂತ ಅನುಭವ ಇದನ್ನು ಕಲಿಸಿರುವುದು. ಆದಕಾರಣವೇ ದೂರುವ ಯಾವ ಸಂಸ್ಥೆಗೂ ನಾನು ಸೇರುವುದಿಲ್ಲ. ಏತಕ್ಕೆ ಅವನ್ನು ದೂರಬೇಕು? ಎಲ್ಲಾ ಸಮಾಜದಲ್ಲೂ ಲೋಪದೋಷಗಳಿವೆ. ಅದು ಎಲ್ಲರಿಗೂ ಗೊತ್ತು. ಇಂದಿನ ಪ್ರತಿಯೊಂದು ಮಗುವಿಗೂ ಅದು ಗೊತ್ತು. ವೇದಿಕೆಯ ಮೇಲೆ

ನಿಂತು ಹಿಂದೂ ಸಮಾಜದ ನ್ಯೂನಾತಿರೇಕದ ಮೇಲೆ ಅದೊಂದು ದೊಡ್ಡ ಉಪನ್ಯಾಸವನ್ನೇ ಕೊಡಬಲ್ಲುದು. ಪ್ರಪಂಚವನ್ನು ಅಲೆಯುವ ಪ್ರತಿಯೊಬ್ಬ ಅವಿದ್ಯಾವಂತನೂ ಭರತಖಂಡಕ್ಕೆ ಬಂದು, ರೈಲಿನಲ್ಲಿ ಹೋಗುತ್ತಿರುವಾಗ ಭರತಖಂಡವನ್ನು ನೋಡಿ, ಭರಖಂಡದ ಭಯಾನಕ ದೋಷಗಳ ಮೇಲೆ ಬಹಳ ಪಾಂಡಿತ್ಯದಿಂದ ಕೂಡಿದ ಉಪನ್ಯಾಸವನ್ನೇ ಕೊಡುವನು. ನಮ್ಮಲ್ಲಿ ದೋಷಗಳಿವೆ ಎಂದು ನಾವು ಒಪ್ಪಿಕೊಳ್ಳುತ್ತೇವೆ. ಎಲ್ಲರೂ ದೋಷವನ್ನೇ ತೋರಬಹುದು. ಆದರೆ ಯಾರು ಅದರಿಂದ ಪಾರಾಗಲು ಮಾರ್ಗವನ್ನು ತೋರಬಲ್ಲರೊ ಅವರೇ ಮಾನವ ಬಂಧುಗಳು ಮುಳುಗುತ್ತಿರುವ ಹುಡುಗ ಮತ್ತು ತತ್ತ್ವಜ್ಞಾನಿಯಂತೆ. ಹುಡುಗ ನೀರಿನಲ್ಲಿ ಮುಳುಗುತ್ತಿದ್ದಾಗ ತತ್ತ್ವಜ್ಞಾನಿ ಅವನಿಗೆ ಬೋಧನೆ ಮಾಡುತ್ತಿದ್ದ. ಹುಡುಗ "ಮೊದಲು ನೀರಿನಿಂದ ಮೇಲೆತ್ತಿ" ಎಂದು ಅರಚಿಕೊಂಡನು. ಹೀಗೆ ನಮ್ಮ ಜನರೂ ಕೂಗುತ್ತಿರುವರು. "ಉಪನ್ಯಾಸ ಬೇಕಾದಷ್ಟು ಆಗಿವೆ. ಸಮಾಜ ಪತ್ರಿಕೆ ಬೇಕಾದಷ್ಟು ಇವೆ. ನಮ್ಮ ಉದ್ಧಾರಕ್ಕೆ ಕೈ ನೀಡುವವನೆಲ್ಲಿ? ಯಾರು ನಮ್ಮನ್ನು ನಿಜವಾಗಿ ಪ್ರೀತಿಸುವವರು. ನಿಜವಾಗಿ ನಮ್ಮ ಮೇಲೆ ಸಹಾನುಭೂತಿ ಯಾರಿಗೆ ಇದೆ?" ಅಯ್ಯೊ, ಮನುಷ್ಯನಿಗೆ ಮೊದಲು ಬೇಕಾಗಿರುವುದು ಇದು. ಇಲ್ಲೆ ಸಮಾಜ ಸುಧಾರಕರಿಗೂ ನನಗೂ ಇರುವ ಭಿನ್ನಾಭಿಪ್ರಾಯ. ನೂರು ವರುಷದಿಂದ ಅವರು ಇಲ್ಲಿರುವರು. ಅವರೇನು ಮಾಡಿರುವರು. ದ್ವೇಷಕಾರಕ ನಿಂದಾಸ್ಪದವಾದ ಸಾಹಿತ್ಯರಾಶಿಯಲ್ಲದೆ ಮತ್ತೇನು ಮಾಡಿರುವರು? ದೇವರ ದಯೆಯಿಂದ ಅದು ಇಲ್ಲದೆ ಇದ್ದರೆ! ಅವರು ಸನಾತನಿಗಳನ್ನು ದೂರಿರುವರು, ದ್ವೇಷಿಸಿರುವರು. ಕೊನೆಗೆ ವಿರೋಧಿಗಳು ಕೂಡ ಮುಯ್ಯಿಗೆ ಮುಯ್ಯಿ ಕೊಡುವುದಕ್ಕೆ ಇವರಂತೆಯೇ ಆಗಿರುವರು. ಇದರ ಪರಿಣಾಮವಾಗಿಯೆ ಪ್ರತಿಯೊಂದು ದೇಶಭಾಷೆಯಲ್ಲಿಯೂ ಜನಾಂಗ ಗೌರವಕ್ಕೆ ಚ್ಯುತಿತರುವ ಸಾಹಿತ್ಯರಾಶಿ ಬೆಳೆದಿದೆ. ಇದು ಸುಧಾರಣೆಯೆ? ಇದು ದೇಶವನ್ನು ಪ್ರಖ್ಯಾತಿಯ ಶಿಖರಕ್ಕೆ ಏರಿಸುವುದೇ? ಇದು ಯಾರ ತಪ್ಪು?

ನಾವು ಮತ್ತೊಂದು ವಿಚಾರಪೂರಿತ ವಿಷಯವನ್ನು ಆಲೋಚಿಸಬೇಕಾಗಿದೆ. ಭರತಖಂಡದಲ್ಲಿ ಯಾವಾಗಲೂ ನಮ್ಮನ್ನು ರಾಜರು ಆಳುತ್ತಿದ್ದರು. ರಾಜರೇ ನಮಗೆ ಎಲ್ಲಾ ಶಾಸನವನ್ನೂ ಮಾಡುತ್ತಿದ್ದರು. ಈಗ ರಾಜರಿಲ್ಲ. ಆ ಕಾರ್ಯವನ್ನು ಮಾಡುವವರೇ ಇಲ್ಲ. ಸರ್ಕಾರಕ್ಕೆ ಅದನ್ನು

ಮಾಡುವ ಧೈರ್ಯವಿಲ್ಲ. ಜನರ ಅಭಿಪ್ರಾಯಕ್ಕೆ ತಕ್ಕಂತೆ ಸರ್ಕಾರ ಹೊಂದಿಕೊಂಡು ಹೋಗಬೇಕಾಗಿದೆ. ಆರೋಗ್ಯಕರವಾದ ಬಲವಾದ ಪ್ರಜಾಭಿಪ್ರಾಯವನ್ನು ಸೃಷ್ಟಿಸುವುದಕ್ಕೆ ಬಹಳ ಕಾಲ ಹಿಡಿಯುವುದು. ಅಲ್ಲಿಯವರೆಗೂ ನಾವು ಕಾಯಬೇಕು. ಸಮಾಜ ಸುಧಾರಣೆ ಸಮಸ್ಯೆಯೆಲ್ಲ ಹೀಗೆ ಆಗುವುದು. ಯಾರಿಗೆ ಸುಧಾರಣೆ ಬೇಕಾಗಿದೆಯೊ ಮೊದಲು ಅವರನ್ನು ಅಣಿಮಾಡಿ. ಜನರೆಲ್ಲಿ? ಕನಿಷ್ಟಪಕ್ಷದವರ ಪ್ರಾಬಲ್ಯ ಇತಿಹಾಸದಲ್ಲೆಲ್ಲ ಅತಿ ಘೋರ ಅತ್ಯಾಚಾರ. ಕೆಲವು ಆಚಾರ ದೋಷಪೂರಿತ ಎಂದು ಕೆಲವರು ಆಲೋಚಿಸಿದರೆ ದೇಶ ಜಾಗೃತವಾಗುವುದಿಲ್ಲ. ಜನಾಂಗ ಏಕೆ ಜಾಗ್ರತವಾಗುವುದಿಲ್ಲ? ಮೊದಲು ಜನರಿಗೆ ವಿದ್ಯೆ ಕೊಡಿ; ನಿಮ್ಮ ಶಾಸನ ಸಭೆ ರಚಿಸಿ. ಅನಂತರ ಶಾಸನ ಬರುವುದು. ಮೊದಲು ಶಕ್ತಿಯನ್ನು ಸೃಷ್ಟಿಸಿ. ಅದರ ಆಧಾರದ ಮೇಲೆ ಶಾಸನ ಜನಿಸುವುದು. ರಾಜರು ಮಾಯವಾದರು. ಹೊಸ ಅಧಿಕಾರವೆಲ್ಲಿ? ಜನಶಕ್ತಿ ಎಲ್ಲಿ? ಅದನ್ನು ತನ್ನಿ. ನೀವು ಸಮಾಜ ಸುಧಾರಣೆ ಮಾಡಬೇಕಾದರೂ ಮೊದಲು ಜನರಲ್ಲಿ ವಿದ್ಯೆ ಹರಡಬೇಕು. ಆ ಸಮಯ ಬರುವವರೆಗೆ ನೀವು ಕಾಯಬೇಕು. ಕಳೆದ ಶತಮಾನದಲ್ಲಿ ಬೇಕು ಬೇಕು ಎನ್ನುತ್ತಿದ್ದ ಸುಧಾರಣೆಗಳೆಲ್ಲ ಭೂಷಣಪ್ರಾಯವಾಗಿದ್ದುವು. ಮೊದಲನೆ ಎರಡು ವರ್ಣಗಳಿಗೆ ಮಾತ್ರ ಈ ಸುಧಾರಣೆ ಅನ್ವಯಿಸುವುದು. ವಿಧವಾ ವಿವಾಹ ಶೇಕಡ ಎಪ್ಪತ್ತು ಜನರಿಗೆ ಅನ್ವಯಿಸುವುದಿಲ್ಲ. ಈ ಸುಧಾರಣೆಗಳೆಲ್ಲ ಮೇಲಿನ ವರ್ಣದಲ್ಲಿರುವ ಕೆಳಗಿನ ವರ್ಣದವರ ದುಡಿತದಿಂದ ಕೃತವಿದ್ಯರಾದ ಕೆಲವರಿಗೆ ಮಾತ್ರ ಅನ್ವಯಿಸುವುದು. ತಮ್ಮ ಮನೆ ಗುಡಿಸುವುದಕ್ಕೆ ಎಲ್ಲಾ ಪ್ರಯತ್ನವನ್ನೂ ಮಾಡಿರುವರು. ಆದರೆ ಇದು ಸಮಾಜ ಸುಧಾರಣೆ ಅಲ್ಲ. ನೀವು ಸಮಸ್ಯೆಯ ಮೂಲಕ್ಕೆ ಹೋಗಬೇಕು. ಇದನ್ನೇ ನಾನು ಆಮೂಲಾಗ್ರ ಸುಧಾರಣೆ ಎನ್ನುವುದು. ಮೊದಲು ಅಲ್ಲಿ ಬೆಂಕಿ ಇಡಿ, ಹತ್ತಿಕೊಂಡು ಉರಿಯಲಿ. ಆಗ ಒಂದು ಹಿಂದೂ ಜನಾಂಗವಾಗುವುದು. ಸಮಸ್ಯೆ ಬಹಳ ಜಟಿಲವಾಗಿರುವುದರಿಂದ, ವಿಶಾಲವಾದುದರಿಂದ ಸುಧಾರಣೆ ಅಷ್ಟು ಸುಲಭವಲ್ಲ. ಅವಸರ ಪಡಬೇಕಾಗಿಲ್ಲ. ನೂರಾರು ವರುಷಗಳಿಂದ ಈ ಸಮಸ್ಯೆ ಗೊತ್ತಿದೆ. ಇಂದು ದಕ್ಷಿಣ ದೇಶದಲ್ಲಿ ಬೌದ್ಧ ಧರ್ಮ, ಬೌದ್ಧರ ಅಜ್ಞಾತವಾದದ ವಿಷಯ ಮಾತನಾಡುವುದು ಒಂದು ಫ್ಯಾಶನ್ ಆಗಿದೆ. ಇಂದು ನಮ್ಮಲ್ಲಿರುವ ಅವನತಿಗೆ ಮುಕ್ಕಾಲು ಪಾಲು

ಬೌದ್ಧರೇ ಕಾರಣವೆಂಬುದು ಅವರಿಗೆ ಗೊತ್ತೆ ಇಲ್ಲ.

ಬೌದ್ಧಧರ್ಮ ನಮ್ಮ ಪಾಲಿಗೆ ಬಿಟ್ಟ ಆಸ್ತಿ ಇದು. ಚಾರಿತ್ರಿಕ ಜ್ಞಾನವಿಲ್ಲದವರು ಬೌದ್ಧರ ಉನ್ನತಿ ಅವನತಿ ವಿಷಯವಾಗಿ ಬರೆದ ಪುಸ್ತಕದಲ್ಲಿ ಬೌದ್ಧ ಧರ್ಮಪ್ರಸಾರಕ್ಕೆ ಮುಖ್ಯಕಾರಣ ಅದರ ಅದ್ಭುತ ನೀತಿ ಮತ್ತು ಗೌತಮ ಬುದ್ಧನ ಅದ್ಭುತ ಜೀವನ ಎನ್ನುವರು. ಭಗವಾನ್ ಬುದ್ಧದೇವನ ಮೇಲೆ ಭಕ್ತಿ ಗೌರವ ನನಗೆ ಇದೆ. ಆದರೆ ಇದನ್ನು ಗಮನಿಸಿ. ಬೌದ್ಧಧರ್ಮ ಹರಡುವುದಕ್ಕೆ ಕಾರಣ ಅದರ ಸಿದ್ಧಾಂತವೂ ಅಲ್ಲ, ಆ ಪ್ರಖ್ಯಾತ ಪ್ರಚಾರಕನ ಶೀಲವೂ ಅಲ್ಲ. ಅದಕ್ಕೆ ಮುಖ್ಯ ಕಾರಣ ಕಟ್ಟಿದ ದೇವಸ್ಥಾನಗಳು, ಕೆತ್ತಿದ ವಿಗ್ರಹಗಳು, ಜನಮನ ಸೆಳೆಯುವ ಹಲವು ಬಾಹ್ಯಾಚರಣೆ. ಬೌದ್ಧ ಧರ್ಮ ಹರಡಿದ್ದು ಹೀಗೆ. ಹಿಂದೂಗಳ ಮನೆಯಲ್ಲಿ ಆಹುತಿಕೊಡುವುದಕ್ಕೆ ಮಾಡಿದ್ದ ಸಣ್ಣಸಣ್ಣ ಯಜ್ಞ ವೇದಿಕೆಗಳಿಗೆ, ಬೌದ್ಧರ ಅದ್ಭುತ ದೇಗುಲ, ಆಕರ್ಷಣೀಯ ಬಾಹ್ಯಾಚಾರವನ್ನು ಎದುರಿಸಲು ಸಾಧ್ಯವಾಗಲಿಲ್ಲ. ಕಾಲಕ್ರಮೇಣ ಎಲ್ಲಾ ಅಧೋಗತಿಗೆ ಇಳಿಯಿತು. ಹೊಲಸಾಯಿತು. ಆ ವಿಷಯವನ್ನು ಬಹಿರಂಗದಲ್ಲಿ ಹೇಳಲಾಗುವುದಿಲ್ಲ. ಯಾರು ಈ ವಿಷಯವನ್ನು ತಿಳಿದುಕೊಳ್ಳಬೇಕೆಂದು ಬಯಸುವರೊ ಅವರು ದಕ್ಷಿಣ ಇಂಡಿಯಾದ ದೇವಸ್ಥಾನಗಳಲ್ಲಿರುವ ವಿಗ್ರಹಗಳಲ್ಲಿ ನೋಡಬಹುದು. ಇದೆಲ್ಲ ನಮಗೆ ಬಂದದ್ದು ಬೌದ್ಧ ಧರ್ಮದಿಂದ. ಅನಂತರ ಶಂಕರಾಚಾರ್ಯ ಮತ್ತು ಅವರ ಅನುಯಾಯಿಗಳು ಪ್ರಾಬಲ್ಯಕ್ಕೆ ಬಂದರು. ಅಂದಿನಿಂದ ಇಂದಿನವರೆಗೆ ನೂರಾರು ವರುಷಗಳು ಕ್ರಮೇಣ ಜನಸಾಮಾನ್ಯರಿಗೆ ವೇದಾಂತ ಸಿದ್ಧಾಂತದ ಪರಿಚಯಮಾಡಿಕೊಡಲು ಯತ್ನಿಸಿರುವರು. ಈ ಸುಧಾರಕರಿಗೆ ಸಮಾಜದ ಲೋಪದೋಷ ಗೊತ್ತಿತ್ತು. ಆದರೂ ಅವರು ಅದನ್ನು ಅಲ್ಲಗಳೆಯಲಿಲ್ಲ. "ನಿಮ್ಮಲ್ಲಿರುವುದೆಲ್ಲ ತಪ್ಪು. ಅದನ್ನೆಲ್ಲಾ ಕಿತ್ತೊಗೆಯಿರಿ" ಎಂದು ಅವರು ಹೇಳಲಿಲ್ಲ. ಹಾಗೆಂದಿಗೂ ಅದು ಆಗಲಾರದು. ಇಂದು ನನ್ನ ಸ್ನೇಹಿತ ಡಾಕ್ಟರ್ ಬರೋಸ್ ಮುನ್ನೂರು ವರ್ಷಗಳಲ್ಲಿ ಕ್ರೈಸ್ತ ಧರ್ಮ ಗ್ರೀಕ್ ಮತ್ತು ರೋಮನ್ ಪ್ರಾಬಲ್ಯವನ್ನು ತಗ್ಗಿಸಿತು ಎಂದು ಬರೆದುದನ್ನು ಓದಿದೆನು. ಯಾರು ಯೂರೊಪ್ ಗ್ರೀಸ್ ರೋಮ್ ನೋಡಿರುವರೊ ಅವರು ಹೇಳುವ ಮಾತಲ್ಲ ಇದು. ಪ್ರಾಟೆಸ್ಟೆಂಟ್ ಜನಾಂಗದಲ್ಲಿಯೂ ರೋಮ್ ಮತ್ತು ಗ್ರೀಕ್ ಧರ್ಮಗಳ ಪ್ರಾಬಲ್ಯವಿದೆ. ಆದರೆ ಹೆಸರು ಬದಲಾವಣೆಯಾಗಿದೆ. ಹಳೆಯ ದೇವರಿಗೆ ಹೊಸ

ನಾಮಕರಣ ಮಾಡಿರುವರು. ದೇವಿಯರು ಮೇರಿಗಳಾಗುವರು. ದೇವರು ಮಹಾತ್ಮರಾಗುವರು. ಆಚಾರ ಹೊಸ ರೂಪನ್ನು ತಾಳುವುದು. ಪಾಂಟಿ ಫೆಕ್ಸ್ ಮಾಕ್ಸಿಮಸ್ ಎಂಬ ಹಳೆಯ ಬಿರದು ಕೂಡ ಇರುವುದು. ಬದ ಲಾವಣೆ ತಕ್ಷಣ ಆಗಲಾರದು. ಶಂಕರಾಚಾರ್ಯರಿಗೆ ಇದು ಗೊತ್ತಿತ್ತು, ರಾಮಾನುಜಾಚಾರ್ಯರಿಗೆ ಇದು ಗೊತ್ತಿತ್ತು. ಅವರಿಗೆ ಇದ್ದ ಏಕಮಾತ್ರ ಮಾರ್ಗವೇ ಕ್ರಮೇಣ ಜನರನ್ನು ಉತ್ತಮ ಆದರ್ಶದ ಕಡೆ ಕರೆದುಕೊಂಡು ಬರುವುದು. ಬೇರೆ ಮಾರ್ಗವನ್ನು ಅವರು ಹಿಡಿದಿದ್ದರೆ ಮಿಥ್ಯಾಚಾರಿ ಗಳಾಗುತ್ತಿದ್ದರು. ಅವರ ಧರ್ಮದ ಮೂಲ ಸಿದ್ಧಾಂತವೆ ವಿಕಾಸ. ಜೀವ ಹಲವು ಅನುಭವಗಳ ಮೂಲಕ ಕ್ರಮೇಣ ಪರಮಾದರ್ಶದ ಕಡೆಗೆ ಹೋಗು ವುದು. ಆದಕಾರಣ ಇವೆಲ್ಲ ಆವಶ್ಯಕ. ಇವೆಲ್ಲ ಸಹಾಯ ಮಾಡುವುದು. ಇವನ್ನು ಯಾರು ಧಿಕ್ಕರಿಸಬಲ್ಲರು?

ವಿಗ್ರಹಾರಾಧನೆ ಕೆಟ್ಟದೆಂದು ಹೇಳುವುದು ಈಗ ರೂಢಿಯಾಗಿ ಹೋಗಿದೆ. ಎಲ್ಲರೂ ಸ್ವಲ್ಪವೂ ವಿಮರ್ಶೆ ಇಲ್ಲದೆ ಇದನ್ನು ಒಪ್ಪಿಕೊಳ್ಳು ವರು. ನಾನೂ ಒಮ್ಮೆ ಹೀಗೆ ಆಲೋಚಿಸಿದ್ದೆ. ಅದಕ್ಕೆ ಪ್ರಾಯಶ್ಚಿತ್ತ ರೂಪವಾಗಿ ಎಲ್ಲವನ್ನೂ ವಿಗ್ರಹಾರಾಧನೆ ಮೂಲಕ ಕಲಿತವರ ಪದತಳ ದಲ್ಲಿ ಕುಳಿತು ಕಲಿತುಕೊಳ್ಳಬೇಕಾಯಿತು. ಅವರೇ ಶ್ರೀ ರಾಮಕೃಷ್ಣ ಪರಮಹಂಸರು. ವಿಗ್ರಹಾರಾಧನೆಯಿಂದ ರಾಮಕೃಷ್ಣಪರಮಹಂಸರಂಥವ ರನ್ನು ನಾವು ತಯಾರುಮಾಡುವ ಹಾಗೆ ಇದ್ದರೆ ನಿಮಗೆ ಸುಧಾರಕರ ಜಾತಿ ಬೇಕೆ ಅಥವಾ ವಿಗ್ರಹಬೇಕೆ? ನನಗೆ ಉತ್ತರ ಬೇಕಾಗಿದೆ. ರಾಮಕೃಷ್ಣ ಪರಮಹಂಸರಂಥಹ ಒಬ್ಬರನ್ನು ನೀವು ಪಡೆಯುವ ಹಾಗೆ ಇದ್ದರೆ ಸಹ ಸ್ರಾರು ವಿಗ್ರಹ ಬೇಕಾದರೆ ತೆಗೆದುಕೊಳ್ಳಿ. ದೇವರು ನಿಮಗೆ ಒಳ್ಳೆಯದು ಮಾಡಲಿ. ನಿಮಗೆ ಸಾಧ್ಯವಾದ ಮಾರ್ಗದಲ್ಲಿ ಅಂತಹ ದೈವೀವ್ಯಕ್ತಿಯನ್ನು ಸೃಷ್ಟಿಸಿ. ಆದರೂ ವಿಗ್ರಹಾರಾಧನೆಯನ್ನು ಹಳಿಯುವರು. ಅದಕ್ಕೆ ಕಾರಣ ವೇನು? ಯಾರಿಗೂ ಗೊತ್ತಿಲ್ಲ. ನೂರಾರು ವರುಷಗಳ ಹಿಂದೆ ಯಹೂದ್ಯ ನೊಬ್ಬನು ವಿಗ್ರಹಾರಾಧನೆಯನ್ನು ದೂರಿದನಂತೆ. ಅಂದರೆ ತನ್ನ ವಿಗ್ರಹ ವನ್ನಲ್ಲದೆ ಉಳಿದವರ ವಿಗ್ರಹವನ್ನೆಲ್ಲ ಅವನು ದೂರಿದನು! ದೇವರನ್ನು ಯಾವುದಾದರೂ ಸುಂದರ ವಿಗ್ರಹ ಅಥವಾ ಚಿಹ್ನೆಯಲ್ಲಿ ತೋರಿದ್ದರೆ ಅದು ಭಯಾನಕ ಪಾಪ ಕೆಟ್ಟದು. ಆದರೆ ಅದನ್ನು ಒಂದು ಸ್ಥಣ್ಣ ಪೆಟ್ಟಿಗೆ ಯಂತೆ ಎರಡು ಕಡೆಯೂ ಅದರ ಮೇಲೆ ಎರಡು ದೇವದೂತರು ಮೇಲೆ

ಮೋಡ ಬಂದು ತೇಲುತ್ತಿದ್ದರೆ ಅದು ಅತಿ ಪವಿತ್ರ. ದೇವರು ಪಾರಿವಾಳ ದಂತೆ ಬಂದರೆ ಪವಿತ್ರೋತ್ತಮ. ಆದರೆ ಹಸುವಿನಂತೆ ಬಂದರೆ ಹೀದನ್ ಘೋರಪಾಪ, ಅದನ್ನು ವಿರೋಧಿಸಬೇಕು. ಪ್ರಪಂಚವೇ ಹೀಗೆ. ಅದಕ್ಕೇ ಕವಿ, "ಮನುಷ್ಯರು ಎಂತಹ ಹುಚ್ಚರು" ಎಂದು ಹೇಳುವುದು. ಮತ್ತೊಬ್ಬರ ದೃಷ್ಟಿಯಿಂದ ನೋಡುವುದು ಎಷ್ಟು ಕಷ್ಟ. ಇದೇ ಮಾನವ ಜಾತಿಯ ಮಹಾದೋಷ. ದ್ವೇಷಾಸೂಯೆಯ ಹೋರಾಟಕ್ಕೆ ಕಾರಣ. ಮಕ್ಕಳು, ಮೀಸೆಬಂದ ಮಕ್ಕಳು, ಮದ್ರಾಸಿನಿಂದ ಹೊರಗೆ ಹೋಗದವರು ಸಹಸ್ರಾರು ಪ್ರಾಚೀನ ಸಂಸ್ಕಾರಗಳಿಂದ ಕೂಡಿದ ಮೂವತ್ತುಕೋಟಿ ಜನರಿಗೆ ಆಪ್ಪಣೆ ಮಾಡಲೆತ್ನಿಸುವರು. ನಿಮಗೆ ನಾಚಿಕೆಯಾಗುವುದಿಲ್ಲವೆ? ಇಂತಹ ದೇವನಿಂದೆಯಿಂದ ಪಾರಾಗಿ ಮೊದಲು ನಿಮ್ಮ ಕರ್ತವ್ಯವನ್ನು ತಿಳಿಯಿರಿ. ಅಂಕೆ ಇಲ್ಲದ ಹುಡುಗರೆ, ಏನು ನಿಮಗೆ ಬಿಳಿಕಾಗದದ ಮೇಲೆ ಸ್ವಲ್ಪ ಗೀಚುವುದಕ್ಕೆ ಬರುವುದು, ಅದನ್ನು ಯಾರೊ ಮೂಢರು ಪ್ರಕಾಶಿಸುವರೆಂದು ಪ್ರಪಂಚಕ್ಕೇ ವಿದ್ಯಾದಾನ ಮಾಡುವೆವೆಂದು ಭಾವಿಸು ವಿರೇನು? ನೀವೇ ಭರತಖಂಡ ಪ್ರಜಾಭಿಪ್ರಾಯವೆಂದು ಭಾವಿಸುವಿರೇನು? ಮದ್ರಾಸಿನ ಸಮಾಜಸುಧಾರಕರಿಗೆ ನಾನು ಇದನ್ನು ಹೇಳಬೇಕಾಗಿದೆ: ನನಗೆ ಅವರ ಮೇಲೆ ಅತಿಗೌರವ ವಿಶ್ವಾಸವಿದೆ. ಅವರ ಹೃದಯ ವೈಶಾಲ್ಯ, ದೇಶಪ್ರೇಮ, ದೀನರ ದಳಿತರ ಮೇಲೆ ಇರುವ ವಿಶ್ವಾಸಕ್ಕೆ ನಾನು ಅವರನ್ನು ಪ್ರೀತಿಸುತ್ತೇನೆ. ನಾನು ಅವರಿಗೆ ಸಹೋದರ ಸಹಜ ಪ್ರೇಮದಿಂದ ಹೇಳುವುದೇನೆಂದರೆ ಅವರ ಮಾರ್ಗ ಸರಿಯಲ್ಲ. ನೂರಾರು ವರುಷ ಇದರಲ್ಲಿ ಪ್ರಯತ್ನಿಸಿ ವಿಫಲರಾಗಿರುವರು. ಹೊಸಮಾರ್ಗದಲ್ಲಿ ಪ್ರಯತ್ನಿಸೋಣ. ಭರತಖಂಡಕ್ಕೆ ಸುಧಾರಕರ ಬರಗಾಲ ಎಂದಾದರೂ ಇತ್ತೆ? ಭರತಖಂಡದ ಇತಿಹಾಸವನ್ನು ನೀವು ಓದಿರುವಿರಾ? ರಾಮಾನುಜ ಯಾರು? ಶಂಕರ ಯಾರು? ನಾನಕ್ ಯಾರು? ಚೈತನ್ಯ ಯಾರು? ಕಬೀರ ಯಾರು? ದಾದು ಯಾರು? ಒಂದಾದಮೇಲೊಂದು ಮೂಡಿದ ಪ್ರಥಮ ವರ್ಗದ ತಾರಾಶ್ರೇಣಿಗಳಂತೆ ಇರುವ ಧರ್ಮಪ್ರಚಾರಕರು ಯಾರು? ರಾಮಾನುಜ ಅಂತ್ಯಜರಿಗೆ ಮರುಗಲಿಲ್ಲವೆ? ಚಂಡಾಲರನ್ನು ಕೂಡ ತನ್ನ ಪಂಗಡಕ್ಕೆ ಸೇರಿಸಲು ಅವರು ತಮ್ಮ ಜೀವಮಾನವೆಲ್ಲ ಪ್ರಯತ್ನ ಪಡಲಿಲ್ಲವೆ? ಮಹಮ್ಮದೀಯರನ್ನು ತಮ್ಮ ಪಂಗಡಕ್ಕೆ ಸೇರಿ ಸಲು ಅವರು ಪ್ರಯತ್ನ ಪಡಲಿಲ್ಲವೆ? ನಾನಕ್ ಹಿಂದೂ ಮಹಮ್ಮದೀಯ

ರೊಂದಿಗೆ ಕಲೆತು ಹೊಸ ಸೌಹಾರ್ದಭಾವವನ್ನು ತರಲು ಯತ್ನಿಸಲಿಲ್ಲವೆ? ಅವರೆಲ್ಲ ಪ್ರಯತ್ನ ಪಟ್ಟರು. ಅವರ ಪ್ರಯತ್ನ ಈಗಲೂ ಸಾಗುತ್ತಿದೆ. ವ್ಯತ್ಯಾಸವಿಷ್ಟೆ. ಅವರಲ್ಲಿ ಇಂದಿನ ಸಮಾಜ ಸುಧಾರಕರ ಅಟ್ಟಹಾಸವಿರಲಿಲ್ಲ. ಆಧುನಿಕ ಸಮಾಜ ಸುಧಾರಕರ ಬಾಯಿನಿಂದ ಹೊರ ಬರುವ ಶಾಪದ ಸುರಿಮಳೆ ಅವರಲ್ಲಿ ಇರಲಿಲ್ಲ. ಅವರು ಯಾರನ್ನೂ ನಿಂದಿಸುತ್ತಿರಲಿಲ್ಲ. ಎಲ್ಲರನ್ನೂ ಆಶೀರ್ವದಿಸಿದರು. ಜನಾಂಗ ಯಾವಾಗಲೂ ಮುಂದುವರಿಯುತ್ತಿರಬೇಕೆಂದು ಅವರು ಹೇಳಿದರು. ಅವರು ಹಿಂದೆ ನೋಡಿ, "ಹಿಂದೂಗಳೆ ಹಿಂದೆ ನೀವು ಚೆನ್ನಾಗಿ ಮಾಡಿರುವಿರಿ. ಆದರೆ ಸಹೋದರರೆ, ಈಗ ಅದಕ್ಕಿಂತಲೂ ಚೆನ್ನಾಗಿ ಮಾಡೋಣ" ಎನ್ನುತ್ತಿದ್ದರು. "ನೀವು ದುಷ್ಟರಾಗಿದ್ದಿರಿ, ಈಗ ಒಳ್ಳೆಯವರಾಗಿ" ಎನ್ನಲಿಲ್ಲ. ಇಲ್ಲೇ ಎಷ್ಟೊ ವ್ಯತ್ಯಾಸವಾಗುವುದು. ನಮ್ಮ ಸ್ವಭಾವಕ್ಕೆ ಅನುಗುಣವಾಗಿ ನಾವು ಬೆಳೆಯಬೇಕು. ಪಾಶ್ಚಾತ್ಯರು ನಮ್ಮ ಮುಂದೆ ಇಟ್ಟ ಆದರ್ಶವನ್ನು ಅನುಕರಿಸುವುದರಿಂದೇನೂ ಪ್ರಯೋಜನವಿಲ್ಲ. ಹಾಗೆ ಮಾಡುವುದಕ್ಕೆ ಸಾಧ್ಯವಿಲ್ಲ. ದೇವರ ದಯೆಯಿಂದ ಸದ್ಯಕ್ಕೆ ಹಾಗೆ ಆಗದೆ ಇರುವುದಕ್ಕೆ ಧನ್ಯವಾದ! ಅದು ಅವರಿಗೆ ಒಳ್ಳೆಯದು, ನಮಗಲ್ಲ. ಅವರ ಅಮೃತ ನಮಗೆ ವಿಷವಾಗಬಹುದು. ನಾವು ಕಲಿಯಬೇಕಾದ ಮೊದಲನೆ ನೀತಿಯೇ ಇದು. ಅವರ ವಿಜ್ಞಾನ ಸಮಾಜ ಸಂಸ್ಕಾರಕ್ಕೆ ತಕ್ಕಂತೆ ಈಗ ಅವರ ಆಚಾರ ವ್ಯವಹಾರವಿದೆ. ಸಹಸ್ರಾರು ವರುಷಗಳ ನಮ್ಮ ಕರ್ಮಕ್ಕೆ ಅನುಗುಣವಾಗಿ ನಾವು ಬೆಳೆಯಬೇಕಾಗಿದೆ.

ಹಾಗಾದರೆ ನನ್ನ ಕಾರ್ಯಪ್ರಣಾಳಿ ಏನು? ಪುರಾತನ ಮಹಾತ್ಮರ ಆಲೋಚನೆ ಅನುಸರಿಸುವುದೇ ಕಾರ್ಯಪ್ರಣಾಳಿ. ನಾನು ಅವರೇನು ಮಾಡಿದರೆಂಬುದನ್ನು ಓದಿರುವೆನು. ಈಶ್ವರೇಚ್ಛೆಯಿಂದ ಅವರು ಯಾವ ರೀತಿ ಕಾರ್ಯಮಾಡಿದರು ಎಂಬುದನ್ನು ಕಂಡುಹಿಡಿದಿರುವೆನು. ಅವರು ಪ್ರಬಲ ಸಮಾಜ ಸಂಘಟನಗಾರರು. ನಮ್ಮ ಜೀವನಕ್ಕೆ ಶಕ್ತಿ ಪವಿತ್ರತೆ ಮತ್ತು ಹೊಸಬಾಳನ್ನು ಕೊಟ್ಟರು. ಅವರು ಅದ್ಭುತ ಕಾರ್ಯಗಳನ್ನು ಸಾಧಿಸಿದರು. ನಾವೂ ಅದ್ಭುತ ಕಾರ್ಯಗಳನ್ನು ಸಾಧಿಸಬೇಕಾಗಿದೆ. ಈಗಿನ ಸಮಯ ಸ್ವಲ್ಪ ಬದಲಾವಣೆ ಆಗಿದೆ. ಅದಕ್ಕೆ ಸರಿಯಾಗಿ ನಮ್ಮ ಕಾರ್ಯವನ್ನು ಹೊಂದಿಸಿಕೊಳ್ಳಬೇಕಾಗಿದೆ, ಅಷ್ಟೆ. ಪ್ರತಿಯೊಂದು ವ್ಯಕ್ತಿಗೆ ಇರುವಂತೆ ಪ್ರತಿಯೊಂದು ದೇಶಕ್ಕೂ ಒಂದು ಜೀವನೋದ್ದೇಶವಿದೆ. ಅದೇ

ಜೀವನದ ಪ್ರಧಾನ ಸ್ವರ. ಉಳಿದ ಸ್ವರಗಳು ಅದರಲ್ಲಿ ಮಿಲನವಾಗಿ ಐಕ್ಯದಲ್ಲಿ ಕೊನೆಗೊಳ್ಳುವುವು. ಒಂದು ದೇಶದಲ್ಲಿ ಇಂಗ್ಲೆಂಡಿನಂತೆ ರಾಜಕೀಯ ಅದರ ಜೀವಾಳ. ಮತ್ತೊಂದು ದೇಶದಲ್ಲಿ ಕಲಾ ಕೌಶಲ್ಯ ಅದರ ಜೀವಾಳ. ಭರತಖಂಡದಲ್ಲಿ ಧರ್ಮವೇ ಅದರ ಕೇಂದ್ರ. ರಾಷ್ಟ್ರಜೀವನದ ಉಳಿದ ಸ್ವರಗಳೆಲ್ಲ ಇದಕ್ಕೆ ಅಧೀನ. ಹಲವು ಶತಮಾನದಿಂದ ಒಂದೇ ದಿಕ್ಕಿನಲ್ಲಿ ಹರಿದು ಹರಿದು ಅದರ ಸ್ವಭಾವ ಆ ಜನಾಂಗದ ಮುಖ್ಯಗುಣವಾಗಿದೆ. ಯಾರಾದರೂ ಅದನ್ನು ಬದಲಾಯಿಸಲು ಪ್ರಯತ್ನಪಟ್ಟರೆ ಆ ಉದ್ಯಮದಲ್ಲಿ ಜಯಶೀಲರಾದರೆ ಆ ರಾಷ್ಟ್ರ ನಾಶವಾದಂತೆ. ನೀವು ಧರ್ಮವನ್ನು ತ್ಯಜಿಸಿ ರಾಜಕೀಯ ಸಾಮಾಜಿಕ ಮತ್ತು ಇತರ ಯಾವುದನ್ನಾದರೂ ನಿಮ್ಮ ಜೀವನದ ಮುಖ್ಯ ಗುರಿಯನ್ನಾಗಿ ಮಾಡಲು ಯತ್ನಿಸಿದರೆ ಅದರ ಪರಿಣಾಮವಾಗಿ ನಿಮ್ಮ ರಾಷ್ಟ್ರ ನಾಶವಾಗುವುದು. ಇದನ್ನು ತಡೆಯುವುದಕ್ಕೆ ಎಲ್ಲರೂ ಎಲ್ಲಾ ಕಾರ್ಯಗಳನ್ನೂ ಧರ್ಮದ ಮೂಲಕ ಮಾಡಲು ಪ್ರಯತ್ನಿಸಬೇಕು. ನಿಮ್ಮ ಪ್ರತಿಯೊಂದು ಕಾರ್ಯದಲ್ಲಿಯೂ ಧಾರ್ಮಿಕ ಹಿನ್ನೆಲೆ ಅನುರಣಿತವಾಗುತ್ತಿರಲಿ. ನಾನು ಅಮೆರಿಕಾ ದೇಶಿಯರಿಗೆ ಧರ್ಮವನ್ನು ಕೂಡ ಸಮಾಜದ ಮೇಲೆ ಅದರಿಂದ ಯಾವ ಪರಿಣಾಮ ಉಂಟಾಗುವುದೆಂಬುವನ್ನು ತೋರಿದು ಬೋಧಿಸಲಾಗಲಿಲ್ಲ. ಧರ್ಮ ಯಾವ ರೀತಿ ರಾಜಕೀಯದಲ್ಲಿ ಅದ್ಭುತ ಪರಿಣಾಮವನ್ನುಂಟುಮಾಡುವುದೆಂಬುದನ್ನು ತೋರಿದು ಇಂಗ್ಲೆಂಡಿನಲ್ಲಿ ನಾನು ವೇದಾಂತವನ್ನು ಬೋಧಿಸಲಾಗಲಿಲ್ಲ. ಇದರಂತೆಯೇ ಭರತಖಂಡದಲ್ಲಿ ಸಮಾಜ ಸುಧಾರಣೆಯನ್ನು ಕೂಡ ಅದರ ಮೂಲಕ ನಮ್ಮ ಆಧ್ಯಾತ್ಮಿಕ ಸಂಪತ್ತನ್ನು ಹೆಚ್ಚಿಸುವುದು ಎಂಬುದನ್ನು ಲಕ್ಷ್ಯದಲ್ಲಿಟ್ಟುಕೊಂಡು ಬೋಧಿಸಬೇಕು. ರಾಜಕೀಯವನ್ನು ಕೂಡ ಭರತಖಂಡಕ್ಕೆ ಅತ್ಯಾವಶ್ಯಕವಾಗಿ ಬೇಕಾಗಿರುವ ಆಧ್ಯಾತ್ಮವನ್ನು ಎಷ್ಟುಮಟ್ಟಿಗೆ ಉತ್ತಮಪಡಿಸುವುದು ಎಂಬುದನ್ನು ಲಕ್ಷ್ಯದಲ್ಲಿಟ್ಟುಕೊಂಡು ಬೋಧಿಸಬೇಕು. ಪ್ರತಿಯೊಬ್ಬನೂ ತನಗೆ ಬೇಕಾದುದನ್ನು ಆರಿಸಿಕೊಳ್ಳಬೇಕು. ಅದರಂತೆಯೇ ಪ್ರತಿಯೊಂದು ರಾಷ್ಟ್ರವೂ ಕೂಡ ಹಲವು ಶತಮಾನಗಳ ಹಿಂದೆ ನಮಗೆ ಬೇಕಾದುದನ್ನು ನಾವು ಆರಿಸಿಕೊಂಡೆವು. ನಾವು ಈಗ ಅದರಂತೆ ನಡೆದುಕೊಳ್ಳಬೇಕಾಯಿತು. ಆದರೆ ಇದೇನೂ ಅಂತಹ ಕೆಟ್ಟ ಆಯ್ಕೆಯಲ್ಲ. ಸಂಸಾರವನ್ನು ಬಿಟ್ಟು ಆಧ್ಯಾತ್ಮವನ್ನು ನೆನೆಯುವುದು, ಮನುಷ್ಯನನ್ನು ಬಿಟ್ಟು ದೇವರನ್ನು ನೆನೆಯುವುದು ಅಂತಹ ಕೆಟ್ಟ

ಆಯ್ಕೆಯೆ ? ಪರಲೋಕದಲ್ಲಿ ಅಚಲ ನಂಬಿಕೆ, ಇಹಲೋಕವನ್ನು ನಿಕೃಷ್ಟ ದೃಷ್ಟಿಯಿಂದ ನೋಡುವುದು, ತೀವ್ರತ್ಯಾಗ ಶಕ್ತಿ, ಭಗವಂತನಲ್ಲಿ ಶ್ರದ್ಧೆ, ಅಮರವಾದ ಜೀವಾತ್ಮನಲ್ಲಿ ಶ್ರದ್ಧೆ, ಇವೆಲ್ಲ ನಿಮ್ಮಲ್ಲಿದೆ. ಇದನ್ನು ತ್ಯಜಿಸುವುದಕ್ಕೆ ನಿಮ್ಮಲ್ಲಿ ಯಾರಿಗಾದರೂ ಸಾಧ್ಯವೇ ಎಂದು ಕೇಳುತ್ತೇನೆ. ಇದು ಸಾಧ್ಯವಿಲ್ಲ. ನಿಮ್ಮನ್ನು ಜಡವಾದಿಗಳೆಂದು ನಂಬಿಸಬಹುದು. ಕೆಲವು ಕಾಲ ಹಾಗೆ ಮಾತನಾಡಬಹುದು. ಆದರೆ ನೀವು ಅಂತರಾಳದಲ್ಲಿ ಏನಾಗಿರುವಿರಿ ಎಂಬುದು ನನಗೆ ಗೊತ್ತು. ನಾನು ನಿಮ್ಮನ್ನು ಕೈಹಿಡಿದು ಕರೆದರೆ ದೇವರ ಪರಮಭಕ್ತರಂತೆ ಹಿಂಬಾಲಿಸುವಿರಿ. ನಿಮ್ಮ ಸ್ವಭಾವವನ್ನು ಹೇಗೆ ಬದಲಾಯಿಸಬಲ್ಲಿರಿ ?

ಭರತಖಂಡದಲ್ಲಿ ಎಲ್ಲಾ ವಿಧದ ಜಾಗೃತಿ ಫಲಕಾರಿಯಾಗಬೇಕಾದರೆ ಮೊದಲು ಧಾರ್ಮಿಕ ಜಾಗೃತಿ ಆವಶ್ಯಕ. ರಾಜಕೀಯ ಮತ್ತು ಸಾಮಾಜಿಕ ವಿಷಯಗಳಿಂದ ಭರತಖಂಡವನ್ನು ತುಂಬುವುದಕ್ಕಿಂತ ಮುಂಚೆ ಆಧ್ಯಾತ್ಮಿಕ ಭಾವನೆಯ ಮಳೆಗರೆಯಿರಿ. ಮೊದಲು ನಾವು ಲಕ್ಷ್ಯದಲ್ಲಿಡಬೇಕಾದುದು ಇದು. ನಮ್ಮ ಉಪನಿಷತ್ ಶಾಸ್ತ್ರ ಪುರಾಣದಲ್ಲಿರುವ ಅದ್ಭುತ ಸತ್ಯಗಳು ಪ್ರಚಾರವಾಗಬೇಕು. ಮಠಗಳಿಂದ, ಕಾನನಗಳಿಂದ, ತಮಗೇ ಇದು ಮೀಸಲಾಗಿದೆ ಎಂದು ಭಾವಿಸಿದ ಕೆಲವು ಜನರಿಂದ ಹೊರಗೆ ತಂದು ಎಲ್ಲರಿಗೂ ಪ್ರಚಾರ ಮಾಡಬೇಕು. ಈ ಭಾವನೆ ಬೆಂಕಿಯಂತೆ ಉತ್ತರದಿಂದ ದಕ್ಷಿಣಕ್ಕೆ ಪೂರ್ವದಿಂದ ಪಶ್ಚಿಮಕ್ಕೆ, ಹಿಮಾಲಯದಿಂದ ಕನ್ಯಾಕುಮಾರಿಯವರೆಗೆ, ಸಿಂಧುವಿನಿಂದ ಬ್ರಹ್ಮಪುತ್ರದವರೆಗೆ ಹರಿಯಬೇಕು. ಪ್ರತಿಯೊಬ್ಬರೂ ಇದನ್ನು ತಿಳಿದುಕೊಳ್ಳಬೇಕು. "ಮೊದಲು ಶ್ರವಣ, ಮನನ, ನಿಧಿಧ್ಯಾಸನ" ವೆಂದು ಹೇಳುವರು. ಮೊದಲು ಜನ ಇವನ್ನು ಕೇಳಲಿ. ಅವರ ಶಾಸ್ತ್ರದಲ್ಲಿರುವ ಮಹಾಸತ್ಯವನ್ನು ಯಾರು ಕೇಳುವುದಕ್ಕೆ ಸಹಾಯ ಮಾಡುವರೊ ಅವರು ಅದಕ್ಕಿಂತ ಪವಿತ್ರ ಕರ್ಮವನ್ನು ಇಂದು ಮಾಡಲಾರರು. ಭಗವಾನ್ ವ್ಯಾಸರು, "ಕಲಿಯುಗದಲ್ಲಿ ಒಂದು ಕರ್ಮ ಮಿಕ್ಕಿದೆ. ಯಾಗ ಯಜ್ಞಗಳು ಪ್ರಚಂಡ ತಪಸ್ಸಿನಿಂದ ಈಗ ಪ್ರಯೋಜನವಿಲ್ಲ. ಕರ್ಮದಲ್ಲಿ ಮಿಕ್ಕಿರುವುದೊಂದೆ, ಅದೇ ದಾನ. ದಾನದಲ್ಲಿ ಆಧ್ಯಾತ್ಮ ಜ್ಞಾನದಾನ ಪರಮೋತ್ಕೃಷ್ಟವಾದುದು. ಎರಡನೆಯದೆ ಸಾಧಾರಣ ಜ್ಞಾನದಾನ, ಅನಂತರ ಪ್ರಾಣದಾನ, ಕೊನೆಯದೆ ಅನ್ನದಾನ. ಈ ಅದ್ಭುತ ಉದಾರ ಜನಾಂಗವನ್ನು ನೋಡಿ. ಈ ಬಡದೇಶದಲ್ಲಿ ಜನ ಮಾಡಿರುವ

ದಾನವನ್ನು ನೋಡಿ. ಜನರ ಅತಿಥಿ ಸತ್ಕಾರವನ್ನು ನೋಡಿ. ಉತ್ತರ ದಿಂದ ದಕ್ಷಿಣಕ್ಕೆ ಕೈಯಲ್ಲಿ ಏನೂ ಇಲ್ಲದೇ ಇದ್ದರೂ ಅತ್ಯುತ್ತಮ ವಸ್ತು ವನ್ನು ಪಡೆಯಬಲ್ಲ. ಎಲ್ಲರೂ ಎಲ್ಲಾ ಸಮಯದಲ್ಲಿಯೂ ಸ್ನೇಹಿತನಂತೆ ಅವನನ್ನು ಉಪಚರಿಸುವರು. ಯಾರ ಮನೆಯಲ್ಲಾದರೂ ಒಂದು ಚೂರು ರೊಟ್ಟಿ ಇರುವ ತನಕ ಯಾವ ಭಿಕ್ಷುಕನೂ ಉಪವಾಸವಿರುವುದಿಲ್ಲ.

ಈ ದಾನಶೀಲ ದೇಶದಲ್ಲಿ ಆಧ್ಯಾತ್ಮ ಜ್ಞಾನದಾನವೆಂಬ ಮೊದಲನೆಯ ಶಕ್ತಿಯನ್ನು ತೆಗೆದುಕೊಳ್ಳೋಣ. ಇದು ಭರತಖಂಡದಲ್ಲಿ ಮಾತ್ರ ಕೊನೆ ಗಾಣಕೂಡದು. ಇದು ಪ್ರಪಂಚದಲ್ಲೆಲ್ಲಾ ಹರಡಬೇಕು. ಇದು ರೂಢಿಯಲ್ಲಿತ್ತು. ಭರತಖಂಡದ ಆಲೋಚನೆ ಹೊರಗೆ ಹೋಗಿಲ್ಲ. ನಾನೇ ಮೊದಲು ಹೊರಗೆ ಹೋಗಿ ಉಪನ್ಯಾಸ ಮಾಡಿದವನು ಎಂದರೆ ಅವರಿಗೆ ನಮ್ಮ ದೇಶದ ಚರಿತ್ರೆಯು ಅರಿವೇ ಇಲ್ಲ. ಪದೇ ಪದೇ ಹೀಗೆ ಆಗುತ್ತಿದೆ. ಪ್ರಪಂಚಕ್ಕೆ ಆವಶ್ಯಕವಾದಾಗಲೆಲ್ಲಾ ಎಂದಿಗೂ ಬತ್ತದ ಈ ಆಧ್ಯಾತ್ಮಿಕ ಪ್ರವಾಹ ಭರತಖಂಡದ ಹೊರಗೆ ಇರುವವರಿಗೆಲ್ಲ ಹೋಗಿದೆ. ಪ್ರಚಂಡ ಸೇನಾಚಲನೆ ರಣಕಹಳೆಯ ಧ್ವನಿ ಇವುಗಳಿಂದ ರಾಜಕೀಯ ಭಾವನೆ ಹರಡಬಹುದು. ಲೌಕಿಕ ಮತ್ತು ಸಾಮಾಜಿಕ ಭಾವನೆಗಳನ್ನು ಕತ್ತಿ ಮತ್ತು ಕೋವಿಯ ಬಲದ ಮೂಲಕ ಕೊಡಬಹುದು. ಆದರೆ ಆಧ್ಯಾತ್ಮಿಕ ಭಾವನೆಯನ್ನು ಯಾವಾಗಲೂ ಮೌನವಾಗಿ ಮಾತ್ರ ಕೊಡಲು ಸಾಧ್ಯ. ಯಾರಿಗೂ ಕೇಳದೆ ಕಾಣದೆ ಬೀಳುವ ಹಿಮಮಣಿ ಗುಲಾಬಿಯ ಹೂವು ಗಳನ್ನು ಅರಳಿಸುವಂತೆ. ಪುನಃಪುನಃ ಪ್ರಪಂಚಕ್ಕೆ ಭರತಖಂಡ ಈ ದಾನ ವನ್ನು ಮಾಡಿದೆ. ಯಾವಾಗಲಾದರೂ ಪ್ರಬಲ ರಾಷ್ಟ್ರಗಳು ಮೇಲೆದ್ದು ಅನ್ಯ ರಾಷ್ಟ್ರಗಳನ್ನು ಒಟ್ಟಿಗೆ ಸೇರಿಸಿ, ರಸ್ತೆ ವಾಹನ ಸಂಚಾರ ಮುಂತಾದುವಕ್ಕೆ ಅವಕಾಶಮಾಡಿದೊಡನೆಯೆ ಭರತಖಂಡ ತಕ್ಷಣ ಜಾಗ್ರತವಾಗಿ ವಿಶ್ವ ಕಲ್ಯಾಣವೆಂಬ ಸಮಷ್ಟಿಗೆ ಆಧ್ಯಾತ್ಮವನ್ನು ಧಾರೆ ಎರೆದಿರುವುದು. ಇದು ಬುದ್ಧನ ಕಾಲಕ್ಕೆ ಮುಂಚೆಯೇ ಆಯಿತು. ಇದರ ಅವಶೇಷವನ್ನು ಚೈನ ಏಷ್ಯಾಮೈನರ್ ಮಲೆಯ ಪರ್ಯಾಯ ದ್ವೀಪದ ಮಧ್ಯಭಾಗ ಇವು ಗಳಲ್ಲಿ ನೋಡಬಹುದು. ಪ್ರಖ್ಯಾತ ಯವನ ವಿಜಯ ಅಂದಿನ ಕಾಲದಲ್ಲಿ ಗೊತ್ತಾದ ಪ್ರಪಂಚದ ನಾಲ್ಕು ಭಾಗವನ್ನೂ ಒಂದು ಗೂಡಿಸಿದಾಗ ಹೀಗೆ ಆಯಿತು. ಆಗ ಭರತಖಂಡದ ಆಧ್ಯಾತ್ಮ ಪ್ರವಾಹ ಹರಿದುಹೋಯಿತು. ಇಂದು ಹೆಮ್ಮೆ ಕೊಚ್ಚಿಕೊಳ್ಳುವ ಪಾಶ್ಚಾತ್ಯ ಸಂಸ್ಕೃತಿ ಅಂದಿನ ಕಾಲದ

ಅವಶೇಷವಷ್ಟೆ. ಈಗ ಅದೇ ಅವಕಾಶ ಒದಗಿದೆ. ಆಂಗ್ಲ ಶಕ್ತಿ ಹಿಂದೆ ಎಂದೂ ಇಲ್ಲದಂತೆ ಪ್ರಪಂಚವನ್ನೆಲ್ಲಾ ಒಟ್ಟುಗೂಡಿಸಿರುವುದು. ಪ್ರಪಂಚದ ಒಂದು ಮೂಲೆಯಿಂದ ಮತ್ತೊಂದು ಮೂಲೆಗೆ ಇಂಗ್ಲೆಂಡಿನ ರಸ್ತೆ ಇದೆ, ಕಡಲದಾರಿ ಇದೆ. ಆಂಗ್ಲ ಮೇಧಾಶಕ್ತಿಯಿಂದ ಇಂದು ಪ್ರಪಂಚ ಹಿಂದೆ ಎಂದೂ ಇಲ್ಲದಂತೆ ನಿಕಟವಾಗಿ ಸೇರಿಸಲ್ಪಟ್ಟಿದೆ. ಮಾನವ ಇತಿಹಾಸದಲ್ಲಿ ಇದುವರೆಗೆ ಇಲ್ಲದ ವ್ಯಾಪಾರ ಕೇಂದ್ರಗಳಾಗಿವೆ. ತಕ್ಷಣವೇ ತಿಳಿದೊ ತಿಳಿಯದೆಯೊ ಭರತಖಂಡ ಜಾಗ್ರತವಾಗಿ ಆಧ್ಯಾತ್ಮ ವನ್ನು ಧಾರೆ ಎರೆಯುವುದು. ಅವು ಈ ಮಾರ್ಗವಾಗಿ ಪ್ರಪಂಚದ ಮೂಲೆ ಮೂಲೆಯನ್ನೂ ಸೇರುವುದು. ನಾನು ಅಮೆರಿಕಾ ದೇಶಕ್ಕೆ ಹೋದುದು ನನ್ನಿಂದ ಅಲ್ಲ ಅಥವಾ ನಿಮ್ಮಿಂದಲೂ ಅಲ್ಲ. ಭಾರತದ ಅದೃಷ್ಟವನ್ನು ಕಾಯುತ್ತಿರುವ ವಿಧಾತ ನನ್ನನ್ನು ಕಳುಹಿಸಿದನು. ಹೀಗೆಯೆ ನನ್ನಂತಹ ನೂರಾರು ಜನರನ್ನು ಪ್ರಪಂಚದಲ್ಲೆಲ್ಲಾ ಕಳುಹಿಸುವನು. ಪ್ರಪಂಚದ ಯಾವ ಶಕ್ತಿಯೂ ಇದನ್ನು ತಡೆಯಲಾರದು. ಜೊತೆಗೆ ಇದನ್ನೂ ಮಾಡಬೇಕಾಗಿದೆ. ನೀವು ನಿಮ್ಮ ಧರ್ಮವನ್ನು ಬೋಧಿಸುವುದಕ್ಕೆ ಹೊರಗೆ ಹೋಗಬೇಕು. ಪ್ರಪಂಚದ ಎಲ್ಲಾ ದೇಶಕ್ಕೆ ಎಲ್ಲಾ ಜನಾಂಗಕ್ಕೆ ಅದನ್ನು ಬೋಧಿಸಬೇಕು. ನಾವು ಮಾಡಬೇಕಾದ ಪ್ರಥಮ ಕರ್ತವ್ಯವಿದು. ಆಧ್ಯಾತ್ಮ ವಿದ್ಯೆಯನ್ನು ಬೋಧಿಸಿದ ಮೇಲೆ ನಿಮಗೆ ಬೇಕಾದ ಲೌಕಿಕ ಜ್ಞಾನವೆಲ್ಲಾ ಬಂದೇ ಬರುವುದು. ಧರ್ಮ ವಿಲ್ಲದೆ ಕೇವಲ ಲೌಕಿಕ ಜ್ಞಾನವನ್ನು ಮಾತ್ರ ಪಡೆಯಲು ನೀವು ಯತ್ನಿಸಿ ದರೆ ಪ್ರಯೋಜನವಿಲ್ಲ. ಜನರ ಮೇಲೆ ಇದು ಪರಿಣಾಮಕಾರಿಯಾಗುವು ದಿಲ್ಲ. ಪ್ರಖ್ಯಾತ ಬೌದ್ಧರ ಚಳುವಳಿ ಅಪ್ರಯೋಜಕವಾದುದಕ್ಕೆ ಇದೇ ಕಾರಣ.

ಆದಕಾರಣ ನನ್ನ ಸ್ನೇಹಿತರೆ, ನಮ್ಮ ಧರ್ಮವನ್ನು ಭರತಖಂಡ ದಲ್ಲಿ ಮತ್ತು ಹೊರಗೆ ಪ್ರಚಾರಮಾಡುವಂತಹ ಯುವಕರನ್ನು ತರಬೇತು ಮಾಡುವಂತಹ ಕೇಂದ್ರವನ್ನು ತೆರೆಯಬೇಕೆಂಬುದೇ ನನ್ನ ಯೋಜನೆ. ನಮಗೆ ಇಂದು ಆವಶ್ಯಕವಾಗಿ ಬೇಕಾಗಿರುವುದು ಮನುಷ್ಯರು, ಉಳಿದು ವೆಲ್ಲ ನಂತರ ಬರುವುದು. ವೀರ್ಯವಾನ್ ತೇಜಸ್ವಿ ಶ್ರದ್ಧಾಸಂಪನ್ನ ಕೊನೆಯವರೆಗೂ ನಿಷ್ಕಪಟಿಗಳಾದ ಯುವಕರು ಬೇಕಾಗಿದೆ. ಇಂತಹ ನೂರು ಜನ ಸಿಕ್ಕಿದರೆ ಪ್ರಪಂಚವನ್ನೇ ಬದಲಾಯಿಸಬಹುದು. ಇಚ್ಛಾ

ಶಕ್ತಿ ಎಲ್ಲಕ್ಕಿಂತ ಪ್ರಬಲವಾದುದು. ಅದರ ಎದುರಿಗೆ ಎಲ್ಲಾ ಮಣಿಯ ಬೇಕು. ಅದು ಸ್ವಯಂ ಭಗವಂತನಿಂದ ಬರುವುದು. ಪರಿಶುದ್ಧವಾದ ಪ್ರಬಲ ಇಚ್ಛೆ ಸರ್ವಶಕ್ತವಾದುದು. ಅದರಲ್ಲಿ ನಿಮಗೆ ಶ್ರದ್ಧೆ ಇಲ್ಲವೆ? ನಿಮ್ಮ ಧರ್ಮದ ಮಹಾಸತ್ಯವನ್ನು ಜಗತ್ತಿಗೆ ಬೋಧಿಸಿ. ಪ್ರಪಂಚ ಅದಕ್ಕಾಗಿ ಕಾಯುತ್ತಿದೆ. ಹಲವು ಶತಮಾನಗಳಿಂದ ಜನರಿಗೆ ಹೀನ ಅವಸ್ಥೆಯ ವಿಷಯವನ್ನು ಹೇಳಿದ್ದಾಯಿತು. ಕೆಲಸಕ್ಕೆ ಬಾರದವರೆಂದು ಅವರಿಗೆ ಹೇಳಿದ್ದಾಯಿತು. ಪ್ರಪಂಚದಲ್ಲೆಲ್ಲಾ ಜನಸಾಮಾನ್ಯರಿಗೆ ಅವರು ಮನುಷ್ಯರೇ ಅಲ್ಲವೆಂದು ಸಾರಿದೆ. ಹಲವು ಶತಮಾನಗಳಿಂದ ಅವರು ಅಂಜುಕುಳಿಗಳಾಗಿ ಈಗ ಅವರು ಮೃಗಸಮಾನರಾಗಿರುವರು. ಆತ್ಮನ ವಿಷಯವನ್ನು ಕೇಳುವುದಕ್ಕೇ ಅವರಿಗೆ ಅವಕಾಶವಿರಲಿಲ್ಲ. ಅವರಲ್ಲಿ ಅತಿ ನೀಚರಲ್ಲಿಯೂ ಆತ್ಮನಿದೆ. ಅದಕ್ಕೆ ಹುಟ್ಟು ಸಾವು ಇಲ್ಲ, ಕತ್ತಿ ಅದನ್ನು ಕಡಿಯಲಾರದು, ಬೆಂಕಿ ದಹಿಸಲಾರದು, ಗಾಳಿ ಒಣಗಿಸಲಾರದು. ಆದಿ ಅಂತ್ಯವಿಲ್ಲದ ಪರಿಶುದ್ಧವಾದ ಸರ್ವವ್ಯಾಪಿಯಾದ ಸರ್ವ ಶಕ್ತನಾದ ಆತ್ಮ ಅದು. ಮೊದಲು ಅವರಲ್ಲಿ ಆತ್ಮಶ್ರದ್ಧೆ ಇರಲಿ. ಇಂಗ್ಲೀಷಿನವರಿಗೂ ನಿಮಗೂ ಇರುವ ವ್ಯತ್ಯಾಸಕ್ಕೆ ಕಾರಣವೇನು? ಅವರು ತಮ್ಮ ಧರ್ಮ ಕರ್ತವ್ಯ ಮುಂತಾದುವನ್ನು ಮಾತನಾಡಿಕೊಳ್ಳಲಿ. ನನಗೆ ಅದರ ವ್ಯತ್ಯಾಸ ಗೊತ್ತಾಗಿದೆ. ವ್ಯತ್ಯಾಸ ಇಲ್ಲಿದೆ: ಆಂಗ್ಲೇಯನಿಗೆ ಆತ್ಮವಿಶ್ವಾಸವಿದೆ. ನಿಮಗೆ ಇಲ್ಲ. ಆತ ಇಂಗ್ಲೀಷಿನವನಾದುದರಿಂದ ಏನನ್ನು ಬೇಕಾದರೂ ತಾನು ಮಾಡಬಲ್ಲನೆಂದು ತಿಳಿಯುವನು. ಆತನಲ್ಲಿರುವ ದೇವರನ್ನು ಅದು ಹೊರಗೆ ತರುವುದು. ತನಗೆ ತೋರಿದುದನ್ನು ಅವನು ಸಾಧಿಸಬಲ್ಲ. ಆದರೆ ಪ್ರತಿದಿನ ನಿಮಗೆ, ನಿಮ್ಮಿಂದ ಏನೂ ಆಗುವುದಿಲ್ಲ, ಅಪ್ರಯೋಜಕರು ನೀವು ಎಂದು ಹೇಳುತ್ತಿರುವೆವು. ಅದರಂತೆಯೇ ಆಗುತ್ತಿರುವರು. ನಮಗೆ ಇಂದು ಬೇಕಾಗಿರುವುದು ಶಕ್ತಿ. ಅದಕ್ಕೇ ಆತ್ಮ ವಿಶ್ವಾಸವಿಡಿ. ನಾವು ದುರ್ಬಲರಾಗಿರುವೆವು. ಅದಕ್ಕೇ ಈ ರಹಸ್ಯ ಮಾಯ ಮಂತ್ರಗಳೆಲ್ಲ ನಮ್ಮನ್ನು ಆವರಿಸಿರುವುವು. ಇವುಗಳಲ್ಲಿ ಸ್ವಲ್ಪ ಸತ್ಯವಿರಬಹುದು. ಆದರೆ ಇವು ನಮ್ಮ ಸರ್ವನಾಶಮಾಡಿವೆ. ಮೊದಲು ನಿಮ್ಮ ನರಗಳನ್ನು ದೃಢಪಡಿಸಿ. ನಮಗೆ ಇಂದು ಬೇಕಾಗಿರುವುದು ಕಬ್ಬಿಣದಂತಹ ಮಾಂಸ ಖಂಡ ಉಕ್ಕಿನಂತಹ ನರ. ನಾವು ಬೇಕಾದಷ್ಟು ಅತ್ತಿರುವೆವು. ಇನ್ನು ಸಾಕು. ನಿಮ್ಮ ಕಾಲಮೇಲೆ ನಿಂತು ಪುರುಷಸಿಂಹರಾಗಿ. ಪುರುಷಸಿಂಹ

ರನ್ನು ಮಾಡುವ ಧರ್ಮ ನಮಗಿಂದು ಬೇಕಾಗಿದೆ. ಪುರುಷಸಿಂಹರನ್ನು ಮಾಡುವ ಸಿದ್ಧಾಂತ ನಮಗೆ ಬೇಕಾಗಿದೆ. ಸರ್ವತೋಮುಖವಾದ ಪುರುಷ ಸಿಂಹರನ್ನು ಮಾಡುವ ವಿದ್ಯಾಭ್ಯಾಸ ನಮಗೆ ಇಂದು ಬೇಕಾಗಿದೆ. ಸತ್ಯದ ಪರೀಕ್ಷೆ ಇಲ್ಲಿದೆ. ಯಾವುದು ನಿಮ್ಮನ್ನು ದೈಹಿಕವಾಗಿ ಭೌತಿಕವಾಗಿ ಆಧ್ಯಾತ್ಮಿಕವಾಗಿ ದುರ್ಬಲರನ್ನಾಗಿ ಮಾಡುವುದೊ ಅದನ್ನು ವಿಷದಂತೆ ತ್ಯಜಿಸಿ. ಅದರಲ್ಲಿ ಜೀವವಿಲ್ಲ. ಅದು ಸತ್ಯವಾಗಲಾರದು. ಸತ್ಯ, ಶಕ್ತಿ ವರ್ಧಕ, ಪರಿಶುದ್ಧ. ಸತ್ಯವೇ ಅನಂತಜ್ಞಾನ. ಸತ್ಯ, ಶಕ್ತಿಕೊಡಬೇಕು, ಬೆಳಕು ಕೊಡಬೇಕು, ಸ್ಫೂರ್ತಿ ಕೊಡಬೇಕು. ರಹಸ್ಯಗಳಲ್ಲಿ ಸ್ವಲ್ಪ ಸತ್ಯ ವಿದ್ದರೂ ನಮ್ಮನ್ನು ಯಾವಾಗಲೂ ದುರ್ಬಲರನ್ನಾಗಿ ಮಾಡುವುವು. ನನಗೆ ಇಡೀ ಜೀವನದ ಅನುಭವವಿದೆ ನಂಬಿ. ಇದು ದುರ್ಬಲರನ್ನಾಗಿ ಮಾಡುವುದೆಂದು ನಾನು ಸಿದ್ಧಾಂತ ಮಾಡಿರುವೆನು. ನಾನು ಭರತಖಂಡ ವನ್ನೆಲ್ಲಾ ಸಂಚರಿಸಿರುವೆನು. ಗುಹೆಗಳನ್ನು ಹುಡುಕಿರುವೆನು. ಹಿಮಾಲ ಯದಲ್ಲಿ ವಾಸಿಸಿರುವೆನು. ಜೀವಾದ್ಯಂತವೂ ಅಲ್ಲೇ ಜೀವಿಸಿದ್ದ ಜನರನ್ನು ನಾನು ನೋಡಿರುವೆನು. ನಾನು ನನ್ನ ದೇಶವನ್ನು ಪ್ರೀತಿಸುತ್ತೇನೆ. ಈಗಿರುವ ಸ್ಥಿತಿಗಿಂತ ನೀವು ದುರ್ಬಲರಾಗುವುದನ್ನು ಅಧೋಗತಿಗೆ ಬರುವು ದನ್ನು ನಾನು ಸಹಿಸಲಾರೆ. ಆದಕಾರಣವೆ ನಾನು ನಿಮಗಾಗಿ, ಸತ್ಯ ಕ್ಕಾಗಿ, ಅಧೋಗತಿಗೆ ಜಾರುತ್ತಿರುವ ಭರತಖಂಡವನ್ನು ತಡೆಯಲು, "ನಿಲ್ಲಿ, ಇನ್ನು ಜಾರಬೇಡಿ" ಎಂದು ಕೂಗಬೇಕಾಗಿದೆ. ದುರ್ಬಲರನ್ನಾಗಿ ಮಾಡುವ ಗುಪ್ತವಿದ್ಯೆಯನ್ನು ತ್ಯಜಿಸಿ ಧೀರರಾಗಿ. ನಿಮ್ಮ ಉಪನಿಷತ್ತು ಗಳಿಗೆ ಹೋಗಿ. ಪ್ರಕಾಶಮಾನವಾದ ಶಕ್ತಿವರ್ಧಕ ದಿವ್ಯದರ್ಶನ ಶಾಸ್ತ್ರ ಅವು. ಉಪನಿಷತ್ತಿನ ಸತ್ಯ ನಿಮ್ಮ ಮುಂದೆ ಇದೆ. ಅದನ್ನು ಸ್ವೀಕರಿಸಿ, ಅದನ್ನು ಅನುಷ್ಠಾನಕ್ಕೆ ತನ್ನಿ. ಭರತಖಂಡದ ಉದ್ಧಾರವಾಗುವುದು.

ಮತ್ತೊಂದು ಮಾತು. ಅದಾದ ಮೇಲೆ ಉಪನ್ಯಾಸ ಮುಕ್ತಾಯ ಮಾಡುವೆನು. ದೇಶಭಕ್ತಿ ವಿಷಯ ಮಾತನಾಡುವರು. ನನಗೂ ದೇಶ ಭಕ್ತಿಯಲ್ಲಿ ವಿಶ್ವಾಸವಿದೆ. ನನ್ನದೇ ಒಂದು ದೇಶಭಕ್ತಿ ಆದರ್ಶವಿದೆ. ಮಹತ್ಕಾರ್ಯ ಸಾಧನೆಗೆ ಮೂರು ವಿಷಯ ಅತ್ಯಾವಶ್ಯಕ. ಹೃತ್ಪೂರ್ವಕ ಅದನ್ನು ಅನುಭವಿಸಿ. ಬುದ್ಧಿ ಮತ್ತು ವಿಚಾರಶಕ್ತಿಯಲ್ಲಿ ಏನಿದೆ? ಕೆಲವು ಹೆಜ್ಜೆಗಳು ಹೋಗಿ ಅಲ್ಲಿ ನಿಲ್ಲುವೆವು. ಸ್ಫೂರ್ತಿ ಬರುವುದು ಹೃದಯ ದಿಂದ. ಪ್ರೇಮ ಅಸಾಧ್ಯವಾದ ಬಾಗಿಲನ್ನೂ ತೆಗೆಯುವುದು.

ಪ್ರಪಂಚದ ರಹಸ್ಯಕ್ಕೆಲ್ಲಾ ಪ್ರೇಮವೇ ಬಾಗಿಲು. ಭಾವಿ ದೇಶ ಭಕ್ತರೆ, ಸಮಾಜ ಸುಧಾರಕರೆ, ಮೊದಲು ಅದನ್ನು ಹೃದಯದಲ್ಲಿ ಅನುಭವಿಸಿ. ಕೋಟ್ಯಂತರ ದೇವ ಮತ್ತು ಋಷಿಸಂತಾನರು ಪಶುಸಂತಾನರಾಗಿರುವ ರೆಂದು ನಿಮಗೆ ಹೃದಯದಲ್ಲಿ ವ್ಯಥೆ ಇದೆಯೆ? ಕೋಟ್ಯಂತರ ಜನ ಈಗ ಉಪವಾಸದಿಂದ ನರಳುತ್ತಿರುವರು. ಹಿಂದಿನಿಂದಲೂ ಕೋಟ್ಯಂತರ ಜನ ನರಳುತ್ತಿದ್ದರು ಎಂಬುದು ಗೊತ್ತೆ? ಅಜ್ಞಾನ ಕಾರ್ಮೋಡದಂತೆ ಭಾರ ತಾವನಿಯನ್ನೆಲ್ಲಾ ವ್ಯಾಪಿಸಿದೆ ಎಂಬುದು ನಿಮಗೆ ಗೊತ್ತಾಗುತ್ತದೆಯೆ? ಇದರಿಂದ ನೀವು ಚಂಚಲರಾಗುವಿರಾ? ಇದರಿಂದ ನಿಮ್ಮ ನಿದ್ರೆಗೆ ಭಂಗ ಬಂದಿದೆಯೆ? ಇದು ನಿಮ್ಮ ರಕ್ತದಲ್ಲಿ ವ್ಯಾಪಿಸಿದೆಯೆ, ನಾಡಿಯಲ್ಲಿ ಸಂಚರಿಸಿ ಹೃದಯಚಲನೆಯೊಂದಿಗೆ ಸ್ಪಂದಿಸುತ್ತಿದೆಯೆ? ಇದು ನಿಮ್ಮನ್ನು ಉನ್ಮತ್ತರನ್ನಾಗಿ ಮಾಡುತ್ತಿದೆಯೆ? ಈ ಸರ್ವನಾಶದ ದುಃಖ ನಿಮ್ಮನ್ನು ವ್ಯಾಪಿಸಿ, ನಿಮ್ಮ ಕೀರ್ತಿ ಯಶಸ್ಸು ಹೆಂಡರು ಮಕ್ಕಳು ಆಸ್ತಿ ಮತ್ತು ದೇಹವನ್ನೇ ನೀವು ಮರೆತಿರುವಿರಾ? ನೀವು ಇದನ್ನು ಮಾಡಿರುವಿರಾ? ದೇಶಭಕ್ತರಾಗುವುದಕ್ಕೆ ಇದೇ ಮೊದಲನೇ ಹೆಜ್ಜೆ. ನಿಮ್ಮಲ್ಲಿ ಅನೇಕರು ತಿಳಿದುಕೊಂಡಿರುವಂತೆ ನಾನು ವಿಶ್ವಧರ್ಮ ಸಮ್ಮೇಳನಕ್ಕಾಗಿ ಅಮೇರಿಕಾ ದೇಶಕ್ಕೆ ಹೋಗಲಿಲ್ಲ. ಈ ಉದ್ವೇಗ ದೈತ್ಯ ನನ್ನ ಹೃದಯವನ್ನು ಮೆಟ್ಟಿ ಕೊಂಡು ಪ್ರಚೋದಿಸುತ್ತಿತ್ತು. ನನ್ನ ದೇಶೀಯರಿಗೆ ಸೇವೆಮಾಡುವ ದಾರಿ ತಿಳಿಯದೆ ಹನ್ನೆರಡು ವರುಷ ದೇಶದಲ್ಲಿ ಸಂಚರಿಸಿದೆ. ಆದಕಾರಣವೆ ನಾನು ಅಮೇರಿಕಾದೇಶಕ್ಕೆ ಹೋದೆ. ಆಗ ನನ್ನ ಪರಿಚಯವಿದ್ದ ನಿಮಗೆಲ್ಲಾ ಗೊತ್ತಿದೆ. ವಿಶ್ವಧರ್ಮ ಸಮ್ಮೇಳನವನ್ನು ಯಾರು ಲಕ್ಷಿಸಿದರು? ನನ್ನ ಸ್ವಂತ ದೇಶೀಯರು ಪ್ರತಿದಿನ ಅಧಃ ಪಾತಾಳಕ್ಕೆ ಇಳಿಯುತ್ತಿದ್ದರು. ಅವರನ್ನು ಯಾರು ಲಕ್ಷಿಸಿದರು. ಇದೇ ನನ ಪ್ರಥಮ ಹೆಜ್ಜೆ.

ನೀವು ಹೃದಯದಲ್ಲಿ ಅನುಭವಿಸಬಹುದು. ಆ ಉದ್ವೇಗವನ್ನು ಬರೀ ಬಾಯಿಮಾತಿನಲ್ಲಿ ವ್ಯರ್ಥಗೊಳಿಸದೆ ಈ ಸಮಸ್ಯೆಯಿಂದ ಪಾರಾಗುವು ದಕ್ಕೆ ಯಾವುದಾದರೊಂದು ಮಾರ್ಗವನ್ನು ಕಂಡುಹಿಡಿದಿರುವಿರಾ? ಅವ ರನ್ನು ದೂರದೆ ಸಹಾಯವನ್ನು ನೀಡುವ, ವರ್ತಮಾನ ಮೃತ್ಯುಸ್ಥಿತಿ ಯಿಂದ ಅವರನ್ನು ಮೇಲೆತ್ತಿ ಅವರ ದುಃಖವನ್ನು ಶಮನಗೊಳಿಸುವ ಸಹಾನುಭೂತಿಯ ನುಡಿಯನ್ನು ಉಚ್ಚರಿಸಬಲ್ಲಿರಾ? ಇದು ಮಾತ್ರವಲ್ಲ, ಪರ್ವತೋಪಮ ಆತಂಕಗಳನ್ನು ದಾಟಬಲ್ಲ ಇಚ್ಛಾಶಕ್ತಿ ನಿಮ್ಮಲ್ಲಿದೆಯೆ?

ಇಡೀ ಪ್ರಪಂಚವೇ ಹಿರಿದ ಕತ್ತಿಯಿಂದ ನಿನ್ನನ್ನು ಎದುರಿಸಿದರೂ ಸರಿ ಎಂದು ತೋರಿದುದನ್ನು ಮಾಡುವ ಧೈರ್ಯ ನಿನಗೆ ಇದೆಯೆ? ನಿನ್ನ ಹೆಂಡತಿ ಮಕ್ಕಳು ಅದನ್ನು ವಿರೋಧಿಸಿದರೂ, ನಿನ್ನ ದ್ರವ್ಯ ಹೋದರೂ, ಕೀರ್ತಿ ನಶಿಸಿದರೂ, ಐಶ್ವರ್ಯ ಮಾಯವಾದರೂ, ನೀನು ಅದನ್ನು ಬಿಡದೆ ಇರ ಬಲ್ಲೆಯಾ? ಅದನ್ನೇ ಹಿಂಬಾಲಿಸುತ್ತಾ, ಎಡೆಬಿಡದೆ ಗುರಿಎಡೆಗೆ ಧಾವಿಸ ಬಲ್ಲೆಯಾ? ಭರ್ತೃಹರಿ ಹೇಳುವಂತೆ,

ನಿಂದನ್ತು ನೀತಿನಿಪುಣಾ ಯದಿ ವಾ ಸ್ತುವನ್ತು
ಲಕ್ಷ್ಮೀಃ ಸಮಾವಿಶತು ಗಚ್ಛತು ವಾ ಯಥೇಷ್ಟಮ್ ।
ಅದ್ಯೈವ ವಾ ಮರಣಮಸ್ತು ಯುಗಾಂತರೇ ವಾ
ನ್ಯಾಯಾತ್ ಪಥಃ ಪ್ರವಿಚಲಂತಿ ಪದಂ ನ ಧೀರಾಃ ॥

"ನೀತಿ ನಿಪುಣರು ಹೊಗಳಲಿ ತೆಗಳಲಿ, ಲಕ್ಷ್ಮಿ ಒಲಿಯಲಿ ಅಥವಾ ತ್ಯಜಿಸಲಿ, ಮೃತ್ಯು ಇಂದೇ ಬರಲಿ ಅಥವಾ ಯುಗಾಂತರಗಳಮೇಲೆ ಬರಲಿ ಯಾರು ಸತ್ಯದಿಂದ ವಿಮುಖರಾಗುವುದಿಲ್ಲವೊ ಅವರೇ ಧೀರರು." ಈ ದೃಢತೆ ನಿನ್ನಲ್ಲಿ ಇದೆಯೆ? ನಿಮ್ಮಲ್ಲಿ ಈ ಮೂರು ಗುಣಗಳಿದ್ದರೆ ಪ್ರತಿಯೊಬ್ಬರೂ ಮಹಾ ಅದ್ಭುತಕಾರ್ಯವನ್ನು ಸಾಧಿಸಬಲ್ಲಿರಿ. ನೀವು ವೃತ್ತಪತ್ರಿಕೆಯಲ್ಲಿ ಬರೆಯಬೇಕಾಗಿಲ್ಲ. ಉಪನ್ಯಾಸ ಮಾಡಬೇಕಾಗಿಲ್ಲ. ನಿಮ್ಮ ಮುಖವೇ ಕಾಂತಿಯಿಂದ ಕೋರೈಸುವುದು. ನೀವು ಒಂದು ಗುಹೆಯಲ್ಲಿ ವಾಸಿಸುತ್ತಿದ್ದರೂ ನಿಮ್ಮ ಭಾವನೆ ಕಲ್ಲುಬಂಡೆಯನ್ನು ತೂರಿ ಪ್ರಪಂಚದಲ್ಲೆಲ್ಲಾ ನೂರಾರು ವರುಷ ಸ್ಪಂದಿಸುತ್ತಿರುವುವು. ಯಾವುದಾದರೂ ಅದಕ್ಕೆ ಸೂಕ್ತವಾದ ವ್ಯಕ್ತಿ ಆಶ್ರಯ ಸಿಕ್ಕಿ ಅವನ ಮೂಲಕ ಅನುಷ್ಠಾನಕ್ಕೆ ಬರುವವರೆಗೂ ಸಂಚರಿಸುತ್ತಿರುವುದು. ಆಲೋಚನೆ ನಿಷ್ಕಾಪಟ್ಯ ಪರಿಶುದ್ಧ ಉದ್ದೇಶದ ಶಕ್ತಿ ಇದು.

ನಿಮಗೆ ಆಗಲೆ ತಡವಾಗುತ್ತಿದೆ ಎಂದು ಶಂಕಿಸುತ್ತಿರುವೆನು. ಆದರೆ ಇದೇ ಕೊನೆಯ ಮಾತು.

ನನ್ನ ಸ್ವದೇಶವಾಸಿಗಳೆ, ಸ್ನೇಹಿತರೆ, ಮಕ್ಕಳೆ, ನಮ್ಮ ಜನಾಂಗದ ಹಡಗು ಭವಸಾಗರದ ಮೇಲೆ ಕೋಟ್ಯಂತರ ಜೀವಿಗಳನ್ನು ಪಾರುಗಾಣಿಸಿದೆ. ಹಲವು ಶತಾಬ್ದಿಗಳಿಂದ ಕಡಲಮೇಲೆ ಸಂಚರಿಸಿ ಕೋಟ್ಯಂತರ ಜೀವಿಗಳನ್ನು ಅಮೃತತ್ವದ ಕಡೆಗೆ ಒಯ್ದಿದೆ. ಇಂದು ಬಹುಶಃ ನಿಮ್ಮ ಅಜಾಗರೂಕತೆಯಿಂದಲೇ ಹಡಗು ಇಂದು ಶಿಥಿಲವಾಗಿದೆ, ರಂಧ್ರ ಬಿದ್ದಿದೆ.

ಇದನ್ನು ಈಗ ನಿಂದಿಸುವಿರಾ? ಪ್ರಪಂಚದಲ್ಲಿ ಎಲ್ಲಕ್ಕಿಂತ ಮಹತ್ಕಾರ್ಯ ವನ್ನು ಸಾಧಿಸಿದ ಪವಿತ್ರತಮವಸ್ತುವಿನ ಮೇಲೆ ನಿಂದೆಯ ಬಾಣವನ್ನು ಕರೆಯುವುದು ತರವೆ? ಈ ಜನಾಂಗದ ಹಡಗಿನಲ್ಲಿ, ಅಂದರೆ, ನಮ್ಮ ಜನಾಂಗ ದಲ್ಲಿ ಕುಂದು ಕೊರತೆಗಳಿದ್ದರೆ ನಾವು ಅದರ ಮಕ್ಕಳು, ಹೋಗಿ ನಾವು ಆ ರಂಧ್ರವನ್ನು ಮುಚ್ಚೋಣ. ನಮ್ಮ ಹೃದಯ ರಕ್ತವನ್ನಾದರೂ ಕೊಟ್ಟು ಸಂತೋಷದಿಂದ ಈ ಕಾರ್ಯವನ್ನು ಸಾಧಿಸೋಣ. ಸಾಧ್ಯವಿಲ್ಲದೆ ಇದ್ದರೆ ಪ್ರಾಣವನ್ನು ಅರ್ಪಿಸೋಣ. ನಮ್ಮ ತಲೆಯನ್ನಾದರೂ ಛೇದಿಸಿ ರಂಧ್ರ ವನ್ನು ಮುಚ್ಚೋಣ. ಆದರೆ ಎಂದಿಗೂ ನಿಂದಿಸಬೇಡಿ. ಈ ಸಮಾಜದ ಮೇಲೆ ಒಂದಾದರೂ ಕಟುಟೀಕೆ ಇಲ್ಲದಿರಲಿ. ಇದರ ಗತಮಹಾತ್ಮೆಗೆ ನಾನು ಇದನ್ನು ಪ್ರೀತಿಸುತ್ತೇನೆ. ನೀವೆಲ್ಲ ಭಗವಂತನ ಮಕ್ಕಳು, ಮಹಿಮಾವಂತ ಪೂರ್ವಿಕರ ಸಂತಾನರು ಎಂದು ಪ್ರೀತಿಸುತ್ತೇನೆ. ನಾನು ಹೇಗೆ ನಿಮ್ಮನ್ನು ಶಪಿಸಬಲ್ಲೆ? ಎಂದಿಗೂ ಇಲ್ಲ. ನಿಮಗೆ ಸರ್ವಪ್ರಕಾರದಿಂದಲೂ ಕಲ್ಯಾಣ ವಾಗಲಿ. ನನ್ನ ಮಕ್ಕಳೆ, ನನ್ನ ಯೋಜನೆಯನ್ನೆಲ್ಲ ನಿಮಗೆ ಹೇಳಲು ಬಂದಿರುವೆನು. ನೀವು ಅದನ್ನು ಆಲಿಸಿದರೆ ನಿಮ್ಮೊಂದಿಗೆ ಕೆಲಸಮಾಡಲು ಸಿದ್ಧನಾಗಿರುವೆನು. ನೀವು ಕೇಳದೆ ನನ್ನನ್ನು ಭರತಖಂಡದಿಂದ ನೂಕಿ ದರೂ ನಾನು ಪುನಃ ಬಂದು ನಾವೆಲ್ಲಾ ಮುಳುಗುತ್ತಿರುವೆವು ಎಂದು ಹೇಳುವೆನು. ನಾನು ನಿಮ್ಮ ಸಮೀಪದಲ್ಲಿರಲು ಬಂದಿರುವೆನು. ನಾವೆಲ್ಲಾ ಮುಳುಗಲೇಬೇಕಾದರೆ ಒಟ್ಟಿಗೆ ಮುಳುಗೋಣ. ಎಂದಿಗೂ ಶಾಪವನ್ನು ಉಚ್ಚರಿಸದೆ ಇರುವ.



# ಭಾರತೀಯರ ಜೀವನದಲ್ಲಿ ವೇದಾಂತ ಪ್ರಭಾವ

## (ಮದ್ರಾಸಿನಲ್ಲಿ ಮಾಡಿದ ಉಪನ್ಯಾಸ)

ನಮ್ಮ ಜನಾಂಗ ಮತ್ತು ಧರ್ಮವನ್ನು ವ್ಯಕ್ತಪಡಿಸುವ ಒಂದು ಪದ ಬಹಳ ಪ್ರಚಲಿತವಾಗಿದೆ. ವೇದಾಂತವೆಂದರೆ ಏನೆಂದು ತಿಳಿಯಬೇಕಾದರೆ "ಹಿಂದೂ" ಪದವನ್ನು ಸ್ವಲ್ಪ ವಿವರಿಸಬೇಕಾಗಿದೆ. ಪುರಾತನ ಪರ್ಷಿಯನ್ನರು ಸಿಂಧೂ ನದಿಗೆ ಹಿಂದೂ ಎಂದು ಕರೆಯುತ್ತಿದ್ದರು. ಸಂಸ್ಕೃತದ 'ಸ' ಪರ್ಷಿಯಾದಲ್ಲಿ 'ಹ' ಎಂದು ಸಾಧಾರಣವಾಗಿ ಆಗುವುದು. ಹೀಗೆ ಸಿಂಧೂ ಹಿಂದೂ ಆಯಿತು. ಗ್ರೀಕರಿಗೆ 'ಹ' ಉಚ್ಚರಿಸಲು ಕಷ್ಟವಾಗಿ ಅದನ್ನು ತ್ಯಜಿಸಿಯೇ ಬಿಟ್ಟರು. ನಮ್ಮನ್ನೇ ಇಂಡಿಯಾ ದೇಶದವರು ಎಂದು ಕರೆದರು. ಇಂಡೂ (ಸಿಂಧೂ) ನದಿಯ ಬಲಭಾಗಕ್ಕೆ ಇದ್ದವರೆಲ್ಲಾ ಹಿಂದೂಗಳೆಂದು ಆಗಿನ ಕಾಲದಲ್ಲಿ ಕರೆದರೂ ಈಗ ಅದಕ್ಕೆ ಅರ್ಥವೇ ಇಲ್ಲದಂತೆ ಆಗಿದೆ. ಏಕೆಂದರೆ ಈ ಕಡೆ ಇರುವ ಜನರೆಲ್ಲ ಒಂದೇ ಧರ್ಮಕ್ಕೆ ಸೇರಿದವರಲ್ಲ. ಇಲ್ಲಿ ಹಿಂದೂಗಳಿರುವರು, ಜೊತೆಗೆ ಮುಹಮ್ಮದೀಯ, ಪಾರ್ಸಿ, ಕ್ರೈಸ್ತ, ಬೌದ್ಧ, ಜೈನ, ಎಲ್ಲರೂ ಇರುವರು. ಸಾಹಿತ್ಯ ದೃಷ್ಟಿಯಿಂದ ನೋಡಿದರೆ ಹಿಂದೂ ಎಂಬ ಪದದಲ್ಲಿ ಇವರೆಲ್ಲ ಇರಬೇಕಾಗಿತ್ತು. ಆದರೆ ಧಾರ್ಮಿಕ ದೃಷ್ಟಿಯಿಂದ ಇವರೆಲ್ಲರನ್ನೂ ಒಂದೇ ಎಂದು ಕರೆಯಲಾಗುವುದಿಲ್ಲ. ನಮ್ಮ ಧರ್ಮಕ್ಕೆ ಒಂದು ಸರ್ವಸಾಮಾನ್ಯವಾದ ಹೆಸರನ್ನು ಕಂಡು ಹಿಡಿಯುವುದು ಕಷ್ಟವಾಗಿದೆ. ಏಕೆಂದರೆ ಹಲವು ಬಗೆ ಧರ್ಮ, ಭಾವನೆ, ಆಚಾರ ವ್ಯವಹಾರ, ಇವುಗಳನ್ನೆಲ್ಲಾ ಯಾವ ಪ್ರತ್ಯೇಕ ಹೆಸರು ಪಂಥ ಸಂಸ್ಥೆಯಿಲ್ಲದೆ ಒಟ್ಟುಗೂಡಿಸಿರುವರು. ಹಲವು ಪಂಗಡದ ಹಿಂದುಗಳೆಲ್ಲರೂ ಒಪ್ಪಿಕೊಳ್ಳಬಹುದಾದ ಒಂದು ಭಾವನೆಯೆ ವೇದಗಳಲ್ಲಿರುವ ನಂಬಿಕೆ. ವೇದಗಳ ಪರಮ ಪ್ರಮಾಣವನ್ನು ಒಪ್ಪದವರಾರೂ ಹಿಂದೂಗಳೆಂದು ಪರಿಗಣಿಸಲಾಗಲಾರರೆಂಬುದು ನಿಜವಾಗಿರಬಹುದು.

ಈ ವೇದರಾಶಿ ನಿಮಗೆ ತಿಳಿದಿರುವಂತೆ ಜ್ಞಾನಕಾಂಡ ಕರ್ಮಕಾಂಡವೆಂದು ಎರಡು ಭಾಗವಾಗಿದೆ. ಕರ್ಮಕಾಂಡದಲ್ಲಿ ಹಲವು ಯಾಗ ಯಜ್ಞಗಳು ಬರುವುವು. ಅವುಗಳಲ್ಲಿ ಬಹುಭಾಗ ಈಗ ಬಳಕೆಯಲ್ಲಿ ಇಲ್ಲ. ಆಧ್ಯಾತ್ಮಿಕ ಉಪದೇಶಗಳನ್ನು ಒಳಗೊಂಡಿರುವುದೇ ಜ್ಞಾನಕಾಂಡ. ಇದನ್ನೇ ಉಪನಿಷತ್ ವೇದಾಂತ ಎಂದು ಕರೆಯುವುದು. ನಮ್ಮ

ಆಚಾರ್ಯರು, ತತ್ತ್ವಜ್ಞರು, ಗ್ರಂಥಕರ್ತರು, ದ್ವೈತ, ವಿಶಿಷ್ಟಾದ್ವೈತ, ಅದ್ವೈತಗಳೆಲ್ಲ ಪರಮಪ್ರಮಾಣವೆಂದು ಇದನ್ನೇ ಉದಹರಿಸುವರು. ಇದನ್ನು ಒಪ್ಪದವರು ನಾಸ್ತಿಕರು. ಆಧುನಿಕ ಕಾಲದಲ್ಲಿ ಪ್ರತಿಯೊಬ್ಬ ಹಿಂದುಗೂ ಅನ್ವಯಿಸುವ ಏಕಮಾತ್ರ ಪದವೇ "ವೇದಾಂತಿ," ಅಥವಾ, "ವೈದಿಕ". ನಾನು ಯಾವಾಗಲೂ ಈ ದೃಷ್ಟಿಯಲ್ಲೇ ಪದವನ್ನು ಉಪಯೋಗಿಸುವುದು. ನಾನು ಇದನ್ನು ಹೆಚ್ಚು ವಿಶದಪಡಿಸುವೆನು. ಈಚೆಗೆ ವೇದಾಂತವೆಂದರೆ ಕೇವಲ ಅದ್ವೈತವೆಂದು ತಿಳಿಯುವುದು ರೂಢಿಯಾಗಿ ಹೋಗಿದೆ. ಉಪನಿಷತ್ತಿನ ಆಧಾರದಮೇಲೆ ನಿಂತ ಹಲವು ತತ್ತ್ವಗಳಲ್ಲಿ ಅದ್ವೈತವೂ ಒಂದು ಎಂದು ನಮಗೆ ಗೊತ್ತಿದೆ. ಅದ್ವೈತಿಗಳಿಗೆ ಇರುವಷ್ಟೇ ಗೌರವ ವಿಶಿಷ್ಟಾದ್ವೈತಿಗಳಿಗೂ ವೇದಾಂತದ ಮೇಲೆ ಇದೆ. ದ್ವೈತಿಗಳೂ ಕೂಡ ಹೀಗೆಯೆ. ಪ್ರತಿಯೊಂದು ಪಂಗಡದವರೂ ಕೂಡ ಹೀಗೆಯೆ. ಆದರೂ ಜನಸಾಧಾರಣದಲ್ಲಿ ವೇದಾಂತವೆಂದರೆ ಅದ್ವೈತವೆಂಬ ಭಾವನೆ ಬಂದು ಹೋಗಿದೆ. ಅದಕ್ಕೆ ಕೊಂಚ ಕಾರಣವೂ ಇದೆ. ನಮಗೆ ವೇದ ಪ್ರಮಾಣವಿದ್ದರೂ ಅದನ್ನು ಉದಹರಿಸಲು ಅನಂತರ ಬರೆದ ಸ್ಮೃತಿ ಪುರಾಣಗಳೂ ಇವೆ. ಆದರೆ ವೇದದ ಪ್ರಾಧಾನ್ಯತೆ ಇವಕ್ಕೆ ಇಲ್ಲ. ಶ್ರುತಿ, ಸ್ಮೃತಿಗೆ ಭಿನ್ನಾಭಿಪ್ರಾಯ ಬಂದರೆ ಆಗ ಶ್ರುತಿಯನ್ನೇ ಅನುಸರಿಸಬೇಕೆಂಬುದು ನಿಯಮ. ಪ್ರಖ್ಯಾತ ಅದ್ವೈತ ವೇದಾಂತಿ ಶಂಕರಾಚಾರ್ಯರು ಆ ಸಂಪ್ರದಾಯಕ್ಕೆ ಸೇರಿದವರು. ಪ್ರಮಾಣಗಳಲ್ಲಿ ಉಪನಿಷತ್ತಿಗೆ ಸೇರಿದವು ಶ್ರುತಿಯಲ್ಲಿ ಸಿಕ್ಕದೇ ಇರುವಾಗ ಮಾತ್ರ ವಿಷಯವನ್ನು ಎಲ್ಲೋ ಅಪರೂಪವಾಗಿ ಸ್ಮೃತಿಯಿಂದ ತರುವರು. ಇತರ ಸಂಪ್ರದಾಯದವರು ಹೆಚ್ಚು ಸ್ಮೃತಿಯಿಂದ ಉದಹರಿಸಿ ಕಡಿಮೆ ಶ್ರುತಿಯನ್ನು ತರುವರು. ದ್ವೈತ ಸಂಪ್ರದಾಯಕ್ಕೆ ಸೇರಿದವರು ವೇದಾಂತಿಗಳಲ್ಲಿ ನಿರೀಕ್ಷಿಸಿರುವುದಕ್ಕಿಂತ ಹೆಚ್ಚು ಸ್ಮೃತಿಯನ್ನು ತರುವರು. ಇವರು ಪುರಾಣ ಪ್ರಮಾಣಕ್ಕೆ ಅಷ್ಟೊಂದು ಪ್ರಾಧಾನ್ಯ ಕೊಟ್ಟಿರುವುದರಿಂದ ಅದ್ವೈತವನ್ನು ಪರಿಶುದ್ಧ ವೇದಾಂತವೆಂದು ಕರೆದಿರಬಹುದೆಂದು ಭಾವಿಸುತ್ತೇನೆ.

ವೇದಾಂತವೆಂಬ ಪದದಲ್ಲಿ ಭರತಖಂಡದ ಭಿನ್ನ ಭಿನ್ನ ಮತಗಳೆಲ್ಲ ಸೇರಬೇಕು. ವೇದಾಂತ ವೇದದ ಒಂದು ಭಾಗವಾದುದರಿಂದ ಅದು ಎಲ್ಲರೂ ಒಪ್ಪುವಂತೆ ನಮ್ಮಲ್ಲಿರುವ ಅತಿ ಪುರಾತನ ಗ್ರಂಥ. ವೇದದ

ಒಂದೊಂದು ಭಾಗವನ್ನು ಬೇರೆ ಬೇರೆ ಕಾಲದಲ್ಲಿ ಬರೆದರೆಂದು ಹಿಂದೂಗಳು ಒಪ್ಪುವುದಿಲ್ಲ. ವೇದಗಳೆಲ್ಲಾ ಒಂದೇ ಕಾಲದಲ್ಲಿ ಆದುವೆಂದು ನಂಬು ತ್ತಾರೆ. ನಾನು ಹೇಳಬೇಕಾದರೆ ಅವರು ಈ ವೇದ ಹೊಸದಾಗಿ ಹುಟ್ಟಿತು ಎಂಬುದನ್ನು ನಂಬುವುದಿಲ್ಲ. ಅದು ಯಾವಾಗಲೂ ಭಗವಂತನ ಮನದ ಲ್ಲಿತ್ತು ಎಂದು ನಂಬುವೆನು. ಇದನ್ನೆ ನಾನು ವೇದಾಂತವೆನ್ನುವುದು. ಇದು ದ್ವೈತ ವಿಶಿಷ್ಟಾದ್ವೈತ ಅದ್ವೈತವನ್ನು ಒಳಗೊಂಡಿರುವುದು. ಜೈನ ಮತ್ತು ಬೌದ್ಧರು ಸೇರಲು ಬಂದರೆ ಅವರನ್ನೂ ಸ್ವೀಕರಿಸಬಲ್ಲೆವು. ನಮ್ಮ ಹೃದಯ ಅಷ್ಟು ವಿಶಾಲವಾಗಿದೆ. ಆದರೆ ಬರದೆ ಇರುವವರು ಅವರೆ. ನಾವು ಸಿದ್ಧರಾಗಿರುವೆವು. ಪರೀಕ್ಷೆ ಮಾಡಿದರೆ ಬೌದ್ಧಧರ್ಮ ಸಾರವನ್ನೆಲ್ಲ ಉಪನಿಷತ್ತಿನಿಂದ ಪಡೆದಿರುವರು. ಪ್ರಖ್ಯಾತ ಬೌದ್ಧರ ನೀತಿ ಯನ್ನು ಒಂದಲ್ಲ ಮತ್ತೊಂದು ಉಪನಿಷತ್ತಿನಿಂದ ತೆಗೆದುಕೊಂಡಿರುವರು. ಇದರಂತೆಯೇ ಜೈನರ ಸಿದ್ಧಾಂತಕೂಡ. ಅವರ ವಿಚಿತ್ರ ನಡವಳಿಕೆ ಮಾತ್ರ ಅಲ್ಲಿರಲಿಲ್ಲ. ಉಪನಿಷತ್ತಿನಲ್ಲಿ ಮುಂದೆ ಬರುವ ಹಲವು ತತ್ತ್ವಸಂಪ್ರ ದಾಯಗಳು ಆಗಲೆ ಬೀಜ ಸ್ಥಿತಿಯಲ್ಲಿ ಇವೆ. ಕೆಲವು ವೇಳೆ ಸಾಕಾದಷ್ಟು ಪ್ರಮಾಣವಿಲ್ಲದೆ ಭಕ್ತಿ ಆದರ್ಶ ಉಪನಿಷತ್ತಿನಲ್ಲಿ ಇಲ್ಲವೆನ್ನುವರು. ಯಾರು ಉಪನಿಷತ್ತನ್ನು ಅಧ್ಯಯನ ಮಾಡಿರುವರೋ ಅವರಿಗೆ ಇದು ಸತ್ಯ ವಲ್ಲವೆಂಬುವುದು ಗೊತ್ತಾಗುವುದು. ನೀವು ಹುಡುಕಿದರೆ ಸಾಕಾದಷ್ಟು ಭಕ್ತಿ ಅಲ್ಲಿದೆ. ನಂತರ ಪುರಾಣ ಮತ್ತು ಇತರ ಸ್ಮೃತಿಗಳಲ್ಲಿ ಯಾವ ಯಾವ ಭಾವಗಳು ಬಂದವೋ ಅವೆಲ್ಲ ಅಂಕುರಾವಸ್ಥೆಯಲ್ಲಿ ಉಪನಿಷತ್ತಿ ನಲ್ಲಿವೆ. ಅದರ ಅಂಕುರಾರ್ಪಣ ಆಗಲೆ ಆಗಿತ್ತು. ಇದನ್ನು ಕೆಲವು ಪುರಾಣ ಪೂರ್ತಿಮಾಡಿವೆ. ಭರತಖಂಡದಲ್ಲಿ ಸ್ಪಷ್ಟವಾಗಿ ನಂತರ ಪ್ರಕಾಶಮಾನ ವಾದ ಯಾವ ಒಂದು ಭಾವನೆಯೂ ಉಪನಿಷತ್ತಿನಲ್ಲಿ ಇಲ್ಲದೆ ಇಲ್ಲ. ಉಪ ನಿಷತ್ತಿನ ಜ್ಞಾನವಿಲ್ಲದ ಕೆಲವರು ಭಕ್ತಿ ಹೊರಗಿನ ಪ್ರಭಾವದಿಂದ ಬಂತೆಂದು ವಿಚಿತ್ರ ತರ್ಕವನ್ನು ಮಾಡುವರು. ಆದರೆ ನಮಗೆ ತಿಳಿದಿರು ವಂತೆ ಇವೆಲ್ಲಾ ಸುಳ್ಳು. ಭಕ್ತಿಗೆ ಬೇಕಾದುದೆಲ್ಲ ಆಗಲೇ ಅಲ್ಲಿವೆ. ಉಪ ನಿಷತ್ತನ್ನು ಬಿಟ್ಟರೂ ಸಂಹಿತಾ ಭಾಗದಲ್ಲಿಯೂ ಪೂಜೆ ಪ್ರೀತಿ ಇವೆಲ್ಲ ಇವೆ. ಭಕ್ತಿಯ ಭಾವನೆ ಅಲ್ಲಿ ಉತ್ತಮ ಉತ್ತಮವಾಗುತ್ತ ಬರುತ್ತಿದೆ. ಸಂಹಿತಾ ಭಾಗದಲ್ಲಿ ದುಃಖ ಅಂಜಿಕೆಗೆ ಸಂಬಂಧಪಟ್ಟ ದೇವರನ್ನು ಕೆಲವುಕಡೆ ನೋಡುವಿರಿ. ಪಾಪ ಭಾವನೆಯಿಂದ ಪೀಡಿತರಾಗಿರುವುದನ್ನು ನೋಡು

ತ್ತೇವೆ. ಆದರೆ ಉಪನಿಷತ್ತಿನಲ್ಲಿ ಇವನ್ನು ವಿವರಿಸುವುದಕ್ಕೆ ಸ್ಥಳವಿಲ್ಲ. ಉಪನಿಷತ್ತಿನಲ್ಲಿ ಅಂಜಿಕೆಯ ಧರ್ಮವಿಲ್ಲ. ಅಲ್ಲಿರುವುದು ಪ್ರೇಮ ಮತ್ತು ಜ್ಞಾನಮಯ ಧರ್ಮ.

ಉಪನಿಷತ್ತು ನಮ್ಮ ಗ್ರಂಥ. ಅವನ್ನು ಬಹು ವಿಧದಲ್ಲಿ ವಿವರಿಸುವರು. ಎಲ್ಲಿ ಪುರಾಣ ಉಪನಿಷತ್ತಿಗೂ ಭಿನ್ನಾಭಿಪ್ರಾಯ ಬರುವುದೋ ಅಲ್ಲಿ ಪುರಾಣಕ್ಕೆ ಮಾನ್ಯವಿಲ್ಲ. ಆದರೆ ನಾವು ಅನುಷ್ಠಾನ ದೃಷ್ಟಿಯಿಂದ ನೋಡಿದರೆ ಶೇಕಡ ತೊಂಭತ್ತರಷ್ಟು ಪೌರಾಣಿಕರು ಹತ್ತರಷ್ಟು ವೈದಿಕರು ಆಗಿರುವೆವು. ನಮ್ಮಲ್ಲಿ ಎಷ್ಟೋ ವಿರೋಧ ಆಚಾರಗಳಿವೆ. ಹಾಗೆಯೆ ನಮ್ಮ ಸಮಾಜದಲ್ಲಿ ಎಷ್ಟೋ ವಿಷಯಗಳಿವೆ. ಇವಕ್ಕೆ ಹಿಂದೂಶಾಸ್ತ್ರದಲ್ಲಿ ಯಾವ ಪ್ರಮಾಣವೂ ಇಲ್ಲ. ಕೆಲವು ವೇಳೆ ಹಲವು ವಿಚಿತ್ರ ವಿಷಯಗಳನ್ನು ಓದುತ್ತೇವೆ. ಹಲವು ಆಚಾರಗಳಿಗೆ ವೇದ ಸ್ಮೃತಿ ಪುರಾಣ ಯಾವುದರಲ್ಲಿಯೂ ಪ್ರಮಾಣವಿಲ್ಲ. ಕೇವಲ ಲೋಕಾಚಾರವಾಗಿದೆ. ಆದರೆ ಪ್ರತಿಯೊಬ್ಬ ತಿಳಿಯದವನು ಕೂಡ ಯಾವುದೋ ಒಂದು ಲೋಕಾಚಾರ ನಷ್ಟವಾದರೆ ನಾನು ಹಿಂದೂತ್ವವನ್ನೇ ಕಳೆದುಕೊಳ್ಳುವೆನು ಎಂದು ಭಾವಿಸುವನು. ಅವನ ಮನಸ್ಸಿನಲ್ಲಿ ವೇದಾಂತ ಮತ್ತು ಲೋಕಾಚಾರ ಎರಡೂ ಕಲಸುಮೇಲೋಗರವಾಗಿದೆ. ಶಾಸ್ತ್ರದಲ್ಲಿ ತಾನು ಮಾಡುತ್ತಿರುವುದಕ್ಕೆ ಆಧಾರವೇ ಇಲ್ಲ. ಅದನ್ನು ಬಿಟ್ಟರೆ ತೊಂದರೆ ಇಲ್ಲ. ಅದರಿಂದ ಮತ್ತೂ ಉತ್ತಮನಾಗಬಹುದೆಂಬುದನ್ನು ಯೋಚಿಸಲೇ ಆರ. ಅನಂತರ ನಮ್ಮ ಶಾಸ್ತ್ರದಲ್ಲಿ ಮತ್ತೊಂದು ತೊಡಕಿದೆ. ನಮ್ಮ ಗ್ರಂಥ ವಿಶಾಲವಾಗಿದೆ. ಪತಂಜಲಿ ಪ್ರಣೀತ ಮಹಾಭಾಷ್ಯವೆಂಬ ಶಬ್ದವಿದ್ಯಾಶಾಸ್ತ್ರದಲ್ಲಿ ನಾಮ ವೇದದಲ್ಲಿ ಸಹಸ್ರ ಶಾಖೆಗಳಿವೆ ಎಂದು ಹೇಳಿರುವುದು. ಅವೆಲ್ಲ ಈಗ ಎಲ್ಲಿ? ಯಾರಿಗೂ ಗೊತ್ತಿಲ್ಲ. ಅದರಂತೆಯೆ ಪ್ರತಿಯೊಂದು ವೇದದಲ್ಲಿಯೂ ಅದರ ಮುಖ್ಯಭಾಗ ಲುಪ್ತವಾಗಿ ಎಲ್ಲೋ ಸ್ವಲ್ಪ ಮಾತ್ರ ಉಳಿದಿರುವುದು. ಒಂದೊಂದು ವಂಶದವರು ಒಂದು ಶಾಖೆಯನ್ನು ತೆಗೆದುಕೊಂಡರು. ಈ ವಂಶ ತಾನಾಗಿ ನಾಶವಾಯಿತು, ಇಲ್ಲವೆ ಅನ್ಯ ದೇಶೀಯರ ಕೈಗೆ ಸಿಕ್ಕಿ ನಾಶವಾಯಿತು. ಇದರ ಜೊತೆಗೆ ಅವರ ಪಾಲಿನ ವೇದಶಾಖೆಯೂ ಮಾಯವಾಯಿತು. ಈ ಭಾಗವನ್ನು ನಾವು ಯಾವಾಗಲೂ ಮನಸ್ಸಿನಲ್ಲಿಟ್ಟಿರಬೇಕು. ಹೊಸಭಾವನೆ ಹರಡುವವರು ಅಥವಾ ವೇದಕ್ಕೆ ವಿರೋಧವಾಗಿ ಏನನ್ನಾದರೂ ಬೋಧಿಸುವವರು ಈ ವಿಷಯಕ್ಕೆ ಹೆಚ್ಚು ಪ್ರಾಧಾನ್ಯ

ಕೊಡುವರು. ಲೋಕಾಚಾರಕ್ಕೂ ಶ್ರುತಿಗೂ ಎಲ್ಲಿ ಹೋಲಿಕೆ ಇಲ್ಲವೋ ಅಲ್ಲಿ ಅವರು ಇಲ್ಲಿ ಹೋಲಿಕೆ ಇದೆ, ಆದರೆ ಆ ಭಾಗ ಈಗ ನಷ್ಟವಾಗಿ ಹೋಗಿದೆ ಎನ್ನುವರು. ನಮ್ಮ ಶ್ರುತಿ ಅಧ್ಯಯನ ಮತ್ತು ಅದನ್ನು ವಿವರಿಸುವ ಹಲವು ವಿಧದಲ್ಲಿ ಅವುಗಳ ಅಂತರಾಳದಲ್ಲಿರುವ ಏಕ ಮತವನ್ನು ಕಂಡುಹಿಡಿಯುವುದು ಬಹಳ ಕಷ್ಟ. ಹಲವು ಪಂಗಡಗಳ ಅಂತರಾಳದಲ್ಲಿ ಒಂದು ಸಾಮಾನ್ಯ ಭಾವನೆ ಇರಬೇಕು. ಅಲ್ಲಿ ಒಂದು ಸಾಮರಸ್ಯವಿರಬೇಕು. ಯಾವುದೋ ಒಂದು ಸಾಮಾನ್ಯ ಯೋಜನೆ ಮೇಲೆ ಈ ಸಣ್ಣ ಪುಟ್ಟ ಕಟ್ಟಡವನ್ನೆಲ್ಲಾ ಕಟ್ಟಿರುವರು. ನೋಡಿದರೆ ಅಸ್ತವ್ಯಸ್ತವಾಗಿ ಬಿದ್ದಿರುವ ಧರ್ಮವೆಂಬ ಕಟ್ಟಡದ ಹಿಂದೆ ಸಾಮಾನ್ಯ ತಳಹದಿ ಇರಬೇಕೆಂದು ವ್ಯಕ್ತವಾಗುವುದು. ಇಲ್ಲದೆ ಇದ್ದರೆ ಅದು ಇಷ್ಟು ದಿನ ನಿಲ್ಲಲು ಸಾಧ್ಯವಾಗುತ್ತಿರಲಿಲ್ಲ.

ನಮ್ಮ ಭಾಷ್ಯಕಾರರಲ್ಲಿ ಮತ್ತೊಂದು ತೊಂದರೆ ಇದೆ. ಅದ್ವೈತ ಭಾಷ್ಯಕಾರ ಅದ್ವೈತಕ್ಕೆ ಸಂಬಂಧಪಟ್ಟ ಶ್ಲೋಕ ಬಂದರೆ ಅದನ್ನು ಹಾಗೆಯೇ ಇಡುವನು. ಆದರೆ ದ್ವೈತಕ್ಕೆ ಸಂಬಂಧಪಟ್ಟ ವಿಷಯ ಬಂದರೆ ಅದನ್ನು ಹಿಸುಕಿ ವಿಚಿತ್ರ ಅರ್ಥ ಬರುವಂತೆ ಮಾಡುವನು. ಕೆಲವು ವೇಳೆ 'ಅಜ' ಮೇಕೆಯಾಗುವುದು. ಬದಲಾವಣೆ ಇಷ್ಟು ವಿಚಿತ್ರವಾಗಿದೆ. ಭಾಷ್ಯಕಾರನ ಅನುಕೂಲಕ್ಕಾಗಿ ಅಜ ಮೇಕೆಯಾಗುವುದು. ಇದರಂತೆಯೇ ಅಥವಾ ಇದಕ್ಕಿಂತಲೂ ವಿಚಿತ್ರವಾಗಿ ದ್ವೈತಿಗಳು ಶ್ಲೋಕವನ್ನು ವಿವರಿಸುವರು. ದ್ವೈತಕ್ಕೆ ಸಂಬಂಧ ಪಟ್ಟುದನ್ನೆಲ್ಲಾ ಇವರು ವಿವರಿಸಿ ಅದ್ವೈತಕ್ಕೆ ಸಂಬಂಧಪಟ್ಟುದಕ್ಕೆ ತಮ್ಮ ಮನಸ್ಸಿಗೆ ತೋರಿದಂತೆ ಅರ್ಥ ಕೊಡುವರು. ಸಂಸ್ಕೃತ ಭಾಷೆಯೇ ಕಷ್ಟ. ಇದು ವೇದದ ಭಾಷೆ. ಅತಿ ಪ್ರಾಚೀನ ಸಂಸ್ಕೃತ. ಸಂಸ್ಕೃತ ತತ್ತ್ವಶಾಸ್ತ್ರ ಅಷ್ಟೇ ಪ್ರೌಢವಾಗಿದೆ. ಯಾವುದಾದರೂ ಒಂದು ಪದದ ಮೇಲೆ ಎಷ್ಟು ವರ್ಷಗಳಾದರೂ ಚರ್ಚೆ ಮಾಡಬಹುದು. ಪಂಡಿತರಿಗೆ ಮನಸ್ಸು ಬಂದರೆ ಯಾವ ಹರಟೆಯನ್ನಾದರೂ ತೆಗೆದುಕೊಂಡು ವಾದ ಮತ್ತು ಉದಾಹರಣೆ ಮೂಲಕ ಅದು ನ್ಯಾಯಬದ್ಧ ಸಂಸ್ಕೃತವೆಂದು ತೋರಬಲ್ಲರು. ಉಪನಿಷತ್ತುಗಳನ್ನು ತಿಳಿದುಕೊಳ್ಳುವುದಕ್ಕೂ ಇರುವ ತೊಡಕುಗಳು ಇವು. ಪರಮ ದ್ವೈತಿಯಾಗಿಯೂ ಅದ್ವೈತಿಯಾಗಿಯೂ ಭಕ್ತನಾಗಿಯೂ ಜ್ಞಾನಿಯಾಗಿಯೂ ಇದ್ದ ಒಬ್ಬರೊಂದಿಗೆ ಇರುವ ಭಾಗ್ಯ ನನ್ನದಾಗಿತ್ತು. ಇವರ ಬಳಿಯಲ್ಲಿ ವಾಸಿಸುವಾಗ

ಉಪನಿಷತ್ ಮತ್ತು ಇತರ ಶಾಸ್ತ್ರಗಳನ್ನು ಕೇವಲ ಭಾಷ್ಯಕಾರರನ್ನು ಸುಮ್ಮನೆ ಅನುಸರಿಸದೆ ಸ್ವತಂತ್ರವಾಗಿ ಬೇರೊಂದು ದೃಷ್ಟಿಯಿಂದ ಅದನ್ನು ನೋಡಬೇಕು ಎನ್ನಿಸಿತು. ನನ್ನ ಅಭಿಪ್ರಾಯದಲ್ಲಿ ನನ್ನ ಸಂಶೋಧನೆಯಲ್ಲಿ ಇವು ಪರಸ್ಪರ ವಿರೋಧವಲ್ಲವೆನ್ನುವುದನ್ನು ನಂಬುತ್ತೇನೆ. ನಮಗೆ ಗ್ರಂಥ ಪೀಡನೆಯ ಅಂಜಿಕೆಯೇ ಬೇಕಿಲ್ಲ. ಶಾಸ್ತ್ರ ಅತಿ ಸುಂದರವಾಗಿದೆ. ಅವು ಅತಿ ಅದ್ಭುತವಾಗಿವೆ. ಅವುಗಳಲ್ಲಿ ಪರಸ್ಪರ ವಿರೋಧವಿಲ್ಲ. ಅವುಗಳಲ್ಲಿ ಸಾಮರಸ್ಯವಿದೆ. ಒಂದು ಭಾವನೆ ಮತ್ತೊಂದು ಭಾವನೆಗೆ ಒಯ್ಯುವುದು. ನನಗೆ ತೋರಿದ ಮತ್ತೊಂದು ಭಾವನೆಯೆ ಉಪನಿಷತ್ತುಗಳಲ್ಲಿ ಉಪಾಸನೆ ದ್ವೈತ ಭಾವದಿಂದ ಪ್ರಾರಂಭವಾಗಿ ಪರಮ ಅದ್ವೈತ ಭಾವನೆಯಲ್ಲಿ ಕೊನೆಗಾಣುವುದು.

ಇವರ ಜೀವನದ ಬೆಳಕಿನಲ್ಲಿ ನೋಡಿದರೆ ದ್ವೈತಿ ಅದ್ವೈತಿಗಳು ಒಬ್ಬರು ಮತ್ತೊಬ್ಬರೊಂದಿಗೆ ಹೋರಾಡಬೇಕಾಗಿಲ್ಲ. ಇಬ್ಬರಿಗೂ ಸ್ಥಳವಿದೆ. ಜನಾಂಗದಲ್ಲಿ ಉತ್ತಮಸ್ಥಾನವಿದೆ. ದ್ವೈತಿಯೂ ಇರಬೇಕು ಏಕೆಂದರೆ ಅವನು ಅದ್ವೈತಿಯಷ್ಟೇ ಜನಾಂಗದ ಧಾರ್ಮಿಕ ಭಾವನೆಯ ಭಾಗವಾಗಿರುವನು. ಒಬ್ಬರು ಮತ್ತೊಬ್ಬರಿಲ್ಲದೆ ಜೀವಿಸಲಾರರು. ಒಂದು ಮತ್ತೊಂದರ ಪೂರೈಕೆ. ಒಂದು ಕಟ್ಟಡ ಮತ್ತೊಂದು ಶಿಖರ, ಒಂದು ಮೂಲ ಮತ್ತೊಂದು ಫಲ. ಉಪನಿಷತ್ತಿನ ಮೂಲವನ್ನು ಪೀಡಿಸುವುದು ತಿಳಿಗೇಡಿತನವೆಂದು ನಾನು ಭಾವಿಸುತ್ತೇನೆ. ಉಪನಿಷತ್ತಿನ ಭಾಷೆ ಅಪೂರ್ವವಾದುದು. ಅದು ಶ್ರೇಷ್ಠತಮ ದರ್ಶನಶಾಸ್ತ್ರ. ಮಾನವ ಜಾತಿಗೆ ಮುಕ್ತಿಪಥ ದರ್ಶಕ. ಎಲ್ಲಕ್ಕಿಂತ ಹೆಚ್ಚಾಗಿ ಅತೀಂದ್ರಿಯ ಸತ್ಯವನ್ನು ವಿವರಿಸುವ ಉಪನಿಷತ್ತಿನ ಭಾಷೆ ಪ್ರಪಂಚದಲ್ಲೇ ಶ್ರೇಷ್ಠತಮವಾದುದು. ಮಾನವನ ಪ್ರಬಲ ವಿಶೇಷತ್ವ ಅಂತರ್‌ದೃಷ್ಟಿಪರಾಯಣ ಹಿಂದು ಮನಸ್ಸು ನಮಗೆ ಇಲ್ಲಿ ಪರಿಚಯವಾಗುವುದು.

ಇತರ ದೇಶಗಳಲ್ಲಿ ಅತೀಂದ್ರಿಯ ವರ್ಣನೆಗಳನ್ನೂ ನೋಡುತ್ತೇವೆ. ಆದರೆ ಎಲ್ಲಾ ಕಡೆಯಲ್ಲಿಯೂ ಬಾಹ್ಯ ಪ್ರಕೃತಿಯಿಂದ ಆ ಮಹಾಭಾವವನ್ನು ಹಿಡಿಯಲು ಪ್ರಯತ್ನವಾಗಿದೆ. ಉದಾಹರಣೆಗೆ ಮಿಲ್ಟನ್, ಡಾಂಟೆ ಹೋಮರ್ ಅಥವಾ ಉಳಿದ ಪಾಶ್ಚಾತ್ಯ ಕವಿಗಳನ್ನು ತೆಗೆದುಕೊಳ್ಳಿ. ಅವರ ಕಾವ್ಯಗಳಲ್ಲೂ ಮಹಾಭಾವ ವರ್ಣನೆಗಳಿವೆ. ಆದರೆ ಅವುಗಳೆಲ್ಲ ಇಂದ್ರಿಯಗ್ರಾಹ್ಯ ಬಾಹ್ಯ ಪ್ರಕೃತಿವರ್ಣನೆ. ಬಾಹ್ಯ

ಪ್ರಕೃತಿಯ ವಿಶಾಲಭಾವ ದೇಶ ಕಾಲದ ಅನಂತತೆಯ ವರ್ಣನೆ, ಇತ್ಯಾದಿ. ಸಂಹಿತೆಯ ಭಾಗದಲ್ಲಿಯೂ ಹಾಗೆಯೇ ಪ್ರಯತ್ನಿಸಿರುವರು. ಸೃಷ್ಟಿಯನ್ನು ವಿವರಿಸಿರುವ ಅಪೂರ್ವ ಋಕ್ ಮಂತ್ರಗಳು ನಿಮಗೆ ಪರಿಚಯವಿರಬಹುದು. ಬಾಹ್ಯ ಪ್ರಕೃತಿಯ ಮಹತ್ವ, ದೇಶ ಕಾಲದ ಅನಂತತೆ ಇವನ್ನು ಅತಿ ಉಚ್ಚಭಾಷೆಯಲ್ಲಿ ವಿವರಿಸಿರುವರು. ಆದರೆ ಬೇಗ ಇವರ ಸಹಾಯದಿಂದ ಅನಂತ ಸ್ವರೂಪ ಪ್ರಾಪ್ತವಾಗಲಾರದೆಂಬು ದನ್ನು ಕಂಡುಹಿಡಿದರು. ಅನಂತ ಕಾಲ ದೇಶ ಬಾಹ್ಯ ಪ್ರಕೃತಿ ಇವು ಅವರ ಮನಸ್ಸಿನ ಭಾವವನ್ನು ವ್ಯಕ್ತಗೊಳಿಸಲು ಅಸಾಧ್ಯವಾಯಿತು. ಜಗ ತ್ತಿನ ಸಮಸ್ಯಾಪರಿಹಾರಕ್ಕೆ ಬೇರೆ ಭಾಷೆಗೆ ಕೈ ಹಾಕಬೇಕಾಯಿತು.

ಉಪನಿಷತ್ತಿನ ಭಾಷೆ ಹೊಸ ರೂಪನ್ನು ತಾಳಿತು. ಒಂದು ದೃಷ್ಟಿ ಯಿಂದ ಅದು ನಾಸ್ತಿಭಾವದ್ಯೋತಕವಾಗಿದೆ. ಕೆಲವು ಕಡೆ ಅಸ್ಪಷ್ಟ ವಾಗಿದೆ. ಅತೀಂದ್ರಿಯ ರಾಜ್ಯಕ್ಕೆ ಒಯ್ದು ಅಗ್ರಾಹ್ಯವಾದ ಅಗೋಚರ ವಾದ ಆ ವಸ್ತುವಿನ ಇರವಿನಲ್ಲಿ ಸ್ವಲ್ಪವೂ ಸಂದೇಹವಿಲ್ಲದಂತೆ ಮಾಡು ವುದು. ಪ್ರಪಂಚದಲ್ಲಿ ಮತ್ತಾವ ಭಾಷೆ ಇದಕ್ಕೆ ಸರಿಸಮವಾಗಿರುವುದು !

"ನ ತತ್ರ ಸೂರ್ಯೋ ಭಾತಿ ನ ಚಂದ್ರತಾರಕಂ ।
ನೇಮಾ ವಿದ್ಯುತೋ ಭಾನ್ತಿ ಕುತೋಽಯಮಗ್ನಿಃ ॥"

(ಕಠೋಪನಿಷತ್)

"ಅಲ್ಲಿ ಸೂರ್ಯ ಪ್ರಕಾಶಿಸಲಾರ. ಚಂದ್ರನೂ ಇಲ್ಲ, ತಾರೆಯೂ ಇಲ್ಲ, ಮಿಂಚು ಕೂಡ ಅಲ್ಲಿ ಪ್ರಕಾಶಿಸಲಾರದು. ಸಾಮಾನ್ಯ ಅಗ್ನಿಯ ಪಾಡೇನು.?"

ಪ್ರಪಂಚದಲ್ಲಿ ಸಮಗ್ರ ದಾರ್ಶನಿಕ ಭಾವದ ಸಂಪೂರ್ಣ ಚಿತ್ರ ಮತ್ತೆಲ್ಲಿ ನಿಮಗೆ ದೊರಕುವುದು ? ಹಿಂದೂ ಜನಾಂಗದ ಸಮಗ್ರ ಚಿಂತನೆ ಮಾನವಕೋಟಿಯ ಮೋಕ್ಷಾಕಾಂಕ್ಷೆಯ ಸಮಗ್ರಕಲ್ಪನೆ ಎಂತಹ ಒಂದು ಅದ್ಭುತ ಭಾಷೆಯಲ್ಲಿ ಅಪೂರ್ವ ಭಾಷೆಯಲ್ಲಿ ಭರತಖಂಡದಲ್ಲಿ ವ್ಯಕ್ತವಾಗಿ ದೆಯೊ ಅದಕ್ಕೆ ಸರಿ ಸಮನಾದ ಭಾಷೆಯನ್ನು ಪೃಥ್ವಿಯಲ್ಲಿ ಮತ್ತೆಲ್ಲಿ ನೋಡುವಿರಿ ?

**ದ್ವಾ ಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿ ಷಸ್ವಜಾತೆ। ತಯೋರನ್ಯ ಪಿಪ್ಪಲಂ ಸ್ವಾದ್ವತ್ತ್ಯನಶ್ನನ್ನನ್ಯೋ ಅಭಿಂ ಚಾಕಶೀತಿ ॥**

**ಸಮಾನೆ ವೃಕ್ಷೆ ಪುರುಷೋ ನಿಮಗ್ನೋಽನೀಶಯಾ ಶೋಚತಿ ಮುಹ್ಯಮಾನಃ। ಜುಷ್ಟಂ ಯದಾ ಪಶ್ಯತ್ಯನ್ಯಮೀಶಮಸ್ಯ ಮಹಿಮಾನಮಿತಿ ವೀತಶೋಕಃ। ಯದಾಪಶ್ಯಃ ಪಶ್ಯತೆ ರುಕ್ಮವರ್ಣಂ ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಮ್। ತದಾವಿದ್ವಾನ್ ಪುಣ್ಯಪಾಪೆ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ॥**

**(ಮುಂಡಕ ಉಪನಿಷತ್)**

ಒಂದೇ ಮರದಲ್ಲಿ ಎರಡು ಸುಂದರ ಗರಿಯ ಹಕ್ಕಿಗಳಿವೆ. ಎರಡು ಅನ್ಯೋನ್ಯ ಪ್ರೀತಿಯಿಂದ ಇವೆ. ಒಂದು ಹಣ್ಣನ್ನು ತಿನ್ನುತ್ತಿದೆ. ಮತ್ತೊಂದು ಏನನ್ನೂ ತಿನ್ನದೆ ಶಾಂತವಾಗಿ ಕುಳಿತಿದೆ. ಕೆಳಗಿನ ರೆಂಬೆಯಲ್ಲಿ ಕುಳಿತಿರುವ ಹಕ್ಕಿ ಒಂದು ಸಲ ಕಹಿ ಮತ್ತೊಂದು ಸಲ ಸಿಹಿ ಹಣ್ಣು ತಿಂದು, ಕಷ್ಟ ಸುಖ ಅನುಭವಿಸುತ್ತದೆ. ಮೇಲಿರುವ ಹಕ್ಕಿ ಶಾಂತವಾಗಿ ಗಂಭೀರವಾಗಿದೆ. ಸಿಹಿ ಅಥವಾ ಕಹಿ ಹಣ್ಣನ್ನು ತಿನ್ನುತ್ತಿಲ್ಲ, ಸುಖ ದುಃಖಗಳನ್ನೂ ಲೆಕ್ಕಿಸುವುದಿಲ್ಲ. ತನ್ನ ಸ್ವಯಂಪ್ರಭೆಯಲ್ಲಿ ತಲ್ಲೀನವಾಗಿರುವುದು. ಇದೇ ಮಾನವ ಜೀವಿಯ ಚಿತ್ರ. ಮಾನವ ಜೀವನದ ಕಹಿ ಸಿಹಿಯನ್ನು ತಿನ್ನುತ್ತಿರುವವನು, ಕಾಂಚನ ಇಂದ್ರಿಯಸುಖ ಪ್ರಪಂಚದ ಭೋಗ ಇವನ್ನರಸುತ್ತಾ ಹುಚ್ಚನಂತೆ ಧಾವಿಸುತ್ತಿರುವನು. ಮತ್ತೊಂದು ಕಡೆ ಉಪನಿಷತ್ತು ಜೀವಿಯನ್ನು ರಥಿಗೂ, ಇಂದ್ರಿಯಗಳನ್ನು ನಿಗ್ರಹಿಸದ ಕುದುರೆಗೂ ಹೋಲಿಸುವುದು. ಪ್ರಪಂಚದ ಕೆಲಸಕ್ಕೆ ಬಾರದ ವಸ್ತುಗಳನ್ನು ಅರಸುವವರ ಬಾಳು ಹೀಗೆ. ಮಕ್ಕಳು ಸುಂದರ ಸವಿ ಕನಸುಗಳನ್ನು ಕಲ್ಪಿಸಿಕೊಳ್ಳುತ್ತಿರುವರು. ಕೊನೆಗೆ ಇವೆಲ್ಲಾ ಪುಡಿ ಪುಡಿಯಾಗುವುದನ್ನು ನೋಡುವರು. ಮುದುಕರು ತಮ್ಮ ಹಿಂದಿನ ನೆನಪನ್ನು ಮೆಲಕುಹಾಕುತ್ತಿರುವರು. ಸಂಸಾರ ಜಾಲದಿಂದ ತಪ್ಪಿಸಿಕೊಳ್ಳುವುದಕ್ಕೆ ದಾರಿಯನ್ನು ಕಾಣರು. ಪ್ರಪಂಚದಲ್ಲಿ ಪ್ರತಿಯೊಬ್ಬರ ಜೀವನದಲ್ಲಿ ಒಂದು ಉತ್ತಮ ಕ್ಷಣ ಲಭಿಸುವುದು. ಅತ್ಯಂತ ದಾರುಣ ದುಃಖದಲ್ಲಿರುವಾಗ ಆಗಲೀ ಅಥವಾ ಅತ್ಯಾನಂದದಲ್ಲಿ ತನ್ಮಯರಾಗಿರುವಾಗ ಆಗಲೀ ಸೂರ್ಯನನ್ನು ಕಾಣದಂತೆ ಮಾಡಿದ್ದ ಮೋಡ ಕ್ಷಣ ಕಾಲ ಮಾಯವಾದಂತೆ ತೋರುವುದು. ನಮಗೆ ಇಚ್ಛೆ ಇಲ್ಲದೇ ಇದ್ದರೂ ಅತೀಂದ್ರಿಯ ಸತ್ಯದ ಕ್ಷಣಿಕ ದರ್ಶನ ಲಭಿಸುವುದು. ಅದು ಇಂದ್ರಿಯ ಸುಖವನ್ನು ಮೀರಿ ಹೋಗಿರುವುದು. ಪ್ರಪಂಚದ ವ್ಯರ್ಥ ಆಸೆ ಸುಖ ದುಃಖಗಳನ್ನು ಮೀರಿರುವುದು.

ಪ್ರಕೃತಿಯಾಚೆ ನಮ್ಮ ಇಹ ಮತ್ತು ಪರ ಕಾಲದ ಕಲ್ಪನೆಯನ್ನು ಮೀರಿರುವುದು. ಧನ ಯಶಸ್ಸು ಸಂತಾನ ತೃಷ್ಣೆಯನ್ನು ಮೀರಿರುವುದು. ಆಗ ಮನುಷ್ಯನಿಗೆ ಕ್ಷಣಕಾಲ ದಿವ್ಯ ದೃಷ್ಟಿ ಪ್ರಾಪ್ತವಾಗಿ ಮರದಮೇಲೆ ಸುಖ ದುಃಖಗಳನ್ನು ಭೋಗಿಸದೆ ಶಾಂತವಾಗಿ ಆತ್ಮತೃಪ್ತನಾಗಿ ತನ್ನ ಮಹಿಮೆಯಲ್ಲಿ ತಲ್ಲೀನವಾಗಿರುವ ಹಕ್ಕಿಯನ್ನು ನೋಡುವನು. ಗೀತೆ ಹೇಳುವಂತೆ,

ಯಸ್ತ್ವಾತ್ಮರತಿರೇವ ಸ್ಯಾದಾತ್ಮತೃಪ್ತಶ್ಚಮಾನವಃ ।
ಆತ್ಮನ್ಯೇವ ಚ ಸಂತುಷ್ಟಸ್ತಸ್ಯ ಕಾರ್ಯಂ ನ ವಿದ್ಯತೇ ॥

"ಯಾರು ಆತ್ಮರತಿಯಾಗಿರುವರೋ ಆತ್ಮತೃಪ್ತರಾಗಿರುವರೋ ಆತ್ಮ ಸಂತುಷ್ಟರಾಗಿರುವರೊ ಅವನಿಗೆ ಮಾಡುವ ಕರ್ತವ್ಯ ಯಾವುದಿರುವುದು ?" ಅವನೇಕೆ ಗೊಣಗಾಡಬೇಕು? ಮನುಷ್ಯನಿಗೆ ಅತೀಂದ್ರಿಯಸತ್ಯದ ಕ್ಷಣಿಕ ನೋಟ ದೊರಕುವುದು. ಪುನಃ ಮರೆಯುವನು. ಜೀವನ ವೃಕ್ಷವ ಕಹಿ ಸಿಹಿ ಹಣ್ಣನ್ನು ತಿನ್ನುತ್ತಾ ಹೋಗುವನು. ಕೆಲವು ಕಾಲವಾದಮೇಲೆ ಪುನಃ ಕ್ಷಣಿಕ ನೋಟವೊಂದು ಲಭಿಸುವುದು. ಕೆಳಗಿರುವ ಹಕ್ಕಿ ಪೆಟ್ಟು ತಿಂದಂತೆಲ್ಲಾ ಮೇಲೆ ಮೇಲಕ್ಕೆ ಹೋಗುವುದು. ಇನ್ನು ಹೆಚ್ಚು ಪೆಟ್ಟು ಬೀಳುವ ಅದೃಷ್ಟವಿದ್ದರೆ ಮೇಲಿರುವ ತನ್ನ ಪ್ರಾಣದಂತಿರುವ ಗೆಳೆಯನ ಹತ್ತಿರ ಹೋಗುವುದು. ಅದನ್ನು ಸಮೀಪಿಸಿದಂತೆಲ್ಲ ಅದರ ಕಾಂತಿ ತನ್ನ ಮೇಲೆ ಬೀಳುತ್ತಿರುವುದು ಕಾಣುವುದು. ಕೆಳಗಿನ ಹಕ್ಕಿ ಮೇಲಿನದನ್ನು ಸಮೀಪಿಸಿದಂತೆಲ್ಲ ಬದಲಾಯಿಸುತ್ತಾ ಬರುವುದು. ಅದು ಹತ್ತಿರ ಹತ್ತಿರ ಬಂದಂತೆಲ್ಲ ಮಾಯವಾದಂತೆ ತೋರಿ ಕೊನೆಗೆ ಒಂದೇ ಹಕ್ಕಿ ಉಳಿಯುವುದು. ಅದು ನಿಜವಾಗಿಯೂ ಇರಲಿಲ್ಲ. ಅಲ್ಲಾಡುವ ಎಲೆಗಳ ಮಧ್ಯದಲ್ಲಿ ಶಾಂತವಾಗಿ ಗಂಭೀರವಾಗಿದ್ದ ಹಕ್ಕಿಯ ಪ್ರತಿಬಿಂಬದಂತೆ ಮಾತ್ರ ಇತ್ತು ಎರಡನೇ ಹಕ್ಕಿ. ಇದೆಲ್ಲ ಆ ಮೇಲಿರುವ ಹಕ್ಕಿಯ ಮಹಿಮೆ. ಆತ್ಮತೃಪ್ತನಾಗಿ ಶಾಂತವಾಗಿ ಅಂಜಿಕೆ ಇಲ್ಲದೆ ಇರುವುದು. ಈ ಉಪಮಾನದಲ್ಲಿ ಉಪನಿಷತ್ತು ನಮ್ಮನ್ನು ದ್ವೈತ ಸಿದ್ಧಾಂತವಾದದಿಂದ ಅದ್ವೈತಕ್ಕೆ ಒಯ್ಯುವುದು.

ಹಲವು ಉದಾಹರಣೆಗಳನ್ನು ಕೊಡಬಹುದು. ಉಪನಿಷತ್ತಿನ ಅಪೂರ್ವ ಕವಿತ್ವ ಮಹತ್ವದ ಚಿತ್ರ ಮಹೋಚ್ಚ ಭಾವಸಮೂಹ ಇವನ್ನು ವಿವರಿಸಲು ಸಮಯವಿಲ್ಲ. ನಾನು ನಿಮಗೆ ಮತ್ತೊಂದನ್ನು ಹೇಳಬೇಕು. ಅಲ್ಲಿಯ ಭಾಷೆ ಭಾವನೆ ನೇರವಾಗಿ ಸರಳವಾಗಿ ಹರಿದು ಬರುವುದು.

ಸುತ್ತಿಗೆಯ ಪೆಟ್ಟಿನಂತೆ ಬೀಳುವುದು. ಹಿರಿದ ಅಲಗಿನಂತೆ ಬೀಳುವುದು. ಅದರ ಅರ್ಥವನ್ನು ತಿಳಿದುಕೊಳ್ಳಲು ಕಷ್ಟವಿಲ್ಲ. ಅದರ ಸಂಗೀತದ ಪ್ರತ್ಯೇಕ ಸ್ವರದಲ್ಲಿಯೂ ಶಕ್ತಿ ಇರುವುದು. ಪೂರ್ಣ ಪ್ರಭಾವವನ್ನು ನಮ್ಮ ಮೇಲೆ ಬೀರುವುದು. ಅಲ್ಲಿ ಯಾವ ವಿಧ ಅಸ್ಪಷ್ಟತೆಯೂ ಇಲ್ಲ. ಒಂದು ಅಸಂಭವ ಭಾವನೆಯೂ ಇಲ್ಲ. ಒಂದು ಜಟಿಲ ವಾಕ್ಯವಿಲ್ಲ. ಅವನತಿಯ ಚಿಹ್ನೆ ಇಲ್ಲ. ಉಪಮಾನದ ಹೊರೆ ಇಲ್ಲ. ಗುಣವಾಚಕಗಳ ಹೊರೆ ಹೇರಿ ಸಮಸ್ಯೆಯನ್ನು ಮತ್ತೂ ಜಟಿಲಮಾಡಿ ತಲೆ ಕೆಡಿಸಿಕೊಂಡು ಪಾರಾಗುವುದಕ್ಕೆ ಅವಕಾಶವೇ ಇಲ್ಲದಹಾಗೆ ಇಲ್ಲ. ಇಂತಹ ಚಿಹ್ನೆ ಅಲ್ಲಿ ಯಾವದೂ ಇರಲಿಲ್ಲ. ಇದು ಮಾನವ ಸಾಹಿತ್ಯವಾಗಿದ್ದರೆ ಜನಾಂಗ ತನ್ನ ತೇಜಸ್ಸಿನ ವೀರ್ಯವನ್ನು ಕಳೆದುಕೊಳ್ಳುವುದಕ್ಕಿಂತ ಮುಂಚೆ ಇದನ್ನು ಸೃಷ್ಟಿಸಿರಬೇಕು.

ಪ್ರತಿಯೊಂದು ಮಂತ್ರದಲ್ಲಿಯೂ ಉಪನಿಷತ್ ಶಕ್ತಿ ಶಕ್ತಿ ಎಂದು ಸಾರುವುದು. ನಾವು ಜ್ಞಾಪಕದಲ್ಲಿಡಬೇಕಾದ ಒಂದು ಮಹಾವಿಷಯ ಇದು. ನನ್ನ ಜೀವನದಲ್ಲಿ ಕಲಿತ ಒಂದು ಮಹಾನೀತಿ ಇದು. ಹೇ ಮಾನವ ಶಕ್ತಿ, ಶಕ್ತಿ, ದುರ್ಬಲನಾಗಬೇಡ ಎನ್ನುವುದು. ಮಾನವಸಹಜ ದುರ್ಬಲತೆ ಇಲ್ಲವೆ ಎನ್ನುವನು ಮಾನವ? ಇದೆ ಎನ್ನುವುದು ಉಪನಿಷತ್. ಆದರೆ ದುರ್ಬಲತೆ ಅದನ್ನು ಗುಣಪಡಿಸಬಲ್ಲದೆ. ಕೊಳೆಯಿಂದ ಕೊಳೆಯನ್ನು ಒರಿಸಬಲ್ಲಿರ? ಹೇ ಮಾನವ, ಶಕ್ತಿವಂತನಾಗು ಎನ್ನುವುದು ಉಪನಿಷತ್ತು. ಎದ್ದು ನಿಲ್ಲು, ಧೀರನಾಗು. ವಿಶ್ವಸಾಹಿತ್ಯದಲ್ಲಿ ಇದೊಂದು ಮಾತ್ರ ಅಭೀಃ, ಅಭೀಃ, ಎಂದು ಪುನಃ ಪುನಃ ಸಾರುವುದು. ಪ್ರಪಂಚದ ಮತ್ತಾವ ಸಾಹಿತ್ಯದಲ್ಲಿಯೂ ಇದನ್ನು ಮಾನವನಿಗಾಗಲೀ ದೇವರಿಗಾಗಲಿ ಉಪಯೋಗಿಸಿಲ್ಲ. ನನ್ನ ಮನಸ್ಸಿನಲ್ಲಿ ಕಳೆದ ಕಾಲದ ಪಾಶ್ಚಾತ್ಯ ಚಕ್ರವರ್ತಿ ಅಲೆಗ್ಸಾಂಡರಿನ ಚಿತ್ರ ಮನಸ್ಸಿಗೆ ಬರುವುದು. ಅವನು ಸಿಂಧೂ ನದಿಯ ತೀರದ ಕಾಡಿನಲ್ಲಿ ನಮ್ಮ ದೇಶದ ಸನ್ಯಾಸಿಯೊಬ್ಬರೊಂದಿಗೆ ಮಾತನಾಡುವುದು ಜ್ಞಾಪಕಕ್ಕೆ ಬರುವುದು. ಅವನು ಮಾತನಾಡುತ್ತಿದ್ದ ವೃದ್ಧ ಬಹುಶಃ ನಗ್ನನಾಗಿ ಕಲ್ಲು ಬಂಡೆಯೊಂದರಮೇಲೆ ಕುಳಿತಿದ್ದನು. ಅಲೆಗ್ಸಾಂಡರ್ ಅವನ ಜ್ಞಾನಕ್ಕೆ ವಿಸ್ಮಿತನಾಗಿ "ಗ್ರೀಕ್ ದೇಶಕ್ಕೆ ಬಾ" ಎಂದು ಕೀರ್ತಿ ಹಣದ ಆಸೆಯನ್ನು ತೋರುವನು. ಈತ ಆತನ ಹೊನ್ನಿಗೆ ನಗುವನು. ಬೀಸುವ ಪ್ರಲೋಭನೆ ನೋಡಿ ನಗುವನು. ಎಲ್ಲವನ್ನೂ ನಿರಾಕರಿಸುವನು. ಚಕ್ರವರ್ತಿ ತನ್ನ

ಅಧಿಕಾರದ ಮೇಲೆ ನಿಂತು ದರ್ಪದಿಂದ, "ನೀನು ಬರದೇ ಇದ್ದರೆ ನಿನ್ನನ್ನು ಕೊಲ್ಲುತ್ತೇನೆ" ಎನ್ನುವನು. ಆಗ ಸನ್ಯಾಸಿ ನಕ್ಕು "ಈಗ ನೀನು ಹೇಳಿ ದಂತಹ ಸುಳ್ಳನ್ನು ಜೀವನದಲ್ಲಿ ಎಂದೂ ಹೇಳಿಲ್ಲ. ಬಾಹ್ಯ ಪ್ರಪಂಚದ ಚಕ್ರವರ್ತಿಯಾದ ನೀನು ನನ್ನನ್ನೂ ಕೊಲ್ಲುವೆಯಾ? ಎಂದಿಗೂ ಇಲ್ಲ! ಎಂದಿಗೂ ಹುಟ್ಟದ ನಾಶವಾಗದ ಆತ್ಮ ನಾನು. ನನಗೆ ಜನನ, ಮರಣ ಗಳಿಲ್ಲ, ನಾನು ಅನಂತ, ಸರ್ವವ್ಯಾಪಿ, ಸರ್ವಜ್ಞ. ನೀನು ಹಸುಳೆ. ನನ್ನನ್ನು ಕೊಲ್ಲುವೆಯಾ!" ಎಂದನು. ಅದು ಶಕ್ತಿ! ಅದು ಶಕ್ತಿ! ನನ್ನ ಸ್ನೇಹಿತರೆ, ದೇಶಬಾಂಧವರೆ, ನಾನು ಹೆಚ್ಚು ಉಪನಿಷತ್ತನ್ನು ಓದಿದಂತೆಲ್ಲಾ ನಿಮಗಾಗಿ ಮರುಗುವೆನು. ಅಲ್ಲಿ ಅನುಷ್ಠಾನ ಯೋಗ್ಯ ಸತ್ಯವಿದೆ. ಶಕ್ತಿ ಶಕ್ತಿಬೇಕು ನಮಗೆ. ನಮಗೆ ಬೇಕಾಗಿರುವುದು ಶಕ್ತಿ. ಯಾರು ನಮಗೆ ಅದನ್ನು ನೀಡಬಲ್ಲರು? ನಮ್ಮನ್ನು ದುರ್ಬಲರನ್ನಾಗಿ ಮಾಡುವುದಕ್ಕೆ ಎಷ್ಟೋ ಮಂದಿ ಇರುವರು, ಎಷ್ಟೋ ಕಂತೆ ಪುರಾಣಗಳಿವೆ. ಪ್ರತಿಯೊಂದು ಪುರಾಣವನ್ನು ನಾವು ಹುಡುಕಿದರೆ ಪ್ರಪಂಚದ ಮುಕ್ಕಾಲು ಪುಸ್ತಕಭಂಡಾರವನ್ನು ಹಿಡಿಸು ವಷ್ಟು ಕಥೆ ದೊರಕುವುದು. ಕಳೆದ ಒಂದು ಸಾವಿರ ವರ್ಷಗಳಿಂದ ನಮ್ಮ ಜನಾಂಗವನ್ನು ದುರ್ಬಲರನ್ನಾಗಿ ಮಾಡುವುದನ್ನೆಲ್ಲ ನಾವು ಪಡೆದಿರುವೆವು. ಆ ಸಮಯದಲ್ಲಿ ನಮ್ಮ ಜನಾಂಗದ ಗುರಿ ಇದೊಂದು ಮಾತ್ರ ಆಗಿತ್ತು. ಅದೇ ನಮ್ಮನ್ನು ಹೆಚ್ಚು ಹೆಚ್ಚು ದುರ್ಬಲರನ್ನಾಗಿ ಮಾಡಿ, ನಮ್ಮನ್ನು ತುಳಿಯಲು ಬರುವವರ ಪದತಳದಲ್ಲಿ ಹರಿದಾಡುವ ಎರೆ ಹುಳದಂತೆ ಮಾಡುವುದು. ಅದಕ್ಕೇ ನನ್ನ ಸ್ನೇಹಿತರೆ, ಸಹೋದರರ, ನಿಮ್ಮೊಂದಿಗೆ ಬಾಳಿ ಅಳಿಯುವ ಒಬ್ಬನಂತೆ ನಿಮಗೆ ಹೇಳುತ್ತೇನೆ. ನಮಗೆ ಬೇಕಾಗಿರು ವುದು ಶಕ್ತಿ, ಶಕ್ತಿ, ಪ್ರತಿಸಲಿಯೂ ಶಕ್ತಿ. ಉಪನಿಷತ್ತು ಶಕ್ತಿಯ ಮಹಾ ಗಣಿ. ಪ್ರಪಂಚವನ್ನೆಲ್ಲ ಜಾಗ್ರತಗೊಳಿಸುವಷ್ಟು ಶಕ್ತಿ ಅಲ್ಲಿದೆ. ಪ್ರಪಂಚಕ್ಕೆ ಅದರ ಮೂಲಕ ಜೀವದಾನ ಮಾಡಬಹುದು, ಶಕ್ತಿ ನೀಡಬಹುದು, ಸ್ಫೂರ್ತಿ ನೀಡಬಹುದು. ಪ್ರಪಂಚಕ್ಕೆ ಸೇರಿದ ಎಲ್ಲ ದೇಶದ ಕೋಮಿನ ದುರ್ಬಲರು ದುಃಖಿಗಳು ದಬ್ಬಾಳಿಕೆಗೆ ತುತ್ತಾದವರಿಗೆ ತಮ್ಮ ಕಾಲ ಮೇಲೆ ನಿಂತು ಮುಕ್ತರಾಗಿ ಎನ್ನುವುದು. ದೈಹಿಕಸ್ವಾತಂತ್ರ್ಯ ಮಾನಸಿಕ ಸ್ವಾತಂತ್ರ್ಯ ಆಧ್ಯಾತ್ಮಿಕಸ್ವಾತಂತ್ರ್ಯವೇ ಉಪನಿಷತ್ತಿನ ಮೂಲಮಂತ್ರ.

ಇದೊಂದೇ ಶಾಸ್ತ್ರ ಪ್ರಪಂಚದಲ್ಲಿ ಮುಕ್ತಿಯನ್ನು ಕುರಿತು ಹೇಳುವು ದಿಲ್ಲ, ಸ್ವಾತಂತ್ರ್ಯವನ್ನು ಮಾತ್ರಹೇಳುವುದು. ಪ್ರಕೃತಿ ಬಂಧನದಿಂದ

ಪಾರಾಗಿ, ದುರ್ಬಲತೆ ಇಂದ ಪಾರಾಗಿ, ಈ ಸ್ವಾತಂತ್ರ್ಯ ಆಗಲೇ ನಿಮ್ಮಲ್ಲಿದೆ ಎಂದು ತೋರುವುದು. ಉಪನಿಷತ್ತಿನ ಸಂದೇಶದ ವೈಶಿಷ್ಟ್ಯತೆ ಇದು. ದ್ವೈತಿ ಯಾಗಿರಬಹುದು, ಚಿಂತೆಇಲ್ಲ, ಆದರೆ ಆತ್ಮ ಸ್ವಭಾವತಃ ಪರಿಪೂರ್ಣ ವೆಂದು ಒಪ್ಪಲೇಬೇಕು. ಜೀವನ ಕೆಲವು ಕ್ರಿಯೆಯಿಂದ ಸಂಕುಚಿತ ವಾಗುವುದು. ರಾಮಾನುಜಾಚಾರ್ಯರ ಸಂಕೋಚ ವಿಕಾಸವಾದ ಆಧು ನಿಕ ವಿಕಾಸವಾದ ಮತ್ತು ಕ್ರಮ ಸಂಕೋಚವಾದದಂತೆ ( Atavism ) ಇದೆ. ಜೀವ ಹಿಂದಿರುಗಿ ಸಂಕೋಚವಾಗುವುದು. ಅದರ ಶಕ್ತಿ ಸುಪ್ತವಾಗು ವುದು. ಪುನಃ ಒಳ್ಳೆಯ ಕರ್ಮ ಮತ್ತು ಒಳ್ಳೆಯ ಆಲೋಚನೆ ಯಿಂದ ವಿಕಾಸವಾಗಿ ಸ್ವಭಾವತಃ ತನ್ನ ಪರಿಪೂರ್ಣತೆಯನ್ನು ಪ್ರಕಾಶ ಗೊಳಿಸುವುದು. ಅದ್ವೈತಿಗಳ ಒಂದು ವ್ಯತ್ಯಾಸವೆ ಅವರು ಪ್ರಕೃತಿಯಲ್ಲಿ ಮಾತ್ರ ವಿಕಾಸವನ್ನು ಒಪ್ಪುವರು, ಆತ್ಮನಲ್ಲಿ ಅಲ್ಲ. ಎದುರಿಗೆ ಒಂದು ತೆರೆ ಇದೆ. ಅದರಲ್ಲಿ ಒಂದು ಸಣ್ಣ ರಂಧ್ರವಿದೆ ಎಂದು ತಿಳಿದುಕೊಳ್ಳೋಣ. ನಾನು ತೆರೆಯ ಹಿಂದೆ ನಿಂತುಕೊಂಡು ರಂಧ್ರದ ಮೂಲಕ ಜನಸಂದಣಿ ನೋಡು ತ್ತಿರುವೆನು. ನನಗೆ ಕೆಲವರ ಮುಖಮಾತ್ರ ಕಾಣುವುದು. ರಂಧ್ರ ದೊಡ್ಡ ದಾಗುತ್ತಾ ತೆರೆಯಷ್ಟೇ ಆದರೆ ಜನ ಸಂದಣಿಯೆಲ್ಲಾ ಕಾಣುವುದು. ಆಗ ನನಗೂ ನಿನಗೂ ಮಧ್ಯ ಏನೂ ಇರುವುದಿಲ್ಲ. ನೀನು ಬದಲಾಯಿಸಲಿಲ್ಲ ನಾನು ಬದಲಾಯಿಸಲಿಲ್ಲ. ಬದಲಾವಣೆಯೆಲ್ಲ ತೆರೆಯಲ್ಲಿತ್ತು. ನೀನು ಮೊದಲಿನಿಂದ ಕೊನೆಯವರೆಗೂ ಹಾಗೆಯೇ ಇದ್ದಿ. ತೆರೆ ಮಾತ್ರ ಬದಲಾ ಯಿಸಿತು. ಪ್ರಕೃತಿಯ ವಿಕಾಸ ಆತ್ಮನ ಪ್ರಕಾಶದ ಬಗ್ಗೆ ಅದ್ವೈತಿಯ ಅಭಿಪ್ರಾಯವಿದು. ಆತ್ಮ ಯಾವ ಕಾರಣದಿಂದಲೂ ಸಂಕೋಚ ವಾಗುವುದಿಲ್ಲ. ಅದು ಬದಲಾಯಿಸುವುದಿಲ್ಲ. ಅನಂತ ಮಾಯಾ ತೆರೆಯಿಂದ ಆವೃತವಾದಂತೆ ಇತ್ತು. ಆ ತೆರೆ ಬರು ಬರುತ್ತಾ ತೆಳು ವಾಗುತ್ತಾ ಬಂತು. ಆತ್ಮನ ಸ್ವಭಾವಸಿದ್ಧ ಮಹಿಮೆ ಹೆಚ್ಚು ಹೆಚ್ಚು ವ್ಯಕ್ತವಾಗುತ್ತಾ ಬಂತು. ಪ್ರಪಂಚ ಭರತಖಂಡದಿಂದ ಕಲಿಯ ಬೇಕಾದ ಒಂದು ಮಹಾ ಸಿದ್ಧಾಂತ ಇದು. ಇತರರು ಏನಾದರೂ ಮಾತನಾಡಲಿ, ಜಂಭ ಕೊಚ್ಚಿಕೊಳ್ಳಲಿ. ಯಾವ ಸಮಾಜವೂ ಇದನ್ನು ಒಪ್ಪಿಕೊಳ್ಳದೆ ಇರಲು ಸಾಧ್ಯವಿಲ್ಲವೆಂದು ಕ್ರಮೇಣ ತಿಳಿಯುವರು. ಈಗ ಎಲ್ಲಾ ಕ್ಷೇತ್ರದಲ್ಲಿಯೂ ಎಂತಹ ಮಹತ್ತರ ಬದಲಾವಣೆ ಆಗಿದೆ, ಗೊತ್ತಿಲ್ಲವೆ ? ಪ್ರತಿಯೊಂದನ್ನೂ ಅದು ಒಳ್ಳೆಯದೆಂದು ಗೊತ್ತಾಗು

ವವರಿಗೆ ಅದು ಕೆಟ್ಟದ್ದು ಎಂದು ತಿಳಿಸುವುದು ರೂಢಿಯಾಗಿದ್ದುದು ಗೊತ್ತಿಲ್ಲವೆ? ವಿದ್ಯಾಭ್ಯಾಸದಲ್ಲಿ, ಅಪರಾಧಿಯನ್ನು ಶಿಕ್ಷಿಸುವುದರಲ್ಲಿ, ಹುಚ್ಚರು ಮತ್ತು ರೋಗಿಗಳಿಗೆ ಚಿಕಿತ್ಸೆಮಾಡುವುದರಲ್ಲಿ, ಇದೇ ನಿಯಮವನ್ನು ಅನುಸರಿಸುತ್ತಿದ್ದರು. ಆಧುನಿಕ ನಿಯಮವೇನು? ಆಧುನಿಕ ನಿಯಮ ದೇಹ ಸ್ವಭಾವತಃ ಆರೋಗ್ಯವಾಗಿರುವುದು. ಅದು ತಾನೇ ರೋಗ ಪರಿಹರಿಸುವುದು ಎಂದು ಸಾರುವುದು. ಔಷಧಿ ದೇಹದ ಶಕ್ತಿಯನ್ನು ಸಂರಕ್ಷಿಸುವುದು ಅಷ್ಟೇ. ಅಪರಾಧಿಗಳನ್ನು ಕುರಿತು ಅದು ಏನು ಹೇಳುವುದು. ಮನುಷ್ಯ ಎಂತಹ ಕ್ರೂರಿಯಾಗಿರಲಿ ಅವನ ಅಂತರಾಳದಲ್ಲಿ ಎಂದಿಗೂ ಬದಲಾಯಿಸದ ದೇವತ್ವವಿದೆ. ನಾವು ತಪ್ಪುಮಾಡಿದವರನ್ನು ಈ ರೀತಿ ಭಾವಿಸಬೇಕು. ಇವುಗಳೆಲ್ಲಾ ಈಗ ಬದಲಾಯಿಸುತ್ತಿವೆ. ಪರಿವರ್ತನಾಲಯ (Reformatory) ಪಶ್ಚಾತ್ತಾಪಾಲಯ (Penitentiary) ಇವನ್ನು ತೆರೆಯುತ್ತಿರುವರು. ಇದರಂತೆಯೇ ಪ್ರತಿಯೊಂದು ಕ್ಷೇತ್ರದಲ್ಲಿ ಕೂಡ ಪರಿವರ್ತನೆ ಆಗಿವೆ. ಪ್ರತಿ ಜೀವರಲ್ಲಿರುವ ದೈವತ್ವದ ಭಾರತೀಯ ಭಾವನೆ ತಿಳಿದೊ ತಿಳಿಯದೆಯೊ ಪ್ರಪಂಚದ ಇತರ ಕಡೆಗಳಲ್ಲಿ ವ್ಯಕ್ತವಾಗುತ್ತಿದೆ. ಇದಕ್ಕೆ ಶಾಸ್ತ್ರದಲ್ಲಿ ಪ್ರಮಾಣ ದೊರಕುವುದು. ಇತರರು ಅದನ್ನು ಒಪ್ಪಬೇಕಾಗುವುದು. ಒಬ್ಬರು ಮತ್ತೊಬ್ಬರನ್ನು ನೋಡುವ ರೀತಿಯೇ ಬದಲಾಯಿಸುವುದು. ಯಾವಾಗಲೂ ಮನುಷ್ಯನ ದುರ್ಬಲತೆಯನ್ನೇ ತೋರುವ ಹಳೆಯ ಭಾವನೆ ತೊಲಗಬೇಕು. ಈ ಶತಮಾನದಲ್ಲಿ ಅವುಗಳೆಲ್ಲ ನಾಶವಾಗಬೇಕು. ಈಗ ಜನ ನಮ್ಮನ್ನು ಟೀಕಿಸಬಹುದು. ಪಾಪವೇ ಇಲ್ಲ ಎಂಬ ರಾಕ್ಷಸೀ ಭಾವನೆಯನ್ನು ಬೋಧಿಸುತ್ತಿರುವನು ಎಂದು ಪ್ರಪಂಚದವರೆಲ್ಲ ನನ್ನನ್ನೂ ದೂರುತ್ತಿರುವರು. ಒಳ್ಳೆಯದು, ಮುಂದೆ ಅವರ ವಂಶಜರೇ ನಾನು ಅಧರ್ಮವನ್ನು ಬೋಧಿಸಿದವನಲ್ಲ, ಧರ್ಮವನ್ನು ಬೋಧಿಸಿದವನು ಎಂದು ನನ್ನನ್ನು ಆಶೀರ್ವದಿಸುವರು. ನಾನು ಧರ್ಮಬೋಧಕ, ಅಧರ್ಮಬೋಧಕನಲ್ಲ. ನಾನು ಅಜ್ಞಾನಬೋಧಕನಲ್ಲ, ಜ್ಞಾನಬೋಧಕನೆಂದು ಹೆಮ್ಮೆಪಡುತ್ತೇನೆ.

ನಮ್ಮ ಉಪನಿಷತ್ತಿನಿಂದ ಪ್ರಪಂಚ ನಿರೀಕ್ಷಿಸುತ್ತಿರುವ ಎರಡನೆ ಮಹಾ ಭಾವನೆಯೆ ವಿಶ್ವದ ಅಖಂಡತ್ವ. ಪ್ರಾಚೀನಕಾಲದ ವ್ಯತ್ಯಾಸ ಮತ್ತು ಮೇರೆ ಬೇಗ ಮಾಯವಾಗುತ್ತಿದೆ. ಪ್ರಪಂಚದ ಬೇರೆ ಬೇರೆ ಭಾಗಗಳಿಗೆ ವಿದ್ಯುತ್ ಮತ್ತು ಉಗಿಯ ಶಕ್ತಿ ಸಂಬಂಧವನ್ನು ಏರ್ಪಡಿಸುತ್ತಿದೆ. ಇದರ

ಪರಿಣಾಮವಾಗಿ ಪ್ರಪಂಚದ ಬೇರೆ ಕಡೆ ರಾಕ್ಷಸರು ಭೂತಪ್ರೇತಗಳಿವೆ ಎಂದು ಹಿಂದುಗಳು ಹೇಳುವುದಿಲ್ಲ. ಅಥವಾ ಕ್ರೈಸ್ತರು ಇಂಡಿಯಾ ದೇಶದವರೆಲ್ಲಾ ನರಮಾಂಸ ಭಕ್ಷಕರು ಕಾಡು ಜನರು ಎಂದು ಹೇಳುವುದಿಲ್ಲ. ನಮ್ಮ ದೇಶದಿಂದ ಹೊರಗೆ ಹೋದರೆ ಅಲ್ಲೂ ನಮ್ಮ ಸಹೋದರ ಮಾನವನನ್ನೇ ನೋಡುನೆನು. ಅಲ್ಲಿಯೂ ನಮ್ಮ ಸಹಾಯಕ್ಕೆ ಅನುಕಂಪ ಹೃದಯ ಕಾದಿದೆ. ನಮಗೆ ಮಂಗಳ ಕೋರುವರು. ಕೆಲವು ವೇಳೆ ನಮ್ಮ ದೇಶದವರಿಗಿಂತ ಅವರು ಒಳ್ಳೆಯವರು. ಅವರು ಇಲ್ಲಿಗೆ ಬಂದರೆ ಅದೇ ಸಹೋದರತ್ವ ಪ್ರೋತ್ಸಾಹ ಆಶೀರ್ವಾದ ಕಾದಿವೆ. ನಮ್ಮ ದುಃಖಕ್ಕೆ ಕಾರಣ ಅಜ್ಞಾನವೆಂದು ಉಪನಿಷತ್ತು ಸಾರುವುದು. ಅದು ಸಾಮಾಜಿಕನಾಗಲಿ ಆಧ್ಯಾತ್ಮಿಕವಾಗಲಿ ಯಾವ ಕ್ಷೇತ್ರಕ್ಕೆ ಹೋಲಿಸಿದರೂ ಸತ್ಯ. ಒಬ್ಬರು ಮತ್ತೊಬ್ಬರನ್ನು ದ್ವೇಷಿಸುವಂತೆ ಮಾಡುವುದು ಅಜ್ಞಾನ. ಅಜ್ಞಾನದಿಂದ ನಾವು ಮತ್ತೊಬ್ಬರನ್ನು ತಿಳಿಯಲಾರೆವು. ನಾವು ಮತ್ತೊಬ್ಬರನ್ನು ಪ್ರೀತಿಸಲಾರೆವು. ಪರಸ್ಪರ ಪರಿಚಯಃವಾದಮೇಲೆ ಪ್ರೀತಿ ಉದಿಸುವುದು. ಅದು ಬರಬೇಕು. ಏಕೆಂದರೆ ನಾವೆಲ್ಲ ಒಂದೇ ಅಲ್ಲವೆ? ಅಖಂಡತ್ವ ತಾನಾಗಿಯೆ ಬರುವುದನ್ನು ನಾವು ಕಾಣುವೆವು. ಸಾಮಾಜಿಕ ರಾಜಕೀಯ ಕ್ಷೇತ್ರಗಳಲ್ಲಿಯೂ ಇಪ್ಪತ್ತು ವರ್ಷದ ಹಿಂದೆ ಕೇವಲ ಒಂದು ದೇಶದ ಸಮಸ್ಯೆಯಾಗಿದ್ದುದನ್ನು ಈಗ ಕೇವಲ ಆ ದೃಷ್ಟಿಯಿಂದ ಬಗೆಹರಿಸಲಾಗುವುದಿಲ್ಲ. ಅವು ಮಹತ್ತಾಗುತ್ತಿರುವುವು. ಭೀಮಾಕಾರವನ್ನು ತಾಳುತ್ತಿದೆ. ಅವನ್ನು ಇಡೀ ವಿಶ್ವದ ದೃಷ್ಟಿಯಿಂದ ಮಾತ್ರ ಪರಿಹರಿಸಬಹುದು. ವಿಶ್ವಸಂಸ್ಥೆ ವಿಶ್ವಯೋಜನೆ ವಿಶ್ವಕಾನೂನು ಇವು ತತ್ಕಾಲಕ್ಕೆ ಅವಶ್ಯಕವಾಗಿವೆ. ಇವು ನಮ್ಮ ಅಖಂಡತ್ವವನ್ನು ತೋರುವುವು. ವಿಜ್ಞಾನದಲ್ಲಿಯೂ ಪ್ರತಿದಿನವೂ ಜಡ ತತ್ತ್ವದ ಸಂಬಂಧದಲ್ಲಿ ವಿಶಾಲವಾದ ಭಾವವನ್ನು ಅವರು ಕಂಡು ಹಿಡಿಯುತ್ತಿರುವರು. ಪ್ರಪಂಚವೆಲ್ಲ ಒಂದು ರಾಶಿ ಜಡ ವಸ್ತುವಿನ ಮಹಾ ಸಾಗರ ಒಂದು ದ್ರವ್ಯ ( Matter ) ಎಂದು ಹೇಳಬಹುದು. ಅಲ್ಲಿ ನಾನು ನೀವು ಸೂರ್ಯ ಚಂದ್ರರೆಲ್ಲ ಹಲವು ಸುಳಿಯ ಹೆಸರಲ್ಲದೆ ಬೇರಲ್ಲ. ಮಾನಸಿಕ ದೃಷ್ಟಿಯಿಂದ ನೋಡಿದರೆ ಇದೊಂದು ಆಲೋಚನೆಯ ಮಹಾಸಾಗರ. ಅದರಲ್ಲಿ ನಾನು ನೀವುಗಳೆಲ್ಲ ವೀಚಿಗಳು. ಆಧ್ಯಾತ್ಮಿಕ ದೃಷ್ಟಿಯಿಂದ ನೋಡಿದರೆ ಅದು ಅಚಲವಾದುದು. ಬದಲಾಯಿಸುವುದಿಲ್ಲ. ಇದು ಏಕವಾಗಿ ಬದಲಾಯಿಸದೆ ಅಖಂಡವಾಗಿ ಒಂದೇ ಸಮನಾಗಿರುವುದು.

ನೀತಿಯ ಆವಶ್ಯಕತೆಯನ್ನು ತರುವವರು ಅದಕ್ಕೆ ಪ್ರಮಾಣವನ್ನು ನಮ್ಮ ಶಾಸ್ತ್ರದಲ್ಲಿ ನೋಡಬಹುದು. ನೀತಿಯ ವಿವರಣೆ, ಅದರ ಮೂಲ, ಪ್ರಪಂಚಕ್ಕೆ ಬೇಕಾಗಿದೆ. ಇದೂ ಕೂಡ ಶಾಸ್ತ್ರದಲ್ಲಿ ದೊರಕುವುದು. ಭರತ ಖಂಡದಲ್ಲಿ ಇರುವವರಿಗೆ ಏನು ಬೇಕಾಗಿದೆ? ಹೊರಗಿನವರಿಗೆ ಇದು ಆವಶ್ಯಕ ವಾಗಿದ್ದರೆ ನಮಗೆ ಅದಕ್ಕೆ ಇಪ್ಪತ್ತರಷ್ಟು ಆವಶ್ಯಕವಿದೆ. ಉಪನಿಷತ್ತು ಮಹಾ ಗ್ರಂಥವಾದರೂ ನಮ್ಮ ಪೂರ್ವಿಕರು ಕೀರ್ತಿಶ್ರೇಷ್ಠರಾದ ಮಹಾ ಋಷಿಗಳಾಗಿದ್ದರೂ, ಇತರ ಜನಾಂಗದೊಂದಿಗೆ ಹೋಲಿಸಿದರೆ ನಾವು ದುರ್ಬಲರು. ಅತಿ ದುರ್ಬಲರಾಗಿರುವೆವು. ಮೊದಲು ನಮ್ಮ ಶಾರೀರಕ ದುರ್ಬಲತೆ. ಆ ಶಾರೀರಕ ದುರ್ಬಲತೆಯೇ ನಮ್ಮ ಕಷ್ಟದ ಮೂರನೇ ಒಂದು ಪಾಲಿಗಾದರೂ ಕಾರಣ. ನಾವು ಶುದ್ಧ ಸೋಮಾರಿಗಳು, ಕೆಲಸ ಮಾಡುವುದಿಲ್ಲ. ನಮ್ಮಲ್ಲಿ ಐಕಮತ್ಯವಿಲ್ಲ. ಅನ್ಯರನ್ನು ಪ್ರೀತಿಸುವುದಿಲ್ಲ. ನಾವು ಬರೀ ಸ್ವಾರ್ಥಿಗಳು. ಮತ್ತೊಬ್ಬರನ್ನು ದ್ವೇಷಿಸದೆ ಅಸೂಯೆ ಪಡದೆ ಮೂರು ಜನ ಕೂಡ ಒಟ್ಟಿಗೆ ಕಲೆಯಲಾರೆವು. ಇದೇ ನಮ್ಮ ಸ್ಥಿತಿ; ಚಿಲ್ಲಾಪಿಲ್ಲಿಯಾಗಿರುವ ದೊಂಬಿಯಂತೆ ಅತಿ ಸ್ವಾರ್ಥಿಗಳಾಗಿರುವೆವು. ಹಣೆಯ ಮೇಲೆ ಮತ ಚಿಹ್ನೆಯನ್ನು ಹೀಗೆ ಇಡಬೇಕು, ಹಾಗೆ ಇಡಬೇಕು ಎಂದು ಬೇಕಾದಷ್ಟು ಹೋರಾಟವಾಗಿದೆ. ಒಬ್ಬನ ದೃಷ್ಟಿ ನನ್ನ ಆಹಾರ ವನ್ನು ಅಶುದ್ಧ ಮಾಡುವುದೆ ಇಲ್ಲವೆ ಎಂಬುದಕ್ಕೆ ಬೇಕಾದಷ್ಟು ಗ್ರಂಥ ಗಳನ್ನು ಬರೆದಿರುವರು. ಹಲವು ಶತಮಾನಗಳಿಂದ ಇದರಲ್ಲೆ ನಾವು ನಿರತ ರಾಗಿರುವೆವು. ಇಂತಹ ಅದ್ಭುತ ಅನ್ವೇಷಣೆಯಲ್ಲಿ ಇಡೀ ತಮ್ಮ ಮಾನ ಸಿಕ ಶಕ್ತಿಯನ್ನೆಲ್ಲಾ ವ್ಯರ್ಥಗೊಳಿಸಿದ ಜನಾಂಗದಿಂದ ಉತ್ತಮವಾದು ದಾವುದನ್ನೂ ನಿರೀಕ್ಷಿಸಲಾರೆವು! ನಮಗೆ ನಾಚಿಕೆಯಾಗುವುದಿಲ್ಲವೆ? ಕೆಲವು ವೇಳೆ ಆಗುವುದು. ಆದರೆ ಇದನ್ನು ಲಘುವಾಗಿ ಎಣಿಸುವೆವು. ನಾವು ಅದನ್ನು ತೊರೆಯಲಾರೆವು. ಹಲವು ವಿಷಯಗಳನ್ನು ಆಲೋಚಿಸುತ್ತೇವೆ. ಕಾರ್ಯತಃ ತರುವುದಿಲ್ಲ. ಗಿಳಿಯಂತೆ ಆಲೋಚಿಸುವದೊಂದು ನಮ್ಮ ಬಾಳ ಚಾಳಿಯಾಗಿದೆ. ಅನುಷ್ಠಾನಕ್ಕೆ ತರುವುದರಲ್ಲಿಲ್ಲ. ಇದಕ್ಕೆ ಕಾರಣ ವೇನು? ಶಾರೀರಕ ದುರ್ಬಲತೆ. ಇಂತಹ ದುರ್ಬಲ ಮೆದಳು ಏನನ್ನೂ ಸಾಧಿಸಲಾರದು. ನಾವು ಅದನ್ನು ಪುಷ್ಟಿಗೊಳಿಸಬೇಕು. ಮೊದಲು ನಮ್ಮ ಯುವಕರು ಬಲಿಷ್ಠರಾಗಬೇಕು. ಧರ್ಮ ನಂತರ ಬರುವುದು. ನನ್ನ ತರುಣ ಸ್ನೇಹಿತರೆ ಮೊದಲು ಬಲಿಷ್ಠರಾಗಿ. ಅದು ನನ್ನ ಬುದ್ಧಿವಾದ.

ಗೀತಾಧ್ಯಯನಕ್ಕಿಂತ ಚಂಡಿನಾಟವಾಡುವುದರಿಂದ ಮುಕ್ತಿಗೆ ಹತ್ತಿರ ಹೋಗುವಿರಿ. ಇವು ಧೈರ್ಯದ ಮಾತು. ಆದರೆ ನಾನು ಇದನ್ನು ನಿಮಗೆ ಹೇಳಬೇಕಾಗಿದೆ. ನಾನು ನಿಮ್ಮನ್ನು ಪ್ರೀತಿಸುತ್ತೇನೆ. ನಿಮ್ಮ ನ್ಯೂನತೆ ನನಗೆ ಗೊತ್ತಿದೆ. ನನಗೆ ಸ್ವಲ್ಪ ಅನುಭವವಾಗಿದೆ. ನಿಮ್ಮ ಬಾಹುಗಳ ಮಾಂಸಖಂಡದಲ್ಲಿ ಸ್ವಲ್ಪ ಹೆಚ್ಚು ಶಕ್ತಿ ಇದ್ದರೆ, ನೀವು ಗೀತೆಯನ್ನು ಇನ್ನೂ ಚೆನ್ನಾಗಿ ತಿಳಿದುಕೊಳ್ಳಬಲ್ಲಿರಿ. ನಿಮ್ಮಲ್ಲಿ ಹೆಚ್ಚು ಬಿಸಿ ರಕ್ತವಿದ್ದರೆ ಅಲ್ಲಿ ಕೃಷ್ಣನ ಪ್ರಚಂಡ ಪ್ರತಿಭೆ ಮತ್ತು ಅದ್ಭುತ ಶಕ್ತಿ ತಿಳಿದುಕೊಳ್ಳಬಲ್ಲಿರಿ. ಅಚಲವಾಗಿ ನಿಮ್ಮ ಕಾಲಿನ ಮೇಲೆ ನಿಮ್ಮ ದೇಹ ನಿಂತು ನೀವೂ ಒಬ್ಬ ಪುರುಷರೆಂದು ಕಂಡರೆ ಆಗ ಉಪನಿಷತ್ತಿನ ಮಹಿಮೆಯನ್ನು ಚೆನ್ನಾಗಿ ತಿಳಿದುಕೊಳ್ಳಬಲ್ಲಿರಿ. ಆತ್ಮನ ಮಹಿಮೆಯನ್ನು ಚೆನ್ನಾಗಿ ತಿಳಿದುಕೊಳ್ಳಬಲ್ಲಿರಿ. ನಾವು ಇದನ್ನು ನಮ್ಮ ಅನುಷ್ಠಾನಕ್ಕೆ ಉಪಯೋಗಿಸಿಕೊಳ್ಳಬೇಕು.

ಅದ್ವೈತವನ್ನೇ ನಾನು ಬೋಧಿಸುತ್ತೇನೆಂದು ಜನರಿಗೆ ನನ್ನ ಮೇಲೆ ಬೇಜಾರು. ನಾನು ದ್ವೈತ ಅದ್ವೈತ ಅಥವಾ ಮತ್ಯಾವ ತತ್ತ್ವವನ್ನು ಬೋಧಿಸಲು ಇಚ್ಛಿಸುವುದಿಲ್ಲ. ನಮಗೆ ಇಂದು ಬೇಕಾಗಿರುವುದೇ ಆತ್ಮನಿಗೆ ಸಂಬಂಧಪಟ್ಟ ಮಹಾಭಾವನೆ. ಅದರ ಅನಂತ ಪರಾಕ್ರಮ ಶಕ್ತಿ ಪರಿಶುದ್ಧತೆ ಮತ್ತು ಪರಿಪೂರ್ಣತೆ. ಒಂದು ಮಗುವಿದ್ದರೆ ಹುಟ್ಟಿದಾಗಿನಿಂದಲೂ ಅದಕ್ಕೆ "ನೀನು ಪರಿಶುದ್ಧಾತ್ಮ" ಎಂದು ಹೇಳುತ್ತಿದ್ದೆ. ಪುರಾಣದಲ್ಲಿ ಬರುವ ರಾಣಿ ಮದಾಲಸೆಯ ಸುಂದರವಾದ ಕಥೆಯನ್ನು ಕೇಳಿರಬಹುದು. ಅವಳಿಗೆ ಮಗುವಾದ ತಕ್ಷಣವೆ ತೊಟ್ಟಿಲಲ್ಲಿ ಇಟ್ಟು ತೂಗುವಾಗ, "ನೀನು ಪರಿಶುದ್ಧಾತ್ಮ ಕಳಂಕರಹಿತ, ಪಾಪದೂರ, ಪರಾಕ್ರಮಿ ವಿಭು" ಎಂದು ಹೇಳುತ್ತಿದ್ದಳು. ಅದರಲ್ಲಿ ತುಂಬಾ ಸತ್ಯವಿದೆ. ನೀವು ಬಲಾಢ್ಯರೆಂದು ಭಾವಿಸಿ, ಬಲಾಢ್ಯರಾಗುವಿರಿ. ಪ್ರಪಂಚವನ್ನೆಲ್ಲಾ ಪರ್ಯಟನೆಮಾಡಿ ನಾನು ಏನನ್ನು ಕಲಿತಿರುವೆನು. ಪಾಪಿಗಳೆಂದು ಅವರು ಮಾತನಾಡಬಹುದು. ಆಂಗ್ಲೇಯರೆಲ್ಲಾ ತಾವು ಪಾಪಿಗಳೆಂದು ತಿಳಿದಿದ್ದರೆ ಆಂಗ್ಲೇಯರು ಮಧ್ಯ ಆಫ್ರಿಕಾದಲ್ಲಿರುವ ನೀಗ್ರೋಗಳಿಗಿಂತ ಮೇಲಾಗುತ್ತಿರಲಿಲ್ಲ. ಸದ್ಯಕ್ಕೆ ಅವರು ನಂಬದೇ ಇರುವುದು ಒಳ್ಳೆಯದು. ಅದರ ಬದಲು ಆಂಗ್ಲೇಯ ತಾನು ವಿಶ್ವಕ್ಕೆ ಒಡೆಯ ಎಂದು ಭಾವಿಸುವನು. ಆ ಮಹಾವ್ಯಕ್ತಿ ಏನನ್ನು ಬೇಕಾದರೂ ಪ್ರಪಂಚದಲ್ಲಿ ಸಾಧಿಸಲು ಸಾಧ್ಯ

ವೆಂದು ಭಾವಿಸುವನು. ಸೂರ್ಯ ಅಥವಾ ಚಂದ್ರಲೋಕಕ್ಕೆ ಬೇಕಾದರೆ ತಾನು ಹೋಗಬಲ್ಲನೆಂದು ತಿಳಿಯುವನು. ಇದೇ ಅವರನ್ನು ಪ್ರಖ್ಯಾತ ರಾಗಿ ಮಾಡುವುದು. ಅವನು ತನ್ನ ಪಾದ್ರಿ ಹೇಳುವಂತೆ ತಾನೊಬ್ಬ ಪಾಪಿ, ಇಡೀ ಜೀವನ ನರಕದಲ್ಲಿ ಕೊಳೆಯಬೇಕಾಗುವುದೆಂದು ನಂಬಿದ್ದರೆ, ಆತ ಈಗಿನ ಆಂಗ್ಲೇಯನಾಗುತ್ತಿರಲಿಲ್ಲ. ಪಾದ್ರಿಗಳು ಮೂಢ ನಂಬಿಕೆಗಳು ಇದ್ದರೂ ಕೂಡ ಮಾನವನಲ್ಲಿರುವ ದೈವತ್ವ ಪ್ರಕಾಶಕ್ಕೆ ಬರುವುದು. ನಾವು ಶ್ರದ್ಧೆಯನ್ನು ಕಳೆದುಕೊಂಡಿರುವೆವು. ಆಂಗ್ಲೇಯ ಸ್ತ್ರೀಯಲ್ಲಿರುವ ಸಾವಿರದ ಒಂದುಪಾಲು ಶ್ರದ್ಧೆ ಕೂಡ ನಮ್ಮಲ್ಲಿಲ್ಲ ಎಂದರೆ ನಂಬುತ್ತೀರಾ. ಇದರಲ್ಲಿ ಉತ್ಪ್ರೇಕ್ಷೆ ಇಲ್ಲ. ಇದನ್ನು ಹೇಳಬೇಕಾಗಿದೆ. ವಿಧಿಯಿಲ್ಲ. ಆಂಗ್ಲೇಯ ಸ್ತ್ರೀಪುರುಷರಿಗೆ ನಮ್ಮ ಆದರ್ಶದಮೇಲೆ ಮನಸ್ಸಾದರೆ ಅದರಲ್ಲಿ ಹುಚ್ಚರಾಗಿ ತಮ್ಮ ಜನರು ಅವರನ್ನು ಅಣಕಿಸುತ್ತಿರುವರು ಎಂಬುದನ್ನು ಕೂಡ ಗಮನಿಸದೆ ಆಳುತ್ತಿರುವ ಅವರು ನಮ್ಮ ದೇಶಕ್ಕೆ ಅದನ್ನು ಬೋಧಿಸಲು ಬರುವುದನ್ನು ನೋಡುವುದಿಲ್ಲವೆ? ನಿಮ್ಮಲ್ಲಿ ಎಷ್ಟು ಜನ ಹಾಗೆ ಮಾಡಬಲ್ಲಿರಿ? ನೀವು ಏತಕ್ಕೆ ಮಾಡಬಾರದು? ನಿಮಗೆ ಅದು ಗೊತ್ತಿಲ್ಲವೆ? ಅವರಿಗಿಂತ ನಿಮಗೆ ಹೆಚ್ಚು ಗೊತ್ತಿದೆ. ನಿಮಗೆ ಎಷ್ಟು ಬೇಕೋ ಅದಕ್ಕಿಂತ ಹೆಚ್ಚು ಬುದ್ಧಿವಂತರು. ಅದೇ ಬಂದಿರುವ ಕಷ್ಟ. ಇದಕ್ಕೆ ಕಾರಣ ನಿಮ್ಮ ರಕ್ತ ಬರೀ ನೀರಿನಂತೆ ಇದೆ. ಮೆದುಳು ಜಡವಾಗಿದೆ, ದೇಹ ದುರ್ಬಲವಾಗಿದೆ. ದೇಹವನ್ನು ಬಲಗೊಳಿಸಬೇಕು. ಶಾರೀರಕ ದುರ್ಬಲತೆಯೇ ಇದಕ್ಕೆ ಕಾರಣ, ಬೇರಲ್ಲ. ಕಳೆದ ನೂರು ವರ್ಷಗಳಿಂದ ಸುಧಾರಣೆ ಘನ ಆದರ್ಶ ಮುಂತಾದುವನ್ನು ಕುರಿತು ಮಾತನಾಡಿರುವಿರಿ. ಅನುಷ್ಠಾನದ ಸಮಯ ಬಂದರೆ ನಿಮ್ಮ ಸುಳಿವೇ ಇಲ್ಲ. ಪ್ರಪಂಚಕ್ಕೆ ನಿಮ್ಮಮೇಲೆ ಇದರಿಂದ ತಾತ್ಸಾರ. ಸುಧಾರಣೆ ಎಂಬ ಪದವೇ ಹಾಸ್ಯಾಸ್ಪದವಾಗಿದೆ. ಇದಕ್ಕೆ ಕಾರಣವೇನು? ನಿಮಗೆ ಗೊತ್ತಿಲ್ಲವೆ? ನಿಮಗೆ ಚೆನ್ನಾಗಿ ಗೊತ್ತಿದೆ. ಇದಕ್ಕೆ ಮೂಲಕಾರಣ ನೀವು ದುರ್ಬಲರು, ದುರ್ಬಲರು, ದುರ್ಬಲರು. ನಿಮ್ಮ ದೇಹ ದುರ್ಬಲ, ಮನಸ್ಸು ದುರ್ಬಲ, ಆತ್ಮಶ್ರದ್ಧೆ ಇಲ್ಲ. ನನ್ನ ಸಹೋದರರೆ, ಶತಮಾನ ಶತಮಾನಗಳು, ಕಳೆದ ಸಾವಿರ ವರುಷಗಳಿಂದಲೂ, ಜಾತಿ ರಾಜರು ಪರದೇಶೀಯರ ಮತ್ತು ಸ್ವಜನರ ದಬ್ಬಾಳಿಕೆ ನಿಮ್ಮ ಸತ್ತ್ವವನ್ನೆಲ್ಲಾ ನಾಶಮಾಡಿರುವುದು. ನಿಮಗೆ ಬೆನ್ನೆಲುಬು ಇಲ್ಲ. ನೀವು ಹೊರಳಾಡುತ್ತಿರುವ ಕ್ರಿಮಿ

ಗಳಂತೆ! ಯಾರು ನಿಮಗೆ ಶಕ್ತಿ ನೀಡಬಲ್ಲರು? ಶಕ್ತಿ, ಶಕ್ತಿ, ನಿಮಗೆ ಬೇಕಾಗಿರುವುದು. ಇದನ್ನೇ ನಾನು ಒತ್ತಿ ಹೇಳುತ್ತೇನೆ. ಶಕ್ತಿಯನ್ನು ಪಡೆಯಬೇಕಾದರೆ ಮೊದಲನೆ ಹೆಜ್ಜೆಯೇ ಉಪನಿಷತ್ತಿನ ತಳಪಾಯದ ಮೇಲೆ ನಿಂತು "ನಾನು ಆತ್ಮ" ನೆಂದು ನಂಬುವುದು. "ನನ್ನನ್ನು ಯಾವ ಕತ್ತಿಯೂ ಕತ್ತರಿಸಲಾರದು. ಯಾವ ಶಸ್ತ್ರವೂ ತಿವಿಯಲಾರದು. ಬೆಂಕಿ ದಹಿಸಲಾರದು. ಗಾಳಿ ಒಣಗಿಸಲಾರದು. ನಾನು ಸರ್ವಶಕ್ತ, ಸರ್ವಜ್ಞ." ನಮ್ಮನ್ನು ಉದ್ಧರಿಸುವ ಇಂತಹ ಮಂತ್ರವನ್ನು ಪಠಿಸಿ. ನಾವು ದುರ್ಬಲರೆಂದು ಹೇಳಬೇಡಿ. ನಾವು ಏನನ್ನು ಬೇಕಾದರೂ ಮಾಡಬಲ್ಲೆವು. ನಮಗೆ ಮಾಡದೆ ಇರುವುದು ಯಾವುದು ಇದೆ? ಏನನ್ನು ಬೇಕಾದರೂ ಸಾಧಿಸಬಲ್ಲೆವು. ನಮ್ಮಲ್ಲಿ ಎಲ್ಲರಲ್ಲಿಯೂ ಪರಂಜ್ಯೋತಿಯ ಆತ್ಮನಿರುವನು. ಇದನ್ನು ನಂಬೋಣ. ನಚೀಕೇತನಂತೆ ಶ್ರದ್ಧೆ ಇರಲಿ. ತಂದೆ ಯಜ್ಞ ಮಾಡುತ್ತಿದ್ದಾಗ ನಚೀಕೇತನಿಗೆ ಶ್ರದ್ಧೆ ಬಂತು. ನಿಮ್ಮಲ್ಲಿ ಪ್ರತಿಯೊಬ್ಬರಿಗೂ ಅಂತಹ ಶ್ರದ್ಧೆ ಬರಲಿ. ವೀರರಂತೆ ಧೀರರಾಗಿ ನಿಂತು ಪ್ರಚಂಡ ಬುದ್ಧಿಶಕ್ತಿಯಿಂದ ಪ್ರಪಂಚವನ್ನು ದೇವರಂತೆ ಚಲಿಸುವಂತಹವರಾಗಿ ಎಂದು ಆಶಿಸುತ್ತೇನೆ. ಉಪನಿಷತ್ತಿನಿಂದ ದೊರಕುವ ಶಕ್ತಿ ಇದು, ಶ್ರದ್ಧೆ ಇದು.

ಪ್ರಾಚೀನ ಕಾಲದಲ್ಲಿ ಇದು ಕೇವಲ ಸನ್ಯಾಸಿಗಳಿಗೆ ಮೀಸಲಾದ ಶಾಸ್ತ್ರವಾಗಿತ್ತು. ಅವನು ಅರಣ್ಯವಾಸಿಯಾದನು. ಶಂಕರಾಚಾರ್ಯರು ಕೊಂಚ ದಯೆ ತಾಳಿ ಗೃಹಸ್ಥರೂ ಉಪನಿಷತ್ತನ್ನು ಓದಬಹುದು, ಇದರಿಂದ ಅವರಿಗೆ ಅಪಾಯವಿಲ್ಲ ಎಂದು ಸಾರಿದರು. ಆದರೂ ಉಪನಿಷತ್ತು ಸನ್ಯಾಸಿಯ ಅರಣ್ಯ ಜೀವನವನ್ನು ಕುರಿತು ಹೇಳುತ್ತದೆ ಎಂಬ ಭಾವನೆ ಬಂದು ಹೋಗಿದೆ. ನಾನು ನಿಮಗೆ ಹೇಳಿದಂತೆ ವೇದಗಳ ಮೇಲೆ ಅಧಿಕಾರಯುತ ಭಾಷ್ಯವನ್ನು ಆ ವೇದವನ್ನು ಪ್ರಚೋದಿಸಿದ ಶ್ರೀಕೃಷ್ಣನೇ ಗೀತೆಯಲ್ಲಿ ಮಾಡಿರುವನು. ಪ್ರಪಂಚದ ಎಲ್ಲಾ ಕಾರ್ಯಕ್ಷೇತ್ರದಲ್ಲಿರುವ ಸರ್ವರಿಗೂ ಅದು ಅನ್ವಯಿಸುವುದು. ಈ ವೇದಾಂತದ ಭಾವನೆ ಹೊರಗೆ ಬರಬೇಕು. ಕೇವಲ ಅರಣ್ಯದಲ್ಲಿ ಮತ್ತು ಗಿರಿ ಗುಹೆಯಲ್ಲಿ ಮಾತ್ರ ಇರುವುದಲ್ಲ. ನ್ಯಾಯಾಸ್ಥಾನದಲ್ಲಿ ಪ್ರಾರ್ಥನಾಲಯದಲ್ಲಿ ಜೀವನ ಕುಟೀರದಲ್ಲಿ ಮೀನನ್ನು ಹಿಡಿಯುವ ಬೆಸ್ತರಿಗೆ ಅಧ್ಯಯನ ಮಾಡುತ್ತಿರುವ ವಿದ್ಯಾರ್ಥಿಗೆ, ವೇದಾಂತ ಸಹಾಯಕ್ಕೆ ಬರಬೇಕು. ಸ್ತ್ರೀ ಪುರುಷ ಬಾಲಕರೆಲ್ಲರೂ ಎಲ್ಲಿರಲಿ ಯಾವ ಕೆಲಸವನ್ನು ಮಾಡುತ್ತಿರಲಿ ಎಲ್ಲರಿಗೂ ಇದು ಅನ್ವಯಿ

ಸುವುದು. ಇದರಲ್ಲಿ ಅಂಜಿಕೊಳ್ಳುವುದಕ್ಕೆ ಏನಿದೆ? ಬೆಸ್ತರು ಮುಂತಾದವರು ಹೇಗೆ ಇದನ್ನು ಅನುಷ್ಠಾನಕ್ಕೆ ತರಬಲ್ಲರು? ಅದಕ್ಕೆ ಮಾರ್ಗವನ್ನು ತೋರಿರುವರು. ಅದು ಅನಂತವಾಗಿದೆ. ಧರ್ಮ ಅನಂತವಾಗಿದೆ. ಯಾರೂ ಅದನ್ನು ಮೀರಿ ಹೋಗಲಾರರು. ಏನನ್ನು ನಿಸ್ವಾರ್ಥದಿಂದ ಮಾಡಿದರೂ ಅದೆಲ್ಲ ನಿಮಗೆ ಹಿತಕಾರಿ. ಕಿಂಚಿತ್ತನ್ನು ಚೆನ್ನಾಗಿ ಮಾಡಿದರೂ ಅದ್ಭುತ ಫಲಪ್ರಾಪ್ತಿ. ಪ್ರತಿಯೊಬ್ಬರೂ ತಮಗೆ ಸಾಧ್ಯವಾದದ್ದನ್ನು ಮಾಡಲಿ. ಬೆಸ್ತ ತಾನು ಆತ್ಮನೆಂದು ತಿಳಿದರೆ ಅವನು ಒಳ್ಳೆಯ ಬೆಸ್ತನಾಗುವನು. ವಿದ್ಯಾರ್ಥಿ ತಾನು ಆತ್ಮನೆಂದು ತಿಳಿದರೆ ಒಳ್ಳೆಯ ವಿದ್ಯಾರ್ಥಿಯಾಗುವನು. ವಕೀಲ ತಾನು ಆತ್ಮನೆಂದು ತಿಳಿದರೆ ಒಳ್ಳೆಯ ವಕೀಲನಾಗುವನು. ಇವರ ಪರಿಣಾಮವಾಗಿ ಜಾತಿ ಉಳಿಯುವುದು. ಸಮಾಜ ಸ್ವಭಾವತಃ ಜಾತಿಯಾಗಿ ವಿಭಾಗವಾಗುವುದು. ಹಕ್ಕುಗಳು ಮಾತ್ರ ಹೋಗುವುದು. ಜಾತಿ ಪ್ರಕೃತಿ ನಿರ್ಮಿತ. ನಾನು ಸಮಾಜದಲ್ಲಿ ಒಂದು ಕರ್ತವ್ಯವನ್ನು ಮಾಡಬಹುದು. ನೀನು ಮತ್ತೊಂದು ಕರ್ತವ್ಯವನ್ನು ಮಾಡಬಹುದು. ನೀನೊಂದು ರಾಜ್ಯ ವಾಳಬಹುದು. ನಾನೊಂದು ಪಾದರಕ್ಷೆ ರಿಪೇರಿ ಮಾಡಬಹುದು. ಆದ ಕಾರಣ ನೀನು ನನಗಿಂತ ಮೇಲಲ್ಲ. ನೀನು ಪಾದರಕ್ಷೆಯನ್ನೂ ಸರಿಮಾಡ ಬಲ್ಲೆಯ? ನಾನು ರಾಜ್ಯವನ್ನು ಆಳಬಲ್ಲೆನೆ? ನಾನು ಪಾದರಕ್ಷೆ ಹೊಲಿ ಯುವುದರಲ್ಲಿ ನಿಪುಣ. ನೀನು ವೇದಾಧ್ಯಯನದಲ್ಲಿ ನಿಪುಣ. ಆದಕಾರಣ ನಿನಗೆ ನನ್ನನ್ನು ಹಳಿಯಲು ಅಧಿಕಾರವಿಲ್ಲ. ಒಬ್ಬ ಕೊಲೆ ಮಾಡಿದರೆ ಅವನನ್ನು ಹೊಗಳುವುದೇಕೆ? ಮತ್ತೊಬ್ಬ ಸೇಬಿನ ಹಣ್ಣನ್ನು ಕದ್ದರೆ ಅವ ನನ್ನು ಗಲ್ಲಿಗೇಕೆ ಏರಿಸುವುದು? ಇದು ಮಾಯವಾಗಬೇಕು. ಜಾತಿ ಒಳ್ಳೆ ಯದು. ನಮ್ಮ ಜೀವನ ಸಮಸ್ಯೆಯನ್ನು ಬಗೆಹರಿಸುವ ಮಾರ್ಗ ಇದೊಂದೆ. ಮನುಷ್ಯರು ಜಾತಿಗಳಾಗಿ ಭಾಗವಾಗಬೇಕಾಗಿದೆ. ನೀವು ಇದರಿಂದ ಪಾರಾಗಲಾರಿರಿ. ನೀವು ಎಲ್ಲಿ ಹೋದರೂ ಅಲ್ಲಿ ಜಾತಿ ಇರುವುದು. ಆದರೆ ಅಲ್ಲೆಲ್ಲ ಈ ಹಕ್ಕುಗಳು ಇರಬೇಕೆಂದಲ್ಲ. ಅದನ್ನು ನಿರ್ನಾಮ ಮಾಡ ಬೇಕು. ನೀವು ಬೆಸ್ತನಿಗೆ ವೇದಾಂತ ಬೋಧಿಸಿದರೆ, ಅವನು "ನಿನ್ನಂತೆಯೆ ನಾನು, ನಾನು ಬೆಸ್ತ, ನೀನು ತತ್ತ್ವಜ್ಞಾನಿ. ಆದರೆ ನಿನ್ನಲ್ಲಿರುವಂತೆಯೇ ನನ್ನಲ್ಲಿಯೂ ದೇವರು ಇರುವನು" ಎನ್ನುವನು. ನಮಗೆ ಬೇಕಾಗಿರುವುದು ಅದು. ಎಲ್ಲರಿಗೂ ಸಮನಾದ ಅವಕಾಶ, ಯಾರಿಗೂ ಪ್ರತ್ಯೇಕ ಹಕ್ಕು ಇಲ್ಲ. ಭಗವಂತ ಎಲ್ಲರಲ್ಲಿಯೂ ಇರುವನೆಂಬು

ದನ್ನು ಸಕಲರಿಗೂ ಬೋಧಿಸುವ; ಪ್ರತಿಯೊಬ್ಬರೂ ತಮ್ಮ ಮುಕ್ತಿಯನ್ನು ತಾವೇ ಸಾಧಿಸುವರು.

ವಿಕಾಸಕ್ಕೆ ಸ್ವಾತಂತ್ರ್ಯವೇ ಪ್ರಥಮ ಆವಶ್ಯಕ. ಈ ಸ್ತ್ರೀ ಅಥವಾ ಮಗುವಿನ ಮುಕ್ತಿಯನ್ನು ನಾನು ಸಾಧಿಸುತ್ತೇನೆ ಎಂದು ಹೇಳಿದರೆ ಅದು ತಪ್ಪು, ಸಹಸ್ರವೇಳೆ ತಪ್ಪು. ಅನೇಕವೇಳೆ ನನ್ನನ್ನು ಜನರು ವಿಧವೆಯ ಪ್ರಶ್ನೆಯನ್ನು ಹೇಗೆ ಬಗೆಹರಿಸುವಿರಿ? ಸ್ತ್ರೀ ಸಮಸ್ಯೆ ಹೇಗೆ ಬಗೆ ಹರಿಸುವಿರಿ? ಎಂದು ಕೇಳುವರು. ನಾನು ವಿಧವೆಯೆ? ನನ್ನನ್ನು ಈ ಪ್ರಶ್ನೆ ಕೇಳುತ್ತೀರಲ್ಲಾ ಎಂದು ಕೇಳುವೆನು. ನಾನು ಸ್ತ್ರೀಯೆ? ಪುನಃ ಪುನಃ ಈ ಪ್ರಶ್ನೆಯನ್ನು ಕೇಳುತ್ತೀರಲ್ಲ. ಸ್ತ್ರೀ ಸಮಸ್ಯೆಯನ್ನು ಬಗೆಹರಿಸಲು ನೀವಾರು? ನೀವೇನು ದೇವರೆ ಪ್ರತಿಯೊಬ್ಬ ವಿಧವೆಯರನ್ನು ಸ್ತ್ರೀಯರನ್ನು ಆಳುವುದಕ್ಕೆ? ಕೈ ತೆರೆಯಿರಿ! ಅವರು ತಮ್ಮ ಸಮಸ್ಯೆಯನ್ನು ತಾವೇ ಬಗೆ ಹರಿಸಿಕೊಳ್ಳುವರು. ಕ್ರೂರಿಗಳೆ, ಇತರರನ್ನು ನಾವು ಉದ್ಧಾರ ಮಾಡುತ್ತೇವೆಂದು ತಿಳಿಯುವಿರಾ? ಕೈ ತೆರೆಯಿರಿ. ದೇವರು ಎಲ್ಲರನ್ನು ನೋಡಿಕೊಳ್ಳುವನು. ಸರ್ವಜ್ಞರೆಂದು ತಿಳಿಯಲು ನೀವಾರು? ಪಾಷಂಡರೆ! ಈಶ್ವರನಮೇಲೆ ನಿಮಗೆ ಅಧಿಕಾರವಿದೆ ಎಂದು ತಿಳಿಯುವುದಕ್ಕೆ ನಿಮ್ಮ ಎದೆಗಾರಿಕೆ ಎಷ್ಟು! ಪ್ರತಿಯೊಂದು ಜೀವಿಯೂ ಭಗವಂತನ ಆತ್ಮನೆಂದು ತಿಳಿಯದೆ! ಮೊದಲು ನಿಮ್ಮ ಕರ್ಮವನ್ನು ಗಮನಿಸಿ. ಆಗಲಿ ಹೊರೆಯಷ್ಟು ಕರ್ಮವಿದೆ ಕ್ಷಯಿಸುವುದಕ್ಕೆ ನಿಮ್ಮ ಮೇಲೆ. ನಿಮ್ಮ ದೇಶ ನಿಮ್ಮನ್ನು ವೇದಿಕೆಯ ಮೇಲೆ ಕುಳ್ಳಿರಿಸಬಹುದು. ನಿಮ್ಮ ಸಮಾಜ ಬೇಕಾದಷ್ಟು ಪ್ರೋತ್ಸಾಹವನ್ನು ಕೊಡಬಹುದು. ಮೂಢರು ಹೊಗಳಬಹುದು. ಆದರೆ ದೇವರು ಎಂದಿಗೂ ನಿದ್ರಿಸುವುದಿಲ್ಲ. ಇಂದೋ ನಾಳೆಯೋ ಕರ್ಮ ಫಲ ಬರುವುದರಲ್ಲಿ ಸಂದೇಹವಿಲ್ಲ.

ಪ್ರತಿಯೊಬ್ಬ ಸ್ತ್ರೀಪುರುಷರನ್ನು ದೇವರಂತೆ ನೋಡಿ. ನೀವು ಯಾರಿಗೂ ಸಹಾಯಮಾಡಲಾರಿರಿ. ನೀವು ಬೇಕಾದರೆ ಸೇವೆ ಮಾಡಬಹುದು. ನಿಮಗೆ ಆ ಭಾಗ್ಯ ಬಂದರೆ ಭಗವಂತನ ಮಕ್ಕಳನ್ನು ಪೂಜಿಸಬಹುದು. ಆತನನ್ನು ಪೂಜಿಸಬಹುದು. ಭಗವಂತ ಅವನ ಮಕ್ಕಳ ಸೇವೆಗೆ ನಿಮಗೆ ಅವಕಾಶ ಒದಗಿಸಿಕೊಟ್ಟರೆ ನೀವೆ ಧನ್ಯರು. ನಿಮ್ಮ ಸಮಾನವಿಲ್ಲವೆಂದು ಭಾವಿಸಬೇಡಿ. ಇತರರಿಗೆ ದೊರೆಯದೆ ಇರುವಾಗ ಆ ಸದವಕಾಶ ನಿಮಗೆ ದೊರೆತುದಕ್ಕೆ ನೀವೇ ಧನ್ಯರು. ಅದನ್ನು ಒಂದು ಪೂಜೆ

ಯಂತೆ ಮಾಡಿ. ನಾನು ಬಡವನಲ್ಲಿ ದೇವರನ್ನು ನೋಡಬೇಕು. ನನ್ನ ಮುಕ್ತಿಗಾಗಿ ನಾನು ಅವರ ಪೂಜೆಮಾಡಬೇಕು. ದೀನರು ದುಃಖಿಗಳು ನಮ್ಮ ಮೋಕ್ಷಕ್ಕಾಗಿ ಇರುವರು. ರೋಗಿಯಂತೆ ಹುಚ್ಚನಂತೆ ಕುಷ್ಠನಂತೆ ಪಾಪಿಯಂತೆ ಅವನು ಬರುವನು. ನನ್ನ ವರ್ಣನೆ ಬಹಳ ಕಠಿಣವಾಗಿದೆ. ಭಗವಂತನನ್ನು ಹಲವು ರೂಪಿನಲ್ಲಿ ಆರಾಧಿಸುವುದಕ್ಕೆ ನಮಗೆ ಅವಕಾಶ ಸಿಕ್ಕಿರುವುದು ಮಹಾ ಪುಣ್ಯವೆಂದು ಸಾರುತ್ತೇನೆ. ಮತ್ತೊಬ್ಬರನ್ನು ಆಳುವುದರಿಂದ ಮತ್ತೊಬ್ಬರಿಗೆ ಒಳ್ಳೆಯದನ್ನು ಮಾಡುತ್ತೇನೆ ಎಂಬ ಭಾವನೆಯನ್ನು ತೊರೆಯಿರಿ. ಗಿಡಕ್ಕೆ ಸಹಾಯಮಾಡಿದಂತೆ ಮಾತ್ರ ನಾವು ಮಾಡಬಹುದು. ಬೀಜದ ಬೆಳವಣಿಗೆಗೆ ಸಾಮಗ್ರಿ ಒದಗಿಸ ಬಹುದು. ಮಣ್ಣು ನೀರು ಗಾಳಿ ಗೊಬ್ಬರ ಕೊಡಬಹುದು. ಬೀಜ ತನ್ನ ಸ್ವಭಾವಕ್ಕೆ ಅನುಗುಣವಾಗಿ ತನಗೆ ಬೇಕಾದುದನ್ನು ಹೀರಿ ಜೀರ್ಣಿಸಿ ಕೊಂಡು ತನ್ನ ನಿಯಮದಂತೆ ಬೆಳೆಯುವುದು.

ಪ್ರಪಂಚದಲ್ಲಿ ಜ್ಞಾನ ಪ್ರಕಾಶಮಾಡಿ. ಜ್ಞಾನ ಹೆಚ್ಚು ಜ್ಞಾನ ಪ್ರಕಾಶಮಾಡಿ. ಪ್ರತಿಯೊಬ್ಬರಿಗೂ ಜ್ಞಾನಬರಲಿ. ಪ್ರತಿಯೊಬ್ಬರೂ ಭಗವಂತನ ಸಾಕ್ಷಾತ್ಕಾರವನ್ನು ಪಡೆಯುವವರೆಗೆ ಕರ್ತವ್ಯ ಮುಗಿಯು ವಂತೆ ಇಲ್ಲ. ಬಡವರಿಗೆ ಜ್ಞಾನ ತನ್ನಿ, ಭಾಗ್ಯವಂತರಿಗೆ ಹೆಚ್ಚು ತನ್ನಿ. ಅವರಿಗೆ ಬಡವರಿಗಿಂತ ಹೆಚ್ಚುಬೇಕಾಗಿದೆ. ಪಾಮರರಿಗೆ ಜ್ಞಾನ ತನ್ನಿ, ಪಂಡಿತರಿಗೆ ಹೆಚ್ಚು ಜ್ಞಾನ ತನ್ನಿ. ಆಧುನಿಕ ವಿದ್ಯಾವಂತರಲ್ಲಿ ವಿದ್ಯಾಭಿ ಮಾನ ಹೆಚ್ಚಾಗಿದೆ! ಎಲ್ಲರಿಗೂ ಜ್ಞಾನ ಪ್ರಕಾಶವನ್ನು ತನ್ನಿ, ಉಳಿದುದನ್ನು ದೇವರಿಗೆ ಬಿಡಿ. "ಕೆಲಸಮಾಡುವುದಕ್ಕೆ ಮಾತ್ರ ನಮಗೆ ಅಧಿಕಾರ ಅದರ ಫಲಕ್ಕೆ ಅಲ್ಲ. ಕರ್ಮ ಫಲಕ್ಕೆ ಕಾರಣವಾಗದಿರಲಿ. ಆದರೆ ಕರ್ಮ ವಿಲ್ಲದೆ ಇರಬೇಡ" ಎಂದು ಶ್ರೀ ಕೃಷ್ಣ ಸಾರುವನು.

ಹಲವು ಶತಮಾನಗಳ ಹಿಂದೆ ನಮ್ಮ ಪೂರ್ವಿಕರಿಗೆ ಮಹೋಚ್ಚ ಸಿದ್ಧಾಂತವನ್ನು ಸಾರಿದ ಭಗವಂತ ಅವನ ಸಂದೇಶವನ್ನು ಅನುಷ್ಠಾನಕ್ಕೆ ತರಲು ನಮಗೆ ಶಕ್ತಿಸಹಾಯ ಅನುಗ್ರಹಿಸಲಿ.

---

*

# ಭಾರತದ ಮಹಾಪುರುಷರು

## ( ಮದ್ರಾಸಿನ ಉಪನ್ಯಾಸ )

ಭಾರತದ ಮಹಾಪುರುಷರ ವಿಷಯವನ್ನು ಕುರಿತು ಮಾತನಾಡು ವಾಗ ನನ್ನ ಮನಸ್ಸು ಇತಿಹಾಸಕ್ಕೆ ನಿಲುಕದ ಕಾಲಕ್ಕೆ, ಗತಕಾಲದ ಅಂಧ ಕಾರದಿಂದ ಬೆಳಕಿಗೆ ವಿಷಯಗಳನ್ನು ತರಲು ಪುರಾಣಕ್ಕೂ ನಿಲುಕದ ಕಾಲಕ್ಕೆ ಹೋಗುವುದು. ಭಾರತದಲ್ಲಿ ಮಹಾ ಪುರುಷರ ಸಂಖ್ಯೆಗೆ ಮಿತಿ ಇಲ್ಲ. ಮಹಾಪುರುಷರಿಗೆ ಜನ್ಮ ನೀಡುವುದಲ್ಲದೆ ಭರತಖಂಡ ಸಾವಿರಾರು ವರುಷಗಳಿಂದ ಮತ್ತೇನನ್ನು ಮಾಡುತ್ತಿದೆ? ಅವರಲ್ಲಿ ಕೆಲವು ಸರ್ವ ಶ್ರೇಷ್ಠ ಯುಗ ಪುರುಷರ ಚರಿತ್ರೆಯನ್ನೂ ನಾವು ಅವರನ್ನು ತಿಳಿದು ಕೊಂಡಿರುವ ರೀತಿಯನ್ನೂ ನಿಮ್ಮ ಅವಗಾಹನೆಗೆ ತರುವೆನು.

ಮೊದಲು ನಾವು ನಮ್ಮ ಶಾಸ್ತ್ರವನ್ನು ಕೊಂಚ ತಿಳಿದುಕೊಳ್ಳಬೇಕು. ನಮ್ಮ ಶಾಸ್ತ್ರದಲ್ಲಿ ಸತ್ಯದ ಎರಡು ಆದರ್ಶಗಳಿವೆ. ಒಂದು ಸನಾತನ, ಮತ್ತೊಂದು ಅಷ್ಟು ಪ್ರಮಾಣ ಪುಷ್ಟವಲ್ಲದೇ ಇದ್ದರೂ ಆಯಾ ದೇಶ ಕಾಲ ಪಾತ್ರಕ್ಕೆ ಅನ್ವಯಿಸುವುದು. ಶ್ರುತಿ ಅಥವಾ ವೇದದಲ್ಲಿ ಜೀವಾತ್ಮ ಪರಮಾತ್ಮರ ಸ್ವಭಾವ ಮತ್ತು ಅವರ ಪರಸ್ಪರ ಸಂಬಂಧವನ್ನು ವಿವರಿಸು ವರು. ಮನು ಮುಂತಾದವರ ಸ್ಮೃತಿಗಳಲ್ಲಿಯೂ, ಯಾಜ್ಞವಲ್ಕ್ಯಾದಿ ಸಂಹಿತೆಯಲ್ಲಿಯೂ, ಪುರಾಣ ಮತ್ತು ತಂತ್ರ ಶಾಸ್ತ್ರದಲ್ಲಿಯೂ, ಈ ಎರಡನೇ ಬಗೆಯ ಸತ್ಯವಿದೆ. ಎರಡನೇ ದರ್ಜೆಯ ಶಾಸ್ತ್ರ ಮತ್ತು ಬೋಧನೆ ಶ್ರುತಿಗೆ ಅಧೀನ. ಎಲ್ಲಿ ಶ್ರುತಿಗೂ ಸ್ಮೃತಿಗೂ ಭಿನ್ನಾಭಿಪ್ರಾಯ ಬರುವುದೋ, ಅಲ್ಲಿ ಶ್ರುತಿಗೇ ಪ್ರಾಧಾನ್ಯ. ಇದೇ ನಿಯಮ. ಶ್ರುತಿಯಲ್ಲಿ ಜೀವಾತ್ಮನ ನಿಯತಿ, ಚರಮಲಕ್ಷ್ಯ ವಿಷಯದ ಮುಖ್ಯ ಸಿದ್ಧಾಂತದ ವರ್ಣನೆ ಇದೆ. ಸ್ಮೃತಿ ಮತ್ತು ಪುರಾಣದಲ್ಲಿ ಉಳಿದ ಗೌಣವಿಷಯಕ್ಕೆ ಸಂಬಂಧಪಟ್ಟ ವರ್ಣನೆಗಳಿವೆ. ಪ್ರಥಮೋಕ್ತ ಸತ್ಯದ ಸವಿಸ್ತಾರ ವರ್ಣನೆ ಇದೆ. ಧಾರ್ಮಿಕ ಜೀವನಕ್ಕೆ ಶ್ರುತಿಯ ಉಪದೇಶ ಸಾಕು; ಹೆಚ್ಚು ಹೇಳ ಬೇಕಾಗಿಯೂ ಇಲ್ಲ, ತಿಳಿದುಕೊಳ್ಳಬೇಕಾಗಿಯೂ ಇಲ್ಲ. ಮುಖ್ಯವಾಗಿ ಯಾವುದನ್ನು ತಿಳಿದುಕೊಳ್ಳಬೇಕೋ, ಜೀವನ ಮೋಕ್ಷಕ್ಕೆ ಯಾವುದು ಆವಶ್ಯಕವೋ, ಅವನ್ನು ಶ್ರುತಿಯಲ್ಲೇ ಮುಕ್ತಾಯ ಮಾಡಿರುವರು. ಅವು ಗಳಲ್ಲಿ ವಿವರಣೆ ಮಾತ್ರ ಇರಲಿಲ್ಲ. ಅದನ್ನು ಸ್ಮೃತಿ ಕಾಲಕಾಲಕ್ಕೆ

ಒದಗಿಸಿದೆ. ಶ್ರುತಿಯ ಮತ್ತೊಂದು ವಿಶೇಷಣವೇನೆಂದರೆ, ಅಲ್ಲಿನ ಅನುಭವಗಳನ್ನು ಹಲವು ಋಷಿಗಳು ಬರೆದಿಟ್ಟಿರುವರು. ಅವರಲ್ಲಿ ಹಲವರು ಪುರುಷರು, ಮತ್ತೆ ಕೆಲವರು ಸ್ತ್ರೀಯರೂ ಇರುವರು. ಆ ವ್ಯಕ್ತಿಗಳ ಜೀವನ, ಅವರು ಹುಟ್ಟಿದ ಕಾಲದ ವಿಷಯಗಳು ತಿಳಿದಿರುವುದು ಬಹಳ ಅಲ್ಪ. ಆದರೆ ಅವರ ಅತಿ ಶ್ರೇಷ್ಠ ಆಲೋಚನೆ, ಆವಿಷ್ಕಾರಗಳೆಲ್ಲ ವೇದವೆಂಬ ಪ್ರವಿತ್ರ ಧರ್ಮ ಸಾಹಿತ್ಯದಲ್ಲಿ ಅಡಗಿದೆ. ಆದರೆ ಸ್ಮೃತಿಯಲ್ಲಿ ನಮಗೆ ಹೆಚ್ಚು ವ್ಯಕ್ತಿಗಳ ಜೀವನ ಅವರ ಕಾರ್ಯಕಲಾಪಗಳನ್ನು ನೋಡುತ್ತೇವೆ. ಸ್ಮೃತಿಯಲ್ಲಿ ಅದ್ಭುತ ಮಹಾ ಶಕ್ತಿಶಾಲಿ ಮನೋಹರ ಚಾರಿತ್ರ, ಸಂಸಾರ ಚಾಲಕ ವ್ಯಕ್ತಿಗಳು ಕಾಣುವರು. ಅವರ ಉನ್ನತ ಉಜ್ವಲ ಜೀವನದೆದುರು ಅವರ ಬೋಧನೆ ಕೂಡ ಕುಬ್ಜವಾಗುವುದು.

ನಮ್ಮ ಧರ್ಮ ಕೇವಲ ನಿರ್ಗುಣವನ್ನು ಮಾತ್ರ ಬೋಧಿಸುವುದಿಲ್ಲ. ಸಗುಣವನ್ನೂ ಬೋಧಿಸುವುದು. ಇದು ನಾವು ಗಮನಿಸಬೇಕಾದ ಧರ್ಮ ಬೋಧನೆಯ ವಿಶೇಷ. ಅಲ್ಲಿ ವ್ಯಕ್ತಿಗತ ಸಿದ್ಧಾಂತರಹಿತ ಅನಂತ ಸನಾತನ ತತ್ತ್ವಗಳಿವೆ. ವೇದ ಅಥವಾ ಶ್ರುತಿಯೇ ನಮ್ಮ ಧರ್ಮಕ್ಕೆ ಮೂಲ. ಅಲ್ಲಿ ಕೇವಲ ಸನಾತನ ತತ್ತ್ವದ ಉಪದೇಶ ಮಾತ್ರ ಇದೆ. ಅವತಾರಗಳು ದೇವತೆಗಳು ಮಹಾಪುರುಷರು, ಮುಂತಾದವರೆಲ್ಲ ಬರುವುದು ಸ್ಮೃತಿ ಮತ್ತು ಪುರಾಣಗಳಲ್ಲಿ. ನಾವು ಇದನ್ನು ಗಮನಿಸಬೇಕಾಗಿದೆ. ನಮ್ಮ ಧರ್ಮ ಒಂದನ್ನು ಬಿಟ್ಟು ಉಳಿದ ಎಲ್ಲಾ ಧರ್ಮಗಳೂ ಯಾವುದಾದರೂ ಒಂದು ವ್ಯಕ್ತಿಯ ಆಧಾರದ ಮೇಲೆ ನಿಂತಿದೆ. ಏಸುಕ್ರಿಸ್ತನ ಜೀವನದ ಮೇಲೆ ಕ್ರೈಸ್ತ ಧರ್ಮ, ಮಹಮ್ಮದನ ಜೀವನದ ಮೇಲೆ ಮಹಮ್ಮದೀಯ ಧರ್ಮ, ಬುದ್ಧನ ಜೀವನದ ಮೇಲೆ ಬೌದ್ಧಧರ್ಮ, ಜಿನನ ಜೀವನದ ಮೇಲೆ ಜೈನ ಧರ್ಮ— ಇತ್ಯಾದಿ ನಿಂತಿವೆ. ಈ ವ್ಯಕ್ತಿಗಳ ಚಾರಿತ್ರಿಕ ಪ್ರಮಾಣವಾಗಿ ಬೇಕಾದಷ್ಟು ಕಲ್ಪನೆಗಳಿರಬಹುದೆಂದು ಸ್ವಾಭಾವಿಕವಾಗಿ ಊಹಿಸ ಬಹುದು. ಯಾವುದಾದರೂ ಸಮಯದಲ್ಲಿ ಈ ವ್ಯಕ್ತಿಗಳ ಚಾರಿತ್ರಿಕ ಪ್ರಮಾಣ ಬಲಹೀನವಾದರೂ, ಆ ಧರ್ಮಗಳ ತಳಹದಿ ದುರ್ಬಲವಾಗಿ ಧರ್ಮಸೌಧ ಕುಸಿದು ಚೂರು ಚೂರಾಗುವುದು. ನಾವು ಈ ದುರಂತದಿಂದ ಪಾರಾಗಿದ್ದೇವೆ. ಕಾರಣ, ನಮ್ಮ ಧರ್ಮ ವ್ಯಕ್ತಿಗತವಲ್ಲ. ತತ್ತ್ವಗತ. ಅದು ಒಬ್ಬ ಋಷಿಯ ವಾಣಿ ಅಥವಾ ಅವತಾರದ ವಾಣಿ ಎಂದು ಅದನ್ನು ನಾವು ಅನುಸರಿಸುವುದಿಲ್ಲ. ವೇದಕ್ಕೆ ಪ್ರಮಾಣ

ಕೃಷ್ಣನಲ್ಲ ; ಕೃಷ್ಣನಿಗೆ ಪ್ರಮಾಣ ವೇದ. ಕೃಷ್ಣನ ಮಹಾತ್ಮೆ ಇರುವುದು, ಅವನು ಸರ್ವಶ್ರೇಷ್ಠ ವೇದ ಪ್ರಚಾರಕ ಎನ್ನುವುದರಲ್ಲಿ. ಹೀಗೆಯೇ ಉಳಿದ ಅವತಾರ ಮತ್ತು ಋಷಿಗಳೂ ಕೂಡ. ನಾವು ಆರಂಭದಲ್ಲೇ ಇದನ್ನು ಸ್ವೀಕರಿಸುತ್ತೇವೆ. ಅದೇ, ಮನುಷ್ಯನ ಪೂರ್ಣತೆಗೆ ಅವನ ಮುಕ್ತಿಸಾಧನೆಗೆ ಏನು ಆವಶ್ಯಕವೋ ಅದೆಲ್ಲ ವೇದದಲ್ಲಿದೆ. ಇದಕ್ಕಿಂತ ಹೊಸ ಆವಿಷ್ಕಾರ ಅಸಾಧ್ಯ. ಸಮಸ್ತ ಜ್ಞಾನದ ಚರಮಲಕ್ಷ್ಯವಾದ ಪೂರ್ಣ ಏಕತ್ವವನ್ನು ಮೀರಿ ಹೋಗಲಾರೆವು. ವೇದದಲ್ಲಿ ಆಗಲೇ ಇದನ್ನು ಮುಟ್ಟಿರುವರು. ಈ ಏಕತ್ವವನ್ನು ಮೀರಿಹೋಗಲು ಅಸಾಧ್ಯ. "ತತ್ತ್ವಮಸಿ" ಎಂಬ ಮಾತನ್ನು ಕಂಡುಹಿಡಿದಾಗ ಧಾರ್ಮಿಕ ಜ್ಞಾನ ತನ್ನ ಚರಮ ಗುರಿಯನ್ನು ಮುಟ್ಟಿತು. ಇದು ವೇದದಲ್ಲಿದೆ. ವಿಭಿನ್ನ ದೇಶ ಕಾಲ ಪಾತ್ರಕ್ಕೆ ಅನುಸಾರವಾಗಿ ಲೋಕಶಿಕ್ಷಣಮಾತ್ರ ಉಳಿಯುವುದು. ಪ್ರಾಚೀನ ಸನಾತನ ಮಾರ್ಗದಲ್ಲಿ ಜೀವಿ ಸಂಚರಿಸಬೇಕು. ಇದರ ಸಹಾಯಕ್ಕಾಗಿ ಕಾಲಕಾಲಕ್ಕೆ ಹಲವು ಮಹಾಪುರುಷರು ಆಚಾರ್ಯರು ಜನ್ಮವೆತ್ತುವರು. ಗೀತೆಯಲ್ಲಿ ಇದನ್ನು ಶ್ರೀಕೃಷ್ಣ ಅತಿ ಸ್ಪಷ್ಟವಾಗಿ ಮತ್ತು ಸುಂದರವಾಗಿ ವರ್ಣಿಸಿರುವಷ್ಟು ಮತ್ತೆಲ್ಲಿಯೂ ಇಲ್ಲ.

"ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।
ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ ॥"

"ಎಂದು ಧರ್ಮಗ್ಲಾನಿಯಾಗುವುದೋ ಆಗ ಅಧರ್ಮವನ್ನು ನಾಶಮಾಡಿ ಧರ್ಮಸ್ಥಾಪನೆಗೆ ನಾನು ಜನ್ಮವೆತ್ತುವೆನು".

ಇದರ ಪರಿಣಾಮ ಏನಾಯಿತು? ಸನಾತನ ತತ್ತ್ವವಿದೆ. ಅದು ಸ್ವತಃ ಪ್ರಮಾಣ. ಅದು ಯಾವ ಯುಕ್ತಿಯ ಆಸರೆಯ ಮೇಲೂ ನಿಂತಿಲ್ಲ. ಅಥವಾ ಎಷ್ಟೇ ಮಹಾಪುರುಷರಾದ ಋಷಿಗಳಾಗಲೀ ಮಹಿಮಾಸಂಪನ್ನ ಅವತಾರಗಳಾಗಲೀ ಅವರ ಅಧಿಕಾರದ ಮೇಲೂ ನಿಂತಿಲ್ಲ. ಇದು ಭಾರತ ಧರ್ಮದ ಒಂದು ವೈಶಿಷ್ಟ್ಯ. ಆದಕಾರಣವೇ ವೇದಾಂತಕ್ಕೆ ಮಾತ್ರ ವಿಶ್ವ ಧರ್ಮವಾಗುವ ಹಕ್ಕಿದೆ. ಇದಾಗಲೇ ಪ್ರಪಂಚದಲ್ಲಿ ವಿಶ್ವಧರ್ಮವಾಗಿದೆ. ಏತಕ್ಕೆಂದರೆ ಇದು ವ್ಯಕ್ತಿಯನ್ನು ಬೋಧಿಸುವುದಿಲ್ಲ. ತತ್ತ್ವವನ್ನು ಬೋಧಿಸುವುದು. ಯಾವ ಒಂದು ವ್ಯಕ್ತಿಯಮೇಲೆ ನಿಂತ ಧರ್ಮವನ್ನಾಗಲೀ ಪ್ರಪಂಚದಲ್ಲಿರುವವರೆಲ್ಲ ಸಾರ್ವತ್ರಿಕವಾಗಿ ಸ್ವೀಕರಿಸಲಾರರು. ನಮ್ಮ ದೇಶದಲ್ಲೇ ಎಷ್ಟೋ ಪ್ರಖ್ಯಾತ ವ್ಯಕ್ತಿಗಳಿರುವರು. ಒಂದು ಸಣ್ಣ ಊರಿ

ನಲ್ಲೇ ಎಷ್ಟೋ ಜನರನ್ನು ಆದರ್ಶ ವ್ಯಕ್ತಿಗಳನ್ನಾಗಿ ಆರಿಸಿಕೊಳ್ಳುವರು. ಇಡೀ ವಿಶ್ವಕ್ಕೆ ಒಬ್ಬ ಮುಹಮ್ಮದ ಕ್ರಿಸ್ತ ಅಥವಾ ಬುದ್ಧ ಒಂದು ಆದರ್ಶವೆಂದು ಹೇಗೆ ಒಪ್ಪಿಕೊಳ್ಳುವುದು? ಆ ಒಂದು ವ್ಯಕ್ತಿಯ ಪ್ರಮಾಣದ ಮೇಲೆ ಮಾತ್ರ ಎಲ್ಲಾ ನೀತಿ ಧರ್ಮ ಆಧ್ಯಾತ್ಮ ಹೇಗೆ ಇರಬಹುದು? ವೇದಾಂತಧರ್ಮಕ್ಕೆ ಅಂತಹ ಯಾವ ವ್ಯಕ್ತಿಯ ಪ್ರಮಾಣವೂ ಅನವಶ್ಯಕ. ಮನುಷ್ಯನಲ್ಲಿರುವ ಸನಾತನ ಪ್ರಕೃತಿಯೇ ಇದಕ್ಕೆ ಪ್ರಮಾಣ. ಇದರ ನೀತಿ ಮಾನವ ಜಾತಿಯ ಸನಾತನ ಆಧ್ಯಾತ್ಮಿಕ ಏಕತ್ವದ ಮೇಲೆಯೇ ನಿಂತಿದೆ. ಈ ಏಕತ್ವ ಹೊಸದಾಗಿ ಪಡೆಯುವುದಲ್ಲ. ಇದಾಗಲೇ ನಮ್ಮದಾಗಿದೆ.

ಅತ್ಯಂತ ಪ್ರಾಚೀನಕಾಲದಿಂದಲೂ ಮುಕ್ಕಾಲುಪಾಲು ಮಾನವರಿಗೆ, ವ್ಯಕ್ತಿಯ ಆಸರೆ ಅವಶ್ಯಕವೆಂಬುದನ್ನು ಮನಗಂಡರು. ಒಂದಲ್ಲ ಒಂದು ವಿಧದಲ್ಲಿ ಅವರಿಗೆ ಸಾಕಾರ ದೇವರು ಬೇಕು. ಸಗುಣ ದೇವರಿಗೆ ವಿರೋಧವಾಗಿ ಬೋಧಿಸಿದ ಬುದ್ಧ, ಕಾಲವಾಗಿ ಐವತ್ತು ವರುಷ ಆಗಲಿಲ್ಲ; ಆಗಲೇ ಅವನ ಶಿಷ್ಯರು ಅವನನ್ನೇ ಸಾಕಾರ ದೇವರನ್ನಾಗಿ ಮಾಡಿದರು. ಈ ಸಗುಣ ದೇವರು ಆವಶ್ಯಕ! ನೂರಕ್ಕೆ ತೊಂಬತ್ತೊಂಬತ್ತು ಪೂಜೆಗೆ ಅಯೋಗ್ಯರಾದ ಭ್ರಾಂತಿ ಜನಿತ, ಕಾಲ್ಪನಿಕ ದೇವರಿಗಿಂತ, ನಮ್ಮ ಸಂಗಡಲೇ ಸಂಚರಿಸುತ್ತಿರುವ ಜೀವಂತ ದೇವರು ಮಧ್ಯೆ ಮಧ್ಯೆ ಸಿಕ್ಕುವರು. ನಮ್ಮ ಭ್ರಾಂತಿ ಜನಿತ ಕಾಲ್ಪನಿಕ ದೇವರಿಗಿಂತ ಇವರು ಪೂಜಾಯೋಗ್ಯರು. ನೀವು ಅಥವಾ ನಾವು ಕಲ್ಪಿಸಿಕೊಳ್ಳುವ ಭಗವಂತನ ಭಾವನೆಗಿಂತ ಶ್ರೀ ಕೃಷ್ಣ ಮೇಲು. ನಾವು ನೀವು ಮನಸ್ಸಿನಲ್ಲಿ ಭಾವಿಸುವ ಉಚ್ಚ ಆದರ್ಶಕ್ಕಿಂತ ಬುದ್ಧದೇವ ಅಧಿಕ ಉಚ್ಚ ಆದರ್ಶವಾಗಿರುವನು. ಸಚೇತನ ಪರಮ ಆದರ್ಶ ಯೋಗ್ಯನಾಗಿರುವನು. ಆದಕಾರಣವೇ ಕಾಲ್ಪನಿಕ ದೇವರನ್ನೆಲ್ಲಾ ಪದಚ್ಯುತರನ್ನಾಗಿ ಮಾಡಿ, ಇಂತಹ ಮಹಾಮಹಿಮರನ್ನು ಆ ಸ್ಥಳದಲ್ಲಿ ಗೌರವಿಸುವುದು. ಇದು ನಮ್ಮ ಋಷಿಗಳಿಗೆ ತಿಳಿದಿತ್ತು. ಇಂತಹ ಅವತಾರ ವ್ಯಕ್ತಿಗಳನ್ನು ಮಹಾಪುರುಷರನ್ನು ಪೂಜಿಸುವುದಕ್ಕೆ ಭಾರತೀಯರಿಗೆ ಅವಕಾಶವನ್ನು ಕಲ್ಪಿಸಿಕೊಟ್ಟಿದೆ. ಇದು ಮಾತ್ರವಲ್ಲ. ನಮ್ಮ ಸರ್ವಶ್ರೇಷ್ಠ ಅವತಾರ ಹೀಗೆ ಹೇಳುವನು.

“ ಯದ್ಯತ್ ವಿಭೂತಿಮತ್ ಸತ್ತ್ವಂ ಶ್ರೀಮದೂರ್ಜಿತಮೇವ ವಾ।
ತತ್ತದೇವಾವಗಚ್ಛ ತ್ವಂ ಮಮ ತೇಜೋಂಶಸಂಭವಮ್ ॥

"ಎಲ್ಲಿ ಅದ್ಭುತ ಆಧ್ಯಾತ್ಮಿಕ ಶಕ್ತಿ ಪ್ರಕಾಶಿಸುತ್ತಿದೆಯೋ, ಅಲ್ಲೆಲ್ಲ ನಾನಿರು ವೆನು ಎಂದು ಭಾವಿಸು. ಅದು ನನ್ನಿಂದ ಪ್ರಕಾಶಿಸುತ್ತಿದೆ ಎಂದು ತಿಳಿ."

ಆದಕಾರಣವೇ ಹಿಂದೂಗಳಿಗೆ ಪ್ರಪಂಚದ ಎಲ್ಲಾ ಅವತಾರ ಗಳನ್ನೂ ಪೂಜಿಸುವುದಕ್ಕೆ ಸ್ವಾತಂತ್ರ್ಯವಿದೆ. ಹಿಂದೂಗಳು ಯಾವ ದೇಶಕ್ಕೆ ಸೇರಿದ ಸಾಧುವನ್ನಾಗಲೀ, ಋಷಿಯನ್ನಾಗಲೀ ಪೂಜಿಸಬಹುದು. ಅನೇಕ ವೇಳೆ ನಾವು ಕ್ರೈಸ್ತರ ಚರ್ಚಿಗೆ ಹೋಗುತ್ತೇವೆ. ಮಹಮ್ಮದೀ ಯರ ಮಸೀದಿಗೆ ಹೋಗುತ್ತೇವೆ. ಇದು ಒಳ್ಳೆಯದು. ನಾವು ಏತಕ್ಕೆ ಹೀಗೆ ಮಾಡಬಾರದು? ನಮ್ಮದು ವಿಶ್ವಧರ್ಮ. ಇದು ಎಲ್ಲವನ್ನೂ ಅಳ ವಡಿಸಿಕೊಳ್ಳುವಷ್ಟು ವಿಶಾಲವಾಗಿದೆ. ಇದುವರೆಗೆ ಪ್ರಪಂಚದಲ್ಲಿರುವ ಧಾರ್ಮಿಕ ಭಾವನೆಯನ್ನೆಲ್ಲಾ ಅದರಲ್ಲಿ ಸೇರಿಸಬಹುದು. ಭವಿಷ್ಯದಲ್ಲಿ ಬರುವ ವಿಭಿನ್ನ ಧರ್ಮಗಳಿಗೆಲ್ಲ ಹೀಗೆಯೆ ಸಾವಧಾನದಿಂದ ಕಾಯು ವೆವು. ಅವುಗಳನ್ನು ಹೀಗೆಯೇ ಸ್ವಾಗತಿಸುವೆವು. ವೇದಾಂತ ತನ್ನ ವಿಶಾಲ ಬಾಹುಗಳಿಂದ ಇವುಗಳನ್ನೆಲ್ಲಾ ಪ್ರೀತಿಯಿಂದ ಆಲಂಗಿ ಸುವುದು.

ಭಗವದವತಾರಗಳ ವಿಷಯವಾಗಿ ಇದು ನಮ್ಮ ಭಾವನೆ. ಇವರಿ ಗಿಂತ ಕಡಿಮೆ ದರ್ಜೆಯ ಮಹಾಪುರುಷರು ಇರುವರು. ವೇದದಲ್ಲಿ ಋಷಿ ಎಂಬ ಪದವನ್ನು ಪದೇಪದೇ ಉಪಯೋಗಿಸುವರು. ಈಗ ಅದು ಸಾಮಾನ್ಯ ಪದವಾಗಿದೆ. ಋಷಿ ಎಂದರೆ ವಿಶೇಷ ಪ್ರಮಾಣವೆಂದು ಹೆಸರು. ಈ ಭಾವನೆಯನ್ನು ನಾವು ತಿಳಿದುಕೊಳ್ಳಬೇಕು. ಋಷಿ ಎಂದರೆ ಮಂತ್ರ ದ್ರಷ್ಟ. ಧರ್ಮಕ್ಕೆ ಪ್ರಮಾಣ ಯಾವುದು? ಪುರಾತನಕಾಲದಲ್ಲಿ ಈ ಪ್ರಶ್ನೆ ಯನ್ನು ಹಾಕಿದರು. ಬಾಹ್ಯ ಪ್ರಪಂಚದಲ್ಲಿ ಅದಕ್ಕೆ ಪ್ರಮಾಣ ದೊರಕು ವುದಿಲ್ಲ. ಅದಕ್ಕೇ "ಯತೋ ವಾಚೊ ನಿವರ್ತಂತೆ ಅಪ್ರಾಪ್ಯ ಮನಸಾ ಸಹ" ವಾಕ್ಯಸಹಿತ ಮನಸ್ಸು ಅದನ್ನು ಗ್ರಹಿಸದೆ ಹಿಂತಿರುಗುವುದು. "ನ ತತ್ರ ಚಕ್ಷುರ್ಗಚ್ಛತಿ, ನವಾಕ್ ಗಚ್ಛತಿ, ನೊ ಮನಃ." ಅದನ್ನು ಕಣ್ಣು ನೋಡಲಾರದು. ಮಾತು ಗ್ರಹಿಸಲಾರದು, ಮನಸ್ಸು ಗ್ರಹಿಸ ಲಾರದು. ಇದನ್ನೇ ಯುಗಯುಗಾಂತರಗಳಿಂದಲೂ ಬೋಧಿಸಿರುವರು. ಆತ್ಮನ ಅಸ್ತಿತ್ವ, ಈಶ್ವರನ ಅಸ್ತಿತ್ವ, ಅನಂತ ಜೀವನ, ಮನುಷ್ಯನ ಚರಮ ಲಕ್ಷ್ಯ ಮುಂತಾದುವನ್ನು ಬಾಹ್ಯಪ್ರಕೃತಿ ಬಗೆಹರಿಸಲಾರದು. ನಮ್ಮ ಮನಸ್ಸು ಅನವರತ ಬದಲಾಯಿಸುತ್ತಿರುತ್ತದೆ. ಅದು ಯಾವಾಗಲೂ

ಚಲಿಸುತ್ತಿದೆ. ಅದಕ್ಕೆ ಪರಿಮಿತಿ ಇದೆ, ಚೂರುಚೂರಾಗಿ ಒಡೆದುಹೋಗಿದೆ. ಪ್ರಕೃತಿ ಅನಂತ, ಅಪರಿವರ್ತನಶೀಲ, ಅಖಂಡ, ಅವಿಭಾಜ್ಯಸನಾತನ ವನ್ನು ಹೇಗೆ ವಿವರಿಸಬಲ್ಲುದು? ಇದು ಅದಕ್ಕೆ ಎಂದಿಗೂ ಸಾಧ್ಯವಿಲ್ಲ. ಮಾನವ ಚೈತನ್ಯಹೀನ ಜಡ ಪದಾರ್ಥದಿಂದ ಈ ಪ್ರಶ್ನೆಗೆ ಉತ್ತರವನ್ನು ಪಡೆಯಲು ಯತ್ನಿಸಿದಾಗಲೆಲ್ಲಾ ಪರಿಣಾಮ ಎಷ್ಟು ಭಯಂಕರವಾಗಿದೆ ಎಂಬುದನ್ನು ಚರಿತ್ರೆ ತೋರುವುದು. ವೇದ ಸಾರುವ ಸಂದೇಶವೆಲ್ಲ ಹೇಗೆ ಬಂದಿತು? ಅದು ಋಷಿಗಳಿಂದ ಬಂದಿತು. ಈ ಜ್ಞಾನ ಇಂದ್ರಿಯಗಳಲ್ಲಿ ಇಲ್ಲ. ಇಂದ್ರಿಯವೇ ಮನುಷ್ಯನ ಸರ್ವಸ್ವವೆ? ಮನುಷ್ಯನಲ್ಲಿ ಇಂದ್ರಿಯ ಗಳೇ ಪರಮ ಪ್ರಮಾಣವೆಂದು ಹೇಳುವುದಕ್ಕೆ ಯಾರಿಗೆ ಧೈರ್ಯವಿದೆ? ನಮ್ಮ ಜೀವನದಲ್ಲಿ, ಮತ್ತು ಪ್ರತಿಯೊಬ್ಬರ ಜೀವನದಲ್ಲಿಯೂ ಒಂದೊಂದು ಸಮಯ ಬರುವುದು. ನಾವು ಪ್ರೀತಿಸಿದ ಒಬ್ಬರು ಮೃತ್ಯುವಿಗೆ ಬಲಿಯಾ ದಾಗಲೊ, ನಾವು ಯಾವುದಾದರೂ ದುರಂತಕ್ಕೆ ಸಿಕ್ಕಿದಾಗಲೋ, ನಮಗೆ ಅನಂತ ಆನಂದ ಪ್ರಾಪ್ತವಾದಾಗಲೋ, ಅಥವಾ ಇನ್ನೂ ಅನೇಕ ಸನ್ನಿ ವೇಶಗಳಲ್ಲಿ ಮನಸ್ಸು ಶಾಂತವಾಗುವುದು. ಆ ಸಮಯದಲ್ಲಿ ತನ್ನ ನೈಜ ಸ್ವಭಾವವನ್ನು ಅರಿಯುವುದು, ಮಾತು ಮತ್ತು ಮನಸ್ಸಿಗೆ ಸಿಲುಕದ ಬ್ರಹ್ಮನ ಅನುಭವ ನಿಮಗೆ ವೇದ್ಯವಾಗುವುದು. ಇದು ಸಾಧಾರಣ ಜೀವನ ದಲ್ಲಿ ಆಗುವುದು. ಈ ಅವಸ್ಥೆಯನ್ನು ಅಭ್ಯಾಸದ ಮೂಲಕ ಗಾಢವಾಗಿ, ಸ್ಥಿರವಾಗಿ, ಪೂರ್ಣರೂಪಕ್ಕೆ ಕೊಂಡೊಯ್ಯಬೇಕು. ಸಹಸ್ರಾರು ವರುಷ ಗಳ ಹಿಂದೆ ಋಷಿಗಳು, ಆತ್ಮ ಇಂದ್ರಿಯದಿಂದ ಬದ್ಧವಾಗಿಲ್ಲ, ನಮ್ಮ ಜ್ಞಾನದಿಂದಲೂ ಬದ್ಧವಾಗಿಲ್ಲ ಎಂಬುದನ್ನು ಆವಿಷ್ಕಾರಮಾಡಿದರು. ಅನಂತವಾಗಿರುವ ಸರಪಳಿಯಲ್ಲಿ ಜ್ಞಾನವೆಂಬುದು ಒಂದು ಕೊಂಡಿ ಎಂಬು ದನ್ನು ನಾವು ಅರಿಯಬೇಕು. ಸತ್ಯವೇ ಜ್ಞಾನವಲ್ಲ, ಜ್ಞಾನ ಸತ್ಯದ ಒಂದು ಅಂಶ. ಧೀರರು ಜ್ಞಾನದ ಆಚೆ ಹುಡುಕುವರು. ಜ್ಞಾನ ಇಂದ್ರಿಯ ದಿಂದ ಬದ್ಧವಾಗಿದೆ. ಆಧ್ಯಾತ್ಮಿಕ ಸತ್ಯವನ್ನು ಪಡೆಯಬೇಕಾದರೆ ಮನುಷ್ಯ ಅದನ್ನು ಮೀರಿಹೋಗಬೇಕು. ಈಗಲೂ ಕೂಡ ಇಂದ್ರಿಯವನ್ನು ಮೀರಿ ಹೋಗಬಲ್ಲ ವ್ಯಕ್ತಿಗಳು ಇರುವರು. ಇವರನ್ನೇ ಋಷಿಗಳೆನ್ನುವರು. ಆಧ್ಯಾತ್ಮಿಕ ಸತ್ಯವನ್ನು ಅವರು ಪ್ರತ್ಯಕ್ಷ ಕಂಡವರು.

ನನ್ನ ಮುಂದೆ ಇರುವ ಮೇಜು ಎಷ್ಟು ಮಟ್ಟಿಗೆ ನನಗೆ ಪ್ರತ್ಯಕ್ಷ ಪ್ರಮಾಣವೋ, ಹಾಗೆಯೇ ವೇದಕ್ಕೂ ಕೂಡ ಪ್ರತ್ಯಕ್ಷವೇ ಪ್ರಮಾಣ.

ನಾನು ಮೇಜನ್ನು ಇಂದ್ರಿಯಗಳ ಮೂಲಕ ನೋಡುತ್ತೇನೆ. ಹಾಗೆಯೇ ಅಧ್ಯಾತ್ಮ ಸತ್ಯವನ್ನು ಜೀವನ ಇಂದ್ರಿಯಾತೀತ ಅವಸ್ಥೆಯಲ್ಲಿ ಗ್ರಹಿಸುವೆವು. ಈ ಋಷಿಯ ಅವಸ್ಥೆ ಯಾವ ಕಾಲ ದೇಶ ಲಿಂಗ ಅಥವಾ ಜನಾಂಗದ ಬೋಧನೆಯಿಂದ ಬದ್ಧವಾಗಿಲ್ಲ. ವಾತ್ಸ್ಯಾಯನ ನಿರ್ಭಯವಾಗಿ ಈ ಋಷಿತ್ವ, ಋಷಿಸಂತಾನ ಆರ್ಯ ಅನಾರ್ಯ ಮ್ಲೇಚ್ಛರಿಗೂ ಕೂಡ ಸಾಧಾರಣ ಸಂಪತ್ತು ಎನ್ನುವನು.

ಇದು ವೇದಗಳ ಋಷಿತ್ವ. ಈ ಭಾರತೀಯ ಧರ್ಮದ ಆದರ್ಶವನ್ನು ನಾವು ಯಾವಾಗಲೂ ಸ್ಮರಿಸಬೇಕು. ಅನ್ಯದೇಶೀಯರೂ ಕೂಡ ಇದನ್ನು ಕಲಿಯಲಿ ಸ್ಮರಿಸಲಿ. ಇದರಿಂದ ವಿವಿಧ ಧರ್ಮಗಳ ವಾದ ವಿವಾದ ಕಡಿಮೆಯಾಗುವುದು. ಧರ್ಮ, ಶಾಸ್ತ್ರದಲ್ಲಿ ಇಲ್ಲ ಸಿದ್ಧಾಂತದಲ್ಲಿ ಇಲ್ಲ, ಮೂಢನಂಬಿಕೆಯಲ್ಲಿ ಇಲ್ಲ, ಮಾತಿನಲ್ಲಿ ಇಲ್ಲ, ತರ್ಕದಲ್ಲಿಯೂ ಇಲ್ಲ. ಅದರಂತೆ ಇರುವುದು, ಅದರಂತೆ ಆಗುವುದೇ ಧರ್ಮ. ನನ್ನ ಸ್ನೇಹಿತರೆ, ನಿಮ್ಮಲ್ಲಿ ಪ್ರತಿಯೊಬ್ಬರೂ ಋಷಿಗಳಾಗಿ ಆಧ್ಯಾತ್ಮಿಕ ಸತ್ಯಗಳನ್ನು ಪ್ರತ್ಯಕ್ಷ ಮಾಡಿಕೊಳ್ಳುವವರೆಗೆ, ಧರ್ಮ ನಿಮಗೆ ಪ್ರಾರಂಭವಾಗಿಲ್ಲ. ಅತೀಂದ್ರಿಯ ಬಾಗಿಲನ್ನು ತೆರೆಯುವವರೆಗೆ ಧರ್ಮ ಬರೀ ಮಾತು. ಸಿದ್ಧತೆ ಮಾತ್ರ. ಎರಡನೆ ಮೂರನೆ ವ್ಯಕ್ತಿಗಳಿಂದ ಕೇಳಿದ ವಿದ್ಯೆಯನ್ನು ಮಾತನಾಡುತ್ತಿರುವಿರಿ. ಇದು ಬ್ರಾಹ್ಮಣರೊಂದಿಗೆ ಮಾತನಾಡುತ್ತಿದ್ದ ಬುದ್ಧನ ಸುಂದರ ಉಪಮಾನವನ್ನು ಹೋಲುವುದು. ಬ್ರಾಹ್ಮಣರು ಬ್ರಹ್ಮನ ವಿಚಾರವನ್ನು ಚರ್ಚಿಸುತ್ತ ಬಂದರು. ಬುದ್ಧ, "ನೀನು ಬ್ರಹ್ಮನನ್ನು ಕಂಡಿರುವೆಯಾ?" ಎಂದು ಕೇಳಿದನು. "ಇಲ್ಲ" ಎಂದ ಬ್ರಾಹ್ಮಣ. "ನಿಮ್ಮ ತಂದೆ ನೋಡಿದ್ದನೊ?" ಎಂದು ಬುದ್ಧ ಕೇಳಿದ. "ಇಲ್ಲ, ಅವನೂ ನೋಡಿಲ್ಲ" ಎಂದ ಬ್ರಾಹ್ಮಣ. "ನಿಮ್ಮ ತಾತ ನೋಡಿದ್ದನೊ?" "ಇಲ್ಲ, ಅವನೂ ನೋಡಿರುವಂತೆ ಕಾಣುವುದಿಲ್ಲ" ಎಂದರು. ಆಗ ಬುದ್ಧ, "ನನ್ನ ಸ್ನೇಹಿತರೆ, ಯಾರನ್ನು ನೀನು, ನಿಮ್ಮ ತಂದೆ, ನಿಮ್ಮ ತಾತ ಯಾರೂ ನೋಡಿಲ್ಲವೋ, ಅವನ ವಿಚಾರ ವಾದಮಾಡುತ್ತ ಒಬ್ಬರು ಮತ್ತೊಬ್ಬರನ್ನು ಮೂದಲಿಸುತ್ತಿರುವಿರಲ್ಲ?" ಎಂದನು. ಇಡೀ ಪ್ರಪಂಚ ಮಾಡುತ್ತಿರುವುದೇ ಹೀಗೆ. ವೇದಾಂತದ ಭಾಷೆಯಲ್ಲಿ ಹೀಗಿದೆ.

"ನಾಯಮಾತ್ಮಾ ಪ್ರವಚನೇನ ಲಭ್ಯೋ ।
ನ ಮೇಧಯಾ, ನ ಬಹುನಾ ಶೃತೇನ॥" ಕಠೋಪನಿಷತ್.

ಆತ್ಮ, ಪ್ರವಚನದಿಂದ ಸಿದ್ಧಿಸದು, ಯುಕ್ತಿಯಿಂದ ದೊರಕದು, ಆಲಿಸಿ ದರೂ ದೊರಕದು.

ವೇದಗಳ ಭಾಷೆಯಲ್ಲಿ ಪ್ರಪಂಚಕ್ಕೆ ಹೀಗೆ ಹೇಳುವ: ನಿಮ್ಮ ವಾದ ವಿವಾದಗಳು ವ್ಯರ್ಥ. ನೀವು ಯಾವ ದೇವರನ್ನು ಬೋಧಿಸಬೇಕೆಂದಿರು ವಿರೋ, ಅವರ ಸಾಕ್ಷಾತ್ಕಾರವಾಗಿದೆಯೇ? ಇಲ್ಲದೇಇದ್ದರೆ ನಿಮ್ಮ ಬೋಧನೆ ವ್ಯರ್ಥ. ನೀವು ಹೇಳುವುದೇ ನಿಮಗೆ ಗೊತ್ತಿಲ್ಲ. ನಿಮಗೆ ದೇವರ ಸಾಕ್ಷಾತ್ಕಾರವಾಗಿದ್ದರೆ ನೀವು ಜಗಳ ಕಾಯುವುದಿಲ್ಲ. ನಿಮ್ಮ ಮುಖವೇ ಅದನ್ನು ಸಾರುವುದು. ಉಪನಿಷತ್ತಿನ ಒಬ್ಬ ಪುರಾತನ ಋಷಿ ಬ್ರಹ್ಮನ ವಿಷಯವನ್ನು ತಿಳಿಯುವುದಕ್ಕೆ ತನ್ನ ಮಗನನ್ನು ಕಳುಹಿಸಿದನು. ಮಗ ಹಿಂತಿರುಗಿ ಬಂದ ಮೇಲೆ ತಂದೆ, ನೀನೇನು ಕಲಿತೆ? ಎಂದು ಕೇಳಿ ದನು. ಮಗ "ಎಷ್ಟೋ ವಿಷಯಗಳನ್ನು ಕಲಿತೆ" ಎಂದನು. ತಂದೆ, "ಅದರಿಂದ ಏನೂ ಪ್ರಯೋಜನವಿಲ್ಲ. ಪುನಃ ಹಿಂತಿರುಗಿ ಹೋಗು" ಎಂದನು. ಪುನಃ ಹಿಂತಿರುಗಿ ಬಂದ ಮೇಲೆ ತಂದೆ ಪುನಃ ಅದೇ ಪ್ರಶ್ನೆ ಯನ್ನು ಕೇಳಿದನು. ಮಗ ಹಿಂದೆ ಹೇಳಿದಂತೆ, "ಬಗೆ ಬಗೆಯ ವಿದ್ಯೆ ಯನ್ನು ಕಲಿತಿರುವೆ" ಎಂದನು. ಅವನು ಪುನಃ ಹೋಗಬೇಕಾಯಿತು. ಮತ್ತೊಂದು ವೇಳೆ ಹಿಂತಿರುಗಿ ಬಂಪಮೇಲೆ ಅವನ ಮುಖದಲ್ಲಿ ಕಾಂತಿ ಕೋರೈಸುತ್ತಿತ್ತು. ತಂದೆ ಎದ್ದುನಿಂತು, "ಹಾ! ಮಗು, ಬ್ರಹ್ಮನನ್ನು ತಿಳಿದವನಂತೆ ನಿನ್ನ ಮುಖ ಕಳೆಗೊಂಡಿರುವುದು" ಎಂದನು. ನೀವು ದೇವರನ್ನು ಕಂಡರೆ ನಿಮ್ಮ ಮುಖ ಬದಲಾಯಿಸುವುದು. ಧ್ವನಿ ಬದ ಲಾಯಿಸುವುದು. ಇಡೀ ಆಕಾರವೇ • ಬದಲಾಯಿಸುವುದು. ನೀನು ಮಾನವಕೋಟಿಗೆ ಮಹಾ ಕಲ್ಯಾಣ ಪ್ರದನಾಗುವೆ. ಇದೇ ಋಷಿತ್ವ. ನಮ್ಮ ಧರ್ಮದ ಆದರ್ಶ. ಉಳಿದುವಲ್ಲ. ಈ ಉಪನ್ಯಾಸ, ತತ್ತ್ವ, ಯುಕ್ತಿ ದ್ವೈತ ಅದ್ವೈತ ವೇದಾಂತಗಳೂಕೂಡ ಗೌಣ, ಸಿದ್ಧತೆ ಮಾತ್ರ. ಆದರೆ ಸಾಕ್ಷಾತ್ಕಾರ ಮುಖ್ಯ. ವೇದ, ವ್ಯಾಕರಣ, ಜ್ಯೋತಿಷ್ಯ ಮುಂತಾದುವು ಎಲ್ಲಾ ಗೌಣ. ಯಾವುದರ ಮೂಲಕ ನಾವು ಅಪರಿವರ್ತನ ಶೀಲವಸ್ತು ವನ್ನು ಪ್ರತ್ಯಕ್ಷಗೊಳಿಸುವೆವೋ ಅದೇ ಧರ್ಮಜ್ಞಾನ. ಇದನ್ನು ಸಾಕ್ಷಾ ತ್ಕಾರ ಮಾಡಿಕೊಂಡ ಋಷಿಗಳೇ ವೇದದಲ್ಲಿ ಬರುವ ಋಷಿಗಳು. ಋಷಿ ಎಂಬುದು ಒಂದು ಅವಸ್ಥೆಯ ಹೆಸರು. ನಮ್ಮಲ್ಲಿ ಪ್ರತಿಯೊಬ್ಬರೂ ನಿಜ ವಾದ ಹಿಂದೂಗಳೆಲ್ಲಾ ಒಂದಲ್ಲ ಒಂದುದಿನ ಹಾಗೆ ಆಗಬೇಕು. ಹಾಗೆ

ಆಗುವುದನ್ನೇ ಹಿಂದೂ ಮುಕ್ತಿ ಎನ್ನುವದು. ಸಿದ್ಧಾಂತಗಳಲ್ಲಿ ನಂಬಿಕೆಯಾಗಲೀ ಸಹಸ್ರಾರು ದೇವಾಲಯಕ್ಕೆ ಹೋಗುವುದಾಗಲೀ ಪ್ರಪಂಚದ ನದಿಗಳಲ್ಲೆಲ್ಲಾ ಸ್ನಾನಮಾಡುವುದಾಗಲೀ ಅಲ್ಲ. ಮಂತ್ರದೃಷ್ಟನಾಗುವುದು, ಋಷಿಯಾಗುವುದು ಮಾತ್ರ ಮುಕ್ತಿ ಅಥವಾ ಸ್ವಾತಂತ್ರ್ಯ.

ಇಡೀ ಪ್ರಪಂಚವನ್ನೇ ನಡೆಸಬಲ್ಲ ಮಹಾ ಪುರುಷರು ಮತ್ತು ಅವತಾರ ವ್ಯಕ್ತಿಗಳು ವೇದದ ಕಾಲದನಂತರ ಬರುವರು. ಇವರು ಕೆಲವರು ಇರುವರು. ಭಾಗವತದ ಪ್ರಕಾರ ಅಂತಹ ವ್ಯಕ್ತಿಗಳು ಅಸಂಖ್ಯಾತವಾಗಿದ್ದಾರೆ. ಭರತಖಂಡದಲ್ಲಿ ಇಂದು ಹೆಚ್ಚಾಗಿ ಪೂಜಿಸುತ್ತಿರುವ ವ್ಯಕ್ತಿಗಳೇ ರಾಮ ಮತ್ತು ಕೃಷ್ಣ. ಮಹರ್ಷಿ ವಾಲ್ಮೀಕಿ, ಪ್ರಾಚೀನ ವೀರಯುಗದ ಆದರ್ಶನಾದ ಶ್ರೀರಾಮಚಂದ್ರನ ಸತ್ಯಪರಾಯಣತೆ, ಅವನ ಸಮಗ್ರ ನೀತಿ ತತ್ತ್ವಕ್ಕೆ ಸಾಕಾರ ಮೂರ್ತಿಸ್ವರೂಪ ಎಂಬುದನ್ನು ಚಿತ್ರಿಸಿರುವನು. ಅವನು ಆದರ್ಶ ತನಯ, ಆದರ್ಶಪತಿ, ಆದರ್ಶಪಿತ, ಎಲ್ಲಕ್ಕಿಂತ ಹೆಚ್ಚಾಗಿ ಆದರ್ಶ ರಾಜ ಎಂಬುದನ್ನು ತೋರಿರುವನು. ಮಹಾಕವಿ ಯಾವ ಭಾಷೆಯಲ್ಲಿ ರಾಮಚಂದ್ರನ ಚರಿತ್ರೆಯನ್ನು ವರ್ಣಿಸಿರುವನೋ, ಆ ಭಾಷೆಗಿಂತ ಶುದ್ಧವಾದ ಮಧುರವಾದ ಸುಂದರವಾದ ಭಾಷೆ ಮತ್ತೊಂದಿಲ್ಲ. ಸೀತೆಯ ವಿಷಯವಾಗಿ ಹೇಳುವುದೇನಿದೆ? ಸಮಸ್ತ ಪ್ರಾಚೀನ ಸಾಹಿತ್ಯವನ್ನು ಅಧ್ಯಯನ ಮಾಡಬಹುದು. ನಾನು ನಿಸ್ಸಂಕೋಚವಾಗಿ ಹೇಳುತ್ತೇನೆ. ನೀವು ಭವಿಷ್ಯ ಪ್ರಪಂಚದ ಸಾಹಿತ್ಯವನ್ನೂ ಪೂರ್ಣ ಮಾಡಬಹುದು. ಸೀತೆಯ ಸಮಾನ ಮತ್ತೊಂದು ಚಾರಿತ್ರವ್ಯಕ್ತಿ ಸಿಕ್ಕುವುದು ದುರ್ಲಭ. ಸೀತೆಯ ಚರಿತ್ರೆ ಅಸಾಧಾರಣ. ಒಮ್ಮೆ ಮಾತ್ರ ಅದು ವಿಶ್ವದಲ್ಲಿ ಚಿತ್ರಿತವಾಗಿದೆ. ಎಷ್ಟೋಜನ ರಾಮನಂತಹವರು ಬಹುಶಃ ಹಿಂದೆ ಇದ್ದಿರಬಹುದು. ಆದರೆ ಒಂದಕ್ಕಿಂತ ಹೆಚ್ಚು ಸೀತೆಯಂತಹ ಶೀಲ ಇರಲಿಲ್ಲ. ಸೀತಾ ಭಾರತೀಯ ಸ್ತ್ರೀಯರ ನಿಜವಾದ ಆದರ್ಶವಾಗಿರುವಳು. ಭಾರತೀಯ ಸ್ತ್ರೀಯರ ಆದರ್ಶವೆಲ್ಲಾ ಸೀತಾದೇವಿಯ ಶೀಲ ಒಂದರಿಂದ ಉತ್ಪನ್ನವಾಗಿದೆ. ಸಮಗ್ರ ಆರ್ಯಾವರ್ತದಲ್ಲಿ ಸಹಸ್ರಾರುವರ್ಷಗಳಿಂದ ಆಬಾಲವೃದ್ಧ ವನಿತೆಯರಿಂದ ಪೂಜೆಗೊಳ್ಳುತ್ತಿರುವಳು. ಮಹಿಮಾಮಹಿ ಸೀತಾ ಸ್ವಯಂ ಶುದ್ಧತೆಗಿಂತ ಪರಿಶುದ್ಧಳು. ಸಹಿಷ್ಣುತೆಯ ಪರಮೋಚ್ಚ ಆದರ್ಶ. ಸೀತಾ ಸದಾ ಪೂಜ್ಯಸ್ಥಾನದಲ್ಲಿ ಪ್ರತಿಷ್ಠಿತಳಾಗಿರುವಳು. ಸ್ವಲ್ಪವೂ ಗೊಣಗದೆ ಮಹಾ ದುಃಖವನ್ನು ಅನುಭವಿಸಿದಳು. ನಿತ್ಯಸಾಧ್ವಿ. ಸದಾ ಶುದ್ಧ

ಸ್ವಭಾವ ಸೀತಾ, ಆದರ್ಶಪತ್ನಿ ಸೀತಾ, ಮನುಷ್ಯ ಲೋಕಕ್ಕೆ ಮಾತ್ರವಲ್ಲ. ದೇವಲೋಕದಲ್ಲಿ ಆದರ್ಶಮೂರ್ತಿ. ಪುಣ್ಯಚರಿತ್ರೆ ಸೀತಾ, ಸದಾ ನಮ್ಮ ಜನಾಂಗದ ದೇವತೆಯಾಗಿಯೇ ಇರವಳು. ನಮ್ಮಲ್ಲಿ ಪ್ರತಿಯೊಬ್ಬರಿಗೂ ಅವಳ ಚರಿತ್ರೆ ಪರಿಚಯವಿದೆ. ಅದರ ವಿಷಯವಾಗಿ ವಿಶೇಷ ವರ್ಣನೆ ಅನವಶ್ಯಕ. ನಮ್ಮ ಪುರಾಣವೆಲ್ಲಾ ನಷ್ಟವಾಗಬಹುದು, ವೇದ ಲುಪ್ತ ವಾಗಿ ಹೋಗಬಹುದು, ನಮ್ಮ ಸಂಸ್ಕೃತಭಾಷೆ ಕಾಲಕಳೆದಂತೆ ಲುಪ್ತ ವಾಗಿ ಹೋಗಬಹುದು, ಆದರೆ ನನ್ನ ಮಾತನ್ನು ಧ್ಯಾನಪೂರ್ವಕ ಆಲಿಸಿ. ಎಲ್ಲಿಯವರೆಗೆ ಭಾರತದಲ್ಲಿ ಕೇವಲ ಗ್ರಾಮ್ಯ ಭಾಷೆ ಮಾತನಾಡುವ ಐದು ಹಿಂದುಗಳು ಇರುವರೋ, ಅಲ್ಲಿಯವರೆಗೂ ಸೀತೆಯ ಚರಿತ್ರೆ ಬಳಕೆಯಲ್ಲಿರು ವುದು. ಸೀತಾ ನಮ್ಮ ಜನಾಂಗದ ಜೀವನದ ಅಂತರಾಳಕ್ಕೆ ಪ್ರವೇಶಿಸಿರು ವಳು. ಹಿಂದೂ ನರನಾರಿಯರ ರಕ್ತದಲ್ಲಿ ಸೀತಾ ವಿರಾಜಮಾನಳಾಗಿರುವಳು. ನಾವೆಲ್ಲಾ ಸೀತೆಯ ಸಂತಾನರು. ಸೀತೆಯ ಆದರ್ಶವನ್ನು ತೊರೆದು ನಮ್ಮ ನಾರಿಯರನ್ನು ಆಧುನಿಕರನ್ನಾಗಿ ಮಾಡುವ ಪ್ರಯತ್ನವೆಲ್ಲಾ ನಿಷ್ಫಲವಾಗುವುದು. ನಾವು ಪ್ರತಿದಿನ ಇದರ ಉದಾಹರಣೆ ನೋಡು ತ್ತಿರುವೆವು. ಭಾರತೀಯ ನಾರಿಯರು ಸೀತೆಯ ಚರಣ ಚಿಹ್ನೆಯನ್ನು ಅನುಸರಿಸಿ ಉನ್ನತಿಗೆ ಪ್ರಯತ್ನಪಡಬೇಕು. ಇದು ಭಾರತೀಯ ನಾರಿ ಯರ ಉನ್ನತಿಗೆ ಏಕಮಾತ್ರ ಪಥ.

ಇದರ ನಂತರ ಬರುವ ವ್ಯಕ್ತಿಯನ್ನು ನಾನಾ ಭಾವದ ಮೂಲಕ ಭಾರತೀಯರು ಪೂಜಿಸುತ್ತಿರುವರು. ಆಬಾಲ ವೃದ್ಧ ನರ ನಾರಿಯರಿಗೆ ಪರಮ ಪ್ರಿಯ ಕೃಷ್ಣನು ಇಷ್ಟದೇವತೆಯಾಗಿರುವನು. ಭಾಗವತದ ಕರ್ತೃ ಅವನನ್ನು ಅವತಾರ ಮಾತ್ರವೆಂದು ಹೇಳಿದ ಮಾತ್ರಕ್ಕೆ ತೃಪ್ತನಾಗ ಲಿಲ್ಲ. ಜೊತೆಗೆ, "ಏತೆ ಚಾಂಶಕಲಾಃ ಪುಂಸಃ ಕೃಷ್ಣಸ್ತು ಭಗವಾನ್ ಸ್ವಯಂ." ಉಳಿದ ಅವತಾರಗಳು ಅಂಶ. ಆದರೆ ಶ್ರೀಕೃಷ್ಣನಾದರೋ ಸ್ವಯಂ ಭಗವಂತ. ಅವನ ವಿವಿಧ ಭಾವ ಸಮನ್ವಯ ಚರಿತ್ರೆಯನು ಆಲೋಚಿಸಿದರೆ ಇಂತಹ ಉಪಮಾನವನ್ನು ಅವನಿಗೆ ಆರೋಪಿಸುವುದರಲ್ಲಿ ಆಶ್ಚರ್ಯವೇನಿಲ್ಲ. ಅವನು ಏಕ ಕಾಲದಲ್ಲಿ ಅಪೂರ್ವ ಸನ್ಯಾಸಿ, ಮತ್ತು ಅದ್ಭುತ ಗೃಹಸ್ಥ. ಅವನು ಅತ್ಯಂತ ಅದ್ಭುತ ರಜೋ ಶಕ್ತಿಯನ್ನು ವಿಕಾಸ ಪಡಿಸುತ್ತಿದ್ದನು. ಜೊತೆಗೆ ಅದ್ಭುತ ತ್ಯಾಗವೂ ಇತ್ತು. ಭಗ ವದ್ಗೀತೆಯನ್ನು ಓದಿದಲ್ಲದೆ ಶ್ರೀಕೃಷ್ಣನನ್ನು ಪೂರ್ತಿ ಅರ್ಥ ಮಾಡಿಕೊಳು

ವುದಕ್ಕೆ ಆಗುವುದಿಲ್ಲ. ಗೀತಾ ಉಪದೇಶದ ಸಾಕಾರ ಸ್ವರೂಪನಾಗಿರುವನು. ಎಲ್ಲಾ ಅವತಾರಗಳೂ, ತಾವು ಯಾವುದನ್ನು ಪ್ರಚಾರ ಮಾಡುವುದಕ್ಕೆ ಬಂದರೂ ಅವರ ಜೀವನವೇ ಅದಕ್ಕೆ ಉದಾಹರಣೆಯಾಗಿತ್ತು. ಗೀತಾ ಪ್ರಚಾರದಲ್ಲಿ ಶ್ರೀಕೃಷ್ಣ ಸದಾ ಭಗವದ್ಗೀತೆಯ ಉಪದೇಶದ ಸಾಕಾರ ಮೂರ್ತಿಯಾಗಿರುವನು. ಅವನೇ ಅನಾಸಕ್ತಿಯ ಉಜ್ವಲ ಉದಾಹರಣೆ. ತನ್ನ ಸಿಂಹಾಸನವನ್ನು ಇತರರಿಗೆ ಕೊಡುವುದಕ್ಕೆ ಲೆಕ್ಕಿಸುವುದೇ ಇಲ್ಲ. ಭರತಖಂಡದ ನಾಯಕ ಅವನ ಒಂದು ಮಾತಿಗೆ ರಾಜರು ಸಿಂಹಾಸನವನ್ನು ಬಿಟ್ಟು ಕೆಳಗೆ ಬರುತ್ತಿದ್ದರು. ಸ್ವಯಂ ರಾಜನಾಗಲು ಇಚ್ಛಿಸುವುದಿಲ್ಲ. ಬಾಲ್ಯ ಕಾಲದಲ್ಲಿ ಎಷ್ಟು ಸರಳ ಸ್ವಭಾವದಿಂದ ಗೋಪಿಯರೊಂದಿಗೆ ಕ್ರೀಡೆ ಯಾಡುತ್ತಿದ್ದನೋ, ಜೀವನದ ಬೇರೆ ಅವಸ್ಥೆಯಲ್ಲಿಯೂ ಅದೇ ಸರಳ ಸ್ವಭಾವ.

ಅವನ ಜೀವನದ ಚಿರಸ್ಮರಣೀಯ ಘಟನೆ ನೆನಪಿಗೆ ಬರುವುದು. ಅದನ್ನು ಗ್ರಹಿಸುವುದು ಬಹಳ ಕಷ್ಟ. ಎಲ್ಲಿಯವರೆವಿಗೂ ನಾವು ಪೂರ್ಣ ಬ್ರಹ್ಮಚಾರಿಗಳಾಗಿ ಪವಿತ್ರ ಸ್ವಭಾವದವರಾಗಿಲ್ಲವೋ, ಅಲ್ಲಿಯವರೆಗೂ ಅದನ್ನು ತಿಳಿದುಕೊಳ್ಳಲು ಪ್ರಯತ್ನಿಸುವುದು ಉಚಿತವಲ್ಲ. ಅವನ ಪ್ರೇಮದ ಅತ್ಯಂತ ಅದ್ಭುತ ಉದಾಹರಣೆ, ಬೃಂದಾವನದ ಮಧುರ ಲೀಲೆಯ ರೂಪಕ ಭಾವದಲ್ಲಿ ವರ್ಣಿತವಾಗಿದೆ. ಪ್ರೇಮರೂಪಿ ಮಧು ಪಾನೋನ್ಮತ್ತನಾಗಿರುವನೋ ಅವನು ವಿನಃ ಮತ್ತಾರೂ ಅದನ್ನು ಗ್ರಹಿಸ ಲಾರರು. ಗೋಪಿಯರಿಗೆ ವಿರಹದಿಂದ ಉತ್ಪನ್ನವಾದ ಯಾತನೆಯನ್ನು ಯಾರು ಅರಿಯ ಬಲ್ಲರು? ಪ್ರೇಮದ ಆದರ್ಶ ಸ್ವರೂಪ ಅದು. ಆ ಪ್ರೇಮ ಮತ್ತಾವುದನ್ನೂ ಆಶಿಸುವುದಿಲ್ಲ. ಆ ಪ್ರೇಮದಲ್ಲಿ ಸ್ವರ್ಗದ ಆಕಾಂಕ್ಷೆಯೂ ಇಲ್ಲ. ಆ ಪ್ರೇಮದಲ್ಲಿ ಇಹಪರ ಲೋಕಗಳ ಯಾವ ವಸ್ತು ಕಾಮ ವಾಸನೆಯೂ ಇಲ್ಲ. ನನ್ನ ಸ್ನೇಹಿತರೇ, ಗೋಪೀ ಪ್ರೇಮದ್ವಾರ ಸಗುಣ ನಿರ್ಗುಣ ಉಪಾಸನೆಯ ಚರ್ಚೆಗೆ ಒಂದು ಪರಿಹಾರವಿದೆ. ಸಗುಣ ಈಶ್ವರ ಮನುಷ್ಯನ ಉತ್ತಮೋತಮ ಭಾವನೆ ಎಂಬುದು ನಮಗೆ ಗೊತ್ತಿದೆ. ಆದರೆ ದಾರ್ಶನಿಕ ದೃಷ್ಟಿಯಿಂದ ಸಮಸ್ತ ಜಗದ್ವ್ಯಾಪಿ. ಯಾರಿಂದ ಈ ಸಂಸಾರ ವೆಲ್ಲಾ ವಿಕಾಸವಾಗಿದೆಯೊ ಅಂತಹ ನಿರ್ಗುಣ ಈಶ್ವರನಲ್ಲಿ ವಿಶ್ವಾಸವಿಡು ವುದು ಯುಕ್ತವಾಗಿದೆ. ಆದರೆ ನಮ್ಮ ಹೃದಯ ಗ್ರಹಿಸಲು ಸಾಧ್ಯವಾದುದನ್ನು ಆಶಿಸುವುದು. ನಮ್ಮ ಕೈಗೆ ನಿಲುಕುವ ವಸ್ತುಗಾಗಿ ಕಾತರಿಸುವುದು.

ಯಾರ ಅಡಿಯಲ್ಲಿ ನಮ್ಮ ಹೃದಯ ಆ ವೇಗವನ್ನೆಲ್ಲಾ ಹೊರಗೆಡಹ ಬಹುದೋ ಅಂತಹ ಒಂದು ಆಕಾರಕ್ಕಾಗಿ ತವಕಪಡುವುದು. ಸಗುಣ ಈಶ್ವರ ಮಾನವನ ಉಚ್ಚತಮ ಧಾರಣೆ. ಆದರೆ ಯುಕ್ತಿಗೆ ಇದರಿಂದ ತೃಪ್ತಿ ಇಲ್ಲ. ಬ್ರಹ್ಮಸೂತ್ರದಲ್ಲಿ ಚರ್ಚಿಸುವ ಹಳೆಯ ವಿಷಯವೇ, ದ್ರೌಪದಿ ಧರ್ಮರಾಜನನ್ನು ಅರಣ್ಯದಲ್ಲಿ ಕೇಳುವ ಹಳೆಯ ಪ್ರಶ್ನೆಯೇ, ಬರುವುದು. ಸಗುಣ ಸಂಪೂರ್ಣ ದಯಾಮಯನಾದ ಸರ್ವ ಶಕ್ತಿವಾನ್ ಈಶ್ವರನೊಬ್ಬನಿದ್ದರೆ, ಈ ನರಕ ಸದೃಶ ಸಂಸಾರವೇಕೆ ಬಂತು? ಅವ ನೊಬ್ಬ ಮಹಾ ಪಕ್ಷಪಾತಿ ಎಂಬ ಭಾವನೆ ಬರುವುದು. ಇದಕ್ಕೆ ಉತ್ತರವೇ ಇಲ್ಲ. ನಮಗೆ ಸಿಕ್ಕುವ ಏಕಮಾತ್ರ ಪರಿಹಾರವೇ ಗೋಪಿಯರ ಪ್ರೇಮದಲ್ಲಿದೆ. ಕೃಷ್ಣನ ಪ್ರೇಮಕ್ಕೆ ಆರೋಪಿಸುವ ಯಾವ ವಿಶೇಷಣವನ್ನೂ ಅವರು ಲೆಕ್ಕಿಸಲಿಲ್ಲ. ಶ್ರೀಕೃಷ್ಣ ಸೃಷ್ಟಿ ಕರ್ತನೆಂದು ಬಗೆಯಲು ಅವರು ಇಚ್ಛಿಸ ಲಿಲ್ಲ. ಅವನು ಸರ್ವೇಶ್ವರ, ಸರ್ವಶಕ್ತ–ಮುಂತಾದ ಯಾವ ವಿಶೇಷಣ ವನ್ನೂ ಅವರು ಲೆಕ್ಕಿಸಲಿಲ್ಲ. ಶ್ರೀಕೃಷ್ಣನು ಅನಂತ ಪ್ರೇಮ ಸ್ವರೂಪ ವೆಂಬುದೊಂದೇ ಅವರಿಗೆ ಅರ್ಥವಾಗುತ್ತಿದ್ದುದು. ಇಷ್ಟೇ ಅವರಿಗೆ ಸಾಕಾ ಗಿತ್ತು. ಬೃಂದಾವನದ ಕೃಷ್ಣ ಎಂಬುದಾಗಿ ಮಾತ್ರ ಗೋಪಿಯರು ಅವನನ್ನು ತಿಳಿದುಕೊಂಡಿದ್ದರು. ಅಸಂಖ್ಯಾತ ಸೇನಾನಾಯಕ, ರಾಜಾಧಿರಾಜನಾದ ಶ್ರೀಕೃಷ್ಣನು, ಗೋಪಿಯರಿಗೆ ಸದಾ ನಿಕಟ ಗೋಪಾಲನಾಗಿಯೇ ಇದ್ದ.

"ನ ಧನಂ ನ ಜನಂ ನ ಚ ಸುಂದರೀಂ ಕವಿತಾಂ ವಾ ಜಗದೀಶ ಕಾಮಯೆ ।
ಮಮ ಜನ್ಮನಿ ಜನ್ಮನೀಶ್ವರೆ ಭವತಾದ್ಭಕ್ತಿ ರಹೈತುಕೀ ತ್ವಯಿ ॥

"ಹೇ, ಜಗದೀಶ! ನನಗೆ ದ್ರವ್ಯ ಬೇಕಾಗಿಲ್ಲ. ಜನ, ಕವಿತೆ, ಸುಂದರಿ ಯಾವುದೂ ಬೇಕಾಗಿಲ್ಲ. ಹೇ, ಈಶ್ವರಾ! ಜನ್ಮ ಜನ್ಮಾಂತರ ಗಳಲ್ಲಿಯೂ ನನಗೆ ನಿನ್ನ ಮೇಲೆ ಅಹೇತುಕ ಭಕ್ತಿಯನ್ನು ದಯ ಪಾಲಿಸು." ಈ ಅಹೇತುಕ ಭಕ್ತಿ ಈ ನಿಷ್ಕಾಮ ಕರ್ಮ, ಧರ್ಮದ ಇತಿ ಹಾಸದಲ್ಲಿ ಒಂದು ನವ ಅಧ್ಯಾಯ. ಸೃಷ್ಟಿಯಲ್ಲಿ ಸರ್ವಶ್ರೇಷ್ಠ ಅವತಾರ ನಾದ ಶ್ರೀಕೃಷ್ಣನ ಮೂಲಕ, ಪ್ರಥಮಬಾರಿ ಭಾರತದಲ್ಲಿ ಈ ತತ್ತ್ವ ಪ್ರಚಾರವಾಯಿತು. ಭಯದ ಧರ್ಮ ಕಾಮನೆಯ ಧರ್ಮ ಮಾಯ ವಾಯಿತು. ಮನುಷ್ಯನ ಹೃದಯದಲ್ಲಿರುವ ಸ್ವಾಭಾವಿಕ ನರಕಭಯ ಸ್ವರ್ಗಸುಖಭೋಗ ಇಚ್ಛೆ ಇವನ್ನು ಮೀರಿ, ಈ ಅಹೇತುಕ ಭಕ್ತಿ ಮತ್ತು

ನಿಷ್ಕಾಮ ಕರ್ಮ, ಶ್ರೇಷ್ಠ ಆದರ್ಶದ ಅಭ್ಯುದಯವಾಯಿತು.

ಆ ಪ್ರೇಮ ಎಂತಹುದು! ಗೋಪೀಪ್ರೇಮವನ್ನು ತಿಳಿಯುವುದು ಬಹಳ ಕಷ್ಟವೆಂದು ಈಗ ತಾನೇ ಹೇಳಿದೆ. ಅತಿ ಅದ್ಭುತ ಘಟನೆಯ, ಅಮೋಘವಾದ ಪ್ರಾಮುಖ್ಯತೆಯನ್ನು ತಿಳಿದುಕೊಳ್ಳಲಾರದ ಮೂಢರಿಗೆ ನಮ್ಮಲ್ಲಿ ಅಭಾವವಿಲ್ಲ. ನಾನು ಪುನಃ ಹೇಳುತ್ತೇನೆ, ನಮ್ಮ ರಕ್ತದಿಂದಲೇ ಉತ್ಪನ್ನರಾದ ಅನೇಕ ಅಶುದ್ಧಾತ್ಮರಿರುವರು. ಆ ಮೂರ್ಖರು, ಗೋಪೀ ಪ್ರೇಮವನ್ನು ಕೇಳಿದೊಡನೆಯೇ, ಅದು ಅತ್ಯಂತ ಅಪವಿತ್ರವೆಂದು, ಭಯದಿಂದ ದೂರಸರಿಯುವರು. ನಾನು ಅವರಿಗೆ ಹೇಳುವುದು ಇಷ್ಟೆ: ಮೊದಲು ನೀವು ಶುದ್ಧರಾಗಿ. ಯಾರು ಗೋಪೀಪ್ರೇಮವನ್ನು ವಿವರಿಸುವನೋ, ಆತನು ಶುಕದೇವನಲ್ಲದೆ ಮತ್ತಾರೂ ಅಲ್ಲವೆಂಬುದನ್ನು ಗಮನದಲ್ಲಿಡಿ. ಯಾರು ಗೋಪಿಯರ ಅದ್ಭುತ ಪ್ರೇಮವನ್ನು ವರ್ಣಿಸುವನೋ ಅವನು ಆಜನ್ಮ ಶುದ್ಧ ವ್ಯಾಸತನಯ ಶುಕದೇವ. ಎಲ್ಲಿಯವರೆಗೂ ಹೃದಯದಲ್ಲಿ ಸ್ವಾರ್ಥಪರತೆ ಇದೆಯೋ, ಅಲ್ಲಿಯವರೆಗೂ ಭಗವತ್ಪ್ರೇಮ ಅಸಂಭವ. ಅದು ಕೇವಲ ವ್ಯಾಪಾರವಷ್ಟೆ. ದೇವರೆ! ನಾನು ನಿನಗೆ ಏನನ್ನಾದರೂ ಕೊಡುತ್ತೇನೆ, ನೀನು ನನಗೆ ಏನನ್ನಾದರೂ ಕೊಡು. ದೇವರು, "ನೀನು ಹೀಗೆ ಮಾಡದೆ ಇದ್ದರೆ ನಿನ್ನನ್ನು ಮರಣಾನಂತರ ವಿಚಾರಿಸಿಕೊಳ್ಳುತ್ತೇನೆ. ಅನಂತರ ನರಕದಲ್ಲಿ ನಿನ್ನನ್ನು ದಹಿಸುತ್ತೇನೆ" ಎನ್ನುವನು. ಎಲ್ಲಿಯವರೆಗೂ ಇಂತಹ ಭಾವನೆ ನಮ್ಮಲ್ಲಿ ಇರುವುದೋ, ಅಲ್ಲಿಯವರೆಗೆ ಗೋಪಿಯರ ಪ್ರೇಮಜನಿತ ವಿರಹದ ಉನ್ಮತ್ತತೆಯನ್ನು ಹೇಗೆ ಅರಿಯಬಲ್ಲೆವು?

ಸುರತವರ್ಧನಂ ಶೋಕನಾಶನಂ ಸ್ವರಿತವೇಣುನಾ ಸುಷ್ಠು
ಚುಂಬಿತಮ್ ।
ಇತರರಾಗವಿಸ್ಮಾರಣಂ ನೃಣಾಂ ವಿತರ ವೀರ ನಸ್ತೇಽಧರಾ
ಮೃತಂ ॥

"ಒಂದುಸಲ–ಕೇವಲ ಒಂದೇ ಒಂದುಸಲ, ನಿನ್ನ ಮಧುರ ಚುಂಬನ! ಯಾರು ನಿನ್ನ ಚುಂಬನವನ್ನು ಪಡೆದಿರುವರೋ, ಅವರಿಗೆ ನಿನ್ನ ಮೇಲಿನ ಪ್ರೇಮ ಮತ್ತೂ ಹೆಚ್ಚುವುದು. ದುಃಖವೆಲ್ಲ ನಾಶವಾಗುವುದು. ಇತರ ವಸ್ತುಗಳ ಮೇಲಿನ ಪ್ರೀತಿಯೆಲ್ಲ ಮರೆತುಹೋಗಿ ನಿನ್ನ ಪ್ರೀತಿಯೊಂದೇ ಉಳಿಯುವುದು."

ಮೊದಲು ಕಾಂಚನ ನಾಮ ಯಶಸ್ಸು ಮತ್ತು ಈ ಕ್ಷುದ್ರ ಮಿಥ್ಯಾ ಸಂಸಾರದ ಮೇಲಿನ ವ್ಯಾಮೋಹವನ್ನು ತ್ಯಜಿಸಿ. ಆಗ ಮಾತ್ರ ನೀವು ಗೋಪೀಪ್ರೇಮವನ್ನು ಗ್ರಹಿಸಬಲ್ಲಿ. ಎಲ್ಲಿಯವರೆಗೆ ಮನಸ್ಸು ಅಶುದ್ಧ ವಾಗಿದೆಯೋ, ಅಲ್ಲಿಯವರೆಗೆ ಅದನ್ನು ಗ್ರ ಹಿ ಸ ಲೂ ಯತ್ನಿಸಬೇಡಿ. ಎಲ್ಲಿಯವರೆಗೆ ಆತ್ಮ ಪೂ ರ್ಣ ಪವಿತ್ರವಾಗಿಲ್ಲವೋ ಅಲ್ಲಿಯವರೆಗೂ ಅದನ್ನು ತಿಳಿಯಲು ಪ್ರಯತ್ನ ಪಡುವುದೆಲ್ಲ ವಿಫಲ. ಯಾರ ಹೃದಯದಲ್ಲಿ ಪ್ರತಿಕ್ಷಣ ಕಾಮ ಯಶಸ್ಸು ಧನ ದಾ ಸೆಯ ಬುದ್ಬುದಗಳು ಏಳು ತ್ತಿವೆಯೋ, ಅ ವ ರು ಗೋಪೀಪ್ರೇಮವನ್ನು ತಿಳಿಯುವುದಕ್ಕೆ ಮತ್ತು ಅದನ್ನು ವಿಮರ್ಶಿಸುವ ಸಾಹಸಕ್ಕೆ ಕೈಹಾಕುವರು! ಕೃಷ್ಣಾವತಾರದ ಸಾರವೇ ಇದು. ದರ್ಶನಶಾಸ್ತ್ರಶಿರೋಮಣಿಯಂತೆ ಇರುವ ಗೀತೆಕೂಡ, ಈ ಪ್ರೇಮೋನ್ಮಾದಕ್ಕೆ ಸರಿದೂಗಲಾರದು. ಇದಕ್ಕೆ ಕಾರಣ, ಗೀತೆಯಲ್ಲಿ ಸಾಧಕನಿಗೆ, ಮುಕ್ತಿಯ ಎಡೆಗೆ ಹೇಗೆ ಹೋಗಬೇಕೆಂಬುದನ್ನು ಕ್ರಮಶಃ ಹೇಳುವನು. ಗೋಪೀಪ್ರೇಮದಲ್ಲಿ ಈಶ್ವರ ರಸಾಸ್ವಾದದ ಉನ್ಮತ್ತತೆ ಇದೆ; ಅದ್ಭುತ ಪ್ರೇಮೋನ್ಮಾದವಿದೆ. ಅಲ್ಲಿ ಗುರು ಶಿಷ್ಯ ಶಾಸ್ತ್ರ ಉಪದೇಶ ಸ್ವರ್ಗ ಅಂಜಿಕೆ ಈಶ್ವರ ಭಾವನೆ— ಈ ಯಾವ ಚಿಹ್ನೆಯೂ ಇಲ್ಲ. ಎಲ್ಲಾ ಮಾಯವಾಗಿದೆ. ಪ್ರೇಮೋನ್ಮಾದ ಒಂದೇ ಉಳಿದಿರುವುದು. ಆ ಸಮಯದಲ್ಲಿ ಕೃಷ್ಣನೊಬ್ಬನ ವಿನಃ ಮತ್ತಾವ ವಸ್ತುವಿನ ಸ್ಮರಣೆಯೂ ಇಲ್ಲ. ಆ ಸಮಯದಲ್ಲಿ ಸಮಸ್ತ ಪ್ರಾಣಿಗಳಲ್ಲಿಯೂ ಕೃಷ್ಣನೊಬ್ಬನನ್ನೇ ನೋಡುವನು. ಅವನ ಮೊಗವೂ ಕೃಷ್ಣನಂತೆ ಕಾಣುವುದು. ಮಹಾನು ಭಾವ ಶ್ರೀಕೃಷ್ಣನ ವರ್ಣನೆ ಇದು.

ಶ್ರೀ ಕೃಷ್ಣನ ಜೀವನದ ಸಣ್ಣ ಪುಟ್ಟ ಘಟನೆಯಲ್ಲಿ ಕಾಲವನ್ನು ವ್ಯರ್ಥಮಾಡಬೇಡಿ. ಅವನ ಜೀವನದ ಮುಖ್ಯ ಅಂಶವನ್ನು ಮಾತ್ರ ಸ್ವೀಕರಿಸಿ. ಕೃಷ್ಣನ ಜೀವನದಲ್ಲಿ ಹಲವು ಐತಿಹಾಸಿಕ ವಿರೋಧ ಭಾವನೆಗಳು ಇರಬಹುದು. ಹಲವು ಪ್ರಕ್ಷಿಪ್ತ ಭಾಗಗಳು ಇರಬಹುದು. ಇವುಗಳೆಲ್ಲ ಸತ್ಯವಿದ್ದರೂ ಇರಬಹುದು. ಆದರೂ ಇಂತಹ ಅದ್ಭುತ ನವ ಭಾವನೆಗೆ ಒಂದು ಆಧಾರ ಆವಶ್ಯಕ. ಇತರ ಮಹಾಪುರುಷರ ಜೀವನವನ್ನು ಕುರಿತು ಆಲೋಚಿಸಿದರೆ, ಅವರು ಏನನ್ನು ಬೋಧಿಸಿದರೋ ಅದು ಕೇವಲ ಅವರ ಹಿಂದಿನವರು ಹೇಳುತ್ತಿದ್ದ ವಿಷಯದ ಪ್ರತಿಧ್ವನಿಯಾಗಿದೆ. ತನ್ನ ಕಾಲದಲ್ಲಿ ಯಾವ ಭಾವನೆಯನ್ನು ಇತರರು ಪ್ರಚಾರಮಾಡುತ್ತಿದ್ದರೋ,

ಅದೇ ಭಾವನೆಯನ್ನು ಆ ಮಹಾಪುರುಷನೂ ಉಪದೇಶಿಸುವನು. ಆ ಮಹಾಪುರುಷ ಇದ್ದನೇ ಎಂಬ ವಿಷಯದಲ್ಲಿ ದೊಡ್ಡ ಸಂದೇಹವಿರಬಹುದು. ಆದರೆ ಕೃಷ್ಣನ ನಿಷ್ಕಾಮ ಕರ್ಮ ಮತ್ತು ನಿಷ್ಕಾಮ ಪ್ರೇಮತತ್ತ್ವಗಳು, ಪ್ರಪಂಚದಲ್ಲಿ ನವ ಆವಿಷ್ಕಾರ ಎಂದು ಪಣತೊಡುತ್ತೇನೆ. ಅದು ನವ ಆವಿಷ್ಕಾರವಾದರೆ ಅದಕ್ಕೆ ಯಾರಾದರೂ ಕಾರಣ ಕರ್ತರು ಇರಬೇಕು. ಇತರರಿಂದ ಎರವಲಾಗಿ ತೆಗೆದುಕೊಂಡಿರಲಿಕ್ಕಿಲ್ಲ. ಕೃಷ್ಣನ ಜನನ ಕಾಲದಲ್ಲಿ ಈ ಭಾವನೆ ಪ್ರಚಲಿತವಾಗಿರಲಿಲ್ಲ. ಆದರೆ ಭಗವಾನ್ ಶ್ರೀ ಕೃಷ್ಣ ಇದನ್ನು ಪ್ರಪ್ರಥಮಬಾರಿ ಜಗತ್ತಿಗೆ ಬೋಧಿಸಿದನು. ಅವನ ಶಿಷ್ಯ ವೇದವ್ಯಾಸ ಅದನ್ನು ಬರೆದು ಜಗತ್ತಿನಲ್ಲಿ ಪ್ರಚುರಪಡಿಸಿದನು. ಮನುಷ್ಯ ಜೀವನದಲ್ಲಿ ಇಂತಹ ಶ್ರೇಷ್ಠ ಆದರ್ಶ ಮತ್ತು ಚರಿತ್ರೆ ಬೇರೊಂದಿಲ್ಲ, ಅವನ ಗ್ರಂಥದಲ್ಲಿ ಬರುವ ಗೋಪೀಜನವಲ್ಲಭ, ಬೃಂದಾವನವಿಹಾರಿ ಶ್ರೀಕೃಷ್ಣನಿಗಿಂತಲೂ ಉಚ್ಚತರ ಆದರ್ಶ ಬೇರೊಂದಿಲ್ಲ. ಅಂತಹ ಪ್ರೇಮೋನ್ಮಾದ ನಿನಗೆ ಪ್ರಾಪ್ತವಾದರೆ, ಭಾಗ್ಯವತಿ ಗೋಪಿಯರ ಭಾವವನ್ನು ಗ್ರಹಿಸಿದರೆ ಆಗ ಪ್ರೇಮವೆಂದರೆ, ಏನೆಂಬುದು ಗೊತ್ತಾಗುವುದು. ಯಾವಾಗ ಸಮಸ್ತ ಸಂಸಾರ ನಿನ್ನ ದೃಷ್ಟಿಗೆ ಅಂತರ್ಧಾನವಾಗುವುದೋ, ನಿನ್ನ ಹೃದಯ ಪೂರ್ಣ ಶುದ್ಧವಾದಾಗ, ಬೇರಾವ ಸತ್ಯಾನುಸಂಧಾನದ ಲಕ್ಷ್ಯವೂ ಕೂಡ ಇಲ್ಲದೆ ಇರುವಾಗ ಮಾತ್ರ ಗೋಪಿಯರ ಪ್ರೇಮೋನ್ಮಾದ ನಿನಗೆ ಅರ್ಥವಾಗುವುದು. ಆಗ ಗೋಪಿಯರ ಪ್ರೇಮಭಕ್ತಿಯ ಶಕ್ತಿ ಅರಿವಾಗುವುದು. ಅದೇ ಗುರಿ. ಈ ಪ್ರೇಮ ನಿನಗೆ ದೊರೆತರೆ ಸಕಲವೂ ಪ್ರಾಪ್ತವಾದಂತೆ.

ಈಗ ಒಂದು ಮೆಟ್ಟಿಲು ಕೆಳಗೆ ಬಂದು, ಗೀತಾಪ್ರಚಾರಕ ಶ್ರೀ ಕೃಷ್ಣನನ್ನು ಅವಲೋಕಿಸೋಣ. ಈಗ ಭಾರತದಲ್ಲಿ ಕುದುರೆಯ ಮುಂದೆ ಗಾಡಿಯನ್ನು ಕಟ್ಟುವ ಒಂದು ಪ್ರಯತ್ನವಿದೆ. ಗೋಪೀಜನವಲ್ಲಭ ನಮಗೆ ಹಿಡಿಸುವುದಿಲ್ಲ. ಕಾರಣ, ಕೆಲವು ಐರೋಪ್ಯರು ಅದನ್ನು ಮೆಚ್ಚುವುದಿಲ್ಲ! ಇಂತಹ ವಿದ್ವಾಂಸ ಅದನ್ನು ಮೆಚ್ಚುವುದಿಲ್ಲ. ಆಗ ನಿಜವಾಗಿ ಗೋಪಿಯರು ದೂರ ಸರಿಯಬೇಕು. ಐರೋಪ್ಯರ ಅನುಮತಿ ಇಲ್ಲದೆ ಶ್ರೀ ಕೃಷ್ಣ ಹೇಗೆ ಜೀವಿಸಬಲ್ಲ? ಇಲ್ಲ, ಅವನು ಬದುಕಿರಲಾರ! ಮಹಾಭಾರತದಲ್ಲಿ ಎಲ್ಲೋ ಒಂದೆರಡು ಕಡೆ ಬಿಟ್ಟರೆ ಗೋಪಿಯರ ಪ್ರಸ್ತಾಪವೇ ಇಲ್ಲ. ಆ ಒಂದೆರಡು ಕಡೆಗಳೂ ಅಷ್ಟೇನೂ ಮುಖ್ಯವಾದ

ಸ್ಥಳವಲ್ಲ. ದ್ರೌಪದಿ ಪ್ರಾರ್ಥಿಸುವಾಗ, ಶಿಶುಪಾಲವಧಾಸಮಯದಲ್ಲಿ ಮಾತ್ರ ಬೃಂದಾವನದ ಗೋಪಿಯರ ಪ್ರಸಂಗವಿದೆ. ಇವೆಲ್ಲ ಪ್ರಕ್ಷಿಪ್ತ ಭಾಗಗಳು! ಐರೋಪ್ಯರು ಯಾವುದನ್ನು ಮೆಚ್ಚುವುದಿಲ್ಲವೋ, ಅದನ್ನು ನಾವು ಆಚೆಗೆಸೆಯಬೇಕು. ಗೋಪಿ ಮತ್ತು ಕೃಷ್ಣರ ಪ್ರಸಂಗವೆಲ್ಲ ಪ್ರಕ್ಷಿಪ್ತ ಭಾಗ. ಈ ಜನರಲ್ಲಿ ಘೋರ ವೈಶ್ಯವೃತ್ತಿ ಇದೆ. ಅಲ್ಲಿ ಧರ್ಮ ಕೂಡ ವ್ಯಾಪಾರವಾಗಿದೆ. ಇಲ್ಲಿ ಏನನ್ನೋ ಮಾಡಿ ಸ್ವರ್ಗಕ್ಕೆ ಹೋಗಲು ಯತ್ನಿಸುತ್ತಿರುವರು. ಬನಿಯನಿಗೆ ಚಕ್ರಬಡ್ಡಿ ಬೇಕು. ಇಲ್ಲಿ ಏನನ್ನಾದರೂ ಕೊಡಿಟ್ಟು ಸ್ವರ್ಗದಲ್ಲಿ ಅನುಭವಿಸಬೇಕು. ನಿಜವಾಗಿ ಇಂತಹ ವ್ಯವಹಾರದಲ್ಲಿ ಗೋಪಿಯರಿಗೆ ಸ್ಥಳವಿಲ್ಲ. ಈ ಭಾವನೆಯ ಶಿಖರದಿಂದ, ಗೀತಾಪ್ರಚಾರದ ಕೃಷ್ಣನ ಸಮೀಪಕ್ಕೆ ಇಳಿಯುವೆವು. ವೇದಗಳ ಮೇಲೆ ಗೀತೆಗಿಂತ ಉತ್ತಮ ಭಾಷ್ಯ ಬರೆದಿಲ್ಲ, ಬರೆಯುವಂತೆಯೂ ಇಲ್ಲ. ಶ್ರುತಿ ಸಾರವಾದ ಉಪನಿಷತ್ತನ್ನು ತಿಳಿದುಕೊಳ್ಳುವುದು ಕಷ್ಟ. ಎಷ್ಟೋ ಜನ ಟೀಕಾಕಾರರು ಇರುವರು. ಒಬ್ಬೊಬ್ಬರು ಒಂದೊಂದು ವಿಧವಾಗಿ ಟೀಕಿಸುವರು. ಕೊನೆಗೆ ಶ್ರುತಿಯ ಸ್ಫೂರ್ತಿದಾಯಕನೇ ಅವುಗಳ ಅರ್ಥವನ್ನು ನಮಗೆ ತೋರುವುದಕ್ಕಾಗಿ ಗೀತಾಪ್ರಚಾರಕನಂತೆ ಬರುವನು. ಇಂದು ಭರತಖಂಡಕ್ಕೆ ಅಲ್ಲಿ ವ್ಯಾಖ್ಯಾನಮಾಡುವ ರೀತಿಗಿಂತ ಉತ್ತಮವಾದುದು ಬೇಕಾಗಿಲ್ಲ. ಇಡೀ ಪ್ರಪಂಚಕ್ಕೇ ಬೇಕಾಗಿಲ್ಲ. ನಂತರ ಹಲವು ಭಾಷ್ಯಕಾರರು ಗೀತೆಯ ಮೇಲೆ ಭಾಷ್ಯಮಾಡುವಾಗಲೂ ಅನೇಕ ವೇಳೆ ಸರಿಯಾಗಿ ಅರ್ಥಗ್ರಹಿಸಲಿಲ್ಲ. ವಿಷಯ ಗಮನಿಸಲಿಲ್ಲ. ಗೀತೆಯಲ್ಲಿ ನಿಮಗೆ ಕಾಣುವುದೇನು? ಆಧುನಿಕ ಭಾಷ್ಯಕಾರರಲ್ಲಿ ಕಾಣುವುದೇನು? ಒಬ್ಬ ಅದ್ವೈತಿ ಉಪನಿಷತ್ತಿಗೆ ಭಾಷ್ಯಬರೆಯಲು ಯತ್ನಿಸುವನು. ಅಲ್ಲಿ ದ್ವೈತ ಭಾವನೆಯ ಶ್ಲೋಕಗಳೇಕೆ? ಅವುಗಳನ್ನು ಹೇಗೋ ಹಿಂಸೆಮಾಡಿ ಅದರಲ್ಲಿ ತನ್ನ ಅಭಿಪ್ರಾಯ ಬರುವಂತೆ ಮಾಡುವನು. ದ್ವೈತ ಭಾಷ್ಯಕಾರಬಂದರೆ ಎಷ್ಟೋ ಅದ್ವೈತ ಭಾವನೆಯ ಶ್ಲೋಕಗಳಿಗೆ ದ್ವೈತದ ಅರ್ಥ ಬರುವಂತೆ ಮಾಡುವನು. ಆದರೆ ಗೀತೆಯಲ್ಲಿ ಶ್ಲೋಕಪೀಡನೆಯ ಪ್ರಯತ್ನವೇ ಇಲ್ಲ. ಭಗವಂತ ಅವುಗಳೆಲ್ಲ ಸರಿಯಾಗಿದೆ ಎನ್ನುವನು. ಮಾನವಜೀವ ಕ್ರಮ ಕ್ರಮವಾಗಿ ಮೆಟ್ಟಿಲು ಮೆಟ್ಟಿಲಾಗಿ, ಸ್ಥೂಲದಿಂದ ಸೂಕ್ಷ್ಮಕ್ಕೆ, ಸೂಕ್ಷ್ಮದಿಂದ ಸೂಕ್ಷ್ಮತರಕ್ಕೆ, ನಿರ್ಗುಣ ಬ್ರಹ್ಮನ ಗುರಿಸೇರುವವರೆಗೆ ವಿಕಾಸವಾಗುತ್ತಿರುವುದು. ಗೀತೆಯಲ್ಲಿ ಇರುವುದು ಇದು. ಕರ್ಮಕಾಂಡವನ್ನು

ಕೂಡ ಸ್ವೀಕರಿಸುವನು. ಪ್ರತ್ಯಕ್ಷವಾಗಿ ಅದು ಮುಕ್ತಿಯನ್ನು ಕೊಡದೇ ಇದ್ದರೂ, ಪರೋಕ್ಷವಾಗಿ ಕೊಡುವುದು. ಅವೂ ಸತ್ಯ. ವಿಗ್ರಹ, ಆಚಾರ, ಆಕಾರ, ಇವುಗಳೆಲ್ಲ ಸತ್ಯ. ಚಿತ್ತಮಾತ್ರ ಶುದ್ಧಿಯಾಗಿರಬೇಕು. ಹೃದಯ ಶುದ್ಧವಾಗಿದ್ದರೆ, ನಿಷ್ಕಪಟವಾಗಿದ್ದರೆ, ಪೂಜೆ ಸತ್ಯವಾಗುವುದು. ನಮ್ಮನ್ನು ಗುರಿಯ ಎಡೆಗೆ ಒಯ್ಯುವುದು. ವಿಭಿನ್ನ ಉಪಾಸನಾರೀತಿ ಗಳೆಲ್ಲ ಸತ್ಯ. ಇಲ್ಲದೇ ಇದ್ದರೆ ಅವೆಲ್ಲ ಏತಕ್ಕೆ ಇರಬೇಕಾಗಿತ್ತು? ನಮ್ಮ ಹಲವು ಆಧುನಿಕರು ಯೋಚಿಸುವಂತೆ, ಧರ್ಮ, ಜಾತಿ, ಮುಂತಾದುವು ಗಳನ್ನೆಲ್ಲ ಕೆಲವು ದುಷ್ಟರು, ಕಪಟಿಗಳು, ಹಣದಾಸೆಯಿಂದ ಕಟ್ಟಿಸಲಿಲ್ಲ. ಈ ವಿವರಣೆ ಎಷ್ಟೇ ಯುಕ್ತವಾಗಿ ತೋರಿದರೂ ಇದು ಸತ್ಯವಲ್ಲ. ಇದನ್ನು ಕಂಡು ಹಿಡಿದುದು ಹೀಗಲ್ಲ. ಜೀವಿಯ ಸ್ವಾಭಾವಿಕ ಅವಶ್ಯ ಕತೆಗೆ ಅನುಗುಣವಾಗಿ ಅವು ಹುಟ್ಟಿವೆ. ವಿಭಿನ್ನ ಜನರ ತೃಪ್ತಿಗಾಗಿ ಇವು ಇವೆ. ಅವನ್ನು ವಿರೋಧಿಸಬೇಕಾಗಿಲ್ಲ. ಎಂದು ಆವಶ್ಯಕವಿಲ್ಲವೋ, ಆಗ ಅದೂ ಮಾಯವಾಗುವುದು. ಎಲ್ಲಿಯವರೆಗೆ ಅದಕ್ಕೆ ಆವಶ್ಯಕತೆ ಇದೆಯೋ ಅಲ್ಲಿಯವರೆಗೂ ಅದಕ್ಕೆ ವಿರೋಧವಾಗಿ ನೀನು ಎಷ್ಟೇ ಪ್ರಚಾರಮಾಡಿದರೂ, ಟೀಕಿಸಿದರೂ, ಅದು ಇದ್ದೇ ತೀರಬೇಕು. ಅದಕ್ಕೆ ವಿರೋಧವಾಗಿ ಕೋವಿ ಕತ್ತಿಗಳನ್ನು ತರಬಹುದು. ಪ್ರಪಂಚದಲ್ಲಿ ರಕ್ತ ಪಾತಪರಿಸಬಹುದು. ಎಲ್ಲಿಯವರೆಗೆ ವಿಗ್ರಹಕ್ಕೆ ಆವಶ್ಯಕತೆ ಇದೆಯೋ ಅಲ್ಲಿಯವರೆಗೂ ಅವು ಇರಲೇಬೇಕು. ಮೂರ್ತಿ ಪೂಜೆ, ಧರ್ಮದ ಹಲವು ಉಪಾಸನೆಗಳು ಇರಲೇಬೇಕು. ಭಗವಾನ್ ಶ್ರೀ ಕೃಷ್ಣನಿಂದ ಇವರ ಆವಶ್ಯಕತೆಗೆ ಕಾರಣ ತಿಳಿಯುತ್ತೇವೆ.

ಶ್ರೀ ಕೃಷ್ಣನು ಅಂತರ್ಧಾನನಾದ ಮೇಲೆ ಕೆಲವುಕಾಲ ಶೋಕ ಜನಕ ಅಧ್ಯಾಯ ಪ್ರಾರಂಭವಾಗುವುದು. ಗೀತೆಯಲ್ಲಿ ಭಿನ್ನ ಸಂಪ್ರ ದಾಯದ ವಿರೋಧದ ಕೋಲಾಹಲ, ದೂರದಿಂದಬರುವುದು ನಮಗೆ ಕೇಳಿಸುವುದು. ಸಮನ್ವಯದ ಅದ್ಭುತ ಪ್ರಚಾರಕ ಭಗವಾನ್ ಶ್ರೀ ಕೃಷ್ಣ, ಅವನ್ನೇ ಸ್ಥಾಪನೆ ಮಾಡಲು ಬರುವನು.

"ಮಯಿ ಸರ್ವಮಿದಂ ಪ್ರೋತಂ ಸೂತ್ರೇಮಣಿಗಣಾಂ ಇವ"

"ನನ್ನಲ್ಲಿ ಈ ಭಿನ್ನತೆಗಳೆಲ್ಲ ಮಾಲೆಯಂತೆ ಇವೆ" ಎನ್ನುವನು. ವಿಭಿನ್ನ ಅಭಿಪ್ರಾಯಗಳ ತುಮುಲವನ್ನು ನಾವು ಆಗಲೇ ಆಲಿಸಿರುವೆವು. ನಂತರ ಕೆಲವು ಕಾಲ ಸೌಹಾರ್ದ ಶಾಂತಿ ಇತ್ತೆಂದು ತೋರುವುದು.

ನಂತರ ವಿರೋಧ ಪುನಃ ಉತ್ಪನ್ನವಾಗುವುದು. ಕೇವಲ ಧರ್ಮಕ್ಷೇತ್ರದಲ್ಲಿ ಮಾತ್ರವಲ್ಲ. ಬಹುಶಃ ವರ್ಣದ ಕ್ಷೇತ್ರದಲ್ಲಿ ಇದು ಶುರುವಾಯಿತು. ನಮ್ಮ ಸಮೀಪದ ಎರಡು ಪ್ರಬಲ ಅಂಗಗಳಾದ ಬ್ರಾಹ್ಮಣ ಮತ್ತು ಕ್ಷತ್ರಿಯರಲ್ಲಿ ಇದು ಪ್ರಾರಂಭವಾಯಿತು. ಒಂದು ಸಾವಿರ ವರ್ಷಗಳವರೆಗೆ, ನಮ್ಮ ಭರತಖಂಡವನ್ನು ವಿಶಾಲ ತರಂಗ ಮುಳುಗಿಸಿತು. ಅದರ ಸರ್ವೋಚ್ಚ ಶಿಖರದಲ್ಲಿ ಒಬ್ಬ ಮಹಾಮಹಿಮ ಮೂರ್ತಿ ಗೋಚರಿಸಿದನು. ಅವನೇ ನಮ್ಮ ಗೌತಮ ಶಾಕ್ಯಮುನಿ. ಅವನ ಉಪದೇಶ ಮತ್ತು ಪ್ರಚಾರಗಳು ನಿಮ್ಮಲ್ಲಿ ಈಗಾಗಲೇ ಎಷ್ಟೋ ಜನರಿಗೆ ತಿಳಿದಿದೆ. ಅವನನ್ನು ಈಶ್ವರಾವತಾರವೆಂದು ಭಾವಿಸಿ, ಪೂಜಿಸುವೆವು. ನೀತಿ ತತ್ತ್ವವನ್ನು ಇಷ್ಟು ನಿರ್ಭೀತಿಯಿಂದ ಪ್ರಚಾರ ಮಾಡಿದವನು ಪ್ರಪಂಚದಲ್ಲಿ ಮತ್ತಾರೂ ಇಲ್ಲ. ಅವನು ಕರ್ಮಯೋಗಿಗಳಲ್ಲಿ ಸರ್ವಶ್ರೇಷ್ಠ. ಸ್ವಯಂ ಕೃಷ್ಣನೇ ಶಿಷ್ಯರೂಪಿನಂತೆ ತನ್ನ ಉಪದೇಶವನ್ನು ಅನುಷ್ಠಾನಕ್ಕೆ ತರುವುದಕ್ಕಾಗಿ ಜನಿಸಿದಂತೆ ತೋರುವುದು. ಗೀತೆಯ,

"ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್"

"ಸ್ವಲ್ಪ ಧರ್ಮದ ಅನುಷ್ಠಾನದಿಂದಲೂ ಮಹಾ ಭಯದಿಂದ ಪಾರಾಗುವಿರಿ"

"ಸ್ತ್ರಿಯೋ ವೈಶ್ಯಸ್ತಥಾ ಶೂದ್ರಾಸ್ತೇಽಪಿಯಾನ್ತಿ ಪರಾಂಗತಿಮ್"

ಸ್ತ್ರೀ ವೈಶ್ಯ ಶೂದ್ರರಿಗೆಲ್ಲ ಪರಮಗತಿಪ್ರಾಪ್ತವಾಗುವುದು ಎಂಬ ವಾಣಿಯನ್ನು ಆಲಿಸುವೆವು.

ಗೀತೆಯ ವಾಕ್ಯ, ಶ್ರೀಕೃಷ್ಣನ ವಜ್ರಸಮಾನ ಗಂಭೀರವಾಣಿ ಎಲ್ಲರ ಬಂಧನವನ್ನು ತೊರೆದು ಶೃಂಖಲೆಯನ್ನು ಖಂಡಿಸಿ, ಪರಮ ಪದವನ್ನು ಮುಟ್ಟುವುದಕ್ಕೆ ಎಲ್ಲರಿಗೂ ಅಧಿಕಾರವಿದೆ ಎಂದು ಸಾರುವುದು.

ಇಹೈವ ತೈ ರ್ಜಿತಃ ಸರ್ಗೋಯೇಷಾಂ ಸಾಮ್ಯೇಸ್ಥಿತಂ ಮನಃ
ನಿರ್ದೋಷಂ ಹಿ ಸಮಂ ಬ್ರಹ್ಮ ತಸ್ಮಾತ್ ಬ್ರಹ್ಮಣೀ ತೆ ಸ್ಥಿತಾಃ ॥

"ಯಾರ ಮನಸ್ಸು ಏಕತ್ವದಲ್ಲಿ ಸ್ಥಿರವಾಗುವುದೋ ಅವರು ಈ ಜೀವನದಲ್ಲೇ ಸಂಸಾರದಿಂದ ಪಾರಾಗಿರುವನು. ಏಕೆಂದರೆ ದೇವರು ನಿರ್ದೋಷಿ. ಎಲ್ಲರಿಗೂ ಸಮ. ಅಂತಹವರು ಭಗವಂತನಲ್ಲಿಯೂ ವಾಸಿಸುವರು".

ಸಮಂ ಪಶ್ಯನ್ ಹಿ ಸರ್ವತ್ರ ಸಮವಸ್ಥಿತ ಮೀಶ್ವರಮ್ ।
ನ ಹಿನಸ್ತ್ಯಾತ್ಮನಾತ್ಮಾನಂ ತತೋ ಯಾತಿ ಪರಾಂಗತಿಂ ॥

“ ಎಲ್ಲಾ ಕಡೆಯಲ್ಲಿಯೂ ಭಗವಂತನನ್ನೇ ನೋಡುತ್ತಿರುವ ಜ್ಞಾನಿ, ಆತ್ಮನನ್ನು, ಆತ್ಮನಿಂದ ಹಿಂಸಿಸುವುದಿಲ್ಲ. ಪರಮ ಪದವನ್ನು ಸೇರುವನು ”.

ಗೀತೆಯ ಉಪದೇಶಕ್ಕೆ ಸಜೀವ ಉದಾಹರಣೆ ಕೊಡುವುದಕ್ಕೋ ಎಂಬಂತೆ ಅದರ ಒಂದು ಅಂಶವನ್ನಾದರೂ ಕಾರ್ಯಕಾರಿ ಮಾಡುವುದಕ್ಕೆ ಪ್ರಚಾರಕನೇ ಮತ್ತೊಂದು ರೂಪಿನಿಂದ ಬಂದನು. ಅವನೇ ಶಾಕ್ಯಮುನಿ. ದೀನದುಃಖಿಗಳ ಉಪದೇಶಕ. ಜನಸಾಮಾನ್ಯರ ಭಾಷೆಯಲ್ಲಿ ಮಾತನಾಡುವುದಕ್ಕಾಗಿ, ದೇವ ಭಾಷೆಯನ್ನೂ ತೊರೆದನು. ದೀನ ದರಿದ್ರ ಪತಿತರೊಂದಿಗೆ ಇರುವುದಕ್ಕಾಗಿ, ರಾಜಸಿಂಹಾಸನವನ್ನು ತೊರೆದನು. ಎರಡನೆ ರಾಮನಂತೆ ಚಂಡಾಲನನ್ನೂ ಆಲಂಗಿಸಿದನು.

ಅವನ ಮಹಾಚರಿತ್ರೆ, ಅದ್ಭುತ ಪ್ರಚಾರಕಾರ್ಯ ನಿಮಗೆಲ್ಲ ತಿಳಿದಿದೆ. ಆದರೆ ಅವನ ಕಾರ್ಯದಲ್ಲಿ ಒಂದು ದೊಡ್ಡ ನ್ಯೂನತೆ ಇತ್ತು. ಅದಕ್ಕಾಗಿ, ನಾವು ಇಂದು ವ್ಯಥೆಪಡಬೇಕಾಗಿದೆ. ಭಗವಾನ್ ಬುದ್ಧನಲ್ಲಿ ಕೊಂಚವೂ ದೋಷವಿಲ್ಲ. ಅವನ ಚರಿತ್ರೆ ವಿಶುದ್ಧವಾಗಿದೆ, ಉಜ್ವಲವಾಗಿದೆ. ಖೇದದ ವಿಷಯವೆ, ಆ ಧರ್ಮಕ್ಕೆ ಸೇರಿದ ವಿಭಿನ್ನ ಅಸಭ್ಯ ಅಶಿಕ್ಷಿತ ಜನಾಂಗಗಳಿಗೆ ಈ ಪರಮೋಚ್ಚ ಆದರ್ಶವನ್ನು ಅನುಸರಿಸುವುದು ಅಸಾಧ್ಯವಾಯಿತು. ಆ ಧರ್ಮಕ್ಕೆ ನಾನಾ ಪ್ರಕಾರದ ಸಂಸ್ಕಾರ, ಭೀಭತ್ಸ ಪದ್ಧತಿಗಳೆಲ್ಲ ನುಗ್ಗಿದವು. ಕೆಲವು ಕಾಲ ಸಭ್ಯರಾದಂತೆಯೇ ಕಂಡವು. ಆದರೆ ಒಂದು ಶತಮಾನ ಕಳೆಯುವುದರೊಳಗೆ ಅವರು ಉಪಾಸನೆ ಮಾಡುತ್ತಿದ್ದ ಸರ್ಪ ಭೂತಾದಿಗಳು ಹೊರಬಂದುವು. ಈ ಪ್ರಕಾರವಾಗಿ ಇಡೀ ಭರತಖಂಡ, ಕುಸಂಸ್ಕಾರದ ಲೀಲಾಕ್ಷೇತ್ರವಾಯಿತು. ಮೊದಮೊದಲು ಬಂದ ಬೌದ್ಧರು ಪ್ರಾಣಿಹಿಂಸೆಗೆ ವಿರೋಧವಾಗಿ ವೇದಗಳಲ್ಲಿ ಬರುವ ಯಜ್ಞವನ್ನು ಖಂಡಿಸಿದ್ದರು. ಈ ಯಜ್ಞವನ್ನು ಪ್ರತಿಯೊಂದು ಮನೆಯಲ್ಲಿಯೂ ನಡೆಸುತ್ತಿದ್ದರು. ಇದಕ್ಕಾಗಿ ಸ್ವಲ್ಪ ಅಗ್ನಿ ಉರಿಯುತ್ತಿತ್ತು, ಅಷ್ಟೆ. ಬೌದ್ಧ ಧರ್ಮ ಪ್ರಚಾರವಾದ ಮೇಲೆ, ಯಜ್ಞಕ್ಕೂ ಲೋಪಬಂತು. ಅದರ ಬದಲು ಆಧುನಿಕ ಕಾಲದಲ್ಲಿ ನಾವು ನೋಡುವ ಐಶ್ವರ್ಯಯುಕ್ತ ಮಂದಿರ, ಆಡಂಬರ, ಪ್ರದರ್ಶನಾಲೋಲ ಪೂಜಾರಿವೃಂದವೆಲ್ಲ ಜಾರಿಗೆ ಬಂದಿತು. ಇನ್ನು ಹೆಚ್ಚು ತಿಳಿದುಕೊಳ್ಳಬೇಕಾಗುವ ಆಧುನಿಕ ಪಂಡಿತ ವೃಂದ ಬರೆದಿರುವ ಗ್ರಂಥದಲ್ಲಿ ಬುದ್ಧನನ್ನು ಬ್ರಾಹ್ಮಣರ ವಿಗ್ರಹ ಭೇದಕನೆಂಬುದನ್ನು ಓದಿದಾಗ ನಗಬೇಕಾಗುವುದು. ಬೌದ್ಧ ಧರ್ಮವೇ ಬ್ರಾಹ್ಮಣ ಜಾತಿ ಮತ್ತು

ಮೂರ್ತಿ ಪೂಜೆಗೆ ಕಾರಣವೆಂಬುದು ಅವರಿಗೆ ಸ್ವಲ್ಪವೂ ತಿಳಿಯದು. ಒಬ್ಬ ರಷ್ಯಾದೇಶಿಯು ಒಂದೆರಡು ವರ್ಷಗಳ ಕೆಳಗೆ ಒಂದು ಪುಸ್ತಕ ಬರೆದನು. ಏಸೂಕ್ರಿಸ್ತನ ಜನನದ ವಿಷಯದಲ್ಲಿ ಒಂದು ರಹಸ್ಯವನ್ನು ಕಂಡುಹಿಡಿದೆ ಎನ್ನುವನು. ಆ ಪುಸ್ತಕದಲ್ಲಿ ಒಂದು ಕಡೆ ಕ್ರಿಸ್ತ ಜಗನ್ನಾಥ ದೇವಾಲಯಕ್ಕೆ ಬ್ರಾಹ್ಮಣ ರೊಂದಿಗೆ ವಿದ್ಯೆ ಕಲಿಯಲು ಹೋದ ನಂತೆ. ಅವರ ವಿಗ್ರಹ ಮತ್ತು ಜಾತಿಯ ಸಂಕುಚಿತ ಭಾವನೆಗೆ ಸಹಿಸ ಲಾರದೆ ಟಿಬೆಟ್ಟಿನಲ್ಲಿರುವ ಲಾಮಾಗಳ ಸಮೀಪಕ್ಕೆ ಹೋಗಿ ಮುಕ್ತಿ ಪಡೆದು ಹಿಂತಿರುಗಿದ ಎಂದು ಬರೆದಿರುವನು. ಹಿಂದೂ ದೇಶದ ಚರಿತ್ರೆ ಪರಿಚಯವಿರುವ ಯಾರಿಗಾದರೂ ಇದು ಸುಳ್ಳು ಎಂಬುದು ಗೊತ್ತಾಗು ವುದು. ಏಕೆಂದರೆ ಜಗನ್ನಾಥ ದೇವಾಲಯ ಅದಕ್ಕೆ ಮುಂಚೆ ಬುದ್ಧರ ವಿಹಾರವಾಗಿತ್ತು. ಅದನ್ನೂ ಮತ್ತು ಇತರ ದೇವಾಲಯಗಳನ್ನೂ ನಾವು ತೆಗೆದುಕೊಂಡು ಹಿಂದೂ ದೇವಾಲಯಗಳನ್ನಾಗಿ ಮಾರ್ಪಡಿಸಿದೆವು. ಇನ್ನೂ ನಾವು ಎಷ್ಟೋ ಹೀಗೆ ಮಾಡಬೇಕಾಗಿರುವುದು. ಈ ಜಗನ್ನಾಥ ದಲ್ಲಿ ಆಗ ಒಬ್ಬ ಬ್ರಾಹ್ಮಣನೂ ಇರಲಿಲ್ಲ. ಆದರೂ ಕ್ರಿಸ್ತ ಬ್ರಾಹ್ಮಣ ರೊಂದಿಗೆ ಓದಲು ಅಲ್ಲಿಗೆ ಬಂದನೆಂದು ಹೇಳಿದೆ. ನಮ್ಮ ಪ್ರಖ್ಯಾತ ರಷ್ಯಾ ಪ್ರಾಚೀನ ಸಂಶೋಧಕ ಹೇಳುವುದು ಇದು. ಎಲ್ಲಾ ಭೂತಗಳಿಗೂ ದಯೆ ತೋರಬೇಕೆಂದು ಬೋಧಿಸಿದರೂ, ಎಷ್ಟೋ ಮಹೋನ್ನತ ನೀತಿ ಅವರ ಧರ್ಮದಲ್ಲಿ ಇದ್ದರೂ, ಒಬ್ಬ ಶಾಶ್ವತ ಆತ್ಮನಿರುವನೇ ಇಲ್ಲವೇ ಎಂಬ ವಿಷಯದಲ್ಲಿ ಎಷ್ಟೋ ವಾದ ವಿವಾದಗಳನ್ನು ಎಬ್ಬಿಸಿದರೂ, ಬೌದ್ಧ ಮತದ ಸೌಧ ಕುಸಿದು ನುಚ್ಚು ನೂರಾಯಿತು. ನಾಶ ಅತಿ ಭೀಕರ ವಾಗಿತ್ತು. ಬೌದ್ಧ ಧರ್ಮದ ಅವನತಿ ಸಮಯದಲ್ಲಿ ಇದ್ದ ಹೀನ ಆಚಾರ ವ್ಯವಹಾರಗಳ ವಿಷಯವನ್ನು ಕುರಿತು ಮಾತನಾಡುವುದಕ್ಕೆ ಇಚ್ಛೆಯಾಗಲಿ ಸಮಯವಾಗಲೀ ಇಲ್ಲ. ಅತಿ ಕುತ್ಸಿತ ಅನುಷ್ಠಾನ ಪದ್ಧತಿ, ಅತ್ಯಂತ ಭಯಾನಕ ಮತ್ತು ಅಶ್ಲೀಲ ಗ್ರಂಥ ಬಂದುವು. ಮನುಷ್ಯ ಇದುವರೆಗೆ ಇಂತಹುದನ್ನು ಬರೆದಿಲ್ಲ, ಇಂತಹುದನ್ನು ಕಲ್ಪಿಸಿಕೊಂಡಿಲ್ಲ. ಅಂತಹ ಭೀಷಣ ಭಯಾನಕ ಅನುಷ್ಠಾನ ಪದ್ಧತಿ ಧರ್ಮದ ಹೆಸರಿನಲ್ಲಿ ಪ್ರಚಲಿತ ವಾಯಿತು. ಇವೆಲ್ಲಾ ಬೌದ್ಧ ಧರ್ಮದ ಸೃಷ್ಟಿ.

ಭರತಖಂಡ ಬದುಕ ಬೇಕಾಗಿತ್ತು. ಪುನಃ ಭಗವಂತನ ಆವಿರ್ಭಾವ ವಾಯಿತು. "ಧರ್ಮ ಗ್ಲಾನಿಯಾದಾಗ ನಾನು ಬರುತ್ತೇನೆ" ಎಂದ

ಭಗವಂತನು ಪುನಃ ಬಂದನು. ಈ ವೇಳೆ ದಕ್ಷಿಣದಲ್ಲಿ ಜನ್ಮಧಾರಣೆ ಮಾಡಿದನು. ಆ ಬ್ರಾಹ್ಮಣ ಯುವಕ ತಲೆ ಎತ್ತಿದನು. ಹದಿನಾರನೆ ವರುಷದ ಹೊತ್ತಿಗೆ ಅವನು ಗ್ರಂಥ ರಚನೆಯನ್ನೆಲ್ಲಾ ಪೂರೈಸಿದನು, ಎಂದು ಹೇಳುವರು. ಇಂತಹ ಅದ್ಭುತ ಶಂಕರಾಚಾರ್ಯ ಜನ್ಮಧಾರಣೆ ಮಾಡಿದನು. ಈ ಹದಿನಾರು ವರುಷದ ಯುವಕನ ಗ್ರಂಥಗಳು ಆಧುನಿಕ ಪ್ರಪಂಚದ ಅದ್ಭುತ ವಿಸ್ಮಯ. ಹಾಗೆಯೇ ಹುಡುಗನೂ ಅದ್ಭುತ ಪ್ರತಿಭಾಶಾಲಿ. ಭರತಖಂಡವನ್ನು ಪ್ರಾಚೀನ ವಿಶುದ್ಧ ಮಾರ್ಗಕ್ಕೆ ತರಬೇಕೆಂದು ಸಂಕಲ್ಪ ಮಾಡಿದನು. ಆದರೆ ಆ ಕಾರ್ಯ ಎಷ್ಟು ಕಠಿನ ಎಂಬುದನ್ನು ಕುರಿತು ಆಲೋಚಿಸಿ ನೋಡಿ. ಭರತಖಂಡದ ಅಂದಿನ ಸ್ಥಿತಿಯ ವಿಷಯವಾಗಿ ಕೆಲವು ವಿಷಯಗಳನ್ನು ನಾನು ಹೇಳಿರುವೆನು. ಈಗ ಸುಧಾರಿಸ ಬೇಕೆಂದಿರುವ ಕುಸಂಸ್ಕಾರಗಳೆಲ್ಲ ಬೌದ್ಧ ಧರ್ಮದ ಅವನತಿಯ ಪರಿಣಾಮ. ಮಾನವ ಕೋಟಿಯ ಭಯಾನಕ ಜಾತಿಗಳಿಂದ ಬೆಲೂಚಿ, ಟಾರ್ಟರ್, ಮುಂತಾದವರು ಭರತಖಂಡಕ್ಕೆ ಬಂದು ಬೌದ್ಧರಾಗಿ ನಮ್ಮೊಂದಿಗೆ ಬೆರೆತರು. ಅವರು ತಮ್ಮ ಆಚಾರಗಳನ್ನು ಇದರಲ್ಲಿ ಬೆರೆಸಿದರು. ನಮ್ಮ ಜಾತಿ ಜೀವನ ಅತ್ಯಂತ ಭಯಾನಕ ಪಾಶವಿಕ ಆಚಾರವಾಗಿ ಪರಿಣಮಿಸಿತು. ಆ ಯುವಕನಿಗೆ ಬೌದ್ಧರಿಂದ ಸಿಕ್ಕಿದ ಪೂರ್ವಿಕರ ಆಸ್ತಿಯೇ ಇದು. ಅಂದಿನಿಂದ ಇಂದಿನವರೆಗೆ ಭರತಖಂಡದ ಕಾರ್ಯವೆಲ್ಲಾ ವೇದಾಂತದ ಮೂಲಕ ಬೌದ್ಧರನ್ನು ಜಯಿಸಬೇಕಾಗಿರುವುದು. ಇದು ಇನ್ನೂ ಆಗುತ್ತಿದೆ. ಪೂರ್ಣವಾಗಿಲ್ಲ. ಮಹಾ ತತ್ತ್ವಜ್ಞಾನಿ ಶಂಕರ ಬಂದು ಬೌದ್ಧಧರ್ಮ ಮತ್ತು ವೇದಾಂತ ಧರ್ಮದಲ್ಲಿ ಅಷ್ಟೇನೂ ವ್ಯತ್ಯಾಸವಿಲ್ಲ, ಆದರೆ ಬುದ್ಧನ ಶಿಷ್ಯರು ಗುರುವನ್ನು ಸರಿಯಾಗಿ ತಿಳಿದುಕೊಳ್ಳದೆ ಅವನತಿಗೆ ಇಳಿದು, ಆತ್ಮ ದೇವರು ಇವುಗಳ ಅಸ್ತಿತ್ವವನ್ನು ಅಲ್ಲಗಳೆದರು ಎಂದು ತೋರಿದರು. ಬೌದ್ಧರೆಲ್ಲಾ ತಮ್ಮ ಹಳೆಯ ಧರ್ಮಕ್ಕೆ ಹಿಂತಿರುಗಿ ಬಂದರು. ಆದರೆ ಅವರ ಅನುಷ್ಠಾನದಲ್ಲಿ ಎಷ್ಟೋ ಆಚಾರಗಳು ರೂಢಿಗೆ ಬಂದಿದ್ದುವು. ಅವನ್ನು ಏನು ಮಾಡಬೇಕು ?

ಆಗ ಮಹಾನುಭಾವ ರಾಮಾನುಜರು ಜನ್ಮವೆತ್ತಿದರು. ಶಂಕರಾಚಾರ್ಯರಲ್ಲಿ ಪ್ರತಿಭೆಗೆ ತಕ್ಕ ಉದಾರ ಹೃದಯವಿರಲಿಲ್ಲವೆಂದು ಹೇಳಬೇಕಾಗಿದೆ. ರಾಮಾನುಜಾಚಾರ್ಯರ ಹೃದಯ ಬಹು ಉದಾರವಾಗಿತ್ತು. ಪತಿತರ ದುಃಖದಲ್ಲಿ ಭಾಗಿಯಾದರು. ಸಹಾನುಭೂತಿ ತೋರಿದರು. ಆ ಸಮು

ಯುದಲ್ಲಿ ಪ್ರಚಲಿತ ಅನುಷ್ಠಾನ ಪದ್ಧತಿ ತೆಗೆದುಕೊಂಡು ಸಾಧ್ಯವಾದಷ್ಟು ಪರಿಶುದ್ಧಮಾಡಿದರು. ಜನರಿಗೆ ಅವಶ್ಯಕವಾದ ಹೊಸ ಆಚಾರ ಪೂಜಾ ವಿಧಾನ, ಇವನ್ನು ಜಾರಿಗೆ ತಂದರು. ಸರ್ವೋಚ್ಛ ಆಧ್ಯಾತ್ಮಿಕ ಉಪಾಸನೆಯ ಬಾಗಿಲನ್ನು ಬ್ರಾಹ್ಮಣನಿಂದ ಚಂಡಾಲನವರೆಗೆ ತೆರೆದರು. ಇದೇ ರಾಮಾನುಜಾಚಾರ್ಯರ ಕಾರ್ಯ. ಈ ಕಾರ್ಯ ಹೀಗೆ ಸಾಗಿತು, ಕಾಲಾನಂತರ ಉತ್ತರ ದೇಶಕ್ಕೂ ಹರಡಿತು. ಇಲ್ಲಿ ಕೆಲವರು ಮಹಾವ್ಯಕ್ತಿಗಳು ಇದನ್ನು ಸ್ವೀಕರಿಸಿದರು. ಇದು ಮಹಮ್ಮದೀಯರ ಕಾಲದಲ್ಲಿ. ನಂತರ ಆಧುನಿಕ ಕಾಲದ ಆಚಾರ್ಯರಲ್ಲಿ ಚೈತನ್ಯ ಸರ್ವಶ್ರೇಷ್ಠ. ರಾಮಾನುಜರ ಕಾಲದಿಂದಲೂ ನೀವು ಒಂದನ್ನು ಗಮನಿಸಬಹುದು. ಅದು ಪ್ರತಿಯೊಬ್ಬರಿಗೂ ಆಧ್ಯಾತ್ಮಿಕ ವಿದ್ಯೆಯ ಅಧಿಕಾರ. ಶಂಕರಾಚಾರ್ಯರಿಗೆ ಮುಂಚೆ ಇದ್ದಂತೆ ರಾಮಾನುಜಾಚಾರ್ಯರ ಕಾಲವಾದ ಮೇಲೆ ಇದೊಂದು ಮುಖ್ಯ ಪಲ್ಲವಿಯಾಗಿದೆ. ಶಂಕರಾಚಾಯರು ಸಂಕುಚಿತ ಮನೋಧರ್ಮದವರು ಎಂದು ಏತಕ್ಕೆ ಹೇಳಬೇಕೋ ಗೊತ್ತಿಲ್ಲ. ಅವರ ಗ್ರಂಥದಲ್ಲಿ ಇದಕ್ಕೆ ಆಧಾರ ದೊರುಕುವುದಿಲ್ಲ. ಭಗವಾನ್ ಬುದ್ಧದೇವನ ಸಂದೇಶದಂತೆ ಇಲ್ಲಿಯೂ ಕೂಡ ಭಗವಾನ್ ಶಂಕರಾಚಾರ್ಯರಿಗೆ ಆರೋಪಿಸುವ ಈ ಪ್ರತ್ಯೇಕತೆಯ ನೀತಿ ಅವರ ಉಪದೇಶದಲ್ಲಿ ಸೇರಿಲ್ಲ. ಅವರ ಶಿಷ್ಯರು ಅದನ್ನು ಸರಿಯಾಗಿ ಅರ್ಥಮಾಡಿಕೊಳ್ಳಲಿಲ್ಲವೆನ್ನಬೇಕಾಗಿದೆ. ಉತ್ತರ ದೇಶದ ಭಕ್ತ ಚೈತನ್ಯ ಗೋಪಿಯರ ಪ್ರೇಮೋನ್ಮಾದಕ್ಕೆ ಆದರ್ಶವಾಗಿರುವನು. ಚೈತನ್ಯದೇವನೇ ಸ್ವಯಂ ಬ್ರಾಹ್ಮಣ. ದೊಡ್ಡ ವಿದ್ವಾಂಸರ ವಂಶದಲ್ಲಿ ಜನಿಸಿದವನು. ನ್ಯಾಯವನ್ನು ಬೋಧಿಸುತ್ತಿದ್ದನು. ತರ್ಕದಲ್ಲಿ ಎಲ್ಲರನ್ನೂ ಸೋಲಿಸುತ್ತಿದ್ದನು. ಇದೇ ಜೀವನದ ಉಚ್ಛತಮ ಆದರ್ಶವೆಂದು ಭಾವಿಸಿದ್ದನು. ಒಬ್ಬ ಮಹಾ ಪುರುಷರ ದಯೆಯಿಂದ ಇವರ ಜೀವನವೇ ಬೇರೆ ರೂಪು ತಾಳಿತು. ವಾದ, ವಿವಾದ, ತರ್ಕ, ನ್ಯಾಯ, ಅಧ್ಯಾಪನೆ, ಮುಂತಾದುವನ್ನೆಲ್ಲಾ ತ್ಯಜಿಸಿದನು. ಪ್ರೇಮೋನ್ಮತ್ತ ಚೈತನ್ಯ ಪ್ರಪಂಚದಲ್ಲೆಲ್ಲಾ ಸರ್ವಶ್ರೇಷ್ಠ ಭಕ್ತನಾದನು. ಅವನ ಭಕ್ತಿ ತರಂಗ ಭೂಮಿಯ ಮೇಲೆಲ್ಲಾ ಹರಿಯಿತು. ಎಲ್ಲರಿಗೂ ಶಾಂತಿ ದೊರಕಿತು. ಅವನ ಪ್ರೇಮಕ್ಕೆ ಮೇರೆ ಇರಲಿಲ್ಲ. ಸಾಧು, ಅಸಾಧು, ಹಿಂದೂ, ಮುಸಲ್ಮಾನ, ಪವಿತ್ರ, ಅಪವಿತ್ರ, ವೇಶ್ಯೆ, ಪತಿತರೆಲ್ಲರೂ ಅವನ ಪ್ರೇಮಕ್ಕೆ ಭಾಗಿಗಳಾಗಿದ್ದರು, ದಯೆಗೆ ಭಾಗಿಗಳಾಗಿದ್ದರು. ಇಂದಿಗೂ

ಅವಸಿಂದ ಚಾಲಿತ ಸಂಪ್ರದಾಯ ಕಾಲಕ್ರಮೇಣ ಎಲ್ಲಾ ಅವನತಿಗೆ ಬರುವಂತೆ ಅದು ಅವನತಿ ಮುಟ್ಟಿದರೂ, ಇಂದಿಗೂ ದರಿದ್ರ, ದುರ್ಬಲ, ಜಾತಿಚ್ಯುತ, ಪತಿತ, ಮತ್ತು ಸಮಾಜ ಬಾಹಿರರಿಗೆ ಆಶ್ರಯವಾಗಿದೆ. ಸತ್ಯದ ದೃಷ್ಟಿಯಿಂದ ದಾರ್ಶನಿಕರಲ್ಲಿ ಅದ್ಭುತ ಔದಾರ್ಯವಿದೆ ಎಂದು ನಾನು ಹೇಳಬೇಕಾಗಿದೆ. ಶಂಕರಾಚಾರ್ಯರ ಅನುಯಾಯಿಗಳಲ್ಲಿ ಯಾರೂ ಭರತ ಖಂಡದಲ್ಲಿರುವ ವಿಭಿನ್ನ ಸಂಪ್ರದಾಯಗಳು ಬೇರೆ ಎನ್ನುವುದಿಲ್ಲ. ಆದರೆ ಜಾತಿ ದೃಷ್ಟಿಯಿಂದ ಶಂಕರಾಚಾರ್ಯರು ಅತಿ ಪ್ರತ್ಯೇಕ ಭಾವ ದವರು. ಆದರೆ ವೈಷ್ಣವಾಚಾರ್ಯರ ಮತದಲ್ಲಿ, ಜಾತಿ ಭೇದದಲ್ಲಿ ಅದ್ಭುತ ಔದಾರ್ಯತೆ, ಧಾರ್ಮಿಕಭಾವನೆಯಲ್ಲಿ ಅತ್ಯಂತ ಪ್ರತ್ಯೇಕತೆ ನೋಡು ವೆವು.

ಒಬ್ಬರದು ಅದ್ಭುತ ಪ್ರತಿಭೆ. ಮತ್ತೊಬ್ಬರದು ವಿಶಾಲ ಹೃದಯ. ಅಂತಹ ಪ್ರತಿಭೆ ಮತ್ತು ವಿಶಾಲ ಹೃದಯದ ಒಬ್ಬ ಅದ್ಭುತ ಪುರುಷನ ಜನ್ಮಕ್ಕೆ ಸಮಯ ಸನ್ನಿಹಿತವಾಯಿತು. ಶಂಕರಾಚಾರ್ಯರ ಅದ್ಭುತ ಪ್ರತಿಭೆ ಜೊತೆಗೆ ಚೈತನ್ಯರ ಅದ್ಭುತ ವಿಶಾಲ ಅನಂತ ಹೃದಯ ಇರ ಬೇಕಾಗಿತ್ತು. ಯಾರೂ ಪ್ರತಿಸಂಪ್ರದಾಯದಲ್ಲಿಯೂ ಒಂದೇ ಈಶ್ವರ ಕೆಲಸ ಮಾಡುತ್ತಿರುವುದನ್ನು ನೋಡಬಲ್ಲರೋ, ಯಾರ ಹೃದಯ ದೀನರಿಗೆ ದುರ್ಬಲರಿಗೆ, ಜಾತಿ ಬಾಹಿರರಿಗೆ, ಪದದಳಿತರಿಗೆ ಅವರು ಭರತ ಖಂಡ ದಲ್ಲಿರಲೀ, ಪ್ರಪಂಚದಲ್ಲಿ ಬೇರೆಲ್ಲಿ ಬೇಕಾದರೂ ಇರಲಿ ಮರುಗುತ್ತಿತ್ತೋ, ಜತೆಗೆ ಯಾರ ಅದ್ಭುತ ಪ್ರಚಂಡ ಬುದ್ಧಿ ಶಕ್ತಿ ಭರತಖಂಡದಲ್ಲಿ ಮತ್ತು ಹೊರಗೆ ಇರುವ ಭಿನ್ನಭಿನ್ನ ಸಂಪ್ರದಾಯಗಳಲ್ಲಿ ಸಮನ್ವಯತೆಯನ್ನು ಸ್ಥಾಪಿಸುವ ಸೂಕ್ಷ್ಮ ಮಹದಾಲೋಚನೆಯ ಮೂಲಕ ಹೃದಯ ಮತ್ತು ಪ್ರತಿಭೆಗೆ ಸಾಮರಸ್ಯವನ್ನು ಕಲ್ಪಿಸಿ, ವಿಶ್ವಧರ್ಮವನ್ನು ಸ್ಥಾಪಿಸಬಲ್ಲಂತಹ ವ್ಯಕ್ತಿ ಜನ್ಮವೆತ್ತಿದನು. ಹಲವು ವರುಷಗಳು ಅವರ ಪದತಳದಲ್ಲಿ ಕುಳಿತುಕೊಳ್ಳುವ ಸೌಭಾಗ್ಯ ನನ್ನದಾಗಿತ್ತು. ಅಂತಹ ವ್ಯಕ್ತಿಯ ಜನ ನಕ್ಕೆ ಸಮಯ ಸನ್ನಿಹಿತವಾಗಿತ್ತು. ಅಂತಹ ವ್ಯಕ್ತಿಯ ಜನನ ಆವಶ್ಯಕ ವಾಗಿತ್ತು. ಅವರು ಜನಿಸಿದರು. ಎಲ್ಲಕ್ಕಿಂತ ಅಧಿಕ ಆಶ್ಚರ್ಯದ ವಿಶಯ ಅವರ ಸಮಗ್ರ ಜೀವನಕಾರ್ಯವು ನಗರದ ಸಮೀಪದಲ್ಲಿತ್ತು. ಆ ನಗರ ಪಾಶ್ಚಾತ್ಯಭಾವದಿಂದ ತುಂಬಿ ತುಳುಕಾಡಿ, ಅದರಲ್ಲಿ ಉನ್ಮತ್ತವಾಗಿ, ಉಳಿದ ಎಲ್ಲಾ ಭರತಖಂಡದ ನಗರಗಳಿಗಿಂತಲೂ ಅಧಿಕತರವಾಗಿ

ವಿದೇಶೀ ಭಾವದಲ್ಲಿ ತನ್ಮಯವಾಗಿತ್ತು. ಅವರು ಅಲ್ಲಿ ವಾಸವಾಗಿದ್ದರು. ಪುಸ್ತಕ ಪಾಂಡಿತ್ಯವೇ ಇರಲಿಲ್ಲ. ಅಂತಹ ಮಹಾ ಪ್ರತಿಭಾ ಸಂಪನ್ನ ರಾದರೂ ತಮ್ಮ ಹೆಸರನ್ನು ಕೂಡ ಬರೆಯಲು ಬರುತ್ತಿರಲಿಲ್ಲ. ಆದರೆ ನಮ್ಮ ವಿಶ್ವ ವಿದ್ಯಾನಿಲಯದ ಪ್ರಚಂಡ ಪ್ರತಿಭಾಸಂಪನ್ನ ಪದವೀಧರರು ಅವರಲ್ಲಿ ಮೇರುದಂಡ ಪ್ರತಿಭೆಯನ್ನು ಕಂಡರು. ಶ್ರೀರಾಮಕೃಷ್ಣ ಪರಮ ಹಂಸರು ಒಬ್ಬ ಅಲೌಕಿಕ ಮಹಾಪುರುಷರು. ಇದೊಂದು ಬೃಹತ್ಕಥೆ. ಇದನ್ನು ಲಂಬಿಸಲು ನನಗಿಂದು ಸಮಯವಿಲ್ಲ. ಭಾರತೀಯ ಮಹಾ ಪುರುಷರ ಪೂರ್ಣ ಪ್ರಕಾಶ ಸ್ವರೂಪ ಯುಗಾಚಾರ್ಯ ಶ್ರೀರಾಮಕೃಷ್ಣ ಪರಮಹಂಸರು. ಅವರ ಉಪದೇಶ ಇಂದಿಗೆ ವಿಶೇಷ ಕಲ್ಯಾಣಕಾರಿ. ಅವ ರಲ್ಲಿ ಈಶ್ವರೀಶಕ್ತಿ ಕೆಲಸ ಮಾಡುತ್ತಿರುವುದನ್ನು ಗಮನಿಸಿ. ಒಬ್ಬ ದರಿದ್ರ ಬ್ರಾಹ್ಮಣರ ಮಗುವಾಗಿದ್ದರು. ಅವರ ಜನ್ಮ ವಂಗದೇಶದಲ್ಲಿ ಸುದೂರ ಅಜ್ಞಾತ ಅಪರಿಚಿತ ಗ್ರಾಮ ಒಂದರಲ್ಲಿ. ಇಂದು ಯೂರೋಪ್ ಅಮೆರಿಕಾ ದೇಶದಲ್ಲಿ ಸಹಸ್ರಾರುಜನ ವಾಸ್ತವಿಕವಾಗಿ ಅವರನ್ನು ಪೂಜಿ ಸುತ್ತಿರುವರು. ಭವಿಷ್ಯದಲ್ಲಿ ಮತ್ತೂ ಸಹಸ್ರಾರುಜನ ಅವರನ್ನು ಪೂಜಿ ಸುವರು. ಈಶ್ವರನ ಲೀಲೆಯನ್ನು ಯಾರು ಅರಿಯಬಲ್ಲರು? ಸಹೋ ದರರೇ, ಯಾರು ಇದರಲ್ಲಿ ವಿಧಾತನ ಕರವನ್ನು ನೋಡಲಾರರೋ ಅವರು ಅಂಧರು, ಜನ್ಮಾಂಧರು. ಮುಂದೆ ಸಮಯ ದೊರೆತರೆ ಅವಕಾಶ ದೊರೆತರೆ ಅದರ ವಿಷಯವನ್ನು ವಿಸ್ತಾರವಾಗಿ ವಿವರಿಸುವೆನು. ಸದ್ಯಕ್ಕೆ ಇಷ್ಟನ್ನು ಮಾತ್ರ ನಿಮಗೆ ಹೇಳುತ್ತೇನೆ. ನಾನೇನಾದರೂ ಒಂದು ಸತ್ಯ ವಾಕ್ಯವನ್ನು ನುಡಿದಿದ್ದರೆ ಅದೆಲ್ಲಾ ಅವರ ವಾಕ್ಯ. ಯಾವುದು ಅಸತ್ಯ ವಾಗಿರುವುದೋ, ಭ್ರಮೆ ಪೂರ್ಣ ಅಥವಾ ಮಾನವ ಜಾತಿಗೆ ಹಿತಕಾರಿ ಯಲ್ಲವೋ ಅದೆಲ್ಲಾ ನನ್ನದು. ಅದರ ಜವಾಬ್ದಾರಿ ನನ್ನದು.



# ನಮ್ಮ ಪ್ರಸ್ತುತ ಕರ್ತವ್ಯ

**(ಮದ್ರಾಸ್ ಟ್ರಿಪ್ಲಿಕೇನ್ ಸಾಹಿತ್ಯ ಸಂಘದಲ್ಲಿ ಕೊಟ್ಟ ಉಪನ್ಯಾಸ)**

ದಿನ ಸಾಗಿದಂತೆಲ್ಲಾ ಜೀವನ ಸಮಸ್ಯೆ ಗಾಢವಾಗುತ್ತಿದೆ, ವಿಶಾಲ ವಾಗುತ್ತಿದೆ. ವೇದಾಂತ ಸತ್ಯಗಳನ್ನು ಮೊದಲು ಆವಿಷ್ಕಾರ ಮಾಡಿದಾಗ ಸಮಸ್ತ ಜೀವನದ ಅಖಂಡತ್ವವನ್ನು ಬಹಳ ಹಿಂದೆಯೇ ಸಾರಿದರು. ಅದೇ ಮೂಲ ಮಂತ್ರ ಮತ್ತು ಬೋಧನೆಯ ಸಾರ. ವಿಶ್ವದಲ್ಲಿ ಒಂದು ಪರಮಾಣುವು ಚಲಿಸುವಾಗಲೂ ಜಗತ್ತನ್ನು ಚಲಿಸುವಂತೆ ಮಾಡದೆ ಇರ ಲಾರದು. ಇಡೀ ವಿಶ್ವ ಪ್ರಗತಿ ಮಾರ್ಗವನ್ನು ಹಿಡಿಯದೆ ಕೇವಲ ವ್ಯಕ್ತಿಗೆ ಪ್ರಗತಿ ಎಂಬುದಿಲ್ಲ. ಜನಾಂಗದ ಯಾವ ಸಮಸ್ಯೆಯನ್ನೂ ಕೇವಲ ಒಂದು ಜಾತಿಯ ಅಥವಾ ಜನಾಂಗದ ದೃಷ್ಟಿಯಿಂದಲೇ ಬಗೆ ಹರಿಸಲಾಗು ವುದಿಲ್ಲವೆಂಬುದು ದಿನ ಕಳೆದಂತೆ, ಸ್ಪಷ್ಟವಾಗುತ್ತಿದೆ. ಪ್ರತಿ ಒಂದು ಭಾವನೆಯೂ ವಿಶ್ವವೆಲ್ಲವನ್ನೂ ವ್ಯಾಪಿಸುವಷ್ಟು ವಿಸ್ತಾರವಾಗಬೇಕು. ಪ್ರತಿಯೊಂದು ಆದರ್ಶವೂ ಇಡೀ ಮಾನವಕೋಟಿಗೆ ವ್ಯಾಪಿಸುವ ಪರಿ ಯಂತವೂ, ಇಲ್ಲ ಇಡೀ ಪ್ರಾಣಿಕೋಟಿಗೆ ವ್ಯಾಪಿಸುವ ಪರಿಯಂತವೂ ವಿಶಾಲ ವಾಗುತ್ತಾ ಹೋಗಬೇಕು. ನಮ್ಮ ದೇಶ ಕಳೆದ ಕೆಲವು ಶತಮಾನಗಳಿಂದ, ಹಿಂದೆ ಇದ್ದಂತೆ ಇಲ್ಲದೆ ಇರುವುದಕ್ಕೆ ಇದೇ ಕಾರಣ. ನಮ್ಮ ಅವನತಿಗೆ ಮುಖ್ಯ ಕಾರಣವೇ ನಮ್ಮ ದೃಷ್ಟಿ ಸಂಕೋಚ, ಕರ್ತವ್ಯ ಕ್ಷೇತ್ರ ಸಂಕೋಚ.

ಪ್ರಪಂಚದಲ್ಲಿ ಎರಡು ಆಶ್ಚರ್ಯಜನಕ ರಾಷ್ಟ್ರಗಳು ಒಂದೇ ಜನಾಂಗ ದಿಂದ ಕವಲೊಡೆದರೂ ಬೇರೆ ಬೇರೆ ವಾತಾವರಣದಲ್ಲಿ ಅಭಿವೃದ್ಧಿಯಾಗು ತ್ತಿವೆ. ಅದೇ ಹಿಂದು ಮತ್ತು ಗ್ರೀಸ್ ದೇಶ. ಪ್ರತಿಯೊಂದು ಜನಾಂಗವೂ ತನ್ನ ದೃಷ್ಟಿಯಿಂದ ಜೀವನ ಸಮಸ್ಯೆಯನ್ನು ಬಗೆಹರಿಸಲು ಯತ್ನಿಸುತ್ತಿದೆ. ಭಾರತೀಯ ಆರ್ಯನ ಉತ್ತರಕ್ಕೆ ಹಿಮಾವೃತ ಪರ್ವತವಿದೆ, ಕೆಳಗೆ ಪ್ರಸ್ಥ ಭೂಮಿಯಲ್ಲಿ, ಸಮುದ್ರದಂತೆ ಹರಿಯುತ್ತಿರುವ ಸ್ವಚ್ಛ ನೀರಿನ ನದಿಗಳೂ, ಇದೇ ಪೃಥ್ವಿಯ ತುದಿಯೋ ಎಂಬಂತೆ ಇರುವ ಅನಂತ ಅರಣ್ಯ, ಅವನ ದೃಷ್ಟಿಯನ್ನು ಅಂತರ್ಮುಖ ಮಾಡಿತು. ಸುತ್ತಲೂ ಮನೋಹರವಾದ ಪ್ರಕೃತಿ ದೃಶ್ಯದಿಂದ ಆವೃತನಾದ ಸೂಕ್ಷ್ಮ ಬುದ್ಧಿಶಾಲಿ ಆರ್ಯನು ಸ್ವಭಾ ವತಃ ಅಂತರ್ಮುಖಿಯಾದನು. ಚಿತ್ತ ವಿಭಜನೆ ಆರ್ಯರ ಮುಖ್ಯ

ಉದ್ದೇಶವಾಯಿತು. ಗ್ರೀಕರೂ ಕೂಡ ಪ್ರಪಂಚದ ಕೊನೆಯಂತೆ ಕಾಣುವ ಗ್ರೀಕ್ ದ್ವೀಪಸ್ಥೋಮಕ್ಕೆ ಬಂದರು. ಅದು ಸುಂದರವಾಗಿದ್ದರೂ, ಭವ್ಯ ಭಾವನೋದ್ದೀಪಕವಾಗಿರಲಿಲ್ಲ. ಸುತ್ತಲೂ ಪ್ರಕೃತಿ ಉದಾರವಾಗಿತ್ತು. ನಿರಾಭರಣವಾಗಿತ್ತು. ಅವನ ಮನಸ್ಸು ಸ್ವಾಭಾವಿಕವಾಗಿ ಬಹಿರ್ಮುಖಿ ವಾಗಿತ್ತು. ಇದರ ಪ್ರತಿಫಲವಾಗಿಯೇ ವಿಶ್ಲೇಷಣಾತ್ಮಕ ವಿಜ್ಞಾನ (Analytical Sciences) ಭರತಖಂಡದಲ್ಲಿ ಜನಿಸಿತು; ಗ್ರೀಸಿನಲ್ಲಿ ಶ್ರೇಣೀ ವಿಭಾಗಾತ್ಮಕ ವಿಜ್ಞಾನವೆಲ್ಲ (Science of Generalisation) ಜನಿಸಿತು.

ಹಿಂದೂ ಸೂಕ್ಷ್ಮಮತಿ ಅವನ ಪಥದಲ್ಲಿ ಹೋಗಿ ಅದ್ಭುತ ಫಲವನ್ನು ಸಂಪಾದಿಸಿತು. ಇಂದಿಗೂ ಕೂಡ ಹಿಂದೂಗಳ ವಿಚಾರ ಶಕ್ತಿಯಂತಹ ಅದ್ಭುತ ಶಕ್ತಿಗೆ ಸರಿಸಮಾನವಾದುದು ಇಲ್ಲ. ನಮ್ಮ ದೇಶದ ಹುಡುಗರಿಗೂ ಇತರರಿಗೂ ಸ್ಪರ್ಧೆ ಬಂದಾಗ ನಮ್ಮವರೇ ಯಾವಾಗಲೂ ಗೆಲ್ಲುವರೆಂಬುದು ಗೊತ್ತಿದೆ. ಮಹಮ್ಮದೀಯರು ಭರತಖಂಡವನ್ನು ಗೆಲ್ಲುವುದಕ್ಕೆ ಒಂದೆರಡು ಶತಮಾನಗಳ ಮುಂಚೆ ಈ ಶಕ್ತಿ ಜರ್ಝರಿತವಾಯಿತು. ಈ ಜಾತಿಶಕ್ತಿ ಉತ್ಪ್ರೇಕ್ಷೆಯಾಗಿ ಸ್ವಯಂ ಅಧಃ ಪತನಕ್ಕೆ ಇಳಿಯಿತು. ಈ ಅಧೋಗತಿ ಯನ್ನು ಭರತಖಂಡದ ಸಾಹಿತ್ಯ, ಸಂಗೀತ, ವಿಜ್ಞಾನ, ಎಲ್ಲಾ ಕಾರ್ಯಕ್ಷೇತ್ರ ದಲ್ಲಿಯೂ ನೋಡುವೆವು. ಲಲಿತ ಕಲೆಯಲ್ಲಿಯೂ ವಿಶಾಲ ಭಾವನೆ ಇರಲಿಲ್ಲ; ಭಾವಗಳ ಉಚ್ಚತೆ ಮತ್ತು ಭಿನ್ನ ಭಿನ್ನ ಅಂಶಗಳ ಸಮನ್ವಯವಿರಲಿಲ್ಲ. ಅದರ ಬದಲು ಅಲಂಕಾರಪ್ರಿಯ ಶೈಲಿಯ ಪ್ರಬಲ ವ್ಯಾಮೋಹವನ್ನು ನೋಡು ವೆವು. ಜನಾಂಗದ ವೈಶಿಷ್ಟ್ಯತೆ ನಾಶವಾದಂತೆ ತೋರಿತು. ಸಂಗೀತದಲ್ಲಿ ಚಿತ್ತವನ್ನು ಕಲಕುವಂತಹ ಸಂಸ್ಕೃತ ಭಾವನೆ ಇರಲಿಲ್ಲ. ಪ್ರತಿಯೊಂದು ಸ್ವರವೂ ಪ್ರತ್ಯೇಕ ನಿಂತು ಅದ್ಭುತ ಸಾಮರಸ್ಯವನ್ನು ಉಂಟು ಮಾಡುವಂತೆ ಇರಲಿಲ್ಲ. ಸ್ವರ ತನ್ನ ವೈಶಿಷ್ಟ್ಯವನ್ನು ಕಳೆದುಕೊಂಡಿತು. ನಮ್ಮ ಆಧುನಿಕ ಸಂಗೀತ ಹಲವು ರಾಗ ಸ್ವರಗಳ ಕಲಸು ಮೇಲೋಗರ. ಸಂಗೀತದಲ್ಲಿ ಅವನತಿಯ ಚಿಹ್ನೆ ಇದು. ಭಾವ ರಾಜ್ಯಕ್ಕೆ ಸಂಬಂಧಪಟ್ಟ ಇತರ ವಿಷಯಗಳನ್ನು ಆಲೋಚಿಸಿದರೂ ಕೂಡ ಅಲ್ಲಿ ವೈಶಿಷ್ಟ್ಯತೆ ನಾಶವಾಗಿ ಉತ್ಪ್ರೇಕ್ಷೆ ಕಾಣುತ್ತಿದೆ. ನಿಮ್ಮ ವಿಶೇಷ ಕ್ಷೇತ್ರವಾದ ಧರ್ಮದಲ್ಲಿ ಕೂಡ ಭಯಾನಕ ಅವನತಿಯನ್ನು ಕಾಣುತ್ತೇವೆ. ನೀರನ್ನು ಎಡಗೈಯಿಂದ ಕುಡಿಯುವುದೇ ಬಲಗೈಯಿಂದ ಕುಡಿಯುವುದೆ ಎಂಬುವಂತಹ ಅತಿ

ಮುಖ್ಯ ಪ್ರಶ್ನೆಯನ್ನು ಬಗೆ ಹರಿಸಲು ನೂರಾರು ವರ್ಷ ನಿರತರಾಗಿರುವ ಜನಾಂಗದಿಂದ ನೀವು ಮತ್ತೇನನ್ನು ನಿರೀಕ್ಷಿಸಬಲ್ಲಿರಿ? ದೇಶದ ಮಹಾ ವಿದ್ವಾಂಸರು ನೂರಾರು ವರ್ಷಗಳಿಂದ ಅಡಿಗೆ ಮನೆ ವಿಷಯ ಚರ್ಚಿಸುವುದು, ನಾನು ನಿನ್ನನ್ನು ಮುಟ್ಟಬಹುದೇ, ನೀನು ನನ್ನನ್ನು ಮುಟ್ಟಬಹುದೇ ಮುಟ್ಟಿದರೆ ಪ್ರಾಯಶ್ಚಿತ್ತವೇನು ಎಂಬ ವಿಚಾರವನ್ನು ಚರ್ಚಿಸುವಂತಹ ಅವನತಿಗಿಂತ ಮಿಗಿಲಾದುದು ಮತ್ತೇನಿದೆ? ವೇದಾಂತ ತತ್ತ್ವ ಪ್ರಪಂಚದಲ್ಲಿ ಸಾರಿದ ಜೀವ ಮತ್ತು ಈಶ್ವರನಿಗೆ ಸಂಬಂಧ ಪಟ್ಟ ಉಜ್ವಲ ಮಹಾ ಸಿದ್ಧಾಂತ ಅರ್ಧ ನಾಶವಾಯಿತು. ಅರಣ್ಯದ ಪಾಲಾಯಿತು. ಎಲ್ಲೋ ಕೆಲವು ಸನ್ಯಾಸಿಗಳು ಅದನ್ನು ರಕ್ಷಿಸುತ್ತಿರುವರು. ಉಳಿದ ಜನಾಂಗವೆಲ್ಲಾ ಒಬ್ಬರು ಇನ್ನೊಬ್ಬರನ್ನು ಮುಟ್ಟಬಹುದೇ, ಇಲ್ಲವೇ, ಅವರ ಆಹಾರ, ಬಟ್ಟೆ ಇಂತಹ ಅತಿ ಮುಖ್ಯ ವಿಷಯಗಳಲ್ಲಿ ತೊಡಗಿತು. ಮುಸಲ್ಮಾನರ ಆಕ್ರಮಣ ನಿಸ್ಸಂದೇಹವಾಗಿ ಹಲವು ಒಳ್ಳೆ ವಿಷಯಗಳನ್ನು ಕೊಟ್ಟಿತು. ಅತಿ ನೀಚನೂ ಅತ್ಯುಚ್ಚನಿಗೆ ಏನನ್ನಾದರೂ ಕಲಿಸಲು ಸಾಧ್ಯವೆಂಬುದನ್ನು ತೋರಿತು. ಆದರೂ ಇದರಿಂದ ಜನಾಂಗದಲ್ಲಿ ಶಕ್ತಿ ಸಂಚಾರವಾಗಲಿಲ್ಲ.

ನಂತರ ಶುಭಕ್ಕೋ, ಅಶುಭಕ್ಕೋ, ಆಂಗ್ಲೇಯರಿಂದ ಭರತಖಂಡದ ಆಕ್ರಮಣ ಆರಂಭವಾಯಿತು. ಪ್ರತಿಯೊಂದು ಜಯವೂ ಕೆಟ್ಟದ್ದು. ಜಯ ಎಂಬುದೇ ಪಾಪ. ಬಾಹ್ಯ ಸರ್ಕಾರವಿರುವುದೊಂದು ದೋಷ. ಅದರಲ್ಲಿ ತಪ್ಪೇನೂ ಇಲ್ಲ. ಆದರೂ ಕೆಲವು ವೇಳೆ ಅಶುಭದಿಂದ ಶುಭವಾಗುವುದು. ಆಂಗ್ಲೇಯರ ವಿಜಯದ ಶುಭಫಲವೇ ಇದು. ಇಂಗ್ಲೆಂಡ್ ಮಾತ್ರವಲ್ಲ. ಇಡೀ ಯೂರೋಪ್ ತನ್ನ ನಾಗರಿಕತೆಗೆ ಗ್ರೀಸಿಗೆ ಧನ್ಯವಾದವನ್ನು ಅರ್ಪಿಸಬೇಕು. ಯೂರೋಪಿನ ಪ್ರತಿಯೊಂದರಲ್ಲಿಯೂ ವ್ಯಕ್ತವಾಗುತ್ತಿರುವುದು ಗ್ರೀಸ್. ಪ್ರತಿಯೊಂದು ಕಟ್ಟಡ, ಉಪಯೋಗಿಸುವ ಪ್ರತಿಯೊಂದು ಸಾಮಾನಿನ ಮೇಲೆ ಗ್ರೀಸಿನ ಪ್ರಭಾವವಿದೆ. ಯೂರೋಪಿನ ವಿಜ್ಞಾನ ಕಲೆ ಗ್ರೀಸ್ ಅಲ್ಲದೆ ಬೇರಲ್ಲ. ಇಂದು ಭರತಖಂಡದಲ್ಲಿ ಪುರಾತನ ಗ್ರೀಸ್—ಪುರಾತನ ಭಾರತವನ್ನು ಸಂಧಿಸುತ್ತಿದೆ. ನಿಧಾನವಾಗಿ, ಮೌನವಾಗಿ, ಒಂದು ಪರಿವರ್ತನೆಯಾಗುತ್ತಿದೆ. ನಾವು ಸುತ್ತಲೂ ನೋಡುವ ಉದಾರ ಜೀವನಪ್ರದ ಪುನರುತ್ಥಾನದ ಚಿಹ್ನೆಗೆ ಇವುಗಳೆಲ್ಲವೂ ಸಹಕಾರಿ. ಇಂದು ನಮ್ಮ ಮುಂದೆ ಮಾನವ ಜೀವನದ ಉದಾರ ವಿಶಾಲ

ಭಾವನೆ ಇದೆ. ಮೊದಲು ಭ್ರಾಂತರಾಗಿ ಒಂದು ಮಿತಿಯನ್ನು ಕಲ್ಪಿಸುವುದಕ್ಕೆ ಪ್ರಯತ್ನಿಸಿದರೂ, ಇಂದು ಜಾಗೃತವಾಗಿರುವ ಉದಾರಭಾವನೆ, ಜೀವನದ ವಿಶಾಲ ಭಾವನೆ, ನಮ್ಮ ಹಿಂದಿನ ಶಾಸ್ತ್ರಗಳಲ್ಲಿರುವ ಭಾವನೆಯ ವ್ಯಾಖ್ಯಾನ ಮಾತ್ರ. ನಮ್ಮ ಪೂರ್ವಿಕರ ಮುಖ್ಯಭಾವನೆಯ ಯಥಾರ್ಥ ನ್ಯಾಯಸಂಗತ ಪರಿಣಾಮ ಮಾತ್ರ ಎಂದು ಗೊತ್ತಾಗುವುದು. ವಿಶಾಲವಾಗಬೇಕು, ವಿಸ್ತರಿಸಬೇಕು, ಸಂಯೋಜಿಸಬೇಕು, ಸಾರ್ವಭೌಮಿಕವಾಗಬೇಕು, ಇದೇ ನಮ್ಮ ಗುರಿ. ಆದರೆ ನಮ್ಮ ಶಾಸ್ತ್ರೋಪದೇಶಕ್ಕೆ ವಿರೋಧವಾಗಿ ದಿನೇದಿನೇ ಸಂಕುಚಿತರಾಗಿ ಇತರರನ್ನು ತ್ಯಜಿಸುತ್ತಿರುವೆವು.

ಪ್ರಗತಿಮಾರ್ಗದಲ್ಲಿ ಹಲವು ವಿಘ್ನಗಳಿವೆ. ಅದರಲ್ಲಿ ಒಂದೆ ಪೃಥ್ವಿಯಲ್ಲಿ ನಮ್ಮ ಸಮಾನ ಯಾರೂ ಇಲ್ಲವೆಂಬ ದುರಾಗ್ರಹಭಾವನೆ. ನಾನು ಹೃತ್ಪೂರ್ವಕ ಭರತಖಂಡವನ್ನು ಪ್ರೀತಿಸುವೆ. ದೇಶಭಕ್ತಿ ಇದೆ; ನಮ್ಮ ಪೂರ್ವಿಕರಿಗೆ ಗೌರವವಿದೆ. ಆದರೂ ಪ್ರಪಂಚದ ಇತರರಿಂದ ಹಲವು ವಿಷಯಗಳನ್ನು ನಾವು ಕಲಿತುಕೊಳ್ಳಬೇಕಾಗಿದೆ ಎಂದು ತಿಳಿಯುತ್ತೇನೆ. ಎಲ್ಲರ ಪದತಳದಲ್ಲಿ ಕುಳಿತು ಕಲಿಯಲು ನಾವು ಸಿದ್ಧರಾಗಿರಬೇಕು. ಇದನ್ನು ಗಮನಿಸಿ, ಪ್ರತಿಯೊಬ್ಬರೂ ನಮಗೆ ಒಂದು ದೊಡ್ಡ ಪಾಠವನ್ನು ಕಲಿಸಬಹುದು. ಶ್ರೇಷ್ಠ ಸ್ಮೃತಿಕಾರನು ಹೀಗೆ ಹೇಳುವನು.

“ಶ್ರದ್ಧಧಾನೊ ಶುಭಾಂ ವಿದ್ಯಾಮಾದದೀತಾವರಾದಪಿ ।
ಅನ್ತ್ಯಾದಪಿ ಪರಂ ಧರ್ಮಂ ಸ್ತ್ರೀರತ್ನಂ ದುಶ್ಕುಲಾದಪಿ ॥

ಅಂತ್ಯಜನಾಗಲೀ ನೀಚಜನಾಗಲೀ ಅವನಿಂದ ಒಳ್ಳೆಯದನ್ನು ಕಲಿ. ಶ್ರದ್ಧೆಯಿಂದ ಮುಕ್ತಿಮಾರ್ಗವನ್ನು ಅರಿ. ಸ್ತ್ರೀರತ್ನ ನೀಚಕುಲದಿಂದ ಬಂದರೂ ಸ್ವೀಕರಿಸು.

ಮನುಸಂತಾನರಾದ ನಾವು ಅವನ ಆದೇಶದಂತೆ ಅನುಸರಿಸಬೇಕು. ಇಹ ಮತ್ತು ಪರಜನ್ಮಕ್ಕೆ ಸಂಬಂಧಿಸಿದ ವಿಷಯವನ್ನು ಯಾರಿಂದಲಾದರೂ ಕಲಿಯಲು ಸಿದ್ಧರಾಗಿರಬೇಕು. ಜೊತೆಗೆ ನಾವು ಕೂಡ ಪ್ರಪಂಚಕ್ಕೆ ವಿಶೇಷವಾಗಿ ಏನನ್ನು ಕೊಡಬೇಕಾಗಿದೆ ಎಂಬುದನ್ನು ಲಕ್ಷ್ಯದಲ್ಲಿಡಬೇಕು. ಹೊರಗೆ ಇರುವ ಪ್ರಪಂಚದ ಸಹಾಯವಿಲ್ಲದೆ ನಾವು ಇರಲಾರೆವು. ನಾವು ಹಾಗೆ ಇರಲು ಸಾಧ್ಯವೆಂದು ತಿಳಿದುದೇ ನಮ್ಮ ಮೂರ್ಖತನ. ಅದಕ್ಕಾಗಿ ಸಾವಿರಾರು ವರುಷದ ಗುಲಾಮಗಿರಿಯ ಶಿಕ್ಷೆ ಅನುಭವಿಸಿರುವೆವು. ಭಾರತೀಯನ ಅವನತಿಗೆ ಮುಖ್ಯಕಾರಣ, ಅವನು ಹೊರಗೆ ಹೋಗಿ

ಪ್ರಪಂಚದ ಇತರರೊಂದಿಗೆ ತಮ್ಮನ್ನು ತುಲನೆಮಾಡಿ ನೋಡಿಕೊಳ್ಳಲಿಲ್ಲ. ಸುತ್ತಲೂ ಏನಾಗುತ್ತಿದೆ ಎಂಬುದನ್ನು ಗಮನಿಸಲಿಲ್ಲ. ಅದಕ್ಕೆ ತಕ್ಕ ಶಿಕ್ಷೆಯನ್ನು ಅನುಭವಿಸುವೆವು. ಇನ್ನು ಹೆಚ್ಚು ಮಾಡದೆ ಇರೋಣ. ಭಾರತೀಯ ಹೊರಗೆ ಹೋಗಕೂಡದು ಎಂಬ ಮೂರ್ಖಭಾವನೆಯಲ್ಲಿ ಹುರುಳಿಲ್ಲ. ಈ ಭಾವನೆಯನ್ನು ತ್ಯಜಿಸಬೇಕು. ನೀವು ಎಷ್ಟು ಹೊರಗೆ ಹೋಗಿ ಇತರ ರಾಷ್ಟ್ರಗಳನ್ನು ನೋಡಿಕೊಂಡು ಬರುವಿರೋ, ಅಷ್ಟೂ ನಿಮಗೆ ಮತ್ತು ನಿಮ್ಮ ದೇಶಕ್ಕೆ ಒಳ್ಳೆಯದು. ನೀವು ಕಳೆದ ನೂರಾರು ವರುಷದಿಂದ ಹೀಗೆ ಮಾಡಿದ್ದರೆ, ಯಾರು ನಮ್ಮನ್ನು ಆಳಲು ಬಂದರೊ ಅವರ ಪದತಳದಲ್ಲಿ ಇರುತ್ತಿರಲಿಲ್ಲ. ವಿಕಾಸವೇ ಜೀವನದ ಪ್ರಥಮ ಚಿಹ್ನೆ. ನೀವು ಬಾಳಬೇಕಾದರೆ ವಿಸ್ತಾರವಾಗಬೇಕು. ವಿಕಾಸ ನಿಂತೊಡನೆಯೇ ಮೃತ್ಯು ಸನ್ನಿಹಿತವಾಗಿರುವುದು; ಅಪಾಯ ಸನ್ನಿಹಿತವಾಗಿರುವುದು. ನಾನು ಯೂರೋಪ್ ಅಮೆರಿಕಾ ದೇಶಗಳಿಗೆ ಹೋದೆನೆಂದು ನೀವು ಸಹೃದಯಪೂರ್ವಕ ವಿವರಿಸಿರುವಿರಿ. ನಾನು ಹೋಗಲೇಬೇಕಾಯಿತು. ಏಕೆಂದರೆ ವಿಕಾಸವೇ ಜೀವನದ ಪ್ರಥಮ ಚಿಹ್ನೆ. ನಮ್ಮ ಜನಾಂಗದ ಜಾಗೃತಿ ಆಂತರಿಕ ವಿಕಾಸ ನನ್ನನ್ನು ಹೊರಗೆ ಎಸೆಯಿತು. ಸಾವಿರಾರು ಜನರು ಹಾಗೆಯೇ ಎಸೆಯಲ್ಪಡುವರು. ನಮ್ಮ ಜನಾಂಗ ಬಾಳಬೇಕಾದರೆ ಇದು ಆಗಲೇಬೇಕು. ಇದನ್ನು ಗಮನಿಸಿ. ವಿಸ್ತಾರವಾಗುತ್ತಿರುವ ಜನಾಂಗದ ಜೀವನಪುನರಭ್ಯುದಯದ ಪ್ರಥಮ ಚಿಹ್ನೆ. ಇದರಿಂದ ಮನುಷ್ಯನ ಜ್ಞಾನಸಮಷ್ಟಿಗೆ, ಸಮಗ್ರ ಜಗತ್ತಿನ ಉನ್ನತಿಗೆ, ನಾವು ಏನನ್ನು ಕೊಡಬೇಕಾಗಿದೆಯೋ, ಅದನ್ನು ಕೊಡುತ್ತಿರುವೆವು. ಇದು ಹೊಸದಲ್ಲ. ಹಿಂದಿನಿಂದಲೂ ಹಿಂದುಗಳು ಭರತಖಂಡದಲ್ಲೇ ಇದ್ದರು. ಎಂದೂ ಹೊರಗೆ ಹೋಗಲಿಲ್ಲವೆಂದು ಭಾವಿಸಿದರೆ ಅದು ತಪ್ಪು. ನೀವು ಹಾಗೆ ಭಾವಿಸಿದ್ದರೆ, ನೀವು ಪುಸ್ತಕ ಓದಿಲ್ಲ, ಜನಾಂಗದ ಚರಿತ್ರೆಯನ್ನು ಸರಿಯಾಗಿ ತಿಳಿದುಕೊಂಡಿಲ್ಲ. ಜನಾಂಗವೂ ಬಾಳಬೇಕಾದರೆ ಏನನ್ನಾದರೂ ಕೊಡಬೇಕು. ನೀವು ಜೀವನ ಕೊಟ್ಟರೆ ಜೀವನ ದೊರಕುವುದು. ಸ್ವೀಕರಿಸಿದರೆ, ಇತರರಿಗೆ ಕೊಡಬೇಕು. ನಾವು ಸಹಸ್ರಾರು ವರುಷಗಳಿಂದ ಬಾಳುತ್ತಿರುವೆವು ಎಂಬುದು ನಿಸ್ಸಂದೇಹವಾಗಿದೆ. ಇದರಿಂದ ದೊರಕುವ ಉತ್ತರವೇ, ಮೂಢರು ಅನ್ಯಥಾ ಭಾವಿಸಿದರೂ, ನಾವು ಜಗತ್ತಿಗೆ ಯಾವಾಗಲೂ ಕೊಡುತ್ತಿದ್ದೆವು.

ಭಾರತದ ದಾನ ಧರ್ಮ ದಾರ್ಶನಿಕ ಜ್ಞಾನ ಮತ್ತು ಆಧ್ಯಾತ್ಮ

ವಿದ್ಯೆ. ಧಾರ್ಮಿಕ ಪ್ರಚಾರಕ್ಕೆ ಮುಂಚೆ ಸೇನೆಹೋಗಿ ಮಾರ್ಗ ರಚಿಸ ಬೇಕಾಗಿಲ್ಲ. ಜ್ಞಾನ ಮತ್ತು ದಾರ್ಶನಿಕ ತತ್ತ್ವ ರಕ್ತಪ್ರವಾಹದ ಮೇಲೆ ಹೋಗಬೇಕಾಗಿಲ್ಲ. ಜ್ಞಾನ ಮತ್ತು ತತ್ತ್ವ ಕೊಲೆಯ ಮೂಲಕ ಸಂಚರಿ ಸುವುದಿಲ್ಲ. ಹಿಂಸೆಯ ಮೂಲಕ ಸಂಚರಿಸುವುದಿಲ್ಲ. ಶಾಂತಿ ಮತ್ತು ಪ್ರೇಮದ ರೆಕ್ಕೆಯ ಮೇಲೆ ಬರುವುದು. ಇದರ ರೀತಿಯೇ ಹೀಗೆ. ಆದ ಕಾರಣವೇ ನಾವು ಕೊಡಬೇಕಾಗಿತ್ತು. ಒಬ್ಬ ತರುಣಿ, ಲಂಡನ್ನಿನಲ್ಲಿ ನನ್ನನ್ನು, "ಹಿಂದೂಗಳು ಏನು ಮಾಡಿರುವಿರಿ? ನೀವು ಯಾವ ಒಂದು ರಾಷ್ಟ್ರವನ್ನೂ ಗೆದ್ದಿಲ್ಲ" ಎಂದು ಕೇಳಿದಳು. ಧೀರ ವೀರನಾದ ಕ್ಷಾತ್ರಗುಣಿ ಆಂಗ್ಲೇಯನ ದೃಷ್ಟಿಯಿಂದ ಇದು ಸರಿ. ಆದರೆ ನಮ್ಮ ದೃಷ್ಟಿ ಅದಕ್ಕೆ ಸಂಪೂರ್ಣ ವಿರೋಧ. ಭರತಖಂಡದ ಹಿರಿಮೆಗೆ ಕಾರಣ ನಾನು ಪರ್ಯಾಲೋಚಿಸಿದಂತೆ, ನಾವು ಅನ್ಯರನ್ನು ಗೆಲ್ಲದಿದ್ದದ್ದು. ಹಿಂದೂಧರ್ಮ ಅನ್ಯರನ್ನು ಗೆಲ್ಲುವಧರ್ಮವಲ್ಲವೆಂದು ಅನೇಕರು ನಮ್ಮನ್ನು ಪ್ರತಿದಿನ ದೂರುತ್ತಿರುವರು. ಅವರಿಗೆ ನಮ್ಮ ಧರ್ಮಪರಿಚಯ ಹೆಚ್ಚು ಆಗಬೇಕಾಗಿದೆ ಎಂದು ವ್ಯಸನದಿಂದ ಹೇಳಬೇಕಾಗಿದೆ. ನನ್ನ ಮನಸ್ಸಿಗೆ ನಮ್ಮ ಧರ್ಮ ಅನ್ಯಧರ್ಮಗಳಿಗಿಂತ ಹೆಚ್ಚು ಸತ್ಯವೆನ್ನುವುದಕ್ಕೆ ಇದೇ ಕಾರಣ. ಅದು ಮತ್ತೊಬ್ಬರನ್ನು ಗೆಲ್ಲಲಿಲ್ಲ. ರಕ್ತಪಾತ ಹರಿಸಲಿಲ್ಲ. ಅವರ ಬಾಯಿನಿಂದ ಯಾವಾಗಲೂ ಆಶೀರ್ವಾದ, ಪ್ರೀತಿ, ಶಾಂತಿ, ಸಹಾನುಭೂತಿಯ ವಾಣಿಗಳೇ ಬರುತ್ತಿದ್ದವು. ಇಲ್ಲಿ ಮಾತ್ರ ಮೊದಲು ಅನ್ಯಧರ್ಮ ಸಹಿಷ್ಣುತೆಯ ಭಾವವನ್ನು ಬೋಧಿಸಿದರು. ಇಲ್ಲಿ ಮಾತ್ರ ದಯೆ ಸೌಹಾರ್ದಗಳು ಅನುಷ್ಠಾನದಲ್ಲಿತ್ತು. ಉಳಿದ ದೇಶಗಳಲ್ಲೆಲ್ಲಾ ಅದು ಬರಿಯ ಬಾಯಿಮಾತಾಗಿತ್ತು. ಇಲ್ಲಿ ಮಾತ್ರ ಹಿಂದು ಮಹಮ್ಮ ದೀಯರಿಗೆ ಮಸೀದಿ ಕಟ್ಟುವನು, ಕ್ರೈಸ್ತರಿಗೆ ಚರ್ಚು ಕಟ್ಟುವನು. ನೋಡಿ! ನಮ್ಮ ಭಾವನೆ ಪ್ರಪಂಚಕ್ಕೆ ಅನೇಕವೇಳೆ ನಿಧಾನವಾಗಿ ಮೌನ ವಾಗಿ ಮತ್ತೊಬ್ಬರಿಗೆ ಕಾಣದಂತೆ ಹೋಗಿದೆ. ಇಂಡಿಯಾದೇಶದಲ್ಲಿರುವ ಎಲ್ಲಾ ವಿಷಯಗಳಂತೆಯೇ ಇದು. ಶಾಂತಿ ಮೌನವೇ ಭಾರತೀಯನ ಮುಖ್ಯ ಲಕ್ಷಣ. ಅದರ ಹಿಂದೆ ಇರುವ ಅದ್ಭುತ ಶಕ್ತಿಯನ್ನು ಎಂದಿಗೂ ಹಿಂಸೆಯ ಮೂಲಕ ಪ್ರದರ್ಶಿಸುವುದಿಲ್ಲ. ಯಾವಾಗಲೂ ಭಾರತೀಯನ ಭಾವನೆ ಮೌನವಾಗಿ ಮತ್ತೊಬ್ಬರನ್ನು ಪರವಶಗೊಳಿಸು ವುದು. ಅನ್ಯರು ನಮ್ಮ ಸಾಹಿತ್ಯ ಅಧ್ಯಯನಕ್ಕೆ ಪ್ರಯತ್ನಿಸಿದರೆ,

ಮೊದಲು ಜಿಗುಪ್ಸೆಯಾಗುವುದು ತಕ್ಷಣವೆ ಅವನನ್ನು ಜಾಗ್ರತಗೊಳಿಸುವುದಿಲ್ಲ. ಐರೋಪ್ಯರ ರುದ್ರನಾಟಕಗಳನ್ನು ನಮ್ಮ ನಾಟಕಗಳೊಂದಿಗೆ ಹೋಲಿಸಿ ನೋಡಿ. ಅವು ತಾತ್ಕಾಲಿಕವಾಗಿ ನಿಮ್ಮನ್ನು ಕೆರಳಿಸುವಂತಹ ಘಟನೆಗಳಿಂದ ತುಂಬಿದೆ. ಆದರೆ ಇಧಾದ ಮೇಲೆ ಪ್ರತಿಕ್ರಿಯೆ ಬರುವುದು. ಎಲ್ಲಾ ಮಾಯವಾಗುವುದು. ಭಾರತೀಯ ರುದ್ರನಾಟಕ ಐಂದ್ರಜಾಲಿಕನ ಶಕ್ತಿಯಂತೆ, ಮಂದಗತಿಯಿಂದ ಮೌನವಾಗಿ ಚಲಿಸುವುದು. ಆದರೆ ಅದನ್ನು ಓದುತ್ತಾ ಹೋದರೆ ಪರವಶರಾಗುವಿರಿ. ನೀವು ಚಲಿಸುವುದಕ್ಕೇ ಆಗುವುದಿಲ್ಲ. ಸ್ತಬ್ಧರಾಗುವಿರಿ. ಯಾರು ನಮ್ಮ ಸಾಹಿತ್ಯವನ್ನು ಓದಲು ಮನಸ್ಸು ಮಾಡುವರೋ ಅವರೆಲ್ಲ ಇದರಲ್ಲಿ ಭಾಗಿಗಳು; ಚಿರಕಾಲ ಬದ್ಧರಾಗಿರುವರು.

ಯಾರಿಗೂ ಕಾಣದೆ ಬೀಳುವ ಹಿಮಮಣಿ ಅತಿ ಸುಂದರವಾದ ಗುಲಾಬಿಯ ಅಲರನ್ನು ಅರಳಿಸುವಂತೆ ಇದೆ ಭಾವನಾ ಪ್ರಪಂಚಕ್ಕೆ ಭಾರತೀಯ ಭಾವನೆಯ ಕಾಣಿಕೆ. ಅಜ್ಞೇಯವಾಗಿ ಮೌನವಾಗಿ ಆದರೂ ಮಹಾಶಕ್ತಿಯಿಂದ ಪ್ರಪಂಚದ ಮೇಲೆ ಅದ್ಭುತ ಪರಿಣಾಮವನ್ನು ಉಂಟುಮಾಡಿದೆ. ಆದರೆ ಎಂದು ಇದು ಹಾಗೆ ಮಾಡಿತೆಂದು ಯಾರಿಗೂ ಗೊತ್ತಿಲ್ಲ. ಭರತಖಂಡದಲ್ಲಿ ಕವಿಗಳ ಹೆಸರನ್ನು ತಿಳಿಯುವುದು ಎಷ್ಟು ಕಷ್ಟ ಎಂದು ಯಾರೋ ಒಂದು ಸಲಿ ನನ್ನನ್ನು ಕೇಳಿದರು. ಅದಕ್ಕೆ "ಭಾರತೀಯನ ರೀತಿಯೇ ಅದು" ಎಂದೆ. ಆಧುನಿಕ ಬರಹಗಾರರಂತೆ ತಮ್ಮ ಹತ್ತು ಭಾಗಕ್ಕೆ ಶೇಕಡ ತೊಂಬತ್ತರಷ್ಟನ್ನು ಇತರರಿಂದ ಕದ್ದು ಮುನ್ನುಡಿಯಲ್ಲಿ ಈ ಭಾವನೆಗೆಲ್ಲ ನಾನೇ ಜವಾಬ್ದಾರ ಎಂದು ಹೇಳುವಂತಹವರಲ್ಲ ಭಾರತೀಯ ಗ್ರಂಥಕರ್ತೃಗಳು. ಮನುಷ್ಯನ ಮೇಲೆ ಅದ್ಭುತ ಪರಿಣಾಮವನ್ನು ಉಂಟುಮಾಡಿದ ಗ್ರಂಥವನ್ನು ಬರೆದವರು ತಮ್ಮ ಹೆಸರನ್ನು ಕೂಡ ಹಾಕದೆ ಸಂತುಷ್ಟರಾಗಿ ಮುಂದೆ ಬರುವವರಿಗೆ ಅದನ್ನು ಬಿಟ್ಟು ಮೌನವಾಗಿ ಮರೆಯಾಗುತ್ತಿದ್ದರು. ನಮ್ಮ ತತ್ತ್ವಜ್ಞರ ಹೆಸರು ಯಾರಿಗೆ ಗೊತ್ತಿದೆ? ಪುರಾಣಗಳನ್ನು ರಚಿಸಿದವರು ಯಾರಿಗೆ ಗೊತ್ತಿದೆ? ಎಲ್ಲರೂ ವ್ಯಾಸ, ಕಪಿಲ, ಮುಂತಾದ ಜಾತಿಸೂಚಕ ಹೆಸರಿನಲ್ಲೇ ಹೋಗುವರು. ನಿಜವಾಗಿ ಶ್ರೀ ಕೃಷ್ಣನ ವಂಶದವರು "ಕರ್ಮಮಾಡುವುದಕ್ಕೆ ಮಾತ್ರ ನಿನಗೆ ಅಧಿಕಾರವಿದೆ ಅದರ ಫಲಕ್ಕೆ ಅಲ್ಲ" ಎಂಬ ಬೋಧನೆಯನ್ನು ಅಕ್ಷರಶಃ ಅನುಷ್ಠಾನಕ್ಕೆ ತಂದರು.

ಭರತಖಂಡ ಹೀಗೆ ಪ್ರಪಂಚದ ಮೇಲೆ ತನ್ನ ಪ್ರಭಾವವನ್ನು ಬೀರು ತ್ತಿರುವುದು. ವ್ಯಾಪಾರದ ಸರಕುಗಳಂತೆ ಭಾವನೆ ಕೂಡ ಯಾರೋ ಆಗಲೇ ಮಾಡಿದ ಮಾರ್ಗದ ಮೇಲೆ ಮಾತ್ರ ಸಂಚರಿಸಬಹುದು. ಭಾವನೆ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಸಂಚರಿಸಬೇಕಾದರೂ ಮಾರ್ಗ ಮಾಡ ಬೇಕು. ಪ್ರಪಂಚದಲ್ಲಿ ಯಾವಾಗಲಾದರೂ ಒಂದು ದೊಡ್ಡ ರಾಷ್ಟ್ರ ಭಿನ್ನ ಭಿನ್ನ ದೇಶಗಳನ್ನು ಗೆದ್ದು ಒಂದುಗೂಡಿಸಲು ಪ್ರಯತ್ನ ಪಟ್ಟಿದೆಯೋ ಆ ಸಮಯದಲ್ಲೆಲ್ಲಾ ಭಾರತೀಯ ಭಾವನೆ ಆ ಮಾರ್ಗವಾಗಿ ಸಂಚರಿಸಿ ಪ್ರತಿ ಜನಾಂಗದ ನಾಡಿಗೂ ಪ್ರವೇಶಿಸಿದೆ. ಭೌದ್ಧಧರ್ಮಕ್ಕೆ ಮುಂಚೆಯೇ ಹಿಂದೂ ಭಾವನೆ ಪ್ರಪಂಚದಲ್ಲೆಲ್ಲಾ ಹರಡಿತ್ತು, ಎನ್ನುವುದಕ್ಕೆ ಸಾಕಾ ದಷ್ಟು ಪ್ರಮಾಣಗಳು ಹೆಚ್ಚು ಹೆಚ್ಚು ದೊರಕುತ್ತಿವೆ. ಬುದ್ಧರಿಗೆ ಮುಂಚೆ ವೇದಾಂತದ ಭಾವನೆ ಚೈನಾ, ಪರ್ಷಿಯಾ, ಜಾವ, ಸುಮಾತ್ರ, ಮುಂತಾದ ಕಡೆ ಹಬ್ಬಿತ್ತು. ನಂತರ ಶಕ್ತಿಶಾಲಿ ಗ್ರೀಸ್ ಪೂರ್ವರಾಷ್ಟ್ರಗಳನ್ನು ಒಂದು ಸೂತ್ರದಲ್ಲಿ ಬಂಧಿಸಿದಾಗ ಭಾರತೀಯ ಭಾವನೆ ವಿಸ್ತರಿಸಿತು. ದೊಡ್ಡ ಸಂಸ್ಕೃತಿ ತನ್ನದೆಂದು ಹೆಮ್ಮೆ ಕೊಚ್ಚಿಕೊಳ್ಳುವ ಕ್ರೈಸ್ತ ಧರ್ಮ ಕೂಡ ಹಲವು ಭಾರತೀಯ ಭಾವನೆಯ ಅಂಶಗಳ ಸಮೂಹ. ಹಿಂದೂ ಧರ್ಮದಿಂದ ದಂಗೆ ಎದ್ದ ಸಂತಾನದಂತಿದೆ ಮಹಾಮಹಿಮ ಬೌದ್ಧ ಧರ್ಮ: ಅದರ ಗಣ್ಯ ಅನುಕರಣೆ ಕ್ರಿಸ್ತಧರ್ಮ. ಯುಗ ಚಕ್ರ ಪುನಃ ಸಂಚರಿಸುತ್ತಿದೆ. ಇಂಗ್ಲೆಂಡಿನ ಪ್ರಚಂಡಶಕ್ತಿ ಪ್ರಪಂಚದ ಭಿನ್ನ ಭಿನ್ನ ಭಾಗಗಳನ್ನು ಒಂದುಗೂಡಿಸಿದೆ. ಆಂಗ್ಲೇಯ ಮಾರ್ಗಗಳು ರೋಮನ್ ರಾಜ್ಯ ಮಾರ್ಗದಂತೆ ಕೇವಲ ನೆಲದ ಮೇಲೆ ಮಾತ್ರ ಇಲ್ಲ. ಎಲ್ಲೆಡೆಯಲ್ಲಿಯೂ ಸಮುದ್ರವನ್ನು ಭೇದಿಸಿ ಮಾರ್ಗ ಮಾಡಿದೆ. ಒಂದು ಸಾಗರದಿಂದ ಮತ್ತೊಂದು ಸಾಗರಕ್ಕೆ ಆಂಗ್ಲೇಯ ಮಾರ್ಗಗಳು ಹೋಗುತ್ತವೆ. ಪ್ರಪಂಚದ ಪ್ರತಿಯೊಂದು ಭಾಗವನ್ನು ಮತ್ತೊಂದು ಭಾಗದೊಂದಿದೆ ಸೇರಿಸಿದೆ. ಹೊಸ ದೂತನಂತೆ ವಿದ್ಯುತ್‌ಶಕ್ತಿ ಅದ್ಭುತ ಕಾರ್ಯವನ್ನು ಮಾಡುತ್ತಿದೆ. ಈ ಸಮಯದಲ್ಲಿ ಭರತಖಂಡ ಜಾಗ್ರತವಾಗುವುದನ್ನು ನೋಡುತ್ತಿರುವೆವು. ಪ್ರಪಂಚದ ಪ್ರಗತಿಗೆ, ಸಂಸ್ಕೃತಿಗೆ, ಭರತಖಂಡ ತನ್ನ ಕಾಣಿಕೆಯನ್ನು ಕೊಡಲು ಸಿದ್ಧ ವಾಗಿರುವುದು. ಪ್ರಕೃತಿಯಿಂದ ಬಲಾತ್ಕಾರವಾಗಿಯೋ ಎಂಬಂತೆ ನಾನು ಅಮೆರಿಕಾ, ಇಂಗ್ಲೆಂಡ್, ದೇಶಗಳಿಗೆ ಪ್ರಚಾರ ಕಾರ್ಯಕ್ಕೆ ಹೋದುದು ಕೂಡ ಇದರ ಪರಿಣಾಮವೆ. ಸಮಯ ಸನ್ನಿಹಿತವಾಗಿದೆ ಎಂಬುದು

ಎಲ್ಲರಿಗೂ ಗೋಚರವಾಗಬಹುದು. ಶುಭ ಚಿನ್ಹೆಗಳೆಲ್ಲ ಕಾಣುತ್ತಿವೆ. ಭಾರತೀಯ ದಾರ್ಶನಿಕ ಮತ್ತು ಆಧ್ಯಾತ್ಮಿಕ ಭಾವನೆ ಮತ್ತೊಮ್ಮೆ ಹೊರಗೆ ಹೋಗಿ ಪ್ರಪಂಚವನ್ನು ಗೆಲ್ಲಬೇಕು. ನಮ್ಮ ಜೀವನ ಸಮಸ್ಯೆ ಬರಬರುತ್ತ ಬೃಹದಾಕಾರವನ್ನು ತಾಳುತ್ತಿದೆ. ನಾವು ನಮ್ಮ ದೇಶವನ್ನು ಮಾತ್ರ ಜಾಗ್ರತಗೊಳಿಸುವುದಲ್ಲ; ಅದೊಂದು ಸಣ್ಣ ಕೆಲಸ. ನಾನು ಕಲ್ಪನಾಜೀವಿ. ಹಿಂದೂ ಜನಾಂಗ ಇಡೀ ಪ್ರಪಂಚವನ್ನು ಗೆಲ್ಲಬೇಕೆಂಬುದೇ ನನ್ನಗುರಿ.

ಪ್ರಪಂಚದಲ್ಲಿ ಎಷ್ಟೋ ಅನ್ಯರಾಷ್ಟ್ರಗಳನ್ನು ಗೆದ್ದ ಪ್ರಖ್ಯಾತ ಜನಾಂಗ ಗಳಿವೆ. ನಾವೂ ಪ್ರಖ್ಯಾತ ವಿಜಯಿಗಳೇ ಆಗಿದ್ದೆವು. ನಮ್ಮ ವಿಜಯ ಚರಿತ್ರೆ ಧಾರ್ಮಿಕ ವಿಜಯ, ತಾತ್ತ್ವಿಕ ವಿಜಯ ಎಂಬುದನ್ನು ಅಶೋಕ ಚಕ್ರವರ್ತಿ ತೋರಿರುವನು. ಮತ್ತೊಮ್ಮೆ ಭಾರತೀಯರು ಪ್ರಪಂಚವನ್ನು ಗೆಲ್ಲಬೇಕು. ಇದೇ ನನ್ನ ಜೀವನದ ಕನಸು. ನನ್ನ ಉಪನ್ಯಾಸವನ್ನು ಕೇಳುವ ಪ್ರತಿಯೊಬ್ಬರೂ ಇದೇ ಕನಸನ್ನು ನಿಮ್ಮ ಮನಸ್ಸಿನಲ್ಲೂ ಕಟ್ಟಿ, ಅದು ಸಿದ್ಧಿಸುವ ತನಕ ನಿಲ್ಲಬೇಡಿ ಎಂದು ಆಶಿಸುವೆನು. ಪ್ರತಿಯೊಬ್ಬರೂ ನಿಮ್ಮ ದೇಶದ ಕೆಲಸ ಮೊದಲು ನೋಡಿಕೊಳ್ಳಿ, ನಂತರ ಹೊರಗೆ ಹೋಗಿ ಎಂದು ಹೇಳುವರು. ಆದರೆ ನಾನು ಖಂಡಿತವಾಗಿ ಹೇಳುತ್ತೇನೆ. ಇತರರಿಗೆ ನೀವು ದುಡಿದರೆ ಅತಿ ಚೆನ್ನಾಗಿ ಕೆಲಸ ಮಾಡುವಿರಿ. ಇತರರಿಗೆ ನೀವು ಕೆಲಸಮಾಡಿದಾಗ ನಿಮ್ಮ ಶ್ರೇಷ್ಠಸ್ವಕರ್ಮ ಮಾಡಿಕೊಂಡಿರಿ. ಸಮುದ್ರ ಗಳಾಚೆ ಅನ್ಯ ಭಾಷೆಯಲ್ಲಿ ನೀವು ಪ್ರಚಾರ ಮಾಡುವುದು, ನಿಮ್ಮ ಭಾವನೆಯಿಂದ ಅನ್ಯರಿಗೆ ಜ್ಞಾನವನ್ನು ಕೊಡಲು ಪ್ರಯತ್ನಿಸುವುದು ನಿಮ್ಮದೇಶಕ್ಕೆ ಮಹದುಪಕಾರ ಮಾಡಿದಂತೆ ಎನ್ನುವುದಕ್ಕೆ ಇಂದಿನ ಸಭೆಯೇ ಸಾಕ್ಷಿ. ನಾನು ನನ್ನ ಭಾವನೆಯನ್ನು ಭರತಖಂಡಕ್ಕೆ ಮಾತ್ರ ಅನ್ವಯಿ ಸಿದ್ದರೆ, ಇಂಗ್ಲೆಂಡ್ ಅಮೆರಿಕಾ ದೇಶಕ್ಕೆ ಹೋಗಿ ಆದ ಪರಿಣಾಮದಲ್ಲಿ ಕಾಲುಪಾಲು ಕೂಡ ಆಗುತ್ತಿರಲಿಲ್ಲ. ನಮ್ಮ ಮುಂದೆ ಇರುವ ಘನ ಆದರ್ಶವಿದು. ಪ್ರತಿಯೊಬ್ಬರೂ ಅದಕ್ಕೆ ಸಿದ್ಧರಾಗಬೇಕು. ಭರತ ಖಂಡ ಇಡೀ ಪ್ರಪಂಚವನ್ನು ಗೆಲ್ಲಬೇಕು. ಅದಕ್ಕೆ ಕಡಿಮೆ ಇಲ್ಲ. ನಾವು ಅದಕ್ಕೆ ಸಿದ್ಧರಾಗಬೇಕು. ಸರ್ವ ಪ್ರಯತ್ನವನ್ನೂ ಮಾಡಬೇಕು. ಹೊರಗಿನವರು ಬಂದು ನಮ್ಮ ದೇಶವನ್ನು ಸೈನ್ಯದಿಂದ ತುಂಬಿದರೆ ಚಿಂತೆ ಇಲ್ಲ. ಇಂಡಿಯಾ ! ನಿನ್ನ ಆಧ್ಯಾತ್ಮದಿಂದ ಪ್ರಪಂಚವನ್ನು ಗೆಲ್ಲು. ಮೊದಲು ನಮ್ಮ ದೇಶದಲ್ಲಿ ಸಾರಿದಂತೆ ಪ್ರೇಮ ದ್ವೇಷವನ್ನು ಗೆಲ್ಲಬೇಕು. ದ್ವೇಷ,

ದ್ವೇಷವನ್ನು ಗೆಲ್ಲಲಾರದು. ಜಡವಾದ ಮತ್ತು ಅದರ ಪರಿಣಾಮವಾಗಿ ಬರುವ ದುರ್ಗತಿಗಳಾವುದನ್ನು ಜಡವಾದವೇ ಗೆಲ್ಲಲಾರದು. ಸೇನೆಗಳು ಮತ್ತೊಂದು ಸೈನ್ಯವನ್ನು ಗೆಲ್ಲಲು ಪ್ರಯತ್ನಿಸಿದಾಗಲೆಲ್ಲಾ ವೃದ್ಧಿಯಾಗಿ ಮಾನವನನ್ನು ಮೃಗಗಳ ಸಮಾನ ಮಾಡುವುವು. ಆಧ್ಯಾತ್ಮ ಪಾಶ್ಚಾತ್ಯ ದೇಶವನ್ನು ಗೆಲ್ಲಬೇಕು. ತಮ್ಮ ರಾಷ್ಟ್ರೀಯತೆಯನ್ನು ಸಂರಕ್ಷಿಸುವುದಕ್ಕೆ ಅತ್ಯಾವಶ್ಯಕವಾಗಿರುವುದು ಆಧ್ಯಾತ್ಮವೆಂಬುದನ್ನು ಅವರು ಕ್ರಮೇಣ ಮನಗಾಣುತ್ತಿರುವರು. ಅವರು ಅದಕ್ಕೆ ಕಾಯುತ್ತಿರುವರು. ಉತ್ಸಾಹಿ ಗಳಾಗಿರುವರು. ಇದನ್ನು ಒದಗಿಸುವವರು ಯಾರು? ಭಾರತವರ್ಷದ ಮಹಾಪುರುಷರ ಸಂದೇಶವನ್ನು ಪ್ರಪಂಚಕ್ಕೆಲ್ಲಾ ಸಾರಲು ಸಿದ್ಧರಾಗಿರುವ ಮನುಷ್ಯರೆಲ್ಲಿ? ಈ ಸಂದೇಶವನ್ನು ಪ್ರಪಂಚದ ಮೂಲೆ ಮೂಲೆಗೂ ಪ್ರಚಾರ ಮಾಡುವುದಕ್ಕಾಗಿ ಸರ್ವಸ್ವವನ್ನೂ ತ್ಯಾಗಮಾಡಬಲ್ಲ ವ್ಯಕ್ತಿಗಳೆಲ್ಲಿ? ಸತ್ಯ ಪ್ರಚಾರಕ್ಕೆ ಇಂತಹ ಧೀರ ಪುರುಷರು ಬೇಕಾಗಿದೆ. ದೇಶದ ಹೊರಗೆ ಹೋಗಿ ವೇದಾಂತದ ಮಹಾ ಸತ್ಯವನ್ನು ಸಾರುವುದಕ್ಕೆ ಇಂತಹ ಧೀರ ಪ್ರಚಾರಕರು ಬೇಕಾಗಿದೆ. ಪ್ರಪಂಚಕ್ಕೆ ಇದು ಬೇಕಾಗಿದೆ. ಇಲ್ಲದೆ ಇದ್ದರೆ ಪ್ರಪಂಚ ನಾಶವಾಗುವುದು. ಪಾಶ್ಚಾತ್ಯರಾಷ್ಟ್ರ ಒಂದು ಜ್ವಾಲಾ ಮುಖಿಯ ಮೇಲಿದೆ. ಅದು ನಾಳೆ ಸಿಡಿಯಬಹುದು. ಚೂರು ಚೂರಾಗ ಬಹುದು. ಪ್ರಪಂಚದ ಮೂಲೆ ಮೂಲೆಯನ್ನು ಅವರು ಹುಡುಕಿರು ವರು. ಆದರೂ ಶಾಂತಿ ದೊರಕಲಿಲ್ಲ. ಭೋಗದ ಪರಮಾವಧಿ ಮುಟ್ಟಿರು ವರು. ಅದರಲ್ಲಿ ಹುರುಳಿಲ್ಲವೆಂಬುದನ್ನು ಮನಗಂಡಿರುವರು. ಪಾಶ್ಚಾತ್ಯ ದೇಶದ ಅಂತರಾಳಕ್ಕೆ ಭಾರತೀಯ ಭಾವನೆ ಮುಟ್ಟುವಂತೆ ಪ್ರಯತ್ನಿಸು ವುದಕ್ಕೆ ಇದೇ ಸಕಾಲ. ಆದಕಾರಣವೇ ನನ್ನ ಮದ್ರಾಸಿನ ಯುವಕರೇ ಇದನ್ನು ಗಮನದಲ್ಲಿಡಿ, ಎಂದು ಪ್ರತ್ಯೇಕವಾಗಿ ಹೇಳುತ್ತೇನೆ. ನಾವು ಹೊರಗೆ ಹೋಗಬೇಕು. ನಮ್ಮ ತತ್ತ್ವ ಮತ್ತು ಆಧ್ಯಾತ್ಮ ವಿದ್ಯೆಯಿಂದ ಜಗತ್ತನ್ನು ಗೆಲ್ಲಬೇಕು. ಬೇರೆ ಮಾರ್ಗವೇ ಇಲ್ಲ. ಮಾಡಬೇಕು, ಇಲ್ಲವೇ, ಮಡಿಯಬೇಕು. ಜಾಗ್ರತವಾದ ಸಪುಷ್ಟ ಜನಾಂಗ ಜೀವನಕ್ಕೆ ಅತ್ಯಾವಶ್ಯಕವಾದುದೆ ಭಾರತೀಯ ಭಾವನೆಯಿಂದ ಜಗತ್ತನ್ನು ಗೆಲ್ಲುವುದು.

ಆಧ್ಯಾತ್ಮಿಕ ಭಾವನೆಯಿಂದ ಪ್ರಪಂಚವನ್ನು ಗೆಲ್ಲುವುದೆಂದರೆ ಜೀವ ದಾನ ಮಾಡುವಂತಹ ಮಹಾಭಾವನೆಯನ್ನು ಹೊರಗೆ ಕಳುಹಿಸಬೇಕು.

ಹಲವು ಶತಮಾನಗಳಿಂದ ಆಲಂಗಿಸಿದ ಕೆಲಸಕ್ಕೆ ಬಾರದ ಮೂಢನಂಬಿಕೆ ಕಳುಹಿಸುವುದಲ್ಲ. ಇಂತಹ ಕಳೆಯನ್ನು ನಮ್ಮ ದೇಶದಿಂದಲೇ ಕಿತ್ತು ಆಚೆಗೆ ಒಗೆಯಬೇಕು. ಅವು ಎಂದೆಂದಿಗೂ ನಾಶವಾಗಲಿ, ಇದೇ ನಮ್ಮ ಜನಾಂಗದ ಅಧೋಗತಿಗೆ ಕಾರಣ. ಇವು ನಮ್ಮನ್ನು ಹುಚ್ಚರನ್ನಾಗಿ ಮಾಡುವುದು. ಯಾವ ಮಿದುಳು ಉದಾತ್ತ ಉಚ್ಚಭಾವನೆಯನ್ನೇ ಆಲೋಚಿಸಲಾರದೋ, ತನ್ನ ಸ್ವಾತಂತ್ರ್ಯವನ್ನೆಲ್ಲ ಕಳೆದುಕೊಂಡಿದೆಯೋ, ಶಕ್ತಿಯನ್ನೆಲ್ಲಾ ಕಳೆದುಕೊಂಡಿದೆಯೋ ಧರ್ಮದ ಹೆಸರಿನಲ್ಲಿರುವ ಕೆಲಸಕ್ಕೆ ಬಾರದ ಮೂಢನಂಬಿಕೆಗಳನ್ನೆಲ್ಲಾ ಸ್ವೀಕರಿಸಿ ವಿಷರೂಪಕ್ಕೆ ಬರುತ್ತಿದೆಯೋ, ಅಂತಹ ಮನಸ್ಸಿನ ಹತ್ತಿರ ಬಹಳ ಜಾಗರೂಕರಾಗಿರಬೇಕು. ಭರತ ಖಂಡದಲ್ಲಿ ನಮ್ಮ ಕಣ್ಣೆದುರಿಗೆ ಕಾಣುವಂತೆಯೇ ಹಲವು ಅಪಾಯಗಳಿವೆ. ಇತ್ತ ಬಂದರೆ ಹುಲಿ, ಅತ್ತ ಸರಿದರೆ ದರಿ ಎಂಬಂತೆ ಇರುವ ಎರಡು ದೋಷಗಳೇ ಶುದ್ಧ ಜಡವಾದ ಮತ್ತು ಅದರ ಪರಿಣಾಮವಾಗಿ ಬಂದ ಮೂಢನಂಬಿಕೆಯಿಂದ ಪಾರಾಗಬೇಕು. ಪಾಶ್ಚಾತ್ಯಜ್ಞಾನಸುರೆಯನ್ನು ಹೀರಿ ತಾನು ಸರ್ವಜ್ಞ ಎಂದು ಮನುಷ್ಯ ಹೇಳಿಕೊಳ್ಳುವನು. ಹಿಂದಿನ ಋಷಿ ಗಳನ್ನು ಅಣಕಿಸುವನು. ಅವನ ಪಾಲಿಗೆ ಭಾರತೀಯ ಭಾವನೆಯೆಲ್ಲ ಕೆಲಸಕ್ಕೆ ಬಾರದುದು, ತತ್ತ್ವ ಕೇವಲ ಹಸುಳೆಗಳ ಹರಟೆ ಧರ್ಮ, ಮೂಢರ ನಂಬಿಕೆ ಯಾಗಿದೆ. ಮತ್ತೊಂದು ಅತಿರೇಕಕ್ಕೆ ಹೋಗುವ ಕೃತಕ ವಿದ್ಯಾವಂತನಿರು ವನು. ಪ್ರತಿಯೊಂದು ಶಕುನವನ್ನೂ ಶಾಸ್ತ್ರೀಯವಾಗಿ ವಿವರಿಸಲು ಯತ್ನಿ ಸುವನು. ತನ್ನ ವಿಚಿತ್ರ ಜಾತಿಗೆ, ದೇವರಿಗೆ, ಹಳ್ಳಿಗೆ ಸೇರಿದ ಪ್ರತಿಯೊಂದು ಮೂಢನಂಬಿಕೆಗೂ ದಾರ್ಶನಿಕ, ತಾತ್ತ್ವಿಕ ಮತ್ತು ಇನ್ನು ಎಂತಹುದೋ ವಿವರಣೆ ಕೊಡಲೆತ್ನಿಸುವನು. ಅವನಿಗೆ ಪ್ರತಿಯೊಂದು ಗ್ರಾಮದ ಆಚಾ ರವೂ ಒಂದು ವೇದವಾಕ್ಯ. ಅದನ್ನು ಜಾರಿಗೆ ತರುವುದರ ಮೇಲೆ ತಮ್ಮ ಜನಾಂಗದ ಜೀವನ ನಿಂತಿದೆ ಎಂದು ಭಾವಿಸುವನು. ನೀವು ಆಗ ತುಂಬಾ ಜೋಪಾನವಾಗಿರಬೇಕು. ನೀವೆಲ್ಲಾ ಇಂತಹ ಮೂರ್ಖರಾಗುವುದಕ್ಕಿಂತ ಶುದ್ಧ ನಾಸ್ತಿಕರಾಗುವುದು ಮೇಲು. ನಾಸ್ತಿಕ ಜೀವಂತನಾಗಿರುವನು. ಅವನಿಂದ ಏನಾದರೂ ಉಪಯೋಗ ಪಡೆಯಬಹುದು. ಮೂಢನಂಬಿಕೆ ಪ್ರವೇಶಿಸಿದರೆ ತಲೆ ಕೆಡುವುದು, ಹುಚ್ಚನಾಗುವನು, ಅವನತಿ ಪ್ರಾರಂಭ ವಾಗುವುದು. ಇವೆರಡರಿಂದ ಪಾರಾಗಿ. ನಿರ್ಭೀತ ಸಾಹಸಿಗಳು ನಮಗೆ ಬೇಕಾಗಿರುವುದು. ನಮಗೆ ಇಂದು ಬೇಕಾಗಿರುವುದು ರಕ್ತದಲ್ಲಿ ಪುಷ್ಟಿ

ನರಗಳಲ್ಲಿ ಶಕ್ತಿ. ಕಬ್ಬಿಣದಂತಹ ಮಾಂಸಖಂಡ, ಉಕ್ಕಿನಂತಹ ನರ, ಕೆಲಸಕ್ಕೆ ಬಾರದ ಜೊಳ್ಳು ಪೊಳ್ಳು ಭಾವನೆಗಳಲ್ಲ. ಇವುಗಳನ್ನು ನಿರಾಕರಿಸಿ. ಎಲ್ಲಾ ರಹಸ್ಯವನ್ನು ನಿರಾಕರಿಸಿ, ಧರ್ಮದಲ್ಲಿ ರಹಸ್ಯವಿಲ್ಲ. ವೇದ, ವೇದಾಂತ, ಸಂಹಿತೆ ಪುರಾಣಗಳಲ್ಲಿ ಏನಾದರೂ ರಹಸ್ಯವಿದೆಯೆ? ಹಿಂದಿನ ಕಾಲದ ಋಷಿಗಳು ತಮ್ಮ ಧರ್ಮ ಪ್ರಚಾರಕ್ಕೆ ಎಂತಹ ರಹಸ್ಯಗಳನ್ನು ಸಂಸ್ಥೆಗಳನ್ನು ಸ್ಥಾಪಿಸಿದರು? ತಮ್ಮ ಅಮೋಘ ಭಾವನೆಯನ್ನು ಜನರಿಗೆ ಪ್ರಚಾರ ಮಾಡುವುದಕ್ಕೆ ಅವರೇನಾದರೂ ಮಾಯಾ ಮಂತ್ರಗಳನ್ನು ಮಾಡಿದರೆಂದು ಹೇಳುವರೆ. ರಹಸ್ಯಾಚರಣೆ ಮತ್ತು ಮೂಢ ನಂಬಿಕೆ ಯಾವಾಗಲೂ ದುರ್ಬಲತೆಯ ಚಿಹ್ನೆ. ಅವನತಿ ಮತ್ತು ಮೃತ್ಯು ಚಿಹ್ನೆ. ಜೋಪಾನವಾಗಿರಿ. ಧೀರರಾಗಿ ನಿಮ್ಮ ಕಾಲ ಮೇಲೆ ನಿಲ್ಲಿ. ಎಷ್ಟೋ ಮಹದಾಲೋಚನೆಗಳಿವೆ. ಅದ್ಭುತವಾದುವುಗಳಿವೆ. ನಮಗೆ ಈಗ ಪ್ರಪಂಚ ತಿಳಿದಿರುವ ಮಟ್ಟಿಗೆ ಅದನ್ನು ಅತೀಂದ್ರಿಯವೆನ್ನಬಹುದು. ಆದರೆ ಇದರಲ್ಲಿ ಯಾವುದೊಂದೂ ರಹಸ್ಯವಲ್ಲ. ಧಾರ್ಮಿಕ ಸತ್ಯ ರಹಸ್ಯ ವೆಂದಾಗಲೀ ಅಥವಾ ಹಿಮಾಲಯದ ಮೇಲೆ ಇರುವ ಕೆಲವು ಗುಪ್ತ ಸಂಸ್ಥೆಗಳಿಗೆ ಆ ಸತ್ಯ ಮೀಸಲು ಎಂದಾಗಲೀ ನಮ್ಮ ಧರ್ಮದಲ್ಲಿ ಎಂದೂ ಬೋಧಿಸಿಲ್ಲ. ನಾನು ಹಿಮಾಲಯದಲ್ಲಿದ್ದೆ. ನೀವು ಅಲ್ಲಿಗೆ ಹೋಗಿಲ್ಲ. ಇಲ್ಲಿಂದ ನೂರಾರು ಮೈಲಿ ಅಲ್ಲಿಗೆ. ನಾನು ಸನ್ಯಾಸಿ. ಕಳೆದ ಹದಿನಾಲ್ಕು ವರುಷಗಳಿಂದಲೂ ಸಂಚರಿಸುತ್ತಿರುವೆನು. ಈ ರಹಸ್ಯ ಸಂಸ್ಥೆಗಳು ಎಲ್ಲಿಯೂ ಇಲ್ಲ. ಈ ಮೂಢ ನಂಬಿಕೆಯನ್ನು ಹಿಂಬಾಲಿಸಬೇಡಿ. ಅದಕ್ಕಿಂತ ನೀವು ಶುದ್ಧ ನಾಸ್ತಿಕರಾಗುವುದು ನಿಮಗೆ ಮತ್ತು ದೇಶಕ್ಕೆ ಒಳ್ಳೆಯದು. ನಾಸ್ತಿಕತೆಯಲ್ಲಾದರೂ ಸ್ವಲ್ಪ ಶಕ್ತಿ ಇದೆ. ಆದರೆ ಮೂಢನಂಬಿಕೆಯಲ್ಲಿ ಅವನತಿ ಮತ್ತು ಮರಣ ಮಾತ್ರ ಇರುವುದು. ಬಲಾಢ್ಯರು ಇಂತಹ ಮೂಢ ನಂಬಿಕೆಯ ಮೇಲೆ ಕಾಲ ಕಳೆಯುವುದು, ಕೆಲಸಕ್ಕೆ ಬಾರದ ಕುಲಗೆಟ್ಟ ಆಚಾರಗಳನ್ನೆಲ್ಲಾ ವಿವರಿಸುವುದಕ್ಕೆ ಉಪಕಥೆಗಳನ್ನು ಕಲ್ಪಿಸು ವುದು, ಮಾನವ ಕೋಟಿಗೆ ನಾಚಿಕೆ ಕೇಡು. ನಿಜವಾಗಿ ನಮ್ಮಲ್ಲಿ ಹಲವು ಮೂಢ ನಂಬಿಕೆಗಳಿವೆ, ದೇಹದಲ್ಲಿ ಎಷ್ಟೋ ವ್ರಣಗಳಿವೆ; ಅವನ್ನು ಕತ್ತರಿಸಬೇಕು; ನಾಶಮಾಡಬೇಕು. ಅದರಿಂದ ನಮ್ಮ ಸಂಸ್ಕೃತಿ, ಧರ್ಮ, ಆಧ್ಯಾತ್ಮ ನಾಶವಾಗುವುದಿಲ್ಲ. ಧರ್ಮದ ಮುಖ್ಯ ತತ್ತ್ವಗಳೆಲ್ಲ ಸುರಕ್ಷಿತ ವಾಗಿರುವುವು. ಕೆಲಸಕ್ಕೆ ಬಾರದ ಈ ವ್ರಣಗಳನ್ನು ಎಷ್ಟು ಬೇಗ ತೊಡೆದು

ಹಾಕಿದರೆ ಅಷ್ಟು ಒಳ್ಳೆಯದು, ಅಷ್ಟು ಹೆಚ್ಚಾಗಿ ಆಧ್ಯಾತ್ಮಿಕ ನಿಯಮಗಳು ಪ್ರಕಾಶಿಸುವುವು. ಅವುಗಳ ಮೇಲೆ ನಿಲ್ಲಿ.

ಪ್ರತಿಯೊಂದು ಧರ್ಮ, ತಾನು ಸಾರ್ವಭೌಮಧರ್ಮ ಎಂದು ಹೇಳಿಕೊಳ್ಳುವುದಕ್ಕೆ ಕಾರಣ ಕೊಡುವುದನ್ನು ನೀವು ಕೇಳಿರುವಿರಿ. ಇಂತಹ ಒಂದು ಧರ್ಮ ಎಂದಿಗೂ ಬಹುಶಃ ಇರಲಾರದೆಂದು ಹೇಳುತ್ತೇನೆ. ಒಂದುವೇಳೆ ಅದು ಸಾಧ್ಯವಾದರೆ ಆ ಸ್ಥಾನ ನಮಗೆ ಮಾತ್ರ ಸೇರಿದ್ದು, ಮತ್ತಾರಿಗೂ ಅಲ್ಲ. ಉಳಿದ ಧರ್ಮಗಳೆಲ್ಲ ಯಾವುದಾದರೊಂದು ವ್ಯಕ್ತಿ ಅಥವಾ ವ್ಯಕ್ತಿಗಳ ಮೇಲೆ ನಿಂತಿದೆ. ಉಳಿದ ಧರ್ಮಗಳೆಲ್ಲಾ ಚಾರಿತ್ರಿಕ ಎಂದು ಅವರು ಭಾವಿಸುವ ಒಂದು ವ್ಯಕ್ತಿಯ ತಳಹದಿಯ ಮೇಲೆ ನಿಂತಿದೆ. ಯಾವುದನ್ನು ಅವರು ತಮ್ಮ ಧಾರ್ಮಿಕಶಕ್ತಿ ಎಂದು ಭಾವಿಸುವರೋ ಅದೇ ನಿಜವಾಗಿ ದುರ್ಬಲತೆ. ಆ ವ್ಯಕ್ತಿ ಚಾರಿತ್ರಿಕವಲ್ಲ ಎಂದು ಸಪ್ರಮಾಣವಾಗಿ ತೋರಿದರೆ ಇಡೀ ಧರ್ಮಸೌಧ ಕುಸಿದು ಹೋಗುವುದು. ಆಗಲೇ ಈ ಧರ್ಮ ಸಂಸ್ಥಾಪಕರ ಜೀವನದ ಅರ್ಧ ಭಾಗ ಚೂರು ಚೂರಾಗಿದೆ. ಉಳಿದರ್ಧ ಭಾಗ ನಿಜವಾಗಿ ಅನುಮಾನಕ್ಕೆ ಆಸ್ಪದವಾಗಿದೆ. ಯಾವ ಸತ್ಯ ಕೇವಲ ಅವರ ಮಾತಿನ ತಳಹದಿಯ ಮೇಲೆ ನಿಂತಿತ್ತೋ ಅದು ಮಾಯವಾಗುವುದು. ಆದರೆ ನಮ್ಮ ಧರ್ಮದ ಸತ್ಯ ನಮ್ಮಲ್ಲಿ ಎಷ್ಟೋ ವ್ಯಕ್ತಿಗಳಿದ್ದರೂ ಅವರ ಮೇಲೆ ನಿಂತಿಲ್ಲ. ಶ್ರೀಕೃಷ್ಣನ ಮಹಿಮೆ ಕೇವಲ ಅವನ ಹೆಸರಿನ ಮೇಲೆ ಇಲ್ಲ. ಅವನೊಬ್ಬ ಪ್ರಖ್ಯಾತ ವೇದಾಂತ ಪ್ರಚಾರಕ ಎನ್ನುವುದರ ಮೇಲಿದೆ. ಹಾಗಿಲ್ಲದೇ ಇದ್ದರೆ ಬುದ್ಧನ ಹೆಸರು ಮಾಯವಾದಂತೆ ಅವನ ಹೆಸರೂ ಭರತಖಂಡದಿಂದ ಮಾಯವಾಗುತ್ತಿತ್ತು. ನಿಮ್ಮ ಗೌರವ ಯಾವಾಗಲೂ ತತ್ತ್ವಕ್ಕೆ, ವ್ಯಕ್ತಿಗೆ ಅಲ್ಲ. ವ್ಯಕ್ತಿಗಳು ತತ್ತ್ವದ ಆವಿರ್ಭಾವನೆ, ತತ್ತ್ವಕ್ಕೆ ಉದಾಹರಣೆ. ತತ್ತ್ವವಿದ್ದರೆ ವ್ಯಕ್ತಿಗಳು ಸಹಸ್ರಾರು ಜನ ಬರುವರು. ತತ್ತ್ವ ಸುರಕ್ಷಿತವಾಗಿದ್ದರೆ ಬುದ್ಧನಂತಹ ವ್ಯಕ್ತಿಗಳು ನೂರಾರು ಸಹಸ್ರಾರು ಮಂದಿ ಹುಟ್ಟುವರು. ತತ್ತ್ವ ಮಾಯವಾದರೆ, ಅಳಿಸಿ ಹೋದರೆ, ಇಡೀ ಜನಾಂಗ ಯಾವುದಾದರೊಂದು ಚಾರಿತ್ರಿಕ ವ್ಯಕ್ತಿಯ ಮೇಲೆ ನಿಲ್ಲಲು ಯತ್ನಿಸಿದರೆ ಆ ಧರ್ಮದ ಪಾಡು ಚಿಂತಾಜನಕ, ಆ ಧರ್ಮ ಅಪಾಯದಲ್ಲಿದೆ! ನಮ್ಮ ಧರ್ಮ ಒಂದೇ ಯಾವುದೊ ಒಂದು ಅಥವಾ ಹಲವು ವ್ಯಕ್ತಿಗಳ ಮೇಲೆ ನಿಂತಿಲ್ಲ, ತತ್ತ್ವಗಳ ಮೇಲೆ ನಿಂತಿರುವುದು. ಜೊತೆಗೆ ಲಕ್ಷಾಂತರ ವ್ಯಕ್ತಿಗಳಿಗೂ ಅಲ್ಲಿ ಸ್ಥಳವಿದೆ. ವ್ಯಕ್ತಿಗಳಿಗೆ

ಇಲ್ಲಿ ಬೇಕಾದಷ್ಟು ಸ್ಥಳವಿದೆ. ಆದರೆ ಪ್ರತಿಯೊಬ್ಬರೂ ಒಂದು ತತ್ತ್ವದ ಉದಾಹರಣೆಯಾಗಿರಬೇಕು; ಇದನ್ನು ಮರೆಯಕೂಡದು. ಈ ಧಾರ್ಮಿಕ ತತ್ತ್ವಗಳೆಲ್ಲ ಸುರಕ್ಷಿತವಾಗಿವೆ. ಅದರ ಮೇಲೆ ಕಾಲದ ಧೂಳು ಕುಳಿತು ಕೊಳ್ಳದಂತೆ ಸುರಕ್ಷಿತವಾಗಿಡುವುದು, ಪ್ರತಿಯೊಬ್ಬರ ಕರ್ತವ್ಯ. ಈ ಜನಾಂಗ ಎಷ್ಟು ಅವನತಿಗೆ ಒಳಗಾದರೂ, ವೇದಾಂತ ತತ್ತ್ವಗಳ ನಿಯಮ ಕಾಂತಿ ಹೀನವಾಗಿಲ್ಲ. ಎಷ್ಟೇ ದುಷ್ಟನಾಗಿರಲಿ, ಯಾರೂ ಶಾಸ್ತ್ರವನ್ನು ನಿಂದಿಸಲು ಯತ್ನಿಸಿಲ್ಲ. ಪೃಥ್ವಿಯಲ್ಲಿ ನಮ್ಮ ಶಾಸ್ತ್ರಗಳಷ್ಟು ಸುರಕ್ಷಿತವಾಗಿ ಮತ್ತಾವುದೂ ರಕ್ಷಿಸಲ್ಪಟ್ಟಿಲ್ಲ. ಇದು ಹಿಂದೆ ಇದ್ದಂತೆಯೇ ಇರುವುದು. ಜನರ ಮನಸ್ಸನ್ನು ಆದರ್ಶದೆಡೆಗೆ, ಗುರಿಯೆಡೆಗೆ ಪ್ರಚೋದಿಸುತ್ತಿರುವುದು.

ಈ ಗ್ರಂಥಗಳಿಗೆ ಹಲವು ಭಾಷ್ಯಕಾರರು, ಭಾಷ್ಯವನ್ನು ರಚಿಸಿರುವರು. ಇವುಗಳ ಆಧಾರದ ಮೇಲೆ ನಿಂತ ಮತಗಳು ಮತ್ತು ಹಲವು ಆಚಾರ್ಯರು, ಇದನ್ನು ಬೋಧಿಸಿರುವರು. ವೇದಗಳಲ್ಲಿರುವ ಹಲವು ಭಾವನೆ ಪರಸ್ಪರ ವಿರೋಧಗಳಂತೆ ಇದೆ. ಕೆಲವು ಕೇವಲ ದ್ವೈತ ಭಾವಕ್ಕೆ ಸೇರಿವೆ, ಮತ್ತೆ ಕೆಲವು ಅದ್ವೈತಕ್ಕೆ ಸೇರಿವೆ. ದ್ವೈತಿಗಳು ಮತ್ತೇನೂ ತೋರದೆ, ಅದ್ವೈತಿಗಳನ್ನು ಖಂಡಿಸಲು ಯತ್ನಿಸುವರು. ಅದರ ಪ್ರಚಾರಕರು ಮತ್ತು ಪುರೋಹಿತರು ಅದಕ್ಕೆ ದ್ವೈತದ ಅರ್ಥವನ್ನು ಕೊಡಲು ಯತ್ನಿಸುವರು. ಅದ್ವೈತಿಗಳೂ ಕೂಡ ದ್ವೈತ ಭಾವನೆ ಕೊಡುವ ಶಾಸ್ತ್ರವನ್ನು ಇದೇ ರೀತಿ ಪೀಡಿಸುವರು. ಇದು ವೇದಗಳ ತಪ್ಪಲ್ಲ. ವೇದಗಳಲ್ಲಿ ಇರುವುದೆಲ್ಲಾ ದ್ವೈತವೆಂದು ಸಾರುವುದು ವ್ಯರ್ಥ. ಅದರಂತೆಯೇ ಅದರಲ್ಲಿ ಇರುವುದೆಲ್ಲ ಅದ್ವೈತವೆಂದು ಸಾಧಿಸುವುದೂ ಕೂಡ. ಅವುಗಳಲ್ಲಿ ದ್ವೈತ ಅದ್ವೈತಗಳೆರಡೂ ಇವೆ. ಹೊಸ ಭಾವನೆಗಳ ಬೆಳಕಿನಲ್ಲಿ ನಾವು ಅವುಗಳನ್ನು ಚೆನ್ನಾಗಿ ತಿಳಿದುಕೊಳ್ಳುವೆವು. ಪರಮ ಸಿದ್ಧಾಂತಕ್ಕೆ ಒಯ್ಯುವ ಭಿನ್ನಭಿನ್ನ ಭಾವನೆಗಳು ಇವು. ಮಾನವನ ವಿಕಾಸಕ್ಕೆ ದ್ವೈತ, ಅದ್ವೈತ ಭಾವನೆಗಳೆರಡೂ ಆವಶ್ಯಕ. ಅದಕ್ಕೇ, ವೇದ ಅದನ್ನು ಬೋಧಿಸುವುದು. ಮಾನವ ಕೋಟಿಯ ಮೇಲೆ ಕರುಣೆದೋರಿ, ಮುಕ್ತಿಗೆ ಹಲವು ಮೆಟ್ಟಲುಗಳನ್ನು ವೇದ ತೋರುವುದು. ಅವುಗಳಲ್ಲಿ ಪರಸ್ಪರ ವಿರೋಧವಿಲ್ಲ. ಮಕ್ಕಳಿಗೆ ಭ್ರಾಂತಿ ಹುಟ್ಟಿಸುವ ಉದ್ದೇಶವಿಲ್ಲ. ಅವು ಮಕ್ಕಳಿಗೆ ಮಾತ್ರವಲ್ಲ; ಬೆಳೆದವರಿಗೂ ಆವಶ್ಯಕ. ಎಲ್ಲಿಯವರೆಗೆ ನಮಗೆ ದೇಹವಿದೆಯೋ, ಎಲ್ಲಿಯವರೆಗೆ ದೇಹವೇ ನಾವು ಎಂಬ ಭ್ರಾಂತಿಗೆ ನಾವು

ಒಳಗಾಗಿರುವೆವೋ, ಎಲ್ಲಿಯವರೆಗೆ ನಮಗೆ ಪಂಚೇಂದ್ರಿಯಗಳಿವೆಯೊ, ಎಲ್ಲಿಯವರೆಗೆ ನಾವು ಬಾಹ್ಯ ಪ್ರಪಂಚವನ್ನು ನೋಡುತ್ತಿರುವೆವೊ, ಅಲ್ಲಿಯ ವರೆಗೆ ನಮಗೆ ಒಬ್ಬ ಸಾಕಾರ ದೇವರು ಬೇಕು. ಈ ಭಾವನೆಗಳೆಲ್ಲ ನಮಗೆ ಇದ್ದಮೇಲೆ, ಪ್ರಖ್ಯಾತ ಶ್ರೀ ರಾಮಾನುಜಾಚಾರ್ಯರು ಹೇಳಿರುವಂತೆ, ಜೀವ ಜಗತ್ತು ದೇವರಿಗೆ ಸೇರುವ ಅಥವಾ ಸಂಬಂಧಪಟ್ಟ ಭಾವನೆ ಗಳನ್ನೆಲ್ಲಾ ಸ್ವೀಕರಿಸಬೇಕು. ಒಂದನ್ನು ಸ್ವೀಕರಿಸಿದರೆ ಮೂರನ್ನೂ ಸ್ವೀಕರಿಸಬೇಕು. ಬೇರೆ ವಿಧಿಯೇ ಇಲ್ಲ. ಎಲ್ಲಿಯವರೆಗೆ ನಾವು ಒಂದು ಬಾಹ್ಯ ಜಗತ್ತನ್ನು ನೋಡುವೆವೋ, ಅಲ್ಲಿಯವರೆವಿಗೂ ಈಶ್ವರ ಮತ್ತು ಜೀವವನ್ನು ಅಲ್ಲಗಳೆಯುವುದು ಬರೀ ಭ್ರಾಂತಿ. ಕೆಲವು ವೇಳೆ ಮಹಾ ವ್ಯಕ್ತಿಗಳು ತಮ್ಮ ಮನಸ್ಸಿನ ಮೇರೆಯನ್ನು ದಾಟಿ, ಪ್ರಕೃತಿಯನ್ನು ಮೀರಿ, ಉಪನಿಷತ್ತು ಸಾರುವಂತೆ "ಯತೋ ವಾಚೊ ನಿವರ್ತಂತೆ ಅಪ್ರಾಪ್ಯ ಮನಸಾ ಸಹ" ಎಲ್ಲಿ ಮಾತು ವಿವರಿಸಲಾರದೋ, ಮನಸ್ಸೂ ಕೂಡ ಹಿಂದಿ ರುಗುವುದು. "ನ ತತ್ರ ಚಕ್ಷುರ್ಗಚ್ಛತಿ, ನ ವಾಗ್ ಗಚ್ಛತಿ ನೋ ಮನೋ" ಅಲ್ಲಿಗೆ ಕಣ್ಣು ಹೋಗಲಾರದು, ಮಾತು ಮುಟ್ಟಲಾರದು, ಮನಸ್ಸು ಸೇರ ಲಾರದು. "ನಾಹಂ ಮನ್ಯೆ ಸುವೇದೇತಿ ನೋ ನ ವೇದೇತಿ ವೇದ ಚ" ಅದನ್ನು ಗೊತ್ತಿದೆ ಎಂದು ಹೇಳುವುದಕ್ಕೆ ಆಗುವುದಿಲ್ಲ. ಗೊತ್ತಿಲ್ಲವೆಂದು ಹೇಳುವುದಕ್ಕೂ ಆಗುವುದಿಲ್ಲ. ಇಂತಹ ಸ್ಥಿತಿಗೆ ಮನಸ್ಸು ಹೋಗ ಬಹುದು. ಅಲ್ಲಿ ಆತ್ಮ ಎಲ್ಲ ಪರಿಮಿತಿಯನ್ನೂ ಮೀರಿಹೋಗುವುದು. ಆಗ ಮಾತ್ರ "ನಾನೂ, ಪ್ರಪಂಚ ಎರಡೂ ಒಂದೇ, "ನಾನೇ ಬ್ರಹ್ಮ" ಎಂಬ ಭಾವನೆ ಹೊಳೆಯುವುದು. ಈ ಸಿದ್ಧಾಂತಕ್ಕೆ ಕೇವಲ ಜ್ಞಾನ ಮತ್ತು ತತ್ತ್ವದ ಮೂಲಕ ಮಾತ್ರ ಬಂದಿಲ್ಲ. ಅದರ ಕೆಲವು ಭಾಗವನ್ನು ಪ್ರೇಮಶಕ್ತಿಯ ಮೂಲಕವೂ ಮುಟ್ಟಿರುವರು. ಭಾಗವತದಲ್ಲೂ ನಾವು ಇದನ್ನು ಓದುತ್ತೇವೆ. ಕೃಷ್ಣನು ಮಾಯವಾದ ಮೇಲೆ ಗೋಪಿಯರು ವ್ಯಥೆಪಡುವಾಗ, ವಿರಹ ವ್ಯಥೆ ಮನಸ್ಸಿನಲ್ಲಿ ದಾರುಣವಾಗಿ, ಪ್ರತಿ ಯೊಬ್ಬರೂ ತಮಗೆ ದೇಹವಿದೆ ಎಂಬುದನ್ನು ಮರೆತು, ತಾವೇ ಕೃಷ್ಣ ನೆಂದು ಭಾವಿಸಿ ಅವನಂತೆ ಅಲಂಕಾರಮಾಡಿಕೊಂಡು, ಅವನಂತೆಯೇ ಆಡತೊಡಗಿದರು. ಪ್ರೇಮದಿಂದಲೂ ಕೂಡ ಈ ತಾದಾತ್ಮ್ಯ ಭಾವನೆ ಬರವುದೆಂದು ನಮಗೆ ಗೊತ್ತಾಗುವುದು. ಪರ್ಷಿಯಾದಲ್ಲಿ ಪುರಾತನ ಸೂಫಿ ಕವಿಯೊಬ್ಬನಿದ್ದ. ಅವನ ಒಂದು ಪದ್ಯ ಹೀಗೆ ಇದೆ: "ನಾನು

ನನ್ನ ಪ್ರಿಯತಮಳ ಸಮೀಪಕ್ಕೆ ಬಂದೆ. ಅವಳಿರುವ ಕೋಣೆ ಬಾಗಿಲು ಹಾಕಿತ್ತು. ನಾನು ಬಾಗಿಲನ್ನು ತಟ್ಟುವಾಗ ಒಳಗಿನಿಂದ ಒಂದು ಧ್ವನಿ 'ಯಾರವರು?' ಎಂದು ಕೇಳಿತು. ನಾನು 'ಎಂದೆ.' ಬಾಗಿಲು ತೆರೆಯ ಲಿಲ್ಲ. ಎರಡನೆ ವೇಳೆ ಬಾಗಿಲನ್ನು ತಟ್ಟಿದೆನು. ಮತ್ತೆ 'ಯಾರವರು' ಎಂದು ಧ್ವನಿ ಕೇಳಿಸಿತು. ನಾನು ಇಂತಹವನು ಎಂದೆ. ಆದರೂ ಬಾಗಿಲು ತೆರೆಯಲಿಲ್ಲ. ಮೂರನೇ ವೇಳೆ ನಾನು ಬಂದೆ. ಪುನಃ 'ಯಾರು' ಎಂದು ಧ್ವನಿ ಕೇಳಿಸಿತು. 'ಪ್ರಿಯತಮೆ! ನಾನೇ ನೀನು' ಎಂದೆ. ಆಗ ಬಾಗಿಲು ತೆರೆಯಿತು.''

ಇಲ್ಲಿ ಹಲವು ಅಂತಸ್ತುಗಳಿವೆ. ಅವುಗಳಿಗಾಗಿ ನಾವು ಹೋರಾಡ ಬೇಕಾಗಿಲ್ಲ. ಹಿಂದಿನ ಭಾಷ್ಯಕಾರರಲ್ಲಿ ಎಷ್ಟೋ ಭಿನ್ನಾಭಿಪ್ರಾಯ ಗಳಿದ್ದರೂ, ನಾವು ಅವರನ್ನು ಗೌರವದಿಂದ ಕಾಣಬೇಕು. ಜ್ಞಾನಕ್ಕೆ ಒಂದು ಪರಿಮಿತಿ ಇಲ್ಲ. ಹಿಂದಿನವರಾಗಲೀ ಇಂದಿನವರಾಗಲೀ ಯಾರೂ ಸರ್ವಜ್ಞರಲ್ಲ. ಹಿಂದಿನ ಕಾಲದಲ್ಲಿ ಋಷಿಗಳು ತಪಸ್ವಿಗಳು ಇದ್ದರೆ, ಈಗಲೂ ಇರುವರು. ಹಿಂದಿನ ಕಾಲದಲ್ಲಿ ವ್ಯಾಸ ವಾಲ್ಮೀಕಿ ಶಂಕರಾ ಚಾರ್ಯರು ಇದ್ದರೆ, ನಿಮ್ಮಲ್ಲಿ ಏತಕ್ಕೆ ಎಲ್ಲರೂ ಶಂಕರಾಚಾರ್ಯರಾಗ ಬಾರದು? ನಮ್ಮ ಧರ್ಮಯುಗದಲ್ಲಿ ಚಿರಕಾಲ ಜ್ಞಾಪಕದಲ್ಲಿಡಬೇಕಾದ ಮತ್ತೊಂದು ಭಾವನೆ ಇದು. ಇತರ ಧರ್ಮ ಶಾಸ್ತ್ರಗಳಲ್ಲಿ ಪ್ರತಿಭೆ ಅದಕ್ಕೆ ಪ್ರಮಾಣವೆಂದೂ, ಆದರೆ ಈ ಪ್ರತಿಭೆ ಎಲ್ಲೋ ಕೆಲವರಿಗೆ ಮಾತ್ರ ಮೀಸ ಲಾಗಿರುವುದೆನ್ನುವುವು. ಅವರ ಮೂಲಕ ಸತ್ಯ, ಜನಸಾಮಾನ್ಯರಿಗೆ ಪ್ರಾಪ್ತ ವಾಗುವುದು. ನಾವುಗಳೆಲ್ಲ ಅದನ್ನು ಒಪ್ಪಬೇಕು. ಸತ್ಯ ನಾಜರತ್ತಿನ ಏಸು ಕ್ರಿಸ್ತನಿಗೆ ಬಂತು. ನಾವುಗಳೆಲ್ಲರೂ ಅದನ್ನು ಪುರಸ್ಕರಿಸಬೇಕು. ಸತ್ಯ, ಮಂತ್ರದ್ರಷ್ಟರಿಗೆ, ಋಷಿಗಳಿಗೆ ಗೋಚರವಾಯಿತು. ಭವಿಷ್ಯದಲ್ಲಿಯೂ, ಎಲ್ಲಾ ಋಷಿಗಳಿಗೂ ಗೋಚರವಾಗುವುದು. ಇದು ಕೇವಲ, ಮಾತಾಳಿ ಗಳಿಗೆ, ಗ್ರಂಥ ಓದುವವರಿಗೆ, ಪಂಡಿತರಿಗೆ, ಭಾಷಾವಿಜ್ಞಾನಿಗಳಿಗೆ ಬರು ವುದಿಲ್ಲ. ಕೇವಲ ಮಂತ್ರದ್ರಷ್ಟರಿಗೆ ಮಾತ್ರ ಗೋಚರಿಸುವುದು:

'' ನಾಯಮಾತ್ಮಾ ಪ್ರವಚನೇನ ಲಭ್ಯೋ
ನ ಮೇಧಯಾ ನ ಬಹುನಾ ಶ್ರುತೇನ ॥ ''

ಪ್ರವಚನದಿಂದ ಆತ್ಮ ಲಭಿಸುವುದಿಲ್ಲ. ಪಾಂಡಿತ್ಯದಿಂದಲೂ ಇಲ್ಲ. ಬಹಳ ದರೂ ಇಲ್ಲ. ನಿವು ಹೃದಯವನ್ನು ತೆರಯಬೇಕು. ಧರ್ಮ ಕೇವಲ

ಚರ್ಚಿಗೆ ಹೋಗುವುದಲ್ಲ. ಹಣೆಯ ಮೇಲೆ ಮತಚಿಹ್ನೆ ಧರಿಸುವುದಲ್ಲ. ವಿಚಿತ್ರ ರೀತಿ ಉಡುಪನ್ನೂ ಧರಿಸುವುದಲ್ಲ. ಕಾಮನ ಬಿಲ್ಲಿನ ಬಣ್ಣಗಳೆಲ್ಲ ವನ್ನೂ ನೀನು ಬಳಿದುಕೊಳ್ಳಬಹುದು. ನಿಮ್ಮ ಹೃದಯ ತೆರೆಯದೆ ಇದ್ದರೆ, ದೇವರನ್ನು ಸಾಕ್ಷಾತ್ಕಾರ ಮಾಡಿಕೊಳ್ಳದೇ ಇದ್ದರೆ, ಎಲ್ಲವೂ ವ್ಯರ್ಥ. ಹೃದಯ ಪರಿಶುದ್ಧವಾಗಿದ್ದರೆ, ಮತ್ತಾವ ಬಣ್ಣವೂ ಬೇಕಾಗಿಲ್ಲ. ಇದೇ ನಿಜವಾದ ಧರ್ಮಸಾಕ್ಷಾತ್ಕಾರ. ಆದರೆ ಇದನ್ನು ಮಾತ್ರ ಗಮನ ದಲ್ಲಿಟ್ಟುಕೊಂಡಿರಬೇಕು. ಎಲ್ಲಿಯುವರೆಗೂ ಬಣ್ಣ ಮುಂತಾದುವು ನಮಗೆ ಸಹಾಯ ಮಾಡುವುದೋ, ಅಲ್ಲಿಯವರೆಗೆ ಅದು ಒಳ್ಳೆಯದು. ಆದರೆ ಅವು ನಮಗೆ ಸಹಾಯ ಮಾಡುವುದರ ಬದಲು, ಪ್ರಗತಿಗೆ ಆತಂಕ ವುಂಟು ಮಾಡುವ ಸಂಭವವಿದೆ. ಮನುಷ್ಯನು, ಧರ್ಮವೆಂದರೆ, ಕೇವಲ ಬಾಹ್ಯಾ ಚರಣೆ ಎಂದು ಭಾವಿಸುವನು. ದೇವಸ್ಥಾನಕ್ಕೆ ಹೋಗುವುದೇ ಒಂದು ಧರ್ಮವಾಗಿಬಿಡುವುದು. ಪುರೋಹಿತನಿಗೆ ಏನಾದರೂ ದಾನ ಧರ್ಮ ಮಾಡುವುದೇ ಧರ್ಮವಾಗಿ ಬಿಡುವುದು. ಇದೇ ಅಪಾಯ. ವಿನಾಶ ಹೇತು. ಅದನ್ನು ತಕ್ಷಣ ಅಡಗಿಸಬೇಕು. ಬಾಹ್ಯೇಂದ್ರಿಯಗಳ ಜ್ಞಾನ ಕೂಡ ಧರ್ಮ ವಲ್ಲವೆಂದು ನಮ್ಮ ಶಾಸ್ತ್ರ ಸಾರುವುದು. ಅವಿಕಾರಿಯಾದುದನ್ನು ಸಾಕ್ಷಾ ತ್ಕಾರ ಮಾಡಿಕೊಳ್ಳುವುದೇ ನಮ್ಮ ಧರ್ಮ. ಅದೇ ಎಲ್ಲರಿಗೂ ಧರ್ಮ. ಯಾರು ಅತೀಂದ್ರಿಯ ಸತ್ಯವನ್ನು ಸಾಕ್ಷಾತ್ಕಾರ ಮಾಡಿಕೊಂಡಿರುವರೋ, ಯಾರು ತಮ್ಮಲ್ಲಿ ಆತ್ಮಸಾಕ್ಷಾತ್ಕಾರ ಮಾಡಿಕೊಂಡಿರುವರೋ, ಯಾರು ದೇವರನ್ನು ಸ್ವತಃ ಕಂಡಿರುವರೋ, ಪ್ರತಿಯೊಂದರಲ್ಲಿಯೂ ದೇವರನ್ನು ಮಾತ್ರ ನೋಡುವರೋ, ಅವರೇ ಋಷಿಗಳು. ಋಷಿಗಳಾಗುವವರೆಗೆ ನಿಮಗೆ ಧಾರ್ಮಿಕ ಜೀವನವಿಲ್ಲ. ಆಗ ಮಾತ್ರ ನಿಮಗೆ ನಿಜವಾದ ಧರ್ಮ ಪ್ರಾರಂಭವಾಗುವುದು. ಈಗ ಅದಕ್ಕೆ ಸಿದ್ಧತೆ ಮಾತ್ರ. ಆಗ ಧರ್ಮೋ ದಯವಾಗುವುದು. ಈಗ ಕೇವಲ ಪಾಂಡಿತ್ಯದ ಅಭ್ಯಾಸ ಮತ್ತು ಶಾರೀರಕ ಹಿಂಸೆ ಮಾತ್ರ ಆಗುತ್ತಿದೆ.

ಸರಳವಾಗಿ, ಸ್ವಲ್ಪವೂ ಅನುಮಾನವಿಲ್ಲದೆ ನಮ್ಮ ಶಾಸ್ತ್ರ, ಮುಕ್ತಿ ಕಾಮಿಗಳೆಲ್ಲ ಮಂತ್ರದ್ರಷ್ಟರಾಗಬೇಕು, ದೇವರನ್ನು ಕಾಣಬೇಕು ಎಂದು ಸಾರುವುದು. ಅದೇ ಮುಕ್ತಿ. ಅದಕ್ಕೆ ನಮ್ಮ ಶಾಸ್ತ್ರ ವಿಧಿಸಿರುವ ನಿಯಮ. ಆಗ ನಾವೇ ಶಾಸ್ತ್ರವನ್ನು ಓದುವುದಕ್ಕೆ ಸುಲಭವಾಗುವುದು. ನಾವೇ ಅರ್ಥ ವನ್ನು ಗ್ರಹಿಸಬಹುದು. ನಮಗೆ ಏನು ಬೇಕೊ, ಅದನ್ನು ಆಲೋಚಿಸ

ಬಹುದು. ನಾವೇ ಸತ್ಯವನ್ನು ತಿಳಿದುಕೊಳ್ಳಬಹುದು. ನಾವು ಮಾಡ ಬೇಕಾದ ಕರ್ತವ್ಯವೇ ಇದು. ಹಿಂದಿನ ಕಾಲದ ಮಹಾ ಋಷಿಗಳ ಸೇವೆಯನ್ನೆಲ್ಲ ಪೂಜ್ಯದೃಷ್ಟಿಯಿಂದ ಸ್ಮರಿಸಬೇಕು. ಹಿಂದಿನವರು ಮಹಾತ್ಮರು. ಆದರೆ ನಾವು ಅವರಿಗಿಂತ ಹೆಚ್ಚು ಮಹಾ ಪುರುಷರಾಗ ಬೇಕು. ಅವರು ಹಿಂದೆ ಮಹಾ ಕೆಲಸವನ್ನು ಸಾಧಿಸಿದರು. ಆದರೆ ನಾವು ಅದಕ್ಕಿಂತ ಉತ್ತಮವಾದುದನ್ನು ಸಾಧಿಸಬೇಕು. ಪ್ರಾಚೀನ ಭರತಖಂಡ ದಲ್ಲಿ ನೂರಾರು ಜನ ಋಷಿಗಳಿದ್ದರು. ನಮ್ಮಲ್ಲಿ ಲಕ್ಷಾಂತರ ಜನರು ಬರುವರು. ನಿಮ್ಮಲ್ಲಿ ಪ್ರತಿಯೊಬ್ಬರೂ, ಇದನ್ನು ಎಷ್ಟುಬೇಗ ನಂಬು ವಿರೋ, ಅಷ್ಟೂ ಭರತಖಂಡಕ್ಕೇ ಮತ್ತು ಪ್ರಪಂಚಕ್ಕೇ ಒಳ್ಳೆಯದು. ನೀವು ನಂಬಿದಂತೆ ಆಗುವಿರಿ; ಧೀರರೆಂದು ನೀವು ನಂಬಿದರೆ, ಧೀರರಾಗು ವಿರಿ. ಮಹಾಪುರುಷರೆಂದು ನೀವು ಭಾವಿಸಿದರೆ, ಮಹಾಪುರುಷರಾಗು ವಿರಿ. ನಿಮ್ಮನ್ನು ತಡೆಯುವುದು ಯಾವುದೂ ಇಲ್ಲ. ತೋರಿಕೆಗೆ ಪರಸ್ಪರ ವಿರೋಧಗಳಿಂದ ಕೂಡಿರುವ ಹಲವು ಸಿದ್ಧಾಂತಗಳಲ್ಲಿ ಒಂದು ಸರ್ವ ಸಾಮಾನ್ಯ ಭಾವನೆ ಇದ್ದರೆ, ಅದೇ ಎಲ್ಲಾ ಮಹಿಮೆ, ಶಕ್ತಿ ಮತ್ತು ಪರಿಶುದ್ಧತೆ ಆಗಲೇ ಆತ್ಮನಲ್ಲಿ ಇದೆ ಎನ್ನುವುದು. ರಾಮಾನುಜರ ದೃಷ್ಟಿ ಯಲ್ಲಿ ಜೀವ, ಸಂಕೋಚ ಮತ್ತು ವಿಕಾಸವಾಗುವುದು. ಶಂಕರಾ ಚಾರ್ಯರ ದೃಷ್ಟಿಯಲ್ಲಿ ಜೀವ, ಭ್ರಾಂತಿಗೆ ಒಳಗಾಗುವುದು. ಈ ಭಿನ್ನತೆ ಯನ್ನು ಗಣನೆಗೆ ತರಬೇಕಾಗಿಲ್ಲ. ಎಲ್ಲರೂ ಅಲ್ಲಿ ಶಕ್ತಿ ಸುಪ್ತವಾಗಿಯೊ ವ್ಯಕ್ತವಾಗಿಯೊ ಇದೆ ಎಂದು ನಂಬುವರು. ನೀವು ಎಷ್ಟುಬೇಗ ಇದನ್ನು ನಂಬಿದರೆ ಅಷ್ಟೂ ಒಳ್ಳೆಯದು. ಶಕ್ತಿ ಎಲ್ಲಾ ನಿಮ್ಮಲ್ಲಿ ಅಂತರ್ಗತವಾಗಿದೆ. ನೀವು ಏನನ್ನು ಬೇಕಾದರೂ ಮಾಡಬಹುದು; ಎಲ್ಲ ವನ್ನೂ ಮಾಡಬಹುದು. ಇದನ್ನು ನಂಬಿ. ದುರ್ಬಲರೆಂದು ನಂಬ ಬೇಡಿ. ಯಾರ ಆಸರೆಯೂ ಇಲ್ಲದೆ, ಏನನ್ನುಬೇಕಾದರೂ, ಎಲ್ಲವನ್ನೂ ನೀವು ಸಾಧಿಸಬಹುದು. ಅನಂತ ಶಕ್ತಿ ನಿಮ್ಮಲ್ಲಿರುವುದು. ನಿಮ್ಮಲ್ಲಿ ಅಂತರ್ಗತವಾಗಿರುವ ಪವಿತ್ರತೆಯನ್ನು ವ್ಯಕ್ತಗೊಳಿಸಿ.

# ಭವಿಷ್ಯ ಭಾರತ

## (ಮದ್ರಾಸಿನ ಉಪನ್ಯಾಸ)

ಈ ಪ್ರಾಚೀನ ಭೂಮಿಯಲ್ಲಿ ತತ್ತ್ವಜ್ಞಾನ ಇತರ ದೇಶಗಳಿಗೆ ಮುಂಚೆ ಉದಿಸಿತು. ಈ ಆಧ್ಯಾತ್ಮಿಕ ಪ್ರವಾಹದ ಸ್ಥೂಲ ಪ್ರತೀಕದಂತೆ ಸಮುದ್ರದಂತೆ ಇರುವ ನದಿಗಳೊಂದೆಡೆ ಹರಿಯುತ್ತಿವೆ. ಶ್ರೇಣಿ ಶ್ರೇಣಿಯಾಗಿ ತುಷಾರ ಭೂಷಣ ಹಿಮಾಲಯ ಪರ್ವತ ಸ್ತೋಮ ಪಸರಿಸಿ ಗಗನ ರಹಸ್ಯವನ್ನು ಭೇದಿಸುವಂತೆ ಇದೆ. ಋಷಿಗಳು ಮಹಾಮುನಿಗಳ ಪದ ಧೂಳಿ ಸೋಕಿದ ಪವಿತ್ರ ಭೂಮಿ ಇದು. ಬಾಹ್ಯ ಪ್ರಕೃತಿ ಮತ್ತು ಮನುಷ್ಯನನ್ನು ಕುರಿತು ಜಿಜ್ಞಾಸೆ ಮೊದಲಾದುದು ಇಲ್ಲಿ. ಆತ್ಮದ ಅಮರತ್ವ, ಅಂತರ್ಯಾಮಿ ಈಶ್ವರ, ಪ್ರಪಂಚ ಮತ್ತು ಜೀವಿಯಲ್ಲಿ ಓತಪ್ರೋತನಾಗಿರುವ ಪರಮಾತ್ಮ, ಧರ್ಮ ಮತ್ತು ತತ್ತ್ವದ ಅತಿ ಶ್ರೇಷ್ಠ ಭಾವನೆ ಇಲ್ಲಿ ತನ್ನ ಪರಾಕಾಷ್ಠತೆಯನ್ನು ಮುಟ್ಟಿತು. ಇಲ್ಲಿಂದ ಮಹಾ ಸಾಗರದ ಉಬ್ಬರದಂತೆ ತತ್ತ್ವ ಮತ್ತು ಆಧ್ಯಾತ್ಮ ಭಾವನೆ ಪುನಃ ಪುನಃ ಹೊರಟು ಇಡೀ ಪ್ರಪಂಚವನ್ನು ತೋಯಿಸಿರುವುದು. ಅವನತಿಗೆ ಇಳಿದ ಜನಾಂಗಕ್ಕೆ ನವಚೇತನವನ್ನು ತುಂಬಲು ಮತ್ತೊಮ್ಮೆ ಆ ಪ್ರವಾಹ ಏಳಬೇಕು. ಶತಶತಾಬ್ಧಗಳ ಆಘಾತ, ವಿದೇಶಿಯರ ನೂರಾರು ಆಕ್ರಮಣ, ನೂರಾರು ಆಚಾರ ವ್ಯವಹಾರಗಳ ಘರ್ಷಣೆಯನ್ನು ಸಹಿಸಿದ ದೇಶ ಇದು. ಈ ದೇಶ ಅವಿನಾಶವೀರ್ಯ, ಮತ್ತು ಅವಿನಾಶಪ್ರಾಣದಿಂದ ಕೂಡಿದ ಶಿಲೆಗಿಂತ ಗಟ್ಟಿಯಾಗಿ ನಿಂತಿರುವುದು. ಆತ್ಮ ಹೇಗೆ ಅನಾದಿ ಅನಂತ ಅಮೃತ ಸ್ವರೂಪವಾಗಿದೆಯೋ ಹಾಗೆಯೆ ನಮ್ಮ ಭಾರತ ಭೂಮಿ ಕೂಡ. ನಾವು ಈ ದೇಶದ ಸಂತಾನರು.

ಭಾರತೀಯ ಸಂತಾನರೆ, ನಾನಿಂದು ಕೆಲವು ಅನುಷ್ಠಾನಕ್ಕೆ ಸಂಬಂಧಿಸಿದ ವಿಷಯವನ್ನು ಹೇಳುವೆನು. ನಮ್ಮ ಭರತಖಂಡದ ಗತ ವೈಭವವನ್ನು ನಿಮಗೆ ನೆನಪಿಸುವ ಉದ್ದೇಶ ಇದು. ಅನೇಕ ವೇಳೆ ಕೇವಲ ಈ ಗತ ಕಾಲದ ವೈಭವವನ್ನು ಕುರಿತು ಚಿಂತಿಸುವುದು ಕೇವಲ ವಿನಾಶ ಕಾರಿ, ಅದರಿಂದ ಪ್ರಯೋಜನವಿಲ್ಲವೆಂದು ಹೇಳುವರು. ಅದೇನೋ ಸತ್ಯ. ಆದರೆ ಹಿಂದಿನದರ ಮೇಲೆ ಮಾತ್ರ ಮುಂದೆ ಬರಲಿರುವುದನ್ನು ನಿರ್ಮಿಸಬಹುದು. ಸಾಧ್ಯವಾದಷ್ಟು ಹಿಂದೆ ನೋಡಿ, ಹಿಂದಿನ ಅಮೃತ

ಚೆಲುಮೆಯಿಂದ ತೃಪ್ತರಾಗುವವರೆಗೆ ಪಾನಮಾಡಿ. ನಂತರ ಮುಂದೆ ನೋಡಿ, ಮುಂದೆ ಅಡಿ ಇಡಿ. ಭರತಖಂಡವನ್ನು ಹಿಂದಿಗಿಂತ ಉಜ್ವಲತರ ಮಾಡಿ, ಮಹತ್ತರ ಮಾಡಿ, ಉನ್ನತ ಶಿಖರಕ್ಕೆ ಕೊಂಡೊಯ್ಯಿರಿ. ನಮ್ಮ ಪೂರ್ವಜರು ಮಹಾಮಹಿಮರಾಗಿದ್ದರು. ಅದನ್ನು ನಾವು ಮೊದಲು ಸ್ಮರಿಸಬೇಕು. ನಾವು ಮೊದಲು ಇದನ್ನು ಗಮನಿಸಬೇಕು. ನಾವು ಯಾವ ಉಪಾದಾನದಿಂದ ಆಗಿರುವೆವು, ನಮ್ಮ ನಾಡಿಯಲ್ಲಿ ಎಂತಹ ರಕ್ತ ಹರಿಯುತ್ತಿದೆ ಅದನ್ನು ಮೊದಲು ಅರಿಯಬೇಕು. ಅದು ಹಿಂದೆ ಏನನ್ನು ಸಾಧಿಸಿತು ಎನ್ನುವುದರ ಮೇಲೆ ಶ್ರದ್ಧೆ ಇರಬೇಕು. ಆ ಗತ ವೈಭವದ ಅರಿವು ಮತ್ತು ಶ್ರದ್ಧೆಯಿಂದ ಹಿಂದಿಗಿಂತ ವೈಭವಯುತವಾದ ಭರತಖಂಡ ವನ್ನು ನಿರ್ಮಿಸಬೇಕು. ಹಿಂದೆ ದುರ್ದಶೆ ಅವನತಿಯ ಸಮಯ ಇತ್ತು. ನಮಗೆ ಅದೆಲ್ಲ ಗೊತ್ತಿದೆ. ಅದಕ್ಕೆ ಹೆಚ್ಚು ಪ್ರಾಮುಖ್ಯತೆಯನ್ನು ನಾನು ಕೊಡುವುದಿಲ್ಲ. ಇಂತಹ ಸಮಯಗಳು ಆವಶ್ಯಕವಾಗಿತ್ತು. ವಿಶಾಲ ವೃಕ್ಷ ಒಂದು ಸುಂದರವಾದ ಮಾಗಿದ ಫಲವನ್ನು ಕೊಡುವುದು. ಅದು ನೆಲಕ್ಕೆ ಬಿದ್ದು, ಕೊಳೆತು, ನಾಶವಾಗುವುದು. ಆ ನಾಶದಿಂದ ಭವಿಷ್ಯ ತರುವಿನ ಬೇರು ಬಿಡುವುದು. ಹಿಂದಿನದಕ್ಕಿಂತ ಬಹುಶಃ ಉತ್ತಮತರ ತರುವಾಗಬಹುದು. ನಾವೆಲ್ಲ ಸಾಗಿಬಂದ ಅವನತಿ ಅವಶ್ಯಕವಾಗಿತ್ತು. ಈ ಅವನತಿಯಿಂದ ಭವಿಷ್ಯ ಭಾರತ ಉದ್ಭವಿಸುವುದು. ಅದಾಗಲೇ ಚಿಗುರುತ್ತಿದೆ, ಪ್ರಥಮ ತಳಿರುಗಳಾಗಲೇ ಕಾಣುತ್ತಿವೆ. ಊರ್ಧ್ವ ಮೂಲದ ಭೀಮ ವೃಕ್ಷವಿದು, ಆಗಲೇ ಗೋಚರಿಸುತ್ತಿದೆ. ನಾನಿಂದು ಅದರ ವಿಷಯ ವಾಗಿ ಮಾತನಾಡುವುದು.

ಭರತಖಂಡದ ಸಮಸ್ಯೆ ಇತರ ದೇಶಗಳಿಗಿಂತ ಜಟಿಲ ಮತ್ತು ಗುರು ತರವಾಗಿವೆ. ಜನ್ಮಗತ ಭೇದ, ಧರ್ಮ, ಭಾಷೆ ಶಾಸನಪ್ರಣಾಳಿ ಇವು ಗಳೆಲ್ಲ ಸೇರಿ ಒಂದು ಜನಾಂಗವಾಗುವುದು. ಪ್ರಪಂಚದ ಇತರ ಜನಾಂಗ ವನ್ನು ನಮ್ಮ ಜನಾಂಗದೊಂದಿಗೆ ತುಲನೆ ಮಾಡಿ ನೋಡಿದರೆ ಇತರ ಜನಾಂಗದ ಸಂಘಟನೆಗೆ ಸೇರಿದ ಸಾಮಗ್ರಿ ನಮ್ಮ ದೇಶಕ್ಕಿಂತ ಬಹಳ ಕಡಿಮೆ. ಇಲ್ಲಿ ಆರ್ಯ, ದ್ರಾವಿಡ, ಟಾರ್ಟರ್, ತುರ್ಕಿ, ಮೊಗಲ್, ಐರೋಪ್ಯ ಎಲ್ಲಾ ರಾಷ್ಟ್ರಗಳು ತಮ್ಮ ಪ್ರಭಾವವನ್ನು ಈ ದೇಶದ ಮೇಲೆ ಬೀರುತ್ತಿವೆ. ಭಾಷಾ ದೃಷ್ಟಿಯಿಂದ ಒಂದು ಅತಿ ವಿಚಿತ್ರ ಸಮ್ಮೇಳ ಇಲ್ಲಿದೆ. ಆಚಾರ ವ್ಯವಹಾರ ದೃಷ್ಟಿಯಿಂದ ಐರೋಪ್ಯರಿಗೂ ಅದಕ್ಕೆ

ಪೂರ್ವದಲ್ಲಿರುವ ರಾಷ್ಟ್ರಗಳಿಗಿಂತಲೂ ಹೆಚ್ಚು ಭಿನ್ನತೆಯನ್ನು ಎರಡು ಭಾರತೀಯ ಜಾತಿಯನ್ನು ತುಲನೆಮಾಡಿದಾಗ ನೋಡುವೆವು.

ನಮ್ಮ ಏಕಮಾತ್ರ ಸಮ್ಮಿಲನ ಭೂಮಿಯೆ ಹಿಂದಿನಿಂದ ಬಂದ ಪವಿತ್ರಪಾರಂಪರ್ಯ ಮತ್ತು ಧರ್ಮ. ಅದೊಂದೆ ಏಕಮಾತ್ರ ಸಾಧಾರಣ ಭೂಮಿ. ಅದರ ಮೇಲೆ ಮಾತ್ರ ನಮ್ಮ ಜನಾಂಗದ ಸಂಘಟನೆ ಸಾಧ್ಯ. ಯೂರೋಪಿನಲ್ಲಿ ರಾಜನೀತಿಯ ಭಾವನೆ ಜನಾಂಗದ ಐಕ್ಯತೆಗೆ ಕಾರಣ. ಏಷ್ಯಾಖಂಡದಲ್ಲಿ ಧಾರ್ಮಿಕ ಭಾವನೆ ಜನಾಂಗದ ಐಕ್ಯತೆಗೆ ಮೂಲ. ಭವಿಷ್ಯ ಭಾರತದ ಸಂಘಟನೆಗ ಧಾರ್ಮಿಕ ಐಕ್ಯತೆ ಮೊದಲನೆಯ ನಿಯಮ. ಭರತಖಂಡದಲ್ಲೆಲ್ಲಾ ಒಂದು ಸಾರ್ವಭೌಮಿಕ ಧರ್ಮವನ್ನೊಪ್ಪಿಕೊಳ್ಳಬೇಕು. ಒಂದು ಧರ್ಮವೆಂದರೆ ನನ್ನ ಭಾವನೆ ಏನು? ಕ್ರಿಸ್ತರು, ಮಹಮ್ಮದೀಯರು, ಬೌದ್ಧರು ಭಾವಿಸುವ ಒಂದು ಧರ್ಮವಲ್ಲ. ನಮ್ಮ ವಿಭಿನ್ನಸಂಪ್ರದಾಯಗಳಲ್ಲಿ ಅವರವರ ಸಿದ್ಧಾಂತ ಮತ್ತು ಹಕ್ಕುಗಳು ಎಷ್ಟೇ ವಿರುದ್ಧವಾಗಿರಲೀ ಅವರಲ್ಲೆಲ್ಲಾ ಒಂದು ಸರ್ವಸಾಮಾನ್ಯ ತಳಹದಿ ಇದೆ. ಈ ಧರ್ಮದಲ್ಲಿ ಒಂದು ಸಾಮಾನ್ಯ ಭೂಮಿಕೆ ಇದೆ. ಇದರ ಮೇಲೆ ಪ್ರತಿಯೊಂದು ಪಂಗಡಗಳೂ ತಮ್ಮತಮ್ಮಲ್ಲಿ ಅನಂತ ವೈವಿಧ್ಯತೆಯನ್ನು ಇಟ್ಟುಕೊಳ್ಳಬಹುದು. ಸ್ವತಂತ್ರವಾಗಿ ಆಲೋಚಿಸಬೇಕಾದಷ್ಟು ಅವಕಾಶವಿದೆ. ತಮ್ಮ ಆದರ್ಶಕ್ಕೆ ತಕ್ಕಂತೆ ಜೀವನವನ್ನು ರೂಢಿಸಿಕೊಳ್ಳಬಹುದು. ನಮಗೆಲ್ಲಾ ಇದು ಗೊತ್ತಿದೆ. ನಮ್ಮಲ್ಲಿ ಯಾರು ಸ್ವಲ್ಪ ಇದನ್ನು ಆಲೋಚನೆಮಾಡುವರೋ ಅವರಿಗಾದರೂ ಇದು ಗೊತ್ತಿದೆ. ಜೀವದಾನಮಾಡುವ ನಮ್ಮ ಧರ್ಮದ ಸರ್ವಸಾಮಾನ್ಯ ಭಾವನೆಯನ್ನು ಎಲ್ಲರಿಗೂ ಪ್ರಚಾರಮಾಡಬೇಕಾಗಿದೆ. ದೇಶದಲ್ಲಿರುವ ಸ್ತ್ರೀ, ಪುರುಷ, ಮಕ್ಕಳೆಲ್ಲರೂ ಇದನ್ನು ತಿಳಿದುಕೊಳ್ಳಲಿ, ತಮ್ಮ ನಿತ್ಯ ಜೀವನದಲ್ಲಿ ಅನುಷ್ಠಾನಕ್ಕೆ ತರಲಿ. ಇದೇ ನಮ್ಮ ಪ್ರಥಮ ಕರ್ತವ್ಯ. ಇದನ್ನು ನಾವು ಸಾಧಿಸಬೇಕು. ಏಷ್ಯಾಖಂಡದಲ್ಲಿ ಅದರಲ್ಲೂ ಭರತಖಂಡದಲ್ಲಿ ಜನಾಂಗ ಭಾಷೆ, ಸಮಾಜ, ದೇಶಕ್ಕೆ ಸಂಬಂಧಪಟ್ಟ ಜಟಿಲ ಸಮಸ್ಯೆಯೆಲ್ಲಾ ಧಾರ್ಮಿಕ ಸಂಘಟನಾ ಶಕ್ತಿ ಎದುರಿಗೆ ಮಾಯವಾಗುವುದನ್ನು ನೋಡುವೆವು. ಧಾರ್ಮಿಕ ಭಾವನೆಗಿಂತ ಶ್ರೇಷ್ಠವಾದುದು ಭಾರತೀಯನಿಗಿಲ್ಲ. ಧರ್ಮವೇ ಭಾರತ ಜೀವನದ ಮೂಲಮಂತ್ರ. ಎಲ್ಲಿ ವಿರೋಧ ಅತಿ ಅಲ್ಪವಾಗಿರುವುದೋ ಅಲ್ಲಿ ಮಾತ್ರ ನಾವು ಕಾರ್ಯಮಾಡಬಹುದು.

ಭರತಖಂಡದಲ್ಲಿ ಧಾರ್ಮಿಕ ಆದರ್ಶವೇ ಸರ್ವೋಚ್ಚ ಆದರ್ಶವೆಂಬುದು ಸತ್ಯಮಾತ್ರವಲ್ಲ; ಭಾರತದ ನಿರ್ಮಾಣಕ್ಕೆ ಇರುವುದು ಅದೊಂದೇ ಮಾರ್ಗ. ಇದನ್ನು ಮೊದಲು ವೃದ್ಧಿಗೊಳಿಸದೆ ಬೇರಾವ ಮಾರ್ಗದಿಂದ ನಾವು ಪ್ರಯತ್ನಿಸಿದರೂ ವಿನಾಶಕಾರಿ. ಭವಿಷ್ಯ ಭಾರತ ನಿರ್ಮಾಣಕ್ಕೆ ಪ್ರಥಮ ಕರ್ತವ್ಯ, ಹಲವು ಯುಗಗಳಿಂದ ಬಂದಿರುವ ಭಾರತ ರೂಪಿ ಮಹಾಚಲಾರೋಹಣಕ್ಕೆ ನಮ್ಮ ಪ್ರಥಮ ಪ್ರಯತ್ನವೇ ಧಾರ್ಮಿಕ ಐಕ್ಯತೆ. ಹಿಂದೂಗಳಾದ ನಾವು ದ್ವೈತಿಗಳಾಗಲೀ, ವಿಶಿಷ್ಟಾದ್ವೈತಿಗಳಾಗಲೀ ಶೈವರಾಗಲೀ, ವೈಷ್ಣವರಾಗಲೀ, ಪಾಶುಪತರಾಗಲೀ, ಯಾವ ವಿಭಿನ್ನ ಸಂಪ್ರದಾಯಕ್ಕೆ ಸೇರಿದ್ದರೂ ಎಲ್ಲರಿಗೂ ಸಾಮಾನ್ಯವಾದ ಕೆಲವು ಭಾವನೆಗಳಿವೆ ಎಂಬುದನ್ನು ತಿಳಿದುಕೊಳ್ಳಬೇಕು. ನಮ್ಮ ಹಿತಕ್ಕೆ, ನಮ್ಮ ದೇಶದ ಹಿತಕ್ಕೆ, ನಮ್ಮ ನಮ್ಮಲ್ಲಿರುವ ವೈಮನಸ್ಯ ಭಿನ್ನಾಭಿಪ್ರಾಯಗಳನ್ನು ಮರೆಯುವ ಸಮಯ ಸನ್ನಿಹಿತವಾಗಿದೆ. ಈ ಮನಸ್ತಾಪ ಸಂಪೂರ್ಣ ತಪ್ಪು. ನಮ್ಮ ಶಾಸ್ತ್ರ ಇದನ್ನು ನಿಷೇಧಿಸುವುದು, ನಮ್ಮ ಪೂರ್ವಿಕರು ಇದನ್ನು ನಿಷೇಧಿಸುವರು. ಯಾವ ಮಹಾಪುರುಷರ ಕುಲಕ್ಕೆ ನಾವು ಸೇರಿದವರೋ ಯಾರ ರಕ್ತ ನಮ್ಮ ನಾಡಿಯಲ್ಲಿ ಹರಿಯುತ್ತಿದೆಯೋ ಅವರು, ಅಲ್ಪ ವಿಷಯಗಳಿಗೆ ಹೋರಾಡುತ್ತಿರುವ ನಮ್ಮನ್ನು ನಿಕೃಷ್ಟ ದೃಷ್ಟಿಯಿಂದ ನೋಡುವರು.

ನಮ್ಮ ಹೋರಾಟವನ್ನು ನಿಲ್ಲಿಸಿದರೆ ಇತರರ ಉನ್ನತಿ ಅವಶ್ಯಕವಾಗಿ ಆಗುವುದು. ನಮ್ಮ ರಕ್ತ ಪುಷ್ಟಿಯಾಗಿ ಶುದ್ಧವಾಗಿದ್ದರೆ ಯಾವ ವಿಷ ಕ್ರಿಮಿಯೂ ಆ ದೇಹದಲ್ಲಿರಲಾರದು. ಆಧ್ಯಾತ್ಮವೇ ನಮ್ಮ ಜೀವನ ರಕ್ತ. ಅದು ಶುದ್ಧವಾಗಿದ್ದರೆ ಪುಷ್ಟಿಯಾಗಿದ್ದರೆ ಎಲ್ಲವೂ ಸರಿಯಾಗಿರುವುದು. ಆ ರಕ್ತ ಪರಿಶುದ್ಧವಾಗಿದ್ದರೆ ರಾಜಕೀಯ ಸಾಮಾಜಿಕ ಮತ್ತು ಇತರ ಪ್ರಾಪಂಚಿಕ ಕುಂದುಕೊರತೆಗಳೆಲ್ಲಾ ನಮ್ಮ ದೇಶದ ದಾರಿದ್ರ್ಯ ಕೂಡ ನಿವಾರಣೆಯಾಗುವುದು. ಆ ವಿಷ ಕ್ರಿಮಿಯನ್ನು ಹೊರಗೆ ಅಟ್ಟಿದರೆ ಮತ್ತಾವುದೂ ರಕ್ತಕ್ಕೆ ಪ್ರವೇಶಿಸಲಾರದು. ರೋಗಕ್ಕೆ ಎರಡು ಕಾರಣಗಳಿರಬೇಕು. ಒಂದು ಹೊರಗೆ ಇರುವ ವಿಷಕ್ರಿಮಿ, ಎರಡನೆಯದು ನಮ್ಮ ದೇಹಸ್ಥಿತಿ. ದೇಹ ವಿಷಕ್ರಿಮಿಗೆ ಅವಕಾಶ ಕೊಡುವ ಸ್ಥಿತಿಯಲ್ಲಿರುವವರೆಗೆ ದೇಹದ ಆರೋಗ್ಯ ಕೃಶವಾಗಿ ವಿಷಕ್ರಿಮಿಗಳು ದೇಹಕ್ಕೆ ನುಗ್ಗಿ ಅಲ್ಲಿ ವೃದ್ಧಿಯಾಗುವವರೆಗೆ ಯಾವ ವಿಷಕ್ರಿಮಿಯೂ ನಮಗೆ ರೋಗವನ್ನು ತರಲಾರದು. ಪ್ರತಿ

ಕ್ಷಣವೂ ಕೋಟ್ಯಂತರ ವಿಷಕ್ರಿಮಿಗಳು ನಿರಂತರವಾಗಿ ನಮ್ಮ ದೇಹದಲ್ಲಿ ಸಂಚರಿಸುತ್ತಿವೆ. ಎಲ್ಲಿಯವರೆಗೆ ಶರೀರ ವೃದ್ಧಿಯಾಗುವುದೋ ಅಲ್ಲಿಯ ವರೆಗೆ ಅದರ ಅರಿವೇ ನಮಗಿರುವುದಿಲ್ಲ. ದೇಹದುರ್ಬಲವಾದಾಗ ಮಾತ್ರ ಕ್ರಿಮಿಗಳು ದೇಹವನ್ನು ಆಕ್ರಮಿಸಿ ರೋಗಕ್ಕೆ ಕಾರಣವಾಗುವುದು. ಇದ ರಂತೆಯೆ ಜನಾಂಗದ ಜೀವನ ಕೂಡ. ಜನಾಂಗ ದೇಹ ದುರ್ಬಲವಾಗಿರು ವಾಗ, ದೇಶದ ರಾಜಕೀಯ ಸಾಮಾಜಿಕ ಶಿಕ್ಷಣ ಮತ್ತು ಬೌದ್ಧಿಕ ವಿಷಯಗಳೆಲ್ಲ ಸೇರಿ ರೋಗಕ್ಕೆ ಕಾರಣವಾಗುವುದು. ಇದನ್ನು ನಿವಾರಿಸ ಬೇಕಾದರೆ ರೋಗದ ಮೂಲಕ್ಕೆ ಹೋಗಬೇಕು. ರಕ್ತದಲ್ಲಿರುವ ಕಶ್ಮಲ ವನ್ನೆಲ್ಲಾ ಪರಿಶುದ್ಧಮಾಡಬೇಕು. ಆಗ ಮಾಡಬೇಕಾದ ಚಿಕಿತ್ಸೆಯೆ ಮನುಷ್ಯನನ್ನು ಬಲಾಢ್ಯನನ್ನಾಗಿ ಮಾಡಬೇಕು. ರಕ್ತ ಶುದ್ಧಿಮಾಡ ಬೇಕು. ದೇಹಪುಷ್ಟಿ ಮಾಡಬೇಕು. ಇದರಿಂದ ದೇಹಕ್ಕೆಲ್ಲಾ ವಿಷಕ್ರಿಮಿ ಗಳನ್ನು ತಡೆಗಟ್ಟಿ ಹೊರಗೆ ಓಡಿಸಲು ಸಾಧ್ಯವಾಗುವುದು. ನಮ್ಮ ಧರ್ಮವೇ ನಮ್ಮ ತೇಜಸ್ಸು, ನಮ್ಮ ಬಲ, ಜನಾಂಗದ ಜೀವನದ ಮೂಲಭಿತ್ತಿ ಎಂಬುದನ್ನು ನೋಡಿರುವೆವು.

ನಾನು ಈಗ ತರ್ಕ ವಿತರ್ಕ ಮಾಡುತ್ತಿಲ್ಲ. ನಮ್ಮ ಜನಾಂಗದ ಕೇಂದ್ರ ಧರ್ಮವಾಗಿರುವುದು ದೂರ ದೃಷ್ಟಿಯಿಂದ ಸರಿಯೆ ತಪ್ಪೆ, ಹಿತವೆ ಅಹಿತವೆ, ಎಂದು ವಿಮರ್ಶಿಸುತ್ತಿಲ್ಲ. ಶುಭಕ್ಕೊ ಅಶುಭಕ್ಕೊ ಅದು ಅಲ್ಲಿದೆ. ಇದರಿಂದ ಪಾರಾಗಲು ಶಕ್ಯವಿಲ್ಲ. ಅದು ಈಗಿದೆ. ಎಂದೆಂದಿಗೂ ಹೀಗೆಯೇ ಇರುವುದು. ಧರ್ಮದಲ್ಲಿ ನನಗೆ ಇರುವಷ್ಟು ಶ್ರದ್ಧೆ ನಿಮಗೆ ಇಲ್ಲದೆ ಇದ್ದರೂ ನೀವು ಇದನ್ನು ಸಹಿಸಬೇಕಾಗಿದೆ. ನೀವು ಅದರಿಂದ ಬದ್ಧರಾಗಿರುವಿರಿ. ಅದನ್ನು ತ್ಯಜಿಸಿದರೆ ಸರ್ವನಾಶವಾಗುವುದು. ಇದೇ ನಮ್ಮ ಜನಾಂಗದ ಜೀವನ, ಇದನ್ನು ನಾವು ಬಲಪಡಿಸಬೇಕು. ಹಲವು ಶತಮಾನಗಳ ಆಘಾತವನ್ನು ಸಹಿಸಲು ಸಾಧ್ಯವಾಯಿತು. ಇದಕ್ಕೆ ಕಾರಣ ಧರ್ಮ ರಕ್ಷಣೆಯಲ್ಲಿ ಜಾಗರೂಕರಾಗಿದ್ದಿರಿ, ಅದಕ್ಕಾಗಿ ನೀವು ಸರ್ವವನ್ನೂ ತ್ಯಜಿಸಿರಿ. ನಿಮ್ಮ ಪೂರ್ವಿಕರು ಎಲ್ಲ ಕೋಟಲೆಯನ್ನೂ, ಮೃತ್ಯುವನ್ನೂ ಧೈರ್ಯದಿಂದ ಎದುರಿಸಿ ಧರ್ಮವನ್ನು ರಕ್ಷಿಸಿದರು.

ವಿದೇಶೀ ವಿಜಯಿಗಳು ಒಂದಾದ ಮೇಲೊಂದು ಗುಡಿಯನ್ನು ಧ್ವಂಸ ಮಾಡಿದರು. ಆ ಸೇನಾಸಮೂಹ ಹಿಂದೆ ಸರಿದ ತಕ್ಷಣವೇ ಹೊಸ ದೇವ ಸ್ಥಾನಗಳು ಮೇಲೆದ್ದುವು. ದಕ್ಷಿಣ ಭಾರತದ ಕೆಲವು ಪುರಾತನ ದೇವ

ಮಂದಿರಗಳು ಮತ್ತು ಗುಜರಾತಿನಲ್ಲಿರುವ ಸೋಮನಾಥದೇವಾಲಯ, ಹಲವು ಗ್ರಂಥರಾಶಿಗಿಂತ ಮಿಗಿಲಾಗಿ, ಹಲವು ಧಾರ್ಮಿಕ ವಿಷಯವನ್ನು ಬೋಧಿಸುವುದು, ಜಾತಿ ಜೀವನದ ಚರಿತ್ರೆಗೆ ಅಂತರ್ ದೃಷ್ಟಿಯನ್ನು ಕೊಡ ಬಲ್ಲದು. ಗಮನಿಸಿ! ಗುಡಿಗಳ ಮೇಲೆ ನೂರಾರು ಆಕ್ರಮಣದ ಚಿಹ್ನೆ ಯನ್ನು, ನೂರಾರು ಪುನರುತ್ಥಾನದ ಚಿಹ್ನೆಯನ್ನು. ಬಾರಿ ಬಾರಿ ನಷ್ಟ ವಾದರೂ ಧ್ವಂಸಾವಶೇಷದಿಂದ ಉದಿಸಿ, ನವ ಜೀವನ ತಾಳಿ, ಹಿಂದಿನಂತೆ ಪ್ರಬಲವಾಗಿರುವುದು.

ಇದೇ ನಮ್ಮ ಜನಾಂಗದ ಭಾವನೆ, ಇದೇ ನಮ್ಮ ಜೀವನ ಪ್ರವಾಹ. ಇದನ್ನು ಅನುಸರಿಸಿದರೆ ಮಹತ್ವಕ್ಕೆ ಏರುವಿರಿ. ಇದನ್ನು ತ್ಯಜಿಸಿದರೆ ಸಾಯುವಿರಿ. ಈ ಜೀವನ ಪ್ರವಾಹದಿಂದ ದೂರಸರಿದೊಡನೆಯೆ ಮೃತ್ಯು, ಸರ್ವನಾಶವಾಗುವುದು. ಇತರ ವಿಷಯಗಳು ಅನಾವಶ್ಯಕ ಎಂದು ಹೇಳುವುದಿಲ್ಲ. ರಾಜಕೀಯ ಮತ್ತು ಸಾಮಾಜಿಕ ಪ್ರಗತಿ ಅನಾವಶ್ಯಕ ವೆಂದು ಹೇಳುವುದಿಲ್ಲ. ನಾವು ಹೇಳುವುದು ಇದು; ಇದನ್ನು ಗಮನಿಸಿ. ಅವು ಗೌಣ, ಧರ್ಮವೇ ಮುಖ್ಯ. ಭಾರತೀಯನು ಮೊದಲು ಧಾರ್ಮಿಕ, ನಂತರ ಇತರ ಹವ್ಯಾಸಗಳು. ಮೊದಲು ಇದನ್ನು ನಾವು ಬಲಪಡಿಸಬೇಕು. ಇದನ್ನು ಮಾಡುವುದು ಹೇಗೆ? ನಾನು ನನ್ನ ಭಾವನೆಯನ್ನು ನಿಮ್ಮ ಮುಂದೆ ಇಡುವೆನು. ಬಹಳ ವರ್ಷಗಳಿಂದ ಈ ಭಾವನೆ ನನ್ನ ಮನ ದಲ್ಲಿತ್ತು, ಮದ್ರಾಸಿನಿಂದ ಅಮೆರಿಕಾ ದೇಶಕ್ಕೆ ಹೋಗುವುದಕ್ಕೂ ಮುಂಚೆಯೇ ಇದ್ದಿತು. ಆ ಭಾವನೆಯನ್ನು ಪ್ರಚಾರಮಾಡುವುದಕ್ಕೆ ಮಾತ್ರ ನಾನು ಅಮೆರಿಕಾ ಇಂಗ್ಲೆಂಡ್ ದೇಶಗಳಿಗೆ ಹೋದೆ. ವಿಶ್ವಧರ್ಮ ಸಮ್ಮೇಳನ ಮುಂತಾದುವನ್ನು ನಾನು ಲೆಕ್ಕಿಸಲಿಲ್ಲ. ಅದೊಂದು ಅವಕಾಶ ಮಾತ್ರ. ಈ ನನ್ನ ಭಾವನೆಯೇ ಪ್ರಪಂಚದಲ್ಲೆಲ್ಲಾ ಸಂಚರಿಸುವಂತೆ ಮಾಡಿತು.

ನಮ್ಮ ಶಾಸ್ತ್ರ ಗ್ರಂಥಗಳಲ್ಲಿ, ಮಠ ಮತ್ತು ಅರಣ್ಯಗಳಲ್ಲಿ ಎಲ್ಲೋ ಕೆಲವರಿಗೆ ಮಾತ್ರ ಗೊತ್ತಿರುವ ಆಧ್ಯಾತ್ಮಿಕ ರತ್ನವನ್ನು ಬಯಲಿಗೆ ತರಬೇಕು. ಎಲ್ಲಿ ಅದು ರಹಸ್ಯವಾಗಿರುವುದೋ ಅಂತಹ ಕೆಲವು ವ್ಯಕ್ತಿಗಳಿಂದ ಹೊರಗೆ ತರುವುದು ಮಾತ್ರವಲ್ಲ. ದುರ್ಭೇದ್ಯವಾದ ಯಾವ ಭಾಷಾಪೆಟ್ಟಿಗೆಯಲ್ಲಿ ಅದು ಸುರಕ್ಷಿತವಾಗಿದೆಯೊ ಅಂತಹ ಶತಶತಾಬ್ದಿಯ ಸಂಸ್ಕೃತ ಶಬ್ದಜಾಲ ದಿಂದ ಇದನ್ನು ಬಿಡಿಸಬೇಕಾಗಿದೆ. ಸಂಕ್ಷೇಪವಾಗಿ ಹೇಳಬೇಕಾದರೆ

ಇದನ್ನು ಜನರಿಗೆ ಸುಲಭ ಮಾಡಬೇಕು. ಈ ತತ್ತ್ವಗಳನ್ನು ಹೊರಗೆ ತರಬೇಕು. ಭಾರತದ ಪ್ರತಿಯೊಬ್ಬರ ಸಾಧಾರಣ ಸಂಪತ್ತು ಇದು ಆಗಬೇಕು. ಅವನಿಗೆ ಸಂಸ್ಕೃತ ಗೊತ್ತಿರಲಿ, ಇಲ್ಲದಿರಲಿ, ಚಿಂತೆ ಇಲ್ಲ. ಮಾರ್ಗದಲ್ಲಿರುವ ಮೊದಲನೆ ಅಡಚಣೆಯೆ ನಮ್ಮ ಪ್ರಖ್ಯಾತ ಭಾಷೆ ಸಂಸ್ಕೃತ. ಸಾಧ್ಯವಾದರೆ ನಮ್ಮ ದೇಶದವರೆಲ್ಲರೂ, ಸಂಸ್ಕೃತ ವಿದ್ಯಾವಂತರಾಗುವವರೆಗೆ ಈ ಅಡಚಣೆಯನ್ನು ನಿವಾರಿಸಲು ಕಷ್ಟ. ನಾನು ಇಡೀ ಜೀವನವೆಲ್ಲ ಈ ಭಾಷೆಯನ್ನು ಓದುತ್ತಿರುವೆನು. ಆದರೂ ಪ್ರತಿಯೊಂದು ಹೊಸ ಗ್ರಂಥವೂ ನನಗೆ ಹೊಸದಾಗಿದೆ ಎಂದರೆ ಅದರ ಕಷ್ಟ ನಿಮಗೆ ಅರಿವಾಗುವುದು. ಈ ಭಾಷೆಯನ್ನು ವಿವರವಾಗಿ ಅಭ್ಯಾಸಮಾಡುವುದಕ್ಕೆ ಸಮಯವಿಲ್ಲದವರಿಗೆ ಕಷ್ಟ ಎಷ್ಟಿರಬಹುದು! ಆದಕಾರಣವೆ ಭಾವನೆಯನ್ನು ದೇಶ ಭಾಷೆಯ ಮೂಲಕ ಜನರಿಗೆ ಪ್ರಚಾರಮಾಡಬೇಕು. ಜೊತೆಗೆ ಸಂಸ್ಕೃತ ವಿದ್ಯಾಭ್ಯಾಸವೂ ನಡೆಯಬೇಕು. ಸಂಸ್ಕೃತ ಭಾಷೋಚ್ಚಾರಣೆಯು ಜನರಿಗೆ ಗೌರವ, ಶಕ್ತಿ, ತೇಜಸ್ಸನ್ನು ನೀಡುವುದು. ಕೆಳಗಿರುವ ಜನರನ್ನು ಮೇಲೆತ್ತಲು ರಾಮಾನುಜ, ಚೈತನ್ಯ, ಕಬೀರ್ ಮುಂತಾದವರು ಮಾಡಿದ ಪ್ರಯತ್ನ ಬಹಳ ಶೀಘ್ರದಲ್ಲಿ ಅವರ ಕಾಲದಲ್ಲೇ ಪ್ರತಿಫಲವನ್ನು ನೀಡಿತು. ಆದರೂ ಅನಂತರ ಅಭಿವೃದ್ಧಿಯಾಗಲಿಲ್ಲ. ಅವರ ಕಾಲಾನಂತರ ಒಂದು ಶತಮಾನದ ಹೊತ್ತಿಗೇ ಅವುಗಳ ಏಳಿಗೆ ನಿಂತಿತು. ಇದಕ್ಕೆ ನಾವು ಕಾರಣಕೊಡಬೇಕಾಗಿದೆ. ಅದರ ರಹಸ್ಯ ಇಲ್ಲಿದೆ. ಅವರು ಕೆಳಗಿನ ವರ್ಗದವರನ್ನು ಮೇಲೆತ್ತಿದರು. ಇವರು ಮೇಲೆ ಬರಬೇಕೆಂದು ಅವರೆಲ್ಲರೂ ಆಶಿಸಿದರು. ಆದರೆ ಜನ ಸಾಮಾನ್ಯರಲ್ಲಿ ಸಂಸ್ಕೃತ ಭಾಷೆಯನ್ನು ಪ್ರಚಾರ ಮಾಡುವುದಕ್ಕೆ ಪ್ರಯತ್ನಿಸಲಿಲ್ಲ. ಜನ ಸಾಮಾನ್ಯರು ಸಂಸ್ಕೃತ ಭಾಷೆಯನ್ನು ಓದದಂತೆ ಮಾಡಿದುದರಿಂದ ಭಗವಾನ್ ಬುದ್ಧ ದೇವನು ಒಂದು ತಪ್ಪನ್ನು ಮಾಡಿದನು. ಬೇಗ ಶೀಘ್ರವಾಗಿ ಅವನಿಗೆ ಪ್ರತಿಫಲ ಬೇಕಾಗಿತ್ತು. ಭಾಷಾಂತರ ಮಾಡಿ ಜನರ ಭಾಷೆಯಾದ ಪಾಲಿಯಲ್ಲಿ ಪ್ರಚಾರಮಾಡಿದನು. ಅದೊಂದು ಮಹಾಕಾರ್ಯ. ಜನರಾಡುವ ಭಾಷೆಯಲ್ಲಿ ಮಾತನಾಡಿದನು. ಜನರೂ ಅದನ್ನು ತಿಳಿದುಕೊಂಡರು. ಇದೊಂದು ಸಾಹಸ. ಇದರಿಂದ ಭಾವನೆ ಬಹಳ ದೂರ ವೇಗವಾಗಿ ಪ್ರಚಾರವಾಗುವುದಕ್ಕೆ ಸಾಧ್ಯವಾಯಿತು. ಆದರೆ ಜೊತೆಗೆ ಸಂಸ್ಕೃತ ಭಾಷೆಯೂ ಹರಡಬೇಕಾಗಿತ್ತು. ಜ್ಞಾನ ಬಂತು. ಗೌರವ ಬರಲಿಲ್ಲ. ಸಂಸ್ಕೃತಿ ಇರಲಿಲ್ಲ.

ಸಂಸ್ಕೃತಿ ಮಾತ್ರ ಆಘಾತವನ್ನು ಸಹಿಸಬಲ್ಲದು. ಕೇವಲ ಜ್ಞಾನ ರಾಶಿಗೆ ಅದನ್ನು ಎದುರಿಸುವ ಶಕ್ತಿ ಇಲ್ಲ. ಪ್ರಪಂಚಕ್ಕೆ ಜ್ಞಾನರಾಶಿಯನ್ನು ಕೊಡಬಹುದು. ಆದರೆ ಅದರಿಂದ ಹೆಚ್ಚು ಪ್ರಯೋಜನವಿಲ್ಲ. ಸಂಸ್ಕೃತಿ ರಕ್ತದಲ್ಲಿ ಹರಿಯಬೇಕು. ಆಧುನಿಕ ಕಾಲದಲ್ಲಿ ಬೇಕಾದಷ್ಟು ಜ್ಞಾನ ಸಂಪತ್ತನ್ನು ಪಡೆದ ದೇಶಗಳನ್ನು ನೋಡಿರುವೆವು. ಆದರೆ ಅದರಿಂದ ಏನು ಪ್ರಯೋಜನ? ಅವರು ವ್ಯಾಘ್ರದಂತೆ, ಕಾಡು ಜನಾಂಗದಂತೆ, ಅವರಲ್ಲಿ ಸಂಸ್ಕೃತಿ ಇಲ್ಲ. ನಾಗರಿಕತೆಯಂತೆ ಜ್ಞಾನ ಕೂಡ ತೋರಿಕೆಗೆ ಮಾತ್ರ, ಸ್ವಲ್ಪ ಕೆರೆದರೆ ಸಾಕು ಕಾಡುಮನುಷ್ಯ ಕಾಣುವನು. ಆಗುವುದೇ ಹೀಗೆ. ಇದೇ ಅಪಾಯ. ದೇಶ ಭಾಷೆಯಲ್ಲಿ ಜನರಿಗೆ ಪ್ರಚಾರಮಾಡಿ. ಭಾವನೆ ಕೊಡಿ. ಅವರಿಗೆ ವಿಷಯ ಗ್ರಹಣವಾಗುವುದು. ಆದರೆ ಅವರಿಗೆ ಮತ್ತೊಂದು ಅವಶ್ಯಕವಿದೆ. ಸಂಸ್ಕೃತಿಯನ್ನು ಕೊಡಿ. ನೀವು ಅವರಿಗೆ ಇದನ್ನು ಕೊಡುವ ತನಕ ಅವರ ಪ್ರಗತಿ ಸ್ಥಿರವಾಗಿರಲಾರದು. ಸಂಸ್ಕೃತ ಭಾಷೆ ಬಲ್ಲ ಮತ್ತೊಂದು ಜಾತಿ ಹುಟ್ಟುವುದು. ಅದು ಇತರರ ಮೇಲೆ ಹೋಗಿ ಅವರನ್ನು ಆಳುವುದು. ಕೆಳಗಿನ ವರ್ಣದಲ್ಲಿರುವವರು ಮೇಲೆ ಬರ ಬೇಕಾದರೆ ಸುರಕ್ಷಿತ ಮಾರ್ಗ ಒಂದೇ ಇರುವುದು. ಅದೇ ಸಂಸ್ಕೃತ ಭಾಷೆ ಯನ್ನು ಕಲಿಯುವುದು. ಮೇಲಿನ ವರ್ಣದವರ ಮೇಲೆ ಹೋರಾಡುವುದು. ಜಗಳ ಕಾಯುವುದು, ಅವರಿಗೆ ವಿರೋಧವಾಗಿ ಬರೆಯುವುದು ಇದರಿಂದ ಪ್ರಯೋಜನವೇನೂ ಇಲ್ಲ. ಇದರಿಂದ ವ್ಯರ್ಥ ಮನಸ್ತಾಪ ಹೋರಾಟ, ಈ ಜನಾಂಗ ಆಗಲೆ ದುರ್ದೈವವಶಾತ್ ಭಿನ್ನವಾಗಿದೆ. ಅದು ಮತ್ತೂ ಹೆಚ್ಚು ಭಿನ್ನವಾಗುವುದು. ಜಾತಿಗಳನ್ನು ಒಂದೇ ಸಮನಾಗಿ ಮಾಡ ಬೇಕಾದರೆ, ಕೆಳಗಿನ ವರ್ಣದವರು ಮೇಲಿನ ವರ್ಣದವರ ಪ್ರಬಲತೆಗೆ ಕಾರಣವಾದ ವಿದ್ಯೆ ಮತ್ತು ಸಂಸ್ಕೃತಿಯನ್ನು ಸ್ವೀಕರಿಸಬೇಕು. ಅದಾದರೆ ನಿಮಗೆ ಬೇಕಾದುದು ಸಿದ್ಧಿಸುವುದು.

ಈ ಸಂದರ್ಭದಲ್ಲಿ ಕೇವಲ ಮದ್ರಾಸಿಗೆ ಅನ್ವಯಿಸುವ ಒಂದು ಪ್ರಶ್ನೆಯನ್ನು ಪರ್ಯಾಲೋಚಿಸುವೆ. ದ್ರಾವಿಡರು ಎಂಬ ಬೇರೆ ಜನಾಂಗ ದಕ್ಷಿಣ ಭರತಖಂಡದಲ್ಲಿ ಇದ್ದಿತೆಂದು ಒಂದು ಸಿದ್ಧಾಂತವಿದೆ. ಇದು ಉತ್ತರದಲ್ಲಿರುವ ಆರ್ಯರಿಗಿಂತ ಸಂಪೂರ್ಣ ಬೇರೆ ಎಂದು ದಕ್ಷಿಣ ದೇಶ ದಲ್ಲಿರುವ ಬ್ರಾಹ್ಮಣರು ಮಾತ್ರ ಉತ್ತರದ ಆರ್ಯರೆಂದೂ, ಉಳಿದವರೆಲ್ಲರೂ ಬೇರೆ ಜಾತಿಗೆ ಸೇರಿದವರೆಂದೂ ಹೇಳುವರು. ಭಾಷಾ ಶಾಸ್ತ್ರಜ್ಞರೇ,

ದಯವಿಟ್ಟು ಕ್ಷಮಿಸಿ, ನಿಮ್ಮ ಊಹೆ ನಿರಾಧಾರವಾದುದು. ಇದಕ್ಕೆ ಇರುವ ಪ್ರಮಾಣ ಒಂದೇ. ಅದೇ ಉತ್ತರ ಮತ್ತು ದಕ್ಷಿಣ ಭಾಷೆಗೆ ಇರುವ ವ್ಯತ್ಯಾಸ. ಮತ್ತಾವ ವ್ಯತ್ಯಾಸವನ್ನೂ ನಾನು ಕಾಣೆ. ಇಲ್ಲಿ ಎಷ್ಟೋ ಜನ ಉತ್ತರ ದೇಶದವರು ಇರುವರು. ನನ್ನ ಐರೋಪ್ಯ ಸ್ನೇಹಿತರಿಗೆ ನಮ್ಮಲ್ಲಿ ಔತ್ತರೇಯರು ಯಾರು ದಾಕ್ಷಿಣಾತ್ಯರು ಯಾರು ಎಂದು ಈ ಸಭೆಯಲ್ಲಿ ವಿಂಗಡಿಸಿ ಎಂದು ಕೇಳುವೆನು. ಎಲ್ಲಿದೆ ವ್ಯತ್ಯಾಸ? ಎಲ್ಲೋ ಸ್ವಲ್ಪ ಭಾಷಾ ವ್ಯತ್ಯಾಸವಷ್ಟೆ. ಇಲ್ಲಿಗೆ ಬಂದ ಬ್ರಾಹ್ಮಣರು ಸಂಸ್ಕೃತ ಭಾಷೆ ಮಾತಾಡುವ ಬ್ರಾಹ್ಮಣರು, ಅವರು ದ್ರಾವಿಡ ಭಾಷೆ ಕಲಿತು ಸಂಸ್ಕೃತ ಮರೆತರು ಎನ್ನುವರು. ಇತರ ಜಾತಿಯವರೂ ಏತಕ್ಕೆ ಹಾಗೆಯೇ ಮಾಡಿರಬಾರದು? ಇತರರೂ ಕೂಡ ಒಬ್ಬರಾದ ಮೇಲೊಬ್ಬರು ಉತ್ತರದಿಂದ ಬಂದು ತಮ್ಮ ಭಾಷೆ ಮರೆತು ದ್ರಾವಿಡಭಾಷೆಯನ್ನು ಏತಕ್ಕೆ ಕಲಿತಿರಬಾರದು? ಈ ವಾದ ಸರಣಿ ಉಭಯ ಪಕ್ಷಗಳಿಗೂ ಅನ್ವಯಿಸುವುದು. ಇಂತಹ ಕೆಲಸಕ್ಕೆ ಬಾರದ ಸಿದ್ಧಾಂತದಲ್ಲಿ ನಂಬಬೇಡಿ. ಇಲ್ಲಿಂದ ಮಾಯವಾದ ದ್ರಾವಿಡ ಜನಾಂಗ ಹಿಂದೆ ಇದ್ದಿರಬಹುದು. ಎಲ್ಲೋ ಅಳಿದುಳಿದ ಕೆಲವರು ಕಾನನಾಂತರದಲ್ಲಿ ವಾಸಿಸುತ್ತಿದ್ದರೇನೋ? ಬಹುಶಃ ಅವರ ಭಾಷೆಯನ್ನು ಸ್ವೀಕರಿಸಿರಬಹುದು. ಈಗಿರುವವರೆಲ್ಲ ಉತ್ತರದಿಂದ ಬಂದ ಆರ್ಯರು. ಹಿಂದೂ ದೇಶವೆಲ್ಲ ಆರ್ಯಭೂಮಿ ಬೇರಲ್ಲ.

ಶೂದ್ರರು ಅನಾರ್ಯರೆಂಬ ಭಾವನೆಯೊಂದು ಇದೆ. ಅವರಾರು? ಅವರು ದಸ್ಯುಗಳು. ಪಾಶ್ಚಾತ್ಯ ಪಂಡಿತಗಣ ಇತಿಹಾಸ ಪುನರಾವೃತ್ತಿ ಆಗುವುದೆಂದು ಸಾರುವರು. ಅಮೆರಿಕ, ಇಂಗ್ಲೀಷ್, ಪೋರ್ಚುಗೀಸ್ ಮತ್ತು ಡಚ್ಚರು ಆಫ್ರಿಕಾದೇಶದ ನಿಗ್ರೋ ಜನರನ್ನು ಹಿಡಿದು ಅವರಿಂದ ಕೆಲಸ ಮಾಡಿಸುತ್ತಿದ್ದರು. ಗುಲಾಮಗಿರಿಯಲ್ಲೇ ಜಾತಿ ಸಂಕರದಿಂದ ಹುಟ್ಟಿದ ಸಂತಾನರು ಗುಲಾಮರಾಗಿಯೇ ಉಳಿದರು. ಇದರ ಆಧಾರದ ಮೇಲೆ ಮನಸ್ಸು ಸಹಸ್ರಾರು ವರುಷ ಹಿಂದೆ ಹೋಗಿ ಇಲ್ಲಿಯೂ ಹಾಗೆ ಆಗಿರಬೇಕೆಂದು ಊಹಿಸುವರು. ನಮ್ಮ ಪ್ರಾಕ್ತನ ವಿಮರ್ಶಕ ಭರತ ಖಂಡದಲ್ಲೆಲ್ಲ ಕಪ್ಪುಕಣ್ಣಿನ ಅನಾರ್ಯರೇ ಮೊದಲು ಇದ್ದರೆಂದೂ ಆರ್ಯರು ಎಲ್ಲೋ ಹೊರಗಿನಿಂದ ಬಂದರೆಂದೂ ಹೇಳುವರು. ದೇವರೇ ಬಲ್ಲ ಅವರು ಎಲ್ಲಿಂದ ಬಂದರೋ. ಕೆಲವರು ಆರ್ಯರು ಮಧ್ಯ ಟಿಬೆಟ್ಟನಿಂದ

ಬಂದರೆಂದೂ, ಮತ್ತೆ ಕೆಲವರು ಮಧ್ಯ ಏಷ್ಯಾದಿಂದ ಬಂದರೆಂದೂ, ದೇಶ ಭಕ್ತ ಆಂಗ್ಲೇಯರು ಆರ್ಯರೆಲ್ಲ ಕೆಂಪು ಕೂದಲಿನವರೆಂದೂ ಹೇಳುವರು. ಮತ್ತೆ ಕೆಲವರು ತಮಗೆ ತೋರಿದಂತೆ ಅವರೆಲ್ಲ ಕಪ್ಪು ಕೂದಲಿನವರೆಂದೂ ಹೇಳುವರು. ಗ್ರಂಥಕರ್ತ ಕಪ್ಪು ಕೂದಲಿನವನಾದರೆ ಆರ್ಯರು ಕಪ್ಪು ಕೂದಲಿನವರು. ಈಚೆಗೆ ಆರ್ಯರು ಸ್ವಿಟ್ಜರ್‌ಲೆಂಡ್ ಸರೋವರದ ಬಳಿ ಇದ್ದ ರೆಂದು ಸಪ್ರಮಾಣವಾಗಿ ತೋರುವ ಪ್ರಯತ್ನ ಬೇರೆ ಆಗಿದೆ. ಈ ಜನಾಂಗ ಈ ಸಿದ್ಧಾಂತ ಸಮೇತ ಎಲ್ಲರೂ ಆ ಸರೋವರದ ಪಾಲಾದರೂ ನನಗೆ ವ್ಯಥೆ ಯಿಲ್ಲ. ಕೆಲವರು ಅವರು ಉತ್ತರ ಧೃವದ ಬಳಿ ಇದ್ದರೆಂದು ಈಗ ಹೇಳು ವರು. ದೇವರು ಆರ್ಯರು ಮತ್ತು ಅವರ ನಿವಾಸ ಸ್ಥಳವನ್ನು ಆಶೀರ್ವದಿ ಸಲಿ! ಈ ಸಿದ್ಧಾಂತ ಸತ್ಯವೆಂದು ತೋರುವುದಕ್ಕೆ ನಮ್ಮ ಶಾಸ್ತ್ರದಲ್ಲಿ ಒಂದು ಪದವೂ ಇಲ್ಲ. ಆರ್ಯರು ಹೊರಗಿನಿಂದ ಇಲ್ಲಿಗೆ ಬಂದರು ಎಂದು ತೋರು ವುದಕ್ಕೆ ಒಂದು ಆಧಾರವೂ ಇಲ್ಲ. ಹಿಂದಿನ ಭರತಖಂಡದಲ್ಲಿ ಈಗಿನ ಆಫ್ಘಾನಿಸ್ಥಾನ ಕೂಡ ಸೇರಿತ್ತು. ಇಲ್ಲಿಗೆ ಮುಕ್ತಾಯವಾಗುವುದು. ಶೂದ್ರ ರೆಲ್ಲ ಅನಾರ್ಯರು ಅನಾಗರಿಕರ ಗುಂಪು ಎಂಬುದು ಕುತರ್ಕ, ನ್ಯಾಯಬದ್ಧ ವಲ್ಲ. ಆಗಿನ ಕಾಲದಲ್ಲಿ ಎಲ್ಲೋ ಕೆಲವು ಆರ್ಯರು ಇಲ್ಲಿಗೆ ಬಂದು ನೆಲಸಿ ಲಕ್ಷಾಂತರ ದಸ್ಯುಗಳನ್ನು ಆಳುತ್ತಿದ್ದಾರೆಂಬುದು ಸಾಧ್ಯವಿಲ್ಲ; ಈ ದಸ್ಯು ಗಳು ಅವರನ್ನು ಐದು ನಿಮಿಷದಲ್ಲಿ ಚಟ್ನಿಮಾಡಿ ಪೂರೈಸುತ್ತಿದ್ದರು. ಇದಕ್ಕೆ ವಿವರಣೆ ನಮಗೆ ಮಹಾಭಾರತದಲ್ಲಿ ದೊರಕುವುದು. ಸತ್ಯಯುಗದ ಆದಿಯಲ್ಲಿ ಕೇವಲ ಬ್ರಾಹ್ಮಣರು ಮಾತ್ರ ಇದ್ದರು. ಬೇರೆ ಬೇರೆ ವೃತ್ತಿಗಳಿಗೆ ಅನುಸಾರ ಅವರು ಭಿನ್ನ ಭಿನ್ನ ಪಂಗಡಗಳಾಗಿ ವಿಭಾಗ ವಾಗುತ್ತಾ ಹೋದರು ಎಂದು ಹೇಳುವುದು. ಇದೊಂದೆ ನಿಜವಾದ ಯುಕ್ತ ಪೂರಿತ ವಿವರಣೆ. ಮುಂದೆ ಬರುವ ಸತ್ಯಯುಗದಲ್ಲಿ ಎಲ್ಲಾ ವರ್ಗಗಳೂ ಒಂದಾಗಬೇಕು. ವರ್ಣಸಮಸ್ಯೆ ಭರತಖಂಡದಲ್ಲಿ ಈ ರೂಪವನ್ನು ತಾಳು ವುದು. ಮೇಲಿನ ವರ್ಗದವರನ್ನು ಕೆಳಗೆ ಎಳೆಯುವುದಿಲ್ಲ. ಬ್ರಾಹ್ಮಣ ರನ್ನು ನಾಶಮಾಡುವುದಿಲ್ಲ.

ಭರತಖಂಡದಲ್ಲಿ ಮಾನವ ಕೋಟಿಯ ಆದರ್ಶ ಬ್ರಾಹ್ಮಣ. ಶ್ರೀ ಶಂಕರಾಚಾರ್ಯರು ಗೀತಾಭಾಷ್ಯದ ಪ್ರಾರಂಭದಲ್ಲಿ ಇದನ್ನು ಸುಂದರ ವಾಗಿ ವಿವರಿಸುವರು. ಬ್ರಾಹ್ಮಣರ ಬ್ರಹ್ಮತ್ವವನ್ನು ಕಾಪಾಡುವುದಕ್ಕೆ ಪ್ರಚಾರಮಾಡುವುದಕ್ಕೆ ಶ್ರೀ ಕೃಷ್ಣ ಅವತಾರವೆತ್ತಿದನು ಎಂದು ಹೇಳು

ವರು. ಇದೇ ಅವನ ಅವತಾರದ ಪರಮ ಉದ್ದೇಶ್ಯ. ಈ ಬ್ರಾಹ್ಮಣ ಬ್ರಹ್ಮಜ್ಞ ಪುರುಷ, ಈ ಆದರ್ಶ ಸಿದ್ಧ ಮಾನವ ಇರುವುದು ಅತ್ಯಾವಶ್ಯಕ. ಬ್ರಹ್ಮಜ್ಞ ಪುರುಷ ಎಂದಿಗೂ ಲೋಪವಾಗ ಕೂಡದು. ಈಗ ಇರುವ ವರ್ಣಗಳಲ್ಲಿ ಎಷ್ಟೋ ಲೋಪದೋಷಗಳಿವೆ. ಆದರೆ ಎಲ್ಲರೂ ಬ್ರಾಹ್ಮಣ ರಿಗೆ ಈ ಗೌರವವನ್ನು ಕೊಡುವುದಕ್ಕೆ ಸಿದ್ಧರಾಗಿರಬೇಕೆಂದು ನಮಗೆ ಗೊತ್ತಿದೆ. ಅದೇ ಉಳಿದ ವರ್ಣಗಳಿಗೆಲ್ಲಕ್ಕಿಂತ ಹೆಚ್ಚಾಗಿ ಬಾಹ್ಮಣ ವರ್ಗ ದಲ್ಲಿ ಹೆಚ್ಚು ಬ್ರಹ್ಮಜ್ಞರಿರುವರು. ಇದು ಸತ್ಯ. ಉಳಿದ ವರ್ಣದವರಿಂದ ಅವರಿಗೆ ಇದಕ್ಕಾಗಿ ಗೌರವ ಸಲ್ಲಬೇಕಾಗಿದೆ. ಅವರ ಲೋಪದೋಷಗಳನ್ನು ನಿರ್ಭೀತಿಯಿಂದ ಧೈರ್ಯವಾಗಿ ತೋರಬೇಕು. ಆದರೆ ಅವರಿಗೆ ಸಲ್ಲುವ ಗೌರವವನ್ನೂ ತೋರಬೇಕು. Give every man his due ಎಂಬ ಇಂಗ್ಲೀಷ್ ನಾಣ್ಣುಡಿಯನ್ನು ನೆನಪಿನಲ್ಲಿಡಿ. ಸುಮ್ಮನೆ ಜಾತಿಗಳೊಂದಿಗೆ ಹೋರಾಡಿ ಪ್ರಯೋಜನವಿಲ್ಲ. ಇದರಿಂದ ಏನು ಪ್ರಯೋಜನ? ಇದು ನಮ್ಮನ್ನು ಹೆಚ್ಚಾಗಿ ವಿಭಾಗಿಸುವುದು, ಹೆಚ್ಚು ದುರ್ಬಲರನ್ನಾಗಿ ಮಾಡು ವುದು, ಹೆಚ್ಚು ಅಧೋಗತಿಗೆ ಒಯ್ಯುವುದು. ಪ್ರತ್ಯೇಕ ಹಕ್ಕುಬಾಧ್ಯತೆಗಳ ಕಾಲ ಆಗಿ ಹೋಯಿತು. ಭರತಖಂಡದಿಂದ ಅಂತಹ ಕಾಲ ಎಂದೋ ಹೋಯಿತು. ಆಂಗ್ಲೇಯರ ಆಳ್ವಿಕೆಯ ಒಂದು ಮಹದುಪಕಾರ ಇದು. ಪ್ರತ್ಯೇಕ ಹಕ್ಕನ್ನು ಧ್ವಂಸಮಾಡಿದ ಮುಹಮ್ಮದೀಯ ಆಳ್ವಿಕೆಗೂ ನಾವು ಋಣಿಗಳು. ಅವರ ಆಳ್ವಿಕೆಯೆಲ್ಲಾ ಕೆಟ್ಟದಲ್ಲ. ಯಾವುದೂ ಬರೀ ಒಳ್ಳೆ ಯದೂ ಅಲ್ಲ, ಕೆಟ್ಟದೂ ಅಲ್ಲ. ಭರತಖಂಡದಲ್ಲಿ ಮುಹಮ್ಮದೀಯರ ವಿಜಯ ದೀನರಿಗೆದಲಿತರಿಗೆ ಮುಕ್ತಿಯಂತೆ ಬಂತು. ಅದಕ್ಕೆ ನಮ್ಮ ದೇಶ ದಲ್ಲಿ ಐದನೇ ಒಂದು ಪಾಲು ಮುಹಮ್ಮದೀಯರಾದರು. ಕತ್ತಿಯೇ ಇದ ನ್ನೆಲ್ಲಾ ಸಾಧಿಸಲಿಲ್ಲ. ಕೇವಲ ಬೆಂಕಿ ಕತ್ತಿ ಎರಡೇ ಇದನ್ನೆಲ್ಲಾ ಸಾಧಿಸಿತು ಎಂದು ಭಾವಿಸುವುದು ಮೌಢ್ಯತೆಯ ಪರಾಕಾಷ್ಠೆ. ನೀವು ಜೋಪಾನ ವಾಗಿಲ್ಲದೇ ಇದ್ದರೆ ಐದನೇ ಒಂದು ಪಾಲು ಅಲ್ಲ, ಮದ್ರಾಸಿನಲ್ಲಿ ಅರ್ಧ ಜನರು ಕ್ರೈಸ್ತರಾಗುವರು. ಮಲಬಾರಿನಲ್ಲಿ ನಾನು ನೋಡಿರುವುದಕ್ಕಿಂತ ಹಾಸ್ಯಾಸ್ಪದವಾದುದು ಮತ್ತೆಲ್ಲಿಯಾದರೂ ಇರುವುದೇ? ಸತ್ಕುಲ ಪ್ರಸೂತ ನಿರುವ ಬೀದಿಯಲ್ಲಿ ಪರೆಯನಿಗೆ ನಡೆಯಲು ಅವಕಾಶವಿಲ್ಲ. ಅವನು ತನ್ನ ಹೆಸರನ್ನು ಬದಲಾಯಿಸಿ ಒಂದು ಇಂಗ್ಲೀಷ್ ಹೆಸರನ್ನೋ ಅಥವಾ ಮುಹ ಮ್ಮದೀಯ ಹೆಸರನ್ನೋ ಇಟ್ಟುಕೊಂಡರೆ ಪರವಾಯಿಲ್ಲ. ಇದರಿಂದ ನೀವು

ಅವರನ್ನು ಯಾರು ಎಂದು ಊಹಿಸಬೇಕಾಗಿದೆ? ಮಲೆಯಾಳಿಗಳೆಲ್ಲಾ ಹುಚ್ಚರು. ಅವರ ಮನೆ ಹುಚ್ಚರ ಆಸ್ಪತ್ರೆ. ಭರತಖಂಡದ ಇತರರೆಲ್ಲಾ, ಇವರು ತಮ್ಮ ನಡತೆಯನ್ನು ಸರಿಮಾಡಿಕೊಂಡು ಬುದ್ಧಿವಂತರಾಗುವವರೆಗೆ ಇವರನ್ನು ನಿಕೃಷ್ಟ ದೃಷ್ಟಿಯಿಂದ ಕಾಣಬೇಕು. ನಾಚಿಕೆಗೇಡು! ಇಂತಹ ಕ್ರೂರ ಅನಾಗರಿಕ ಆಚಾರ ಅವರಲ್ಲಿದೆ. ಅವರ ಮಕ್ಕಳೆ ಉಪವಾಸ ದಿಂದ ಸಾಯುವರು. ಅವರು ಧರ್ಮ ಬದಲಾಯಿಸಿದರೆ ಹೊಟ್ಟೆ ತುಂಬಾ ಊಟ ಸಿಕ್ಕುವುದು. ಜಾತಿಗಳಲ್ಲಿ ಇನ್ನು ಮುಂದೆ ಹೋರಾಟ ವಿರಕೂಡದು.

ಉಚ್ಚವರ್ಗದವರನ್ನು ಕೆಳಗೆ ಎಳೆಯುವುದಲ್ಲ, ಕೆಳಗಿನವರನ್ನು ಮೇಲಕ್ಕೆ ತರುವುದೇ ಪರಿಹಾರ. ಭರತಖಂಡದ ಶಾಸ್ತ್ರದ ಪೂರ್ಣ ಪರಿ ಚಯವಿಲ್ಲದವರು, ನಮ್ಮ ಪೂರ್ವಿಕರ ಬೃಹತ್ ಯೋಜನಾಕ್ರಮವನ್ನು ತಿಳಿದುಕೊಳ್ಳಲು ಸ್ವಲ್ಪವೂ ಸಾಮರ್ಥ್ಯವಿಲ್ಲದವರು, ಇದಕ್ಕೆ ವಿರೋಧ ವಾಗಿ ಹೇಳಿದರೂ ನಮ್ಮ ಮಾರ್ಗವೇ ಅದಾಗಿತ್ತು. ಈಗಿನವರಿಗೆ ಇದು ಗೊತ್ತಾಗುವುದಿಲ್ಲ. ಯಾರಿಗೆ ಬುದ್ಧಿ ಇದೆಯೋ, ಯಾರು ಅವರ ರೀತಿ ಯನ್ನು ಸವಿಸ್ತಾರವಾಗಿ ತಿಳಿದುಕೊಳ್ಳ ಬಲ್ಲರೋ ಅವರು ತಿಳಿದುಕೊಳ್ಳು ವರು. ಅವರು ಬದಿಗೆ ಸರಿದು ಅನಾದಿ ಕಾಲದಿಂದಲೂ ಭರತಖಂಡ ಅನು ಸರಿಸಿದ ಪ್ರಖ್ಯಾತ ದಾರಿಯಲ್ಲಿ ಹೋಗುವರು. ಆಧುನಿಕ ಮತ್ತು ಪೂರ್ವ ಕಾಲದ ಶಾಸ್ತ್ರದಲ್ಲಿ ಇದನ್ನು ಕ್ರಮ ಕ್ರಮವಾಗಿ ಮನಗಾಣುವರು. ಅವರ ಯೋಜನೆ ಏನು? ಆದರ್ಶದ ತುತ್ತತುದಿ ಬ್ರಾಹ್ಮಣ. ಅದರ ಪ್ರಾರಂಭ ಚಂಡಾಲ. ಚಂಡಾಲನನ್ನು ಬ್ರಾಹ್ಮಣ ಮಾಡುವುದೇ ಅವರ ಮುಖ್ಯ ಗುರಿ. ಕ್ರಮೇಣ ಅವರಿಗೆ ಹೆಚ್ಚು ಹೆಚ್ಚು ಹಕ್ಕುಬಾಧ್ಯತೆಗಳು ಬರುವುವು. ಕೆಲವು ಶಾಸ್ತ್ರಗಳಿವೆ. ಅವು ಹೀಗೆ ಹೇಳುವುವು. "ಶೂದ್ರ ವೇದವನ್ನು ಕೇಳಿದರೆ ಅವನ ಕಿವಿಗೆ ಕಾದಸೀಸವನ್ನು ಹಾಕಿರಿ, ಒಂದು ಶ್ಲೋಕವನ್ನು ಉಚ್ಚರಿಸಿದರೆ ನಾಲಗೆಯನ್ನು ಕತ್ತರಿಸಿ. ಬ್ರಾಹ್ಮಣನನ್ನು 'ಎಲೈ ಬ್ರಾಹ್ಮಣನೇ' ಎಂದರೆ ಅವನ ನಾಲಿಗೆ ಕತ್ತರಿಸಿ." ಇದೊಂದು ನಿಸ್ಸಂದೇಹ ವಾಗಿ ಅನಾಗರಿಕ ರಾಕ್ಷಸೀ ಕೃತ್ಯ. ಅದನ್ನು ಹೇಳಲೇ ಬೇಕಾಗಿಲ್ಲ. ಸ್ಮೃತಿಕಾರರನ್ನು ದೂರಿ ಪ್ರಯೋಜನವಿಲ್ಲ. ಅವರು ಆಗಿನ ಕಾಲದಲ್ಲಿ ಕೆಲವು ಜಾತಿಯ ಬಳಕೆಯಲ್ಲಿದ್ದ ಆಚಾರವನ್ನು ಬರೆದಿರುವರು. ಕೆಲವು ವೇಳೆ ಇಂತಹ ರಾಕ್ಷಸೀ ವ್ಯಕ್ತಿಗಳು ಪೂರ್ವ ಕಾಲದಲ್ಲಿ ಹುಟ್ಟಿದರು.

ಹೆಚ್ಚು ಕಡಿಮೆ ಇಂತಹ ಆಸುರೀ ವ್ಯಕ್ತಿಗಳು ಎಲ್ಲಾ ಕಾಲದಲ್ಲಿಯೂ ಇದ್ದೇ ಇರುವರು. ಕ್ರಮೇಣ ಅವರು ಉಗ್ರತೆಯನ್ನು ಸ್ವಲ್ಪ ತಗ್ಗಿಸಿರುವರು. “ಶೂದ್ರರಿಗೆ ತೊಂದರೆ ಕೊಡಬೇಡಿ. ಆದರೆ ಉತ್ತಮ ವಿಷಯಗಳನ್ನು ಅವರಿಗೆ ಬೋಧಿಸಬೇಡಿ” ಎನ್ನುವರು. ಕ್ರಮೇಣ ಇತರ ಸ್ಮೃತಿಗಳಲ್ಲಿ ಅದರಲ್ಲಿ ಯಾವುದು ಇಂದು ಹೆಚ್ಚು ಬಳಕೆಯಲ್ಲಿರುವುದೊ ಅದರಲ್ಲಿ, ಶೂದ್ರರು ಬ್ರಾಹ್ಮಣರ ಆಚಾರ ವ್ಯವಹಾರವನ್ನು ಅನುಕರಿಸಿದರೆ ಒಳ್ಳೆಯದು. ಅದನ್ನು ಪ್ರೋತ್ಸಾಹಿಸಬೇಕು ಎನ್ನುವರು. ಇದು ಹೇಗೆ ನಡೆಯುತ್ತಿರುವುದು, ಇದು ಹೇಗೆ ಆಚರಣೆಯಲ್ಲಿತ್ತು, ಮತ್ತು ಅದನ್ನು ಹೇಗೆ ತಿಳಿದುಕೊಳ್ಳುವುದು ಎಂಬುದನ್ನು ಸವಿಸ್ತಾರವಾಗಿ ಹೇಳಲು ನನಗೆ ಸಮಯವಿಲ್ಲ. ವಾಸ್ತವಿಕ ಅಂಶಗಳಿಗೆ ಬಂದರೆ ಈ ಜಾತಿಗಳೆಲ್ಲಾ ಕ್ರಮೇಣ ಮೇಲೆ ಬರಬೇಕು. ಸಾವಿರಾರು ಉಪ ಪಂಗಡಗಳಿವೆ. ಬ್ರಾಹ್ಮಣರು ಆಗಲೇ ಕೆಲವರನ್ನು ಸೇರಿಸುತ್ತಿರುವರು. ಇತರರು ತಾವು ಬ್ರಾಹ್ಮಣರೆಂದು ಹೇಳಿಕೊಳ್ಳುವುದಕ್ಕೆ ಏನು ಅಭ್ಯಂತರವಿದೆ? ಇಷ್ಟೊಂದು ನಿಯಮಾವಳಿಗಳಿಂದ ಕೂಡಿದ ಜಾತಿ ಸೃಷ್ಟಿಯಾದದ್ದು ಹೀಗೆ. ಹಲವು ಜಾತಿಗಳಿವೆ, ಪ್ರತಿಯೊಂದರಲ್ಲಿಯೂ ಹತ್ತು ಸಾವಿರ ಜನರಿರುವರು ಎಂದು ಊಹಿಸುವ. ಇವರೆಲ್ಲಾ ಒಟ್ಟಿಗೆ ಕಲೆತು ನಾವೆಲ್ಲಾ ಬ್ರಾಹ್ಮಣರು ಎಂದರೆ ಯಾರೂ ಅವರನ್ನು ತಡೆಯುವಂತೆ ಇಲ್ಲ. ನಾನು ನನ್ನ ಜೀವನದಲ್ಲೇ ಇದನ್ನು ನೋಡಿರುವೆನು. ಕೆಲವು ಜಾತಿಗಳು ಪ್ರಬಲವಾಗುವುವು. ಅವರೆಲ್ಲಾ ಒಪ್ಪಿದರೆ ಯಾರು ಅವರನ್ನು ವಿರೋಧಿಸಬಲ್ಲರು? ಪ್ರತಿಯೊಂದು ಜಾತಿಯೂ ಪ್ರತ್ಯೇಕವಾಗಿತ್ತು. ಇತರ ಜಾತಿಯ ಪಾಡಿಗೆ ಹೋಗುತ್ತಿರಲಿಲ್ಲ. ಒಂದು ಜಾತಿಯ ಹಲವು ಉಪಜಾತಿಗಳು ಕೂಡ ಒಂದು ಮತ್ತೊಂದರ ಗೋಜಿಗೆ ಹೋಗುತ್ತಿರಲಿಲ್ಲ. ಶಂಕರಾಚಾರ್ಯ ಮುಂತಾದ ಯುಗಾವತಾರ ವ್ಯಕ್ತಿಗಳು ಹಲವು ಜಾತಿಗಳನ್ನು ಸೃಷ್ಟಿಸಿದರು. ಅವರು ಮಾಡಿರುವ ಅತಿ ವಿಚಿತ್ರವಾದ ಘಟನೆಗಳನ್ನೆಲ್ಲಾ ಹೇಳಲಾರೆ. ನಿಮ್ಮಲ್ಲಿ ಹಲವರು ಅದನ್ನು ಒಪ್ಪದೆ ಇರಬಹುದು. ಆದರೆ ನನ್ನ ಪ್ರಯಾಣ ಮತ್ತು ಅನುಭದದಲ್ಲಿ ಇದನ್ನೆಲ್ಲಾ ನಾನು ಕಂಡು ಹಿಡಿದು ಒಂದು ಅದ್ಭುತ ನಿರ್ಣಯಕ್ಕೆ ಬಂದಿರುವೆನು. ಕೆಲವು ಬೆಲೂಚಿ ದೇಶದ ಗುಂಪನ್ನು ಕ್ಷತ್ರಿಯರನ್ನಾಗಿ ಮಾಡುತ್ತಿದ್ದರು. ಬೆಸ್ತರ ಪಡೆಯನ್ನೆಲ್ಲಾ ಒಂದು ಸಲ ಬ್ರಾಹ್ಮಣರನ್ನಾಗಿ ಮಾಡುತ್ತಿದ್ದರು. ಅವರೆಲ್ಲಾ ಋಷಿಗಳು, ಮಹಾಮುನಿಗಳು. ಅವರ ಸ್ಮೃತಿಗೆ

ನಾವು ಗೌರವ ಕೊಡಬೇಕು. ನೀವೆಲ್ಲಾ ಋಷಿ ಮುನಿಗಳಾಗಿ. ಇಲ್ಲೇ ಗೂಢ ರಹಸ್ಯವಿರುವುದು. ಹೆಚ್ಚು ಕಡಿಮೆ ನಾವೆಲ್ಲಾ ಋಷಿಗಳಾಗುವೆವು. ಋಷಿ ಎಂದರೆ ಏನು? ಪರಿಶುದ್ಧನು. ಮೊದಲು ಪರಿಶುದ್ಧರಾಗಿ, ನಂತರ ಶಕ್ತಿ ಬರುವುದು. "ನಾನು ಋಷಿ" ಎಂದು ಸುಮ್ಮನೆ ಹೇಳಿದರೆ ಪ್ರಯೋಜನವಿಲ್ಲ. ನೀವು ಋಷಿಗಳಾದರೆ ಇತರರು ಅರಿವಿಲ್ಲದೆ ನಿಮ್ಮನ್ನು ಅನುಸರಿಸುವರು. ನಿಮ್ಮಿಂದ ಯಾವುದೋ ಅದ್ಭುತ ಕಾಂತಿ ಹೊರ ಹೊಮ್ಮುವುದು. ಇದೇ ಅವರು ನಿಮ್ಮನ್ನು ಅನುಸರಿಸುವಂತೆ ಮಾಡುವುದು, ನಿಮ್ಮನ್ನು ಕೇಳುವಂತೆ ಮಾಡುವುದು. ಅರಿವಿಲ್ಲದೆ ತಮ್ಮ ಇಚ್ಛೆಗೆ ವಿರೋಧವಾಗಿಯಾದರೂ ನಿಮ್ಮ ಆಜ್ಞಾಧಾರಕರಾಗುವರು. ಇದು ಋಷಿತ್ವ.

ಸವಿಸ್ತಾರಕಾರ್ಯ ಪ್ರಣಾಲಿಯವನ್ನೇನೋ ಹಲವು ತಲಾಂತರಗಳ ವರೆಗೆ ಅನುಸರಿಸಬೇಕು. ಈ ಕಲಹ ಕೊನೆಗಾಣುವುದಕ್ಕೆ ಇದೊಂದು ಸಲಹೆ ಮಾತ್ರ. ಆಧುನಿಕ ಕಾಲದಲ್ಲಿ ಜಾತಿ ಸಂಬಂಧದಲ್ಲಿ ಇಷ್ಟು ತರ್ಕ ವಿತರ್ಕ ನಡೆಯುವುದನ್ನು ನೋಡಿ ನನಗೆ ವ್ಯಥೆಯಾಗುವುದು. ಇದು ಕೊನೆಗಾಣಬೇಕು. ಇದು ಉಭಯಪಕ್ಷದವರಿಗೂ ವ್ಯರ್ಥ. ಉಚ್ಛ ವರ್ಗದ ಬ್ರಾಹ್ಮಣರ ದೃಷ್ಟಿಯಿಂದ ಇದು ಪ್ರಯೋಜನವಿಲ್ಲ. ಪ್ರತ್ಯೇಕ ಹಕ್ಕುಬಾಧ್ಯತೆಗಳ ಕಾಲ ಆಗಿಹೋಯಿತು. ಉಚ್ಛಜಾತಿ ತನ್ನ ಸಮಾಧಿಗೆ ತಾನೇ ಸಿದ್ಧವಾಗಬೇಕು. ಅದು ಎಷ್ಟು ಬೇಗ ಆದರೆ ಅಷ್ಟು ಒಳ್ಳೆಯದು. ಕಾಲವಿಳಂಬಮಾಡಿದಷ್ಟೂ ಕೊಳೆಯುವುದು. ಅಷ್ಟು ಭಯಂಕರವಾಗು ವುದು ಅದರ ಕೊನೆಗಾಲ. ಭರತಖಂಡದಲ್ಲಿ ಇತರರ ಮುಕ್ತಿಗೆ ಕೆಲಸ ಮಾಡುವುದು ಬ್ರಾಹ್ಮಣರ ಕರ್ತವ್ಯ. ಅವನು ಅದನ್ನು ಮಾಡಿದರೆ ಬ್ರಾಹ್ಮಣ. ಮಾಡದೆ ದ್ರವ್ಯಾರ್ಜನೆಗೆ ಹೊರಟರೆ ಅವನು ಬ್ರಾಹ್ಮಣ ನಲ್ಲ. ಯಾರು ಯೋಗ್ಯ ಬ್ರಾಹ್ಮಣರೋ ಅವರಿಗೆ ಮಾತ್ರ ನೀವು ಸಹಾಯ ಮಾಡಬೇಕು. ಅದರಿಂದ ಸ್ವರ್ಗ ಲಭಿಸುವುದು. ಆದರೆ ಅಯೋಗ್ಯನಿಗೆ ದಾನಮಾಡಿದರೆ ನರಕವೇ ಗತಿ ಎಂದು ನಮ್ಮ ಶಾಸ್ತ್ರ ಹೇಳುವುದು. ನೀವು ಈ ವಿಚಾರದಲ್ಲಿ ಜೋಪಾನವಾಗಿರಬೇಕು. ದ್ರವ್ಯಾರ್ಜನೆಯ ವೃತ್ತಿ ಯಾರಿಗೆ ಇಲ್ಲವೋ ಅವನೇ ಬ್ರಾಹ್ಮಣ. ದ್ರವ್ಯಾರ್ಜನೆಯ ವೃತ್ತಿ ಬ್ರಾಹ್ಮಣ ನಿಗಲ್ಲ, ಇತರ ವರ್ಗದವರಿಗೆ. ಬ್ರಾಹ್ಮಣರನ್ನು ನಾನು ಕೇಳಿಕೊಳ್ಳುತ್ತೇನೆ. ಅವರು ಭರತಖಂಡದ ಜನರು. ತಮಗೆ ಏನು ಗೊತ್ತಿದೆಯೋ ಅದನ್ನು

ಹೇಳಲಿ. ಹಲವು ಶತಮಾನಗಳಿಂದ ಸಂಗ್ರಹಿಸಿಟ್ಟ ಸಂಸ್ಕೃತಿಯನ್ನು ಇತರರಿಗೆ ನೀಡಲಿ. ನಿಜವಾದ ಬ್ರಾಹ್ಮಣರ ಆದರ್ಶವೇನು ಎಂದು ತಿಳಿದು ಕೊಳ್ಳುವುದು ಭರತಖಂಡದ ಬ್ರಾಹ್ಮಣರ ಕರ್ತವ್ಯ. ಬ್ರಾಹ್ಮಣರಿಗೆ ಇಷ್ಟೊಂದು ಗೌರವ ಮತ್ತು ಹಕ್ಕನ್ನು ಕೊಡುವುದಕ್ಕೆ ಕಾರಣ ಅವನು 'ಧರ್ಮಕೋಶನಾಗಿರುವುದು'.

ಬ್ರಾಹ್ಮಣೋ ಜಾಯಮಾನೋ ಹಿ ಪೃಥಿವ್ಯಾಮಧಿ ಜಾಯತೇ ।
ಈಶ್ವರಃ ಸರ್ವಭೂತಾನಾಂ ಧರ್ಮಕೋಶಸ್ಯ ಗುಪ್ತಯೇ ॥

ಮನುಸ್ಮೃತಿ ೧–೯೯.

ಅವನು ಈ ಕೋಶವನ್ನು ತೆರೆದು ಅನರ್ಘ್ಯರತ್ನಗಳನ್ನು ಪ್ರಪಂಚಕ್ಕೆ ಕೊಡಬೇಕು. ಅವನೇ ಭರತಖಂಡದ ಪ್ರಥಮ ಪ್ರಚಾರಕ ನಿಜ. ಜೀವನದ ಪರಮ ಗುರಿಯನ್ನು ಸೇರುವುದಕ್ಕೆ ಇತರರಿಗಿಂತ ಮುಂಚೆ ಸರ್ವ ತ್ಯಾಗಮಾಡಿ ದವನು ಇವನು. ಇತರ ಜಾತಿಗಿಂತ ಅವನು ಮುಂದೆ ಹೋದುದು ಅವನ ತಪ್ಪಲ್ಲ. ಇತರ ಜಾತಿಯವರು ಅವನಂತೆ ತಿಳಿದುಕೊಂಡು ಏಕೆ ಮಾಡಲಿಲ್ಲ? ಅವರೇಕೆ ಸುಮ್ಮನೆ ಕುಳಿತು ಸೋಮಾರಿಗಳಾಗಿರಬೇಕು? ಬ್ರಾಹ್ಮಣರು ಮುಂದೆ ಹೋಗುವುದಕ್ಕೆ ಅವಕಾಶಕೊಡಬೇಕು? ಇಂತಹ ಅವಕಾಶವನ್ನು ಪಡೆಯುವುದೊಂದು. ಅದನ್ನು ಸ್ವಾರ್ಥಕ್ಕೆ ಉಪಯೋಗಿ ಸುವುದಕ್ಕೆ ಕೂಡಿಡುವುದೊಂದು. ಎಂದು ಅಧಿಕಾರವನ್ನು ಸ್ವಾರ್ಥಕ್ಕೆ ಉಪ ಯೋಗಿಸಿಕೊಳ್ಳುವೆವೋ ಅದು ಮಹಾ ಪಾಪ. ಅದನ್ನು ಒಳ್ಳೆಯದಕ್ಕೆ ಮಾತ್ರ ಉಪಯೋಗಿಸಬೇಕು. ಹಲವು ಶತಮಾನಗಳಿಂದ ಸಂಗ್ರಹಿಸಿಟ್ಟ ಸಾಂಸ್ಕೃತಿಕ ನಿಧಿಗೆ ಬ್ರಾಹ್ಮಣ ಈಗ ಅದರ ರಕ್ಷಕನಾಗಿರುವನು. ಅದನ್ನು ಅವನು ಈಗ ಎಲ್ಲರಿಗೂ ದಾನಮಾಡಬೇಕು. ಅವನು ಜನರಿಗೆ ಕೊಡದೆ ಇದ್ದ ಕಾರಣ ಮಹಮದೀಯರ ಧಾಳಿ ಸಾಧ್ಯವಾಯಿತು. ಅವನು ಈ ಅನರ್ಘ್ಯ ರತ್ನರಾಶಿ ಯನ್ನು ಮೊದಲಿನಿಂದ ಜನರಿಗೆ ಕೊಡದಕಾರಣ ಕಳೆದ ಒಂದು ಸಾವಿರ ವರ್ಷದಿಂದಲೂ ಭರತಖಂಡಕ್ಕೆ ಬಂದ ಎಲ್ಲರ ಗುಲಾಮರಾಗಿರುವೆವು ನಾವು. ಇದರಿಂದಲೇ ನಾವು ಅಧೋಗತಿಗೆ ಬಂದುದು. ನಮ್ಮ ಪೂರ್ವಿ ಕರು ಸಂಗ್ರಹಿಸಿಟ್ಟ ಅನರ್ಘ್ಯ ರತ್ನರಾಶಿ ಇರುವ ಗುಹೆಯನ್ನು ಭೇದಿಸಿ ಹೊರಗೆ ತೆಗೆದು ಎಲ್ಲರಿಗೂ ದಾನಮಾಡುವುದು ನಮ್ಮ ಪ್ರಥಮ ಕರ್ತವ್ಯ. ಬ್ರಾಹ್ಮಣ ಇದನ್ನು ಮೊದಲು ಮಾಡಬೇಕು. ಬಂಗಾಳ ದೇಶದಲ್ಲಿ ಒಂದು ಗಾದೆ ಇದೆ. ಯಾವ ನಾಗರಹಾವು ಕಚ್ಚಿದೆಯೋ ಅದೇ ವಿಷವನ್ನು ಪುನಃ

ಕಚ್ಚಿದವನಿಂದ ಹೀರಿದರೆ ಕಡಿಸಿಕೊಂಡವನು ಬದುಕುವನು ಎನ್ನುವರು. ಹಾಗಾದರೆ ಬ್ರಾಹ್ಮಣ ಮೊದಲು ಅವನ ವಿಷವನ್ನು ಪುನಃ ಹೀರಿಕೊಳ್ಳಲಿ. ಬ್ರಾಹ್ಮಣೇತರರಿಗೆ, ತಾಳಿ! ಅವಸರಪಡಬೇಡಿ ಎನ್ನುವೆನು. ಬ್ರಾಹ್ಮಣರೊಂದಿಗೆ ಹೋರಾಡುವುದಕ್ಕೆ ಪ್ರತಿಯೊಂದು ಅವಕಾಶವನ್ನೂ ತೆಗೆದುಕೊಳ್ಳಬೇಡಿ. ನಿಮ್ಮ ತಪ್ಪಿನಿಂದ ನೀವು ಅನುಭವಿಸುತ್ತಿರುವಿರಿ. ಇದನ್ನು ನಾನು ಆಗಲೇ ತೋರಿರುವೆನು. ಆಧ್ಯಾತ್ಮವಿದ್ಯೆ, ಸಂಸ್ಕೃತ ಜ್ಞಾನ ಇವನ್ನು ಮರೆಯುವಂತೆ ಯಾರು ನಿಮಗೆ ಹೇಳಿದರು? ಇಂದಿನವರೆಗೂ ನೀವು ಏನುಮಾಡುತ್ತಿದ್ದಿರಿ? ನೀವು ಏತಕ್ಕೆ ತಾತ್ಸಾರದಿಂದ ಇದ್ದಿರಿ? ಇತರರಿಗೆ ನಿಮಗಿಂತ ಹೆಚ್ಚು ಬುದ್ಧಿ ಇತ್ತು, ಶಕ್ತಿ ಇತ್ತು, ಫಲವಿತ್ತು ಎಂದು ಈಗ ಏತಕ್ಕೆ ಅಸಮಾಧಾನಪಡುವಿರಿ? ವೃತ್ತ ಪತ್ರಿಕೆಗಳಲ್ಲಿ ಟೀಕಿಸುವುದು, ವಾದಿಸುವುದು, ನಿಮ್ಮ ಮನೆಗಳಲ್ಲಿ ಜಗಳ ಕಾಯುವುದು ಇವು ಪಾಪಕರ. ಇವನ್ನು ತ್ಯಜಿಸಿ ಬ್ರಾಹ್ಮಣರ ಸಂಸ್ಕೃತಿಯನ್ನು ಗಳಿಸುವುದಕ್ಕೆ ಯತ್ನಿಸಿ. ಆಗ ಕಾರ್ಯಸಾಧನೆಯಾಗುವುದು. ನೀವೇಕೆ ಸಂಸ್ಕೃತ ವಿದ್ವಾಂಸರಾಗಬಾರದು? ಎಲ್ಲಾ ಜಾತಿಗೂ ಸಂಸ್ಕೃತ ಭಾಷೆ ಹರಡುವುದಕ್ಕೆ ಕೋಟ್ಯಂತರ ರೂಪಾಯಿಯನ್ನು ಏತಕ್ಕೆ ಖರ್ಚುಮಾಡಬಾರದು? ಅದೇ ಪ್ರಶ್ನೆ. ಇದನ್ನು ಮಾಡಿದೊಡನೆಯೇ ಬ್ರಾಹ್ಮಣರಿಗೆ ನೀವು ಸರಿಸಮ, ಭಾರತದಲ್ಲಿ ಶಕ್ತಿ ಲಾಭದ ಗೂಢರಹಸ್ಯವೇ ಇದು.

ಸಂಸ್ಕೃತ ಭಾಷೆ ಮತ್ತು ಗೌರವ ಒಟ್ಟಿಗೆ ಹೋಗುವುದು. ನಿಮ್ಮಲ್ಲಿ ಅದು ಇದ್ದರೆ ಯಾರಿಗೂ ನಿಮ್ಮನ್ನು ಟೀಕಿಸಲು ಆಗುವುದಿಲ್ಲ. ಇದೇ ಮುಖ್ಯ ರಹಸ್ಯ. ಇದನ್ನು ಅನುಸರಿಸಿ. ಪ್ರಪಂಚವೆಲ್ಲ ಅದ್ವೈತಿ ಹೇಳುವಂತೆ ಭ್ರಮೆಯಾಗಿರುವುದು, ಸಂಕಲ್ಪವೇ ಶಕ್ತಿ. ಯಾರು ಪ್ರಚಂಡ ಇಚ್ಛಾಶಕ್ತಿಯ ಅಧಿಕಾರಿಯೋ ಅವರು ಒಂದು ಕಾಂತಿಯಿಂದ ಪರಿವೃತರಾದವರಂತೆ, ಉಳಿದೆಲ್ಲರನ್ನೂ ತನ್ನ ಮಾನಸಿಕ ಸ್ಥಿತಿಗೆ ತರುವರು. ಅಂತಹ ಮಹಾ ಪುರುಷರು ಬರುವರು. ಇದರ ಭಾವನೆ ಏನು? ಅಂತಹ ಪ್ರಬಲ ವ್ಯಕ್ತಿ ಬಂದರೆ ಅವನು ತನ್ನ ಭಾವನೆಯನ್ನು ತನ್ನ ವ್ಯಕ್ತಿತ್ವದ ಮೂಲಕ ನಮ್ಮ ಮೇಲೆ ಬೀರುವನು. ನಮ್ಮಲ್ಲಿಯೂ ಹಲವರಿಗೆ ಅದೇ ಭಾವನೆ ಬರುವುದು. ನಾವು ಶಕ್ತಿಶಾಲಿಗಳಾಗುವೆವು. ಸಂಸ್ಥೆಯಲ್ಲಿ ಹೇಗೆ ಇಷ್ಟೊಂದು ಶಕ್ತಿ ಇರುವುದು? ಸಂಸ್ಥೆ ಜಡವೆಂದು ಭಾವಿಸಬೇಡಿ. ಒಂದು ಉದಾಹರಣೆಯನ್ನು ತೆಗೆದುಕೊಳ್ಳೋಣ. ನಾಲ್ಕು ಕೋಟಿ ಇಂಗ್ಲೀಷಿನವರು

ಮೂವತ್ತು ಕೋಟಿ ಭಾರತೀಯರನ್ನು ಹೇಗೆ ಆಳುವರು? ಈ ಪ್ರಶ್ನೆಯ ಉತ್ತರಕ್ಕೆ ಮನೋವಿಜ್ಞಾನ ಏನು ಹೇಳುವುದು? ನಾಲ್ಕು ಕೋಟಿ ಜನ ತಮ್ಮ ಸಂಕಲ್ಪವನ್ನೆಲ್ಲಾ ಒಟ್ಟುಗೂಡಿಸುವರು. ಇದರಿಂದ ಅದ್ಭುತ ಶಕ್ತಿ ಉತ್ಪತ್ತಿಯಾಗುವುದು. ನಿಮ್ಮ ಮೂವತ್ತು ಕೋಟಿ ಜನರ ಇಚ್ಛೆಯೂ ಬೇರೆ ಬೇರೆಯಾಗಿರುವುವು. ಭವ್ಯ ಭರತಖಂಡವನ್ನು ನಾವು ಸೃಷ್ಟಿಸ ಬೇಕಾದರೆ ಅದರ ರಹಸ್ಯವೆಲ್ಲ, ಸಂಸ್ಥೆಯ ಸಂಘಟನೆ, ಶಕ್ತಿ ಸಂಗ್ರಹ, ಮತ್ತು ಇಚ್ಛಾಶಕ್ತಿಯನ್ನು ಏಕತ್ರ ಮಾಡುವುದರಲ್ಲಿದೆ. ನನ್ನ ಕಣ್ಣ ಮುಂದೆ ಅಥರ್ವವೇದಸಂಹಿತೆಯ ಶ್ಲೋಕ ಒಂದು ಮನಸ್ಸಿಗೆ ಬರುವುದು.

"ಸಂಗಚ್ಛಧ್ವಂ ಸಂವದದ್ವಂ ಸಂ ವೊ ಮನಾಂಸಿ ಜಾನತಾಮ್ ।
ದೇವಾ ಭಾಗಂ ಯಥಾ ಪೂರ್ವೆ"

"ನೀವೆಲ್ಲ ಒಂದು ಮನಸ್ಸಿನವರಾಗಿ, ಒಂದು ಭಾವನೆಯವರಾಗಿ, ಪ್ರಾಚೀನಕಾಲದಲ್ಲಿ ಒಮ್ಮತದವರಾದುದರಿಂದ ದೇವತೆಗಳು ಬಲಿಯನ್ನು ಸ್ವೀಕರಿಸಲು ಸಾಧ್ಯವಾಯಿತು. ಮನುಷ್ಯರೂ ಏಕಮತದವರಾಗಿರುವುದ ರಿಂದಲೇ ದೇವತೆಗಳನ್ನು ಪೂಜಿಸಲು ಸಾಧ್ಯವಾಯಿತು." ಒಮ್ಮತವೇ ಸಮಾಜ ಶಕ್ತಿಯ ರಹಸ್ಯ. ದ್ರವಿಡ, ಆರ್ಯ, ಬ್ರಾಹ್ಮಣ, ಬ್ರಾಹ್ಮಣೇತರ ಎಂಬ ಪ್ರಶ್ನೆಯ ಮೇಲೆ ನೀವು ಹೋರಾಡಿದಷ್ಟೂ ಭವಿಷ್ಯ ಭಾರತ ನಿರ್ಮಾ ಣಕ್ಕೆ ಮಾಡಬೇಕಾದ ಶಕ್ತಿ ಸಂಗ್ರಹಕ್ಕೆ ದೂರವಾಗುವೆವು. ಇದನ್ನು ಗಮನದಲ್ಲಿಡಿ. ಭವಿಷ್ಯ ಭಾರತ ಸಂಪೂರ್ಣ ಇದರ ಮೇಲೆ ನಿಂತಿದೆ. ಈ ಇಚ್ಛಾಶಕ್ತಿಯನ್ನು ಸಂಗ್ರಹಿಸುವುದು ಏಕೀಭೂತ ಮಾಡುವುದು, ಶತ ಮುಖವಾಗಿ ಹರಿಯುತ್ತಿರುವುದನ್ನು ಏಕಮುಖವಾಗಿಮಾಡುವುದು ಇದೆ ರಹಸ್ಯ. ಪ್ರತಿಯೊಬ್ಬ ಚೈನೀಯನು ಬೇರೆಯಾಗಿ ಆಲೋಚಿಸುವನು, ಕೆಲವು ಜನ ಜಪಾನೀಯರು ಒಂದೇ ರೀತಿ ಆಲೋಚಿಸುವರು. ಅದರ ಪ್ರತಿಫಲ ನಿಮಗೆ ಗೊತ್ತಿದೆ. ಪ್ರಪಂಚದ ಇತಿಹಾಸದಲ್ಲೆಲ್ಲಾ ಹೀಗೆ ಆಗುತ್ತಿರುವುದು. ಎಲ್ಲೆಡೆಯಲ್ಲಿಯೂ ಅಲ್ಪ ಸಂಖ್ಯಾತ ಚಿಕ್ಕ ಚಿಕ್ಕ ರಾಷ್ಟ್ರ ಗಳು ದೊಡ್ಡ ದೊಡ್ಡ ರಾಷ್ಟ್ರಗಳನ್ನು ಆಳುತ್ತಿವೆ. ಇದು ಸ್ವಾಭಾವಿಕ ವಾಗಿಯೇ ಇದೆ. ಸಣ್ಣ ಸಣ್ಣ ರಾಷ್ಟ್ರಗಳು ತಮ್ಮ ಭಾವನೆಯನ್ನು ಕೇಂದ್ರೀಕರಿಸುವುದು ಸುಲಭ. ಅವು ಅದರಿಂದ ಅಭಿವೃದ್ಧಿಯಾಗುವುದು. ಹೆಚ್ಚು ಜನರಿರುವ ದೇಶದಲ್ಲಿ ಇದು ಬಹಳ ಕಷ್ಟ. ಚಿಲ್ಲಾಪಿಲ್ಲಿಯಾಗಿರು ವುದು ಮತ್ತು ದೊಂಬಿಯಾಗಿರುವುದರಿಂದ ಅವರೆಲ್ಲರೂ ಒಟ್ಟಿಗೆ ಕಲೆಯು

ವುದಿಲ್ಲ. ಈ ಮತಭೇದವೆಲ್ಲಾ ಒಂದೇ ಸಲ ನಿಲ್ಲಬೇಕು.

ನಮ್ಮಲ್ಲಿ ಮತ್ತೊಂದು ದೊಡ್ಡ ದೋಷವಿದೆ. ಮಹಿಳೆಯರು ದಯವಿಟ್ಟು ಕ್ಷಮಿಸಬೇಕು. ಹಲವು ಶತಮಾನಗಳ ಗುಲಾಮಗಿರಿಯಿಂದ ನಾವೆಲ್ಲ ಸ್ತ್ರೀಯರಾಜ್ಯಕ್ಕೆ ಸೇರಿದವರಂತೆ ಇರುವೆವು. ಈ ದೇಶದಲ್ಲಾಗಲೀ ಅಥವಾ ಅನ್ಯದೇಶದಲ್ಲಾಗಲೀ ಮೂರು ಸ್ತ್ರೀಯರನ್ನು ಐದು ನಿಮಿಷ ಒಟ್ಟಿಗೆ ಸೇರುವಂತೆ ಮಾಡುವುದು ಕಷ್ಟ. ಆಗಲೇ ಅವರು ಜಗಳ ಕಾಯುವರು. ಐರೋಪ್ಯ ದೇಶಗಳಲ್ಲಿ ದೊಡ್ಡ ದೊಡ್ಡ ಸ್ತ್ರೀ ಸಂಸ್ಥೆಗಳಿವೆ. ಸ್ತ್ರೀ ಶಕ್ತಿಯ ವಿಷಯವಾಗಿ ದೊಡ್ಡ ದೊಡ್ಡ ಘೋಷಣೆ ಮಾಡುವರು. ಅನಂತರ ತಮ್ಮೊಳಗೆ ಜಗಳ ಕಾಯುವರು. ಒಬ್ಬ ಗಂಡಸು ಬಂದು ಅವರನ್ನೆಲ್ಲ ಆಳುವನು. ನಾವೆಲ್ಲ ಹಾಗೆ ಇರುವೆವು. ನಾವೆಲ್ಲ ಸ್ತ್ರೀಯರು. ಒಬ್ಬ ಸ್ತ್ರೀ ಸ್ತ್ರೀಯರಿಗೆ ನಾಯಕಳಾದರೆ ಅವಳನ್ನು ದೂರುವುದಕ್ಕೆ ಪ್ರಾರಂಭಿಸುವರು, ಖಂಡಿಸುವರು, ಅವಳನ್ನು ಸುಮ್ಮನೆ ಇರಿಸುವರು. ಒಬ್ಬ ಗಂಡಸು ಬಂದು ಅವರನ್ನು ಮಧ್ಯೆ ಮಧ್ಯೆ ಹೊಡೆದು ಬೈದರೂ ಪರವಾಗಿಲ್ಲ. ಇಂತಹ ವಶೀಕರಣ ಅವರಿಗೆ ಅಭ್ಯಾಸವಾಗಿದೆ. ಪ್ರಪಂಚದಲ್ಲೆಲ್ಲಾ ಇಂತಹ ವಶೀಕರಣ ಸಮ್ಮೋಹಿನಿ ವಿದ್ಯೆಯವರು ಇರುವರು. ಇದರಂತೆಯೇ ಯಾರಾದರೂ ನಮ್ಮ ದೇಶಿಯರು ಪ್ರಖ್ಯಾತರಾಗಲು ಪ್ರಯತ್ನಿಸಿದರೆ ಅವರನ್ನು ಕೆಳಗೆ ಎಳೆಯಲು ನಾವೆಲ್ಲಾ ಪ್ರಯತ್ನಿಸುವೆವು. ಹೊರಗಿನವರು ಬಂದು ನಮ್ಮನ್ನು ಒದ್ದರೆ ಚಿಂತೆಯಿಲ್ಲ. ಇದು ನಮಗೆ ಅಭ್ಯಾಸವಾಗಿದೆಯಲ್ಲವೆ? ಗುಲಾಮರು ಪ್ರಖ್ಯಾತಪ್ರಭುಗಳಾಗಬೇಕು! ಮೊದಲು ಗುಲಾಮತನದಿಂದ ಪಾರಾಗಿ.

ಬರುವ ಐವತ್ತು ವರ್ಷಗಳವರೆಗೆ ಈ ಜನನಿ ಮಾತೃಭೂಮಿಯೇ ನಮ್ಮ ಆರಾಧನೆಯ ಇಷ್ಟದೇವವಾಗಬೇಕು. ಇನ್ನುಳಿದ ದೇವತೆಗಳೆಲ್ಲ ಕೆಲವುಕಾಲ ನಮ್ಮಿಂದ ಮರೆಯಾಗಲಿ, ಜಾಗ್ರತನಾಗಿರುವ ದೇವರು ಇದೊಂದೇ ಅದು ನಮ್ಮ ಜನಾಂಗ. ಎಲ್ಲೆಲ್ಲೂ ಅವಳ ಕಾಲುಗಳೇ, ಎಲ್ಲೆಲ್ಲೂ ಅವಳ ಕೈಗಳೇ ಎಲ್ಲೆಲ್ಲೂ ಅವಳ ಕಿವಿಗಳೇ. ಅವಳೇ ಸರ್ವ ವ್ಯಾಪಿಯಾಗಿರುವಳು ಇತರ ದೇವತೆಗಳೆಲ್ಲ ನಿದ್ರಿಸುತ್ತಿರುವರು. ನಮ್ಮ ಸುತ್ತಲೂ ಇರುವ ವಿರಾಟ ಮಹೇಶ್ವರನ ಆರಾಧನೆಯನ್ನು ತೊರೆದು ಕೆಲಸಕ್ಕೆ ಬಾರದ ಇತರ ದೇವರನ್ನು ಏಕೆ ಅರಸಿಕೊಂಡು ಹೋಗುವುದು? ನಾವು ಇದನ್ನು ಆರಾಧಿಸಿದರೆ ಇತರದೇವದೇವತೆಗಳನ್ನು ಆರಾಧಿಸಿದಂತೆ.

ಅರ್ಧ ಮೈಲಿಕೂಡ ತೆವಳಿಕೊಂಡು ಹೋಗಲಾರೆವು, ಆದರೂ ಹನುಮ ನಂತೆ ಸಾಗರವನ್ನೇ ನೆಗೆಯಲು ಇಚ್ಛಿಸುವೆವು? ಇದು ಸಾಧ್ಯವಿಲ. ಪ್ರತಿ ಯೊಬ್ಬನೂ ಯೋಗಿ, ಪ್ರತಿಯೊಬ್ಬನೂ ಧ್ಯಾನಮಗ್ನನಾಗುವವನೆ! ಇದು ಸಾಧ್ಯವಿಲ್ಲ. ಹಗಲೆಲ್ಲ ಪ್ರಾಪಂಚಿಕತೆಯಲ್ಲಿ, ಕರ್ಮದಲ್ಲಿ, ನಿರತರಾಗಿ ರಾತ್ರಿ ಕಣ್ಣುಮುಚ್ಚಿಕೊಂಡು ಪ್ರಾಣಾಯಾಮ ಮಾಡುವುದು! ಇದು ಅಷ್ಟು ಸುಲಭವೆ? ಮೂಗಿನ ಮೂಲಕ ನೀನು ಮೂರು ವೇಳೆ ಪ್ರಾಣಾಯಾಮ ಮಾಡಿ ಬಿಟ್ಟರೆ ಋಷಿಗಳು ಆಕಾಶದಿಂದ ನಿನ್ನ ಹತ್ತಿರ ಕೆಳಗೆ ಇಳಿಯುವರೆ? ಇದು ತಮಾಷೆಯೆ? ಇದರಲ್ಲಿ ಅರ್ಥವಿಲ್ಲ. ಮೊದಲು ಬೇಕಾಗಿರುವುದು ಚಿತ್ತ ಶುದ್ಧಿ. ಅದು ಹೇಗೆ ಸಿದ್ಧಿಸುವುದು. ನಾವು ಪ್ರಥಮದಲ್ಲಿ ಮಾಡ ಬೇಕಾದ ಪೂಜೆಯೇ ನಮ್ಮ ಸುತ್ತಲೂ ಇಗುವ ವಿರಾಟದ ಪೂಜೆ. ಪೂಜೆ ಮಾಡಿ (worship). ಇದೇ ಸರಿಯಾದ ಸಂಸ್ಕೃತ ಶಬ್ಧ. ಇಂಗ್ಲೀಷಿನಲ್ಲಿ ಮತ್ತಾವ ಪದವೂ ಇದನ್ನು ಹೋಲುವುದಿಲ್ಲ. ಮನುಷ್ಯ ಪ್ರಾಣಿ ಇವ ರೆಲ್ಲ ನಮ್ಮ ದೇವರು. ನಾವು ಮೊದಲು ಪೂಜಿಸಬೇಕಾದ ದೇವರೇ ನಮ್ಮ ದೇಶ ಬಾಂಧವರು. ಅವರೊಡನೆ ವ್ಯಾಜ್ಯವಾಡಿ ಅಸೂಯೆ ಪಡುವ ಬದಲು ಅವರನ್ನು ಪೂಜಿಸಬೇಕು. ಇದೊಂದು ದೊಡ್ಡ ಕರ್ಮ. ಅದ ಕ್ಕಾಗಿ ನಾವೆಲ್ಲ ಇಂದು ವ್ಯಥೆ ಪಡುತ್ತಿರುವೆವು. ಆದರೂ ಜಾಗ್ರತರಾಗಿಲ್ಲ.

ವಿಷಯ ವಿಸ್ತಾರವಾಗಿದೆ. ಅದನ್ನು ಎಲ್ಲಿ ನಿಲ್ಲಿಸಬೇಕೊ ಗೊತ್ತಿಲ್ಲ. ಮದ್ರಾಸಿನಲ್ಲಿ ನಾನು ಏನು ಮಾಡಬೇಕೆಂದಿರುವೆನು ಎಂಬುದನ್ನು ಸಂಕ್ಷೇಪ ವಾಗಿ ಹೇಳಿ ಭಾಷಣವನ್ನು ಮುಕ್ತಾಯ ಮಾಡುವೆನು. ಜನಾಂಗದ ಆಧ್ಯಾತ್ಮಿಕ ಮತ್ತು ಲೌಕಿಕ ಶಿಕ್ಷಣದ ಮೇಲೆ ನಮಗೆ ಒಂದು ಹತೋಟಿ ಇರಬೇಕು. ನಿಮಗೆ ಇದು ಗೊತ್ತಾಗುವುದೆ? ಇದನ್ನು ನೀವು ಕನಸು ಕಾಣಬೇಕು, ಮಾತನಾಡಬೇಕು, ಆಲೋಚಿಸಬೇಕು, ಅದನ್ನು ಅನು ಷ್ಠಾನಕ್ಕೆ ತರಬೇಕು. ಅಲ್ಲಿಯವರೆಗೂ ನಮ್ಮ ದೇಶಕ್ಕೆ ಬಿಡುಗಡೆ ಇಲ್ಲ. ನಿಮಗೆ ಈಗ ದೊರೆಯುತ್ತಿರುವ ವಿದ್ಯಾಭ್ಯಾಸದಲ್ಲಿ ಕೆಲವು ಒಳ್ಳೆಯ ವಿಷಯಗಳಿವೆ. ಆದರೆ ಅದರಲ್ಲಿ ಒಂದು ಮಹಾಲೋಪವಿದೆ. ಇದರಿಂದ ಒಳ್ಳೆಯ ಗುಣಗಳಾವುವೂ ಕೆಲಸಕ್ಕೆ ಬರುವುದಿಲ್ಲ. ಇದು ಪುರುಷ ಸಿಂಹ ರನ್ನು ಮಾಡುವ ವಿದ್ಯಾಭ್ಯಾಸವಲ್ಲ. ಇದು ಕೇವಲ ನಿಶೇಧಮಯವಾದ ವಿದ್ಯಾಭ್ಯಾಸ. ನಿಶೇಧಮಯವಾದ ವಿದ್ಯಾಭ್ಯಾಸ ಅಥವಾ ನಿಶೇಧ ಭಾವ ನೆಯ ಮೇಲೆ ನಿಂತ ಯಾವ ತರಬೇತಾಗಲೀ, ಮೃತ್ಯುಗಿಂತ ಹಾನಿಕರ.

ಮಗುವನ್ನು ಶಾಲೆಗೆ ಕಳುಹಿಸುವರು. ಮೊದಲು ಅದು ಕಲಿಯುವುದೇ ತಂದೆ ಮೂರ್ಖ, ಎರಡನೆಯದು ಅವರ ತಾತ ಹುಚ್ಚನೆನ್ನುವುದು. ಮೂರನೆಯದೇ ಗುರುಗಳೆಲ್ಲ ಆಷಾಡಭೂತಿಗಳು, ನಾಲ್ಕನೆಯದೇ ಪವಿತ್ರ ಶಾಸ್ತ್ರಗಳೆಲ್ಲ ಸುಳ್ಳಿನ ಕಂತೆ ಎನ್ನುವುದು. ಅವನಿಗೆ ಹದಿನಾರು ವರುಷ ತುಂಬುವ ಸಮಯಕ್ಕೆ ಅವನೊಂದು ನಿಶೇಧಮಯದ ಕಂತೆ. ನಿರ್ಜೀವ ನಾಗಿ, ನಿತ್ರಾಣನಾಗಿರುವನು. ಇವರ ಪರಿಣಾಮವಾಗಿ ಐವತ್ತು ವರುಷ ಗಳ ಇಂತಹ ವಿದ್ಯಾಭ್ಯಾಸದಿಂದ ಮೂರು ಪ್ರಾಂತಗಳಲ್ಲಿ ಒಬ್ಬ ಸ್ವತಂತ್ರ್ಯ ವಾಗಿ ವಿಚಾರಮಾಡುವ ವ್ಯಕ್ತಿ ಇದರ ಮೂಲಕ ಬಂದಿಲ್ಲ. ಇರುವ ಸ್ವತಂತ್ರ ಆಲೋಚನೆ ಮಾಡುವ ವ್ಯಕ್ತಿಗಳೆಲ್ಲ ವಿದ್ಯಾಭ್ಯಾಸವನ್ನು ಇಲ್ಲಿ ಕಲಿಯಲಿಲ್ಲ. ಹೊರಗೆ ಕಲಿತರು ಅಥವಾ ಪುನಃ ಹಿಂದಿನ ಕಾಲದ ವಿದ್ಯಾ ಕೇಂದ್ರಗಳಿಗೆ ತಮ್ಮ ಮೂಢ ನಂಬಿಕೆಯಿಂದ ಪಾರಾಗಲು ಹೋದರು. ವಿದ್ಯಾಭ್ಯಾಸವೆಂದರೆ ನಿಮ್ಮ ತಲೆಗೆ ತುಂಬಿದ ವಿಷಯಗಳ ಮೊತ್ತವಲ್ಲ. ಅದು ಅಲ್ಲಿ ಜೀರ್ಣವಾಗದೆ ಚಲ್ಲಾಪಿಲ್ಲಿಯಾಗಿ ಬಿದ್ದಿರುವುದು. ಜೀವನ ನಿರ್ಮಾಣ ಮಾಡುವಂತಹ, ಪುರುಷ ಸಿಂಹರನ್ನು ಮಾಡುವಂತಹ, ಶೀಲ ಸಂಪತ್ತಿಗೆ ಸಹಾಯ ಮಾಡುವಂತಹ, ವಿಚಾರ ಗ್ರಹಿಸುವಂತಹ, ವಿದ್ಯಾ ಭ್ಯಾಸ ನಮಗೆ ಬೇಕು. ನೀನು ಐದು ವಿಷಯಗಳನ್ನು ತಿಳಿದು ಅದನ್ನು ನಿನ್ನ ಜೀವನದಲ್ಲಿ, ಶೀಲದಲ್ಲಿ ಅನುಷ್ಠಾನಕ್ಕೆ ತಂದಿದ್ದಾದರೆ ಇಡೀ ಪುಸ್ತಕ ಭಂಡಾರವನ್ನೇ ಕಂಠಪಾಠ ಮಾಡಿದವನಿಗಿಂತ ಹೆಚ್ಚು ವಿದ್ಯೆ ನಿನಗೆ ಇದೆ.

"ಯಥಾಶ್ಚಂದನ ಭಾರವಾಹೀ ಭಾರಸ್ಯ ವೇತ್ತಾ ನ ತು ಚಂದನಸ್ಯ" ಗಂಧದ ಮರವನ್ನು ಹೊರುವ ಕತ್ತೆಗೆ ಅದರ ಭಾರ ಮಾತ್ರ ಗೊತ್ತು ಅದರ ಗುಣ ಗೊತ್ತಿಲ್ಲ. ವಿದ್ಯಾಭ್ಯಾಸ ಕೇವಲ ವಿಷಯ ಸಂಗ್ರಹವಾದರೆ ಪುಸ್ತ ಕಾಲಯಗಳೇ ದೊಡ್ಡ ಮುನಿಗಳು, ವಿಶ್ವಕೋಶಗಳೇ ದೊಡ್ಡ ಋಷಿಗಳಾಗು ತ್ತಿದ್ದುವು. ನಮ್ಮ ಆದರ್ಶವೇನೆಂದರೆ ಪಾರಮಾರ್ಥಿಕ ಮತ್ತು ಲೌಕಿಕ ವಿದ್ಯೆಗಳೆರಡೂ ನಮ್ಮ ಆಧೀನದಲ್ಲಿರಬೇಕು, ಸಾಧ್ಯವಾದಮಟ್ಟಿಗೆ ಅವು ನಮ್ಮ ಜನಾಂಗದ ರೀತಿಯಲ್ಲಿರಬೇಕು. ಜನಾಂಗದ ಮಾರ್ಗದಲ್ಲಿರ ಬೇಕು. ಇದೊಂದು ವಿರಾಟ್ ಯೋಚನೆಯೇನೋ ಸರಿ. ಅದು ಎಂದಿ ಗಾದರೂ ಸಾದ್ಯವಾಗುವುದೇನೋ ನನಗೆ ಗೊತ್ತಿಲ್ಲ. ಆದರೆ ನಾವು ಕೆಲಸ ವನ್ನು ಪ್ರಾರಂಭಿಸಬೇಕು. ಅದನ್ನು ಪ್ರಾರಂಭಿಸುವುದು ಹೇಗೆ? ಉದಾ ಹರಣೆಗೆ ಮದ್ರಾಸನ್ನೇ ತೆಗೆದುಕೊಳ್ಳಿ. ನಮಗೆ ಧರ್ಮವೇ ಪ್ರಾಧಾನ್ಯ

ವಾಗಿರುವುದರಿಂದ ಒಂದು ದೇವಸ್ಥಾನವಿರಬೇಕು. ಆಗ ಉಳಿದ ಪಂಗಡ ಗಳೆಲ್ಲ ಕಾದಾಡುವುವು ಎಂದು ಹೇಳಬಹುದು. ಇದನ್ನೇ ಯಾವ ಪಂಗ ಡಕ್ಕೂ ಸೇರದ ಗುಡಿಯನ್ನು ಮಾಡುತ್ತೇವೆ. ಅಲ್ಲಿ ಎಲ್ಲಾ ಪಂಗಡದ "ಓಂ" ಎಂಬುದೇ ಮುಖ್ಯ ಚಿಹ್ನೆ ಇರುವುದು. ಯಾವುದಾದರೂ ಪಂಗಡ "ಓಂ" ಎನ್ನುವುದು ಚಿಹ್ನೆಯಾಗುವುದಿಲ್ಲ ಎಂದು ಭಾವಿಸಿದರೆ ತಾವು ಹಿಂದೂಗಳೆಂದು ಅವರು ಹೇಳಿಕೊಳ್ಳುವುದಕ್ಕೆ ಅಧಿಕಾರವಿಲ್ಲ. ಪ್ರತಿಯೊಂದು ಪಂಗಡದವರೂ ತಮ್ಮ ತಮ್ಮ ಸಂಪ್ರದಾಯಕ್ಕೆ ತಕ್ಕಂತೆ ಹಿಂದೂ ಧರ್ಮ ವನ್ನು ವಿವರಿಸಬಹುದು. ಆದರೆ ನಮಗೆಲ್ಲ ಒಂದು ಸಾಮಾನ್ಯ ದೇವ ಸ್ಥಾನವಿರಬೇಕು. ಬೇರೆ ಕಡೆ ಬೇರೆ ವಿಗ್ರಹ, ಚಿಹ್ನೆಗಳನ್ನು ನೀವು ಇಟ್ಟು ಕೊಂಡಿರಬಹುದು. ಆದರೆ ಇಲ್ಲಿ ಯಾರು ನಿಮ್ಮೊಂದಿಗೆ ಒಪ್ಪಿಕೊಳ್ಳುವು ದಿಲ್ಲವೋ ಅವರೊಡನೆ ವ್ಯಾಜ್ಯಮಾಡಬೇಡಿ. ಇಲ್ಲಿ ಬೇರೆ ಬೇರೆ ಪಂಗಡಕ್ಕೆ ಸೇರಿದ ಸಾಮಾನ್ಯ ಸಿದ್ಧಾಂತವನ್ನು ಬೋಧಿಸಬೇಕು. ಮತ್ತು ವಿಭಿನ್ನ ಪಂಗಡಗಳು ತಮ್ಮ ತಮ್ಮ ಸಿದ್ಧಾಂತವನ್ನು ಇಲ್ಲಿ ಪ್ರಚಾರಮಾಡುವುದಕ್ಕೆ ಮಾತ್ರ ಅವಕಾಶವಿಲ್ಲ. ನಿಮಗೆ ಏನು ತೋರುವುದೋ ಅದನ್ನು ಹೇಳಿ. ಅದು ಪ್ರಪಂಚಕ್ಕೆ ಬೇಕಾಗಿದೆ. ನೀವು ಇತರರನ್ನು ಹೇಗೆ ನೋಡುವಿರಿ ಎಂಬು ದನ್ನು ಕೇಳುವುದಕ್ಕೆ ಪ್ರಪಂಚಕ್ಕೆ ಸಮಯವಿಲ್ಲ. ಅದನ್ನು ನಿಮ್ಮೊಳಗೇ ಇಟ್ಟುಕೊಳ್ಳಿ.

ಎರಡನೆಯದಾಗಿ ಈ ದೇವಸ್ಥಾನದ ಅಂಗವಾಗಿ ಪ್ರಚಾರಕರನ್ನು ತರಬೇತು ಮಾಡಬೇಕು. ಅವರು ಲೌಕಿಕ ಮತ್ತು ಪಾರಮಾರ್ಥಿಕ ವಿಷಯಗಳನ್ನು ಪ್ರಚಾರಮಾಡಲು ಹೋಗಬೇಕು. ನಾವು ಆಗಲೇ ಧರ್ಮವನ್ನು ಮನೆಯಿಂದ ಮನೆಗೆ ಕೊಡುತ್ತಿರುವೆವು. ಜೊತೆಗೆ ಲೌಕಿಕ ಜ್ಞಾನವನ್ನು ಕೊಡೋಣ. ಅದನ್ನು ಸುಲಭವಾಗಿ ಮಾಡಬಹುದು. ಕ್ರಮೇಣ ಬೋಧಕರು, ಪ್ರಚಾರಕರ ಮೂಲಕ ಕೆಲಸ ಹರಡುವುದು. ಕ್ರಮೇಣ ಇಂಡಿಯಾ ದೇಶದಲ್ಲೆಲ್ಲ ಇತರ ಕಡೆಯೂ ಇಂತಹ ದೇವಸ್ಥಾನ ವನ್ನು ಸ್ಥಾಪಿಸೋಣ. ಇದು ನನ್ನ ಯೋಜನೆ. ಇದು ಅದ್ಭುತವಾಗಿ ಕಾಣಬಹುದು. ಆದರೆ ಇದು ಬಹಳ ಆವಶ್ಯಕ. ಹಣವೆಲ್ಲಿ ಎಂದು ನೀವು ಕೇಳಬಹುದು. ಹಣಬೇಕಾಗಿಲ್ಲ ಹಣವಲ್ಲ ಮುಖ್ಯ. ಕಳೆದ ಹನ್ನೆರಡು ವರುಷಗಳಿಂದ ನನಗೆ ಮುಂದಿನ ಊಟ ಎಲ್ಲಿ ದೊರಕುವುದು ಎಂಬುದು ಗೊತ್ತಿರಲಿಲ್ಲ. ನನಗೆ ಬೇಕಾದ ದ್ರವ್ಯ ಮತ್ತೆಲ್ಲವೂ ಸಿಕ್ಕಬೇಕು.

ಅವು ನನ್ನ ಅಧೀನ. ನಾನು ಅದರ ಅಧೀನನಲ್ಲ. ಬರಲೇಬೇಕು. ಆದರೆ ಮನುಷ್ಯರೆಲ್ಲಿ? ಅದೇ ಪ್ರಶ್ನೆ. ಮದ್ರಾಸಿನ ಯುವಕರೇ, ನನ್ನ ಭರವಸೆಯೆಲ್ಲಾ ನಿಮ್ಮ ಮೇಲಿರುವುದು. ನಿಮ್ಮ ದೇಶದ ಕರೆಗೆ ಕಿವಿಗೊಡುವಿರೇನು? ನೀವು ನನ್ನ ಮಾತಿನಲ್ಲಿ ನಂಬಿದರೆ ನಿಮ್ಮಲ್ಲಿ ಪ್ರತಿಯೊಬ್ಬರಿಗೂ ಮಹಿಮಾ ಮಯವಾದ ಭವಿಷ್ಯ ಕಾದಿದೆ. ಅದ್ಭುತ ಶ್ರದ್ಧೆ ನಿಮ್ಮಲ್ಲಿರಲಿ, ಮಗುವಾಗಿದ್ದಾಗ ನನ್ನಲ್ಲಿ ಆ ಶ್ರದ್ಧೆ ಇತ್ತು. ಅದನ್ನೇ ನಾನು ಈಗ ಅನುಸರಿಸುವೆನು. ಅನಂತ ಶಕ್ತಿ ಪ್ರತಿ ಜೀವಿಯ ಅಂತರಾಳದಲ್ಲಿಯೂ ಇರುವುದು ಎಂಬ ಆತ್ಮಶ್ರದ್ಧೆ ನಿಮ್ಮಲ್ಲಿರಲಿ. ನೀವು ಇಡೀ ಭರತಖಂಡವನ್ನು ಜಾಗ್ರತಗೊಳಿಸುವಿರಿ. ಆಗ ನಾವು ಪ್ರಪಂಚದ ದೇಶಗಳಿಗೆಲ್ಲ ಹೋಗುವೆವು. ಪ್ರಪಂಚದಲ್ಲಿ ರಾಷ್ಟ್ರಗಳನ್ನು ನಿರ್ಮಾಣ ಮಾಡುತ್ತಿರುವ ಶಕ್ತಿಯೊಂದಿಗೆ ನಮ್ಮ ಭಾವನೆಯೂ ಮಿಲಿನವಾಗುವುದು. ಭರತ ಖಂಡದಲ್ಲಿ ಮತ್ತು ಪ್ರಪಂಚದ ಎಲ್ಲಾ ಜನಾಂಗದ ಜೀವನದ ಅಂತರಾಳಕ್ಕೆ ನಾವು ಹೋಗಬೇಕು. ಇದನ್ನು ಸಾಧಿಸುವುದಕ್ಕೆ ಕೆಲಸ ಮಾಡಬೇಕು. ಆ ಕಾರ್ಯಕ್ಕೆ ನನಗೆ ಯುವಕರು ಬೇಕು. "ಆಶಿಷ್ಠ, ಬಲಿಷ್ಠ, ದೃಡಿಷ್ಠ ಮೇಧಾವಿಗಳಾಗದಂತಹ ಯುವಕರು ಮಾತ್ರ ಭಗವಂತನನ್ನು ಪಡೆಯಬಹುದು" ಎಂದು ವೇದ ಸಾರುವುದು. ತಾರುಣ್ಯದ ಶಕ್ತಿ ಇರುವಾಗ ನಿಮ್ಮ ಭವಿಷ್ಯವನ್ನು ನಿರ್ಧರಿಸಬೇಕಾಗಿದೆ. ಮುದುಕರಾಗಿ ಶಕ್ತಿ ಕುಗ್ಗಿದ ಮೇಲೆ ಅಲ್ಲ. ನವತಾರುಣ್ಯದ ಉತ್ಸಾಹದಲ್ಲಿ ಅದನ್ನು ನಿರ್ಧರಿಸಬೇಕಾಗಿದೆ. ಕೆಲಸ ಮಾಡಿ ಈಗ ತಾನೆ ವಿಕಸಿತವಾದ, ಯಾರೂ ಮುಟ್ಟದ ಮೂಸಿನೋಡದ, ಹೂವುಗಳನ್ನು ಭಗನಂತನ ಅಡಿಯಲ್ಲಿಡುವುದಕ್ಕೆ ಇದೇ ಸಮಯ. ದೇವರು ಇದನ್ನು ಮಾತ್ರ ಪರಿಗ್ರಹಿಸುವನು. ಬಾಳು ಕ್ಷಣಿಕ, ಜಾಗ್ರತರಾಗಿ, ವಕೀಲರಾಗುವುದಕ್ಕಿಂತ, ಜಗಳ ಕಾಯುವುದಕ್ಕಿಂತ ಮಹತ್ಕಾರ್ಯಗಳನ್ನು ಸಾಧಿಸಬೇಕಾಗಿದೆ. ನಿಮ್ಮ ಜನಾಂಗದ ಹಿತಕ್ಕೆ ಮಾನವ ಕೋಟಿಯ ಹಿತಕ್ಕೆ ತ್ಯಾಗಮಾಡುವುದು ಮಹಾಕಾರ್ಯ. ಈ ಪ್ರಪಂಚದಲ್ಲಿ ಏನಿದೆ? ನೀವು ಹಿಂದೂಗಳು ಜೀವನ ಅನಂತವೆಂಬ ಭಾವನೆ ಸ್ವಾಭಾವಿಕವಾಗಿರುವುದು. ಕೆಲವು ಯುವಕರು ನಾಸ್ತಿಕ ವಿಚಾರವನ್ನು ನನ್ನ ಹತ್ತಿರ ಮಾತನಾಡುವರು. ಹಿಂದೂ ನಾಸ್ತಿಕನಾಗಬಲ್ಲ ಎಂಬುದನ್ನು ನಾನು ನಂಬಲಾರೆ. ಐರೋಪ್ಯಗ್ರಂಥಗಳನ್ನು ಅವನು ಓದಿ ತಾನು ನಾಸ್ತಿಕ ಎಂದು ಕೆಲವು ಕಾಲ ಭ್ರಮಿಸಿರ

ಬಹುದು. ಆದರೆ ಇದು ಕೇವಲ ತಾತ್ಕಾಲಿಕ. ಇದು ನಿಮ್ಮ ರಕ್ತದಲ್ಲಿ ಇಲ್ಲ. ಯಾವುದು ನಿಮ್ಮ ಜಾಯಮಾನದಲ್ಲಿ ಇಲ್ಲವೋ ಅದನ್ನು ನೀವು ನಂಬಲಾರಿರಿ. ಅದು ಸಾಧ್ಯವಿಲ್ಲದ ಮಾತು. ಇಂತಹ ಅಸಾಧ್ಯವನ್ನು ಪ್ರಯತ್ನಿಸಬೇಡಿ. ನಾನು ಹುಡುಗನಾಗಿದ್ದಾಗ ಒಮ್ಮೆ ಪ್ರಯತ್ನ ಪಟ್ಟೆ, ಆದರೆ ಸಾಧ್ಯವಾಗಲಿಲ್ಲ. ಬಾಳು ಕ್ಷಣಿಕ. ಆತ್ಮ ಅಮರ ಅನಂತ. ಮೃತ್ಯು ಎನ್ನುವುದೊಂದು ಸತ್ಯವಾಗಿರುವಾಗ ಒಂದು ಮಹಾ ಆದರ್ಶ ವನ್ನು ಸ್ವೀಕರಿಸಿ ಅದಕ್ಕೆ ನಮ್ಮ ಇಡೀ ಬಾಳನ್ನು ಧಾರೆ ಎರೆಯುವ. ಇದು ನಮ್ಮ ಶಪಥವಾಗಲಿ. ತನ್ನ ಮಕ್ಕಳ ಮುಕ್ತಿಗೆ ಪುನಃ ಪುನಃ ಬರುತ್ತೇನೆ ಎಂದು ಸಾರಿದ ಶ್ರೀ ಕೃಷ್ಣ ಭಗವಾನ್ ನಮ್ಮನ್ನು ಆಶೀರ್ವದಿಸಿ ನಮ್ಮ ಉದ್ದೇಶ ಸಿದ್ಧಿಗೆ ಸಹಾಯ ಮಾಡಲಿ.



# ದಾನ

ಸ್ವಾಮಿ ವಿವೇಕಾನಂದರು ಮದ್ರಾಸಿನಲ್ಲಿದ್ದಾಗ ಚನ್ನಪುರಿ ಅನ್ನದಾನ ಸಮಾಜ ಎಂಬ ಧಾರ್ಮಿಕ ಸಂಸ್ಥೆಯ ಸಮ್ಮೇಳನದಲ್ಲಿ ಅಧ್ಯಕ್ಷರಾಗಿದ್ದರು. ಹಿಂದೆ ಮಾತನಾಡಿದವರೊಬ್ಬರು ಇತರರಿಗಿಂತ ಬ್ರಾಹ್ಮಣರು ಹೆಚ್ಚು ದಾನಕ್ಕೆ ಪಾತ್ರರು ಎಂಬ ಭಾವನೆಯನ್ನು ಟೀಕಿಸಿದರು. ಸ್ವಾಮಿಜಿ ಅವರು ಇದನ್ನು ಎರಡೂ ದೃಷ್ಟಿಯಿಂದಲೂ ನೋಡಬಹುದೆಂದು ಹೀಗೆ ಮಾತನಾಡಿದರು.

ದೇಶದ ಸಂಸ್ಕೃತಿಯೆಲ್ಲಾ ಅವರಲ್ಲಿತ್ತು. ದೊಡ್ಡದೊಡ್ಡ ತತ್ತ್ವಜ್ಞಾನಿಗಳು ಕೂಡ ಅವರಲ್ಲಿದ್ದರು. ಆಲೋಚನಾಪರರಾಗುವುದಕ್ಕೆ ಬೇಕಾದ ಜೀವನ ಸೌಲಭ್ಯಗಳನ್ನು ತೆಗೆದುಕೊಂಡುಬಿಟ್ಟರೆ ಇದರಿಂದ ದೇಶಕ್ಕೆ ನಷ್ಟ. ಭರತಖಂಡದಲ್ಲಿರುವ ವಿಮರ್ಶೆಮಾಡದೆ ಕೊಡುವ ದಾನ, ಪಾಶ್ಚಾತ್ಯ ದೇಶದಲ್ಲಿರುವ ಕಾನೂನು ರೀತಿಯ ಧರ್ಮವನ್ನು ಹೋಲಿಸಿ ನೋಡಿದರು. ಭರತಖಂಡದಲ್ಲಿ ಭಿಕ್ಷುಕ ಕೊಟ್ಟಷ್ಟರಲ್ಲಿ ಸಂತುಷ್ಟನಾಗಿ ನಿರಾತಂಕವಾಗಿ ಬಾಳುತ್ತಿದ್ದ. ಪಾಶ್ಚಾತ್ಯ ದೇಶದ ಭಿಕಾರಿ ಬಡವರಿಗಾಗಿ ಏರ್ಪಡಿಸಿರುವ ವಸತಿಗೃಹಕ್ಕೆ ಹೋಗಲು ಇಚ್ಛಿಸುತ್ತಿರಲಿಲ್ಲ. ಅವನಿಗೆ ಊಟಕ್ಕಿಂತ ಹೆಚ್ಚು ಸ್ವಾತಂತ್ರ್ಯ ಬೇಕಾಗಿತ್ತು. ಅವನು ಸಮಾಜ ಕಂಟಕನಾದ. ದರೋಡೆಕಾರನಾದನು. ಇದರಿಂದ ಪೋಲೀಸು, ನ್ಯಾಯಾಧಿಪತಿ, ಜೈಲು ಇವುಗಳೆಲ್ಲಾ ಅವಶ್ಯಕವಾಯಿತು. ನಾಗರಿಕತೆ ಎಂಬ ಜಾಡ್ಯವಿರುವತನಕ ದಾರಿದ್ರ್ಯವಿದ್ದೇ ತೀರಬೇಕು. ಅದಕ್ಕೇ ಪರಿಹಾರೋಪಾಯ ಆವಶ್ಯಕ. ಇಂಡಿಯಾದೇಶದಲ್ಲಿರುವ ಅವಿಮರ್ಶಾತ್ಮಕ ದಾನ ಅಥವಾ ಪಾಶ್ಚಾತ್ಯ ದೇಶದಲ್ಲಿರುವ ಕಾನೂನು ರೀತಿಯ ದಾನ ಎರಡರಲ್ಲಿ ಒಂದನ್ನು ಆರಿಸಿಕೊಳ್ಳಬೇಕಾಗಿದೆ. ಇಂಡಿಯಾ ದೇಶದಲ್ಲಿ ಭಿಕ್ಷಾವೃತ್ತಿಯ ಮೇಲೆ ಜೀವಿಸುವ ಸನ್ಯಾಸಿ ಅವನು ನಿಜವಾಗಿ ಸನ್ಯಾಸಿ ಅಲ್ಲದೆ ಇದ್ದರೂ ಭಿಕ್ಷಾವೃತ್ತಿಗಾಗಿ ಆದರೂ ಸ್ವಲ್ಪ ಶಾಸ್ತ್ರ ಕಲಿತುಕೊಳ್ಳಬೇಕಾಗಿತ್ತು. ಪಾಶ್ಚಾತ್ಯರ ವಿಮರ್ಶೆಮಾಡಿಕೊಡುವ ದಾನಕ್ಕೆ ದೀನಪರಿಹಾರ ಕಾನೂನು ಮುಂತಾದ ಹೆಚ್ಚು ದುಡ್ಡು ಖರ್ಚಾಗುವ ಸಂಸ್ಥೆಗಳು ಬೇಕು. ಕೊನೆಗೆ ಅದು ಭಿಕ್ಷುಕರನ್ನು ದರೋಡೆಕಾರರನ್ನಾಗಿ ಮಾಡಿತು.

---

# ಕಲ್ಕತ್ತಾ ಅಭಿನಂದನೆಗೆ ಉತ್ತರ

ಒಬ್ಬನು ತನ್ನ ವ್ಯಕ್ತಿತ್ವವನ್ನು ಸರ್ವವ್ಯಾಪಿ ಭಗವಂತನಲ್ಲಿ ತಲ್ಲೀನಗೊಳಿಸಲು ಪ್ರಪಂಚವನ್ನು ತ್ಯಜಿಸುವನು. ತನ್ನ ದೇಹ ಮತ್ತು ಹಿಂದಿನ ಜೀವನಕ್ಕೆ ಸಂಬಂಧಪಟ್ಟಿದನ್ನೆಲ್ಲಾ ಮರೆಯಲೆತ್ನಿಸುವನು. ತಾನು ಮನುಷ್ಯನೆಂಬುದನ್ನು ಕೂಡ ಮರೆಯಲು ಕಷ್ಟಪಟ್ಟು ಸಾಧನೆ ಮಾಡುವನು. ಆದರೆ ಅವನ ಹೃದಯಾಂತರಾಳದಲ್ಲಿ ಒಂದು ಮೃದು ಅಸ್ಫುಟ ಧ್ವನಿ, ಒಂದು ಸ್ವರ, ಒಂದು ಮೆಲುನುಡಿ, ಪೌರಾತ್ಯವೊ ಪಾಶ್ಚಾತ್ಯವೊ "ಜನನಿ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸಿ" ಎಂದು ಕೇಳಿ ಬರುತ್ತಿರುವುದು. ಈ ಚಕ್ರಾಧಿಪತ್ಯದ ರಾಜಧಾನಿಯ ಪುರಜನರೆ, ನಿಮ್ಮೆದುರಿಗೆ ನಾನು ಸನ್ಯಾಸಿಯಂತೆ ನಿಂತಿಲ್ಲ, ಪ್ರಚಾರಕನಂತೆ ನಿಂತಿಲ್ಲ, ಹಿಂದೆ ನಿಮ್ಮೊಂದಿಗೆ ಮಾತನಾಡುತ್ತಿದ್ದ ಕಲ್ಕತ್ತಾ ನಗರದ ಹುಡುಗನಂತೆ ಬಂದಿರುವೆನು. ನನ್ನ ಸಹೋದರರೇ, ಈ ನಗರದ ದಾರಿಯ ಧೂಳಿನಲ್ಲಿ ಕುಳಿತು ಶಿಶುಸಹಜ ಸ್ವಾತಂತ್ರ್ಯದಿಂದ ನನ್ನ ಮನಸ್ಸಿನ ಭಾವವನ್ನು ನಿಮ್ಮೆದುರಿಗೆ ವ್ಯಕ್ತಪಡಿಸುವೆನು. ನೀವು ನನ್ನನ್ನು ಸಹೋದರ ಎಂಬ ಅಪೂರ್ವ ಪದದಿಂದ ಸಂಬೋಧಿಸಿರುವಿರಿ. ಅದಕ್ಕೆ ನನ್ನ ಹೃತ್ಪೂರ್ವಕ ವಂದನೆಗಳು. ಹೌದು ನಾನು ನಿಮ್ಮ ಸಹೋದರ, ನೀವು ನನ್ನ ಸಹೋದರರು. ನಾನು ಭರತಖಂಡಕ್ಕೆ ಬರುವುದಕ್ಕೆ ಮುಂಚೆ ಒಬ್ಬ ಆಂಗ್ಲ ಸ್ನೇಹಿತ "ಸ್ವಾಮಿಜಿ, ನಾಲ್ಕು ವರ್ಷ ವಿಲಾಸ ಲೀಲಾಭೂಮಿ ಗೌರವಶೀಲ ಮಹಾಶಕ್ತಿಮಾನ್ ಪಾಶ್ಚಾತ್ಯದಲ್ಲಿ ಸಂಚಾರಮಾಡಿದ ಮೇಲೆ ನಿಮ್ಮ ಮಾತೃಭೂಮಿಯನ್ನು ಹೇಗೆ ನೋಡುತ್ತೀರಿ?" ಎಂದರು. ಅವಕ್ಕೆ ನಾನು "ಇಲ್ಲಿಗೆ ಬರುವುದಕ್ಕೆ ಮುಂಚೆ ಭರತಖಂಡವನ್ನು ಪ್ರೀತಿಸುತ್ತಿದ್ದೆ. ಈಗ ಭರತಭೂಮಿಯ ಧೂಳು ಕೂಡ ಪವಿತ್ರವಾಗಿದೆ, ಬೀಸುವಗಾಳಿ ಪವಿತ್ರವಾಗಿದೆ, ಪುಣ್ಯಭೂಮಿ ತೀರ್ಥಕ್ಷೇತ್ರವಾಗಿದೆ" ಎಂದೆನು.

ಹೇ, ಕಲ್ಕತ್ತ ಪುರನಿವಾಸಿಗಳೇ, ನನ್ನ ಸಹೋದರರೇ, ನೀವು ನನಗೆ ತೋರಿದ ಪ್ರೀತಿಗೆ ನಿಮಗೆ ಕೃತಜ್ಞತೆಯನ್ನು ಅರ್ಪಿಸಲು ಅಸಮರ್ಥ. ನಾನು ನಿಮಗೆ ಕೃತಜ್ಞತೆಯನ್ನು ಅರ್ಪಿಸಲೂ ಬಾರದು. ನೀವು ನನಗೆ ಸಹೋದರರು, ನೀವು ಕೇವಲ ಸಹೋದರನ ಕರ್ತವ್ಯವನ್ನು, ಹಿಂದೂ ಸಹೋದರನ ಕರ್ತವ್ಯವನ್ನು ಮಾತ್ರ ಮಾಡಿರುವಿರಿ. ಇಂತಹ ಕೌಟುಂಬಿಕ

ವಾತ್ಸಲ್ಯ ಸಂಬಂಧ, ಇಷ್ಟು ಪ್ರೀತಿ ನಮ್ಮ ಮಾತೃಭೂಮಿಯ ಹೊರಗೆ ಮತ್ತೆಲ್ಲಿಯೂ ಇಲ್ಲ. ಚಿಕಾಗೊ ವಿಶ್ವಧರ್ಮ ಸಮ್ಮೇಳನ ನಿಸ್ಸಂಶಯವಾಗಿ ಒಂದು ವಿರಾಟ್ ಅಧಿವೇಶನವೇ ಸರಿ. ಭಾರತ ವರ್ಷದ ಎಲ್ಲಾ ನಗರ ಗಳಿಂದಲೂ ಇದನ್ನು ಸಂಘಟಿಸಿದವರಿಗೆ ಧನ್ಯವಾದವನ್ನು ಅರ್ಪಿಸಿರುವರು. ಅವರು ನಮಗೆ ತೋರಿದ ಪ್ರೀತಿಗೆ ಧನ್ಯವಾದಕ್ಕೆ ಅರ್ಹರು. ವಿಶ್ವಧರ್ಮ ಸಮ್ಮೇಳನ ಏತಕ್ಕೆ ಆಯಿತು ಎಂಬುದನ್ನು ನಿಮಗೆ ತಿಳಿಸಲು ಅನುಮತಿ ಕೊಡಿ. ಅವರಿಗೆ ಒಂದು ಕುದುರೆ ಬೇಕಾಗಿತ್ತು. ಅದರ ಮೇಲೆ ಸವಾರಿ ಮಾಡಬೇಕೆಂದು ಇಚ್ಛಿಸಿದರು. ಈಸಾಯಿಧರ್ಮದ ಪ್ರತಿಷ್ಠೆಗೆ ಇದನ್ನು ಉಪಯೋಗಿಸಬೇಕೆಂದು ಕೆಲವರು ಯೋಚಿಸಿದ್ದರು. ವಿಧಾತ ಅದನ್ನು ಬೇರೆ ವಿಧವಾಗಿ ಇಚ್ಛಿಸಿದ. ಬೇರೆ ವಿಧಿಯೇ ಇರಲಿಲ್ಲ. ಅಲ್ಲಿ ಹಲವರು ನಮಗೆ ಪ್ರೀತಿ ತೋರಿದರು. ನಾವು ಅವರಿಗೆ ಸಾಕಾದಷ್ಟು ಧನ್ಯವಾದ ವನ್ನು ಅರ್ಪಿಸಿರುವೆವು.

ನಾನು ಅಮೆರಿಕಾ ದೇಶಕ್ಕೆ ಹೋದದ್ದು ವಿಶ್ವಧರ್ಮ ಸಮ್ಮೇಳನಕ್ಕೆ ಅಲ್ಲ. ಆ ಸಭೆ ಗೌಣ. ಅದು ಕೇವಲ ನಿಮಿತ್ತ ; ಒಂದು ಅವಕಾಶ ಕಲ್ಪಿ ಸಿತು. ಅದಕ್ಕೆ ನಾವು ಆ ಧರ್ಮಸಮ್ಮೇಳನದ ಸದಸ್ಯರಿಗೆ ಋಣಿಗಳು. ಆದರೆ ನಿಜವಾಗಿ ನಮ್ಮ ಕೃತಜ್ಞತೆ ಸಲ್ಲಬೇಕಾಗಿರುವುದು ಅಮೆರಿಕಾ ಜನ ರಿಗೆ, ಅಮೆರಿಕಾ ಜನಾಂಗಕ್ಕೆ. ಉಳಿದ ಎಲ್ಲಾ ಜನಾಂಗಗಳಿಗಿಂತಲೂ ಅಧಿಕಾಂಶದಲ್ಲಿ ಸಹೋದರ ಭಾವನೆ ಅಲ್ಲಿ ಬೆಳೆದಿದೆ. ಅಮೆರಿಕಾ ಜನಾಂಗ ದವರು ವಿಶ್ವಾಸಪರರು, ಅತಿಥಿ ಸತ್ಕಾರಪರರು. ರೈಲಿನಲ್ಲಿ ಪಯಣಮಾಡು ವಾಗ ಅಮೆರಿಕಾದವನು ನಿಮ್ಮನ್ನು ಐದು ನಿಮಿಷ ನೋಡುವನು. ನೀವಾಗಲೇ ಅವನ ಸ್ನೇಹಿತರಾಗುವಿರಿ. ಮರುಕ್ಷಣವೇ ಅವನು ನಿಮ್ಮನ್ನು ಅವನ ಮನೆಗೆ ಊಟಕ್ಕೆ ಕರೆಯುವನು. ತನ್ನ ಇಡೀ ಜೀವನದ ರಹಸ್ಯ ವನ್ನು ನಿಮ್ಮೆದುರಿಗೆ ಇಡುವನು. ಇದು ಅಮೇರಿಕಾ ದೇಶೀಯರ ಲಕ್ಷಣ. ನಾವು ಇದನ್ನು ಹೆಚ್ಚು ಮೆಚ್ಚುತ್ತೇವೆ. ಅವರು ನನಗೆ ತೋರಿರುವ ಪ್ರೀತಿ ಯನ್ನು ನಿಮಗೆ ಬಣ್ಣಿಸಲಾರೆ. ಅವರು ನನ್ನನ್ನು ಅಪೂರ್ವ ದಯೆಯಿಂದ ನೋಡಿರುವರು. ಅದನ್ನು ವರ್ಣಿಸಲು ಹಲವು ವರ್ಷಗಳು ಹಿಡಿಯುವುದು. ಅಟ್ಲಾಂಟಿಕ್ ಸಾಗರದ ಆಚೆೀಕಡೆ ಇರುವ ಮತ್ತೊಂದು ದೇಶಕ್ಕೆ ನಮ್ಮ ಕೃತಜ್ಞತೆಯನ್ನು ಅರ್ಪಿಸುತ್ತೇನೆ. ಇಂಗ್ಲೆಂಡ್ ದೇಶಕ್ಕೆ ಕಾಲಿಡುವಾಗ ನನ್ನಷ್ಟು ಆ ಜನಾಂಗವನ್ನು ದ್ವೇಷಿಸುತ್ತಿದ್ದವರು ಮತ್ತೊಬ್ಬರಿಲ್ಲ.

ಇಂದಿನ ವೇದಿಕೆಯಮೇಲೆ ಇದನ್ನು ಸಮರ್ಥಿಸುವ ಆಂಗ್ಲ ಸ್ನೇಹಿತರು ಇರುವರು. ಆದರೆ ಹೆಚ್ಚು ಅವರೊಂದಿಗೆ ವಾಸಮಾಡಿದ ಮೇಲೆ, ಆಂಗ್ಲ ಜನಾಂಗ ಜೀವನದ ಯಂತ್ರ ಹೇಗೆ ಕೆಲಸಮಾಡುತ್ತಿದೆ ಎಂಬುದನ್ನು ನೋಡಿದ ಮೇಲೆ, ಅವರೊಂದಿಗೆ ನಿಕಟವಾಗಿ ಬೆರೆತ ಮೇಲೆ, ಅವರ ಜನಾಂಗ ಜೀವಾಳವನ್ನು ಅರಿತಮೇಲೆ ಅಷ್ಟೂ ಹೆಚ್ಚು ಪ್ರೀತಿಸತೊಡಗಿದೆನು. ನನ್ನ ಸಹೋದರರೆ ಈ ಸಭೆಯಲ್ಲಿರುವ ಯಾರೂ ಆಂಗ್ಲೇಯರನ್ನು ನನ್ನಷ್ಟು ಪ್ರೀತಿಸಲಾರಿರಿ. ನೀವು ಅಲ್ಲಿ ಏನು ಆಗುತ್ತಿದೆ ಎಂಬುದನ್ನು ನೋಡಬೇಕು, ಅವರೊಡನೆ ಬೆರೆಯಬೇಕು. ನಮ್ಮ ದೇಶದ ವೇದಾಂತ ತತ್ತ್ವ ನಮ್ಮ ದುಃಖ ದುರ್ಗತಿಗೆಲ್ಲಾ ಅಜ್ಞಾನ ಮೂಲವೆಂದು ಸಾರುವುದು. ಆಂಗ್ಲೇಯರಿಗೂ ನಮಗೂ ಇರುವ ಭಿನ್ನತೆಗೆ ಕಾರಣ ಅಜ್ಞಾನ. ನಾವು ಅವರನ್ನು ತಿಳಿದುಕೊಂಡಿಲ್ಲ, ಅವರು ನಮ್ಮನ್ನು ತಿಳಿದುಕೊಂಡಿಲ್ಲ.

ಪಾಶ್ಚಾತ್ಯನಿಗೆ, ಆಧ್ಯಾತ್ಮ ಮತ್ತು ನೀತಿ ಕೂಡ ಪ್ರಾಪಂಚಿಕ ಉನ್ನತಿಯ ಮೇಲೆ ನಿಂತಿದೆ. ಇದೊಂದು ವಿಷಾದ. ಆಂಗ್ಲೇಯ ಅಥವಾ ಪಾಶ್ಚಾತ್ಯನಾವನಾದರೊಬ್ಬ ಭರತಖಂಡಕ್ಕೆ ಬಂದು ಬಡತನ ಕಷ್ಟವನ್ನು ನೋಡಿದಾಗ ಇಲ್ಲಿ ಧರ್ಮವಿರಲಾರದು, ನೀತಿಯಿರಲಾರದು ಎಂಬ ನಿರ್ಣಯಕ್ಕೆ ಬರುವನು. ಅವನ ಅನುಭವ ಮಾತ್ರ ಸತ್ಯ. ಯೂರೋಪಿನಲ್ಲಿ ಶೈತ್ಯ ಪ್ರಧಾನ ವಾತಾವರಣ ಮತ್ತು ಇತರ ಸನ್ನಿವೇಶಗಳ ಪರಿಣಾಮವಾಗಿ, ದಾರಿದ್ರ್ಯ ಮತ್ತು ಪಾಪ ಒಟ್ಟಿಗೆ ಹೋಗುವುವು. ಆದರೆ ಭರತಖಂಡದಲ್ಲಿ ಹಾಗಲ್ಲ. ಅದಕ್ಕೆ ವಿರೋಧವಾಗಿ ನನ್ನ ಅನುಭವದಲ್ಲಿ ಮನುಷ್ಯ ಬಡವನಾಗಿದ್ದಷ್ಟೂ ಹೆಚ್ಚು ಪರಿಶುದ್ಧನಾಗಿರುವನು. ಇದನ್ನು ತಿಳಿದುಕೊಳ್ಳಬೇಕಾದರೆ ಕಾಲಾವಕಾಶಬೇಕು. ಜನಾಂಗದ ಜೀವನದ ರಹಸ್ಯವನ್ನು ತಿಳಿದುಕೊಳ್ಳಲು ಎಷ್ಟು ಜನ ವಿದೇಶೀಯರು ನಿಲ್ಲುವರು? ಜನಾಂಗವನ್ನು ಕೂಲಂಕಷವಾಗಿ ತಿಳಿದುಕೊಳ್ಳುವಷ್ಟು ತಾಳ್ಮೆ ಎಲ್ಲೋ ಕೆಲವರಲ್ಲಿದೆ. ಈ ದೇಶದಲ್ಲಿ ಮಾತ್ರ ಬಡತನ ತಪ್ಪಲ್ಲ, ಪಾಪವಲ್ಲ; ಈ ದೇಶದಲ್ಲಿ ಮಾತ್ರ ಬಡತನ ನಿರ್ದೋಷ ಮಾತ್ರವಲ್ಲ, ಆತನ ಉಡಿಗೆ ಶ್ರೇಷ್ಠತಮ ವ್ಯಕ್ತಿಯ ಉಡಿಗೆ. ಇದರಂತೆಯೇ ಪಾಶ್ಚಾತ್ಯ ಸಂಸ್ಥೆಗಳನ್ನು ಕೂಲಂಕಷವಾಗಿ ತಿಳಿದುಕೊಳ್ಳಬೇಕು. ಹುಚ್ಚರಂತೆ ಅವಸರದಿಂದ ಒಂದು ನಿರ್ಣಯಕ್ಕೆ ಬರಕೂಡದು. ಅಲ್ಲಿ ಸ್ತ್ರೀ ಪುರುಷರು ಒಟ್ಟಿಗೆ ಬೆರೆಯುವುದು, ಅಲ್ಲಿಯ ಬೇರೆ ಬೇರೆ ಆಚಾರ ವ್ಯವಹಾರಗಳಿಗೆ ಅರ್ಥವಿದೆ. ಅದರಲ್ಲಿ

ಒಳ್ಳೆಯದೂ ಇವೆ. ಆದರೆ ನೀವು ತಾಳ್ಮೆಯಿಂದ ಅದನ್ನು ತಿಳಿದುಕೊಳ್ಳ ಬೇಕು. ನಾವು ಅವರ ಆಚಾರ ವ್ಯವಹಾರಗಳನ್ನು ಅನುಕರಿಸಬೇಕೆಂದಾ ಗಲೀ, ಅವರು ನಮ್ಮ ಆಚಾರ ವ್ಯವಹಾರಗಳನ್ನು ಅನುಕರಿಸಬೇಕೆಂದಾ ಗಲೀ ಹೇಳುವುದಿಲ್ಲ. ಪ್ರತಿಯೊಂದು ಜನಾಂಗದ ಆಚಾರ ವ್ಯವಹಾರ ಹಲವು ಶತಮಾನಗಳಿಂದ ಸಾವಧಾನವಾಗಿ ಬೆಳೆದು ಬಂದಿದೆ. ಪ್ರತಿ ಯೊಂದರ ಹಿಂದೆಯೂ ಆಳವಾದ ಅರ್ಥವಿದೆ. ಆದಕಾರಣ ಅವರು ನಮ್ಮ ರೀತಿ ನೀತಿಯನ್ನು ಅಲ್ಲಗಳೆಯುವುದಾಗಲೀ, ನಾವು ಅವರ ರೀತಿ ನೀತಿಯನ್ನು ಅಲ್ಲಗಳೆಯುವುದಾಗಲೀ ಮಾಡಕೂಡದು.

ಈ ಸಭೆಯ ಮುಂದೆ ಮತ್ತೊಂದು ವಿಷಯವನ್ನು ಹೇಳಬೇಕೆಂದಿರು ವೆನು. ನಾನು ಅಮೇರಿಕಾ ದೇಶದಲ್ಲಿ ಮಾಡಿದ ಕೆಲಸಕ್ಕಿಂತ ಇಂಗ್ಲೆಂಡಿ ನಲ್ಲಿ ಮಾಡಿದುದು ಹೆಚ್ಚು ತೃಪ್ತಿಕರವಾಗಿದೆ. ಧೀರ ಅಚಲ ಸ್ಥಿರ ಸ್ವಭಾವದ ಆಂಗ್ಲೇಯನಿಗೆ ವಿಷಯವನ್ನು ತಿಳಿದುಕೊಳ್ಳುವುದು ಇತರರಿ ಗಿಂತ ತಡವಾಗುವುದು. ಅವನಿಗೆ ಯಾವುದಾದರೂ ಹೊಸಭಾವನೆ ಕೊಟ್ಟರೆ ಅದು ಎಂದಿಗೂ ವ್ಯರ್ಥವಾಗುವುದಿಲ್ಲ. ಆ ಜನಾಂಗದಲ್ಲಿ ಶಕ್ತಿ ಬಾಹುಳ್ಯ, ಅದ್ಭುತ ಅನುಷ್ಠಾನಿಕ ದೃಷ್ಟಿ ಇರುವುದರಿಂದ ಭಾವನೆ ಬೇರೂರಿ ಬೇಗ ಫಲಕ್ಕೆ ಬರುವುದು. ಬೇರೆ ದೇಶದಲ್ಲಿ ಹಾಗಲ್ಲ. ಆ ಜನಾಂಗದಲ್ಲಿರುವ ಅದ್ಭುತ ಶಕ್ತಿ ಮತ್ತು ಕಾರ್ಯ ತತ್ಪರತೆ ಅನ್ಯ ಜನಾಂಗದಲ್ಲಿ ಇಲ್ಲ. ಅಲ್ಲಿ ಕಲ್ಪನೆ ಕಡಿಮೆ, ಕಾರ್ಯ ಹೆಚ್ಚು. ಆಂಗ್ಲೇಯರ ಹೃದಯದ ಮೂಲವನ್ನು ಯಾರು ಬಲ್ಲರು? ಅಲ್ಲಿ ಎಷ್ಟು ಕಲ್ಪನೆ ಭಾವನೆ ಇದೆ ಎಂಬುದು ಯಾರಿಗೆ ಗೊತ್ತು? ಅವರು ನಿಜವಾದ ಕ್ಷತ್ರಿಯರು, ಧೀರ ಜನಾಂಗ. ಅವರು ತಮ್ಮ ಭಾವನೆಯನ್ನು ವ್ಯಕ್ತಪಡಿ ಸುವುದಿಲ್ಲ, ಯಾವಾಗಲೂ ಗೋಪ್ಯದಲ್ಲಿಡುವರು. ಅವರ ಶಿಕ್ಷಣ ಹಾಗೆ ಇರುವುದು. ಬಾಲ್ಯಾರಭ್ಯ ಅವರ ಶಿಕ್ಷಣವೇ ಹಾಗೆ. ಅಪರೂಪ ಆಂಗ್ಲೇಯ ರಲ್ಲಿ ತಮ್ಮ ಭಾವನೆಯನ್ನು ವ್ಯಕ್ತಪಡಿಸುವವರು. ಹೆಂಗಸರು ಕೂಡ ಹಾಗೆಯೆ. ಆಂಗ್ಲೇಯ ಮಹಿಳೆಯರು ಕೆಲಸಮಾಡುವುದನ್ನು ನಾನು ನೋಡಿರುವೆನು. ಅತಿ ಧೀರ ವಂಗಯುವಕರಿಗೇ ಆಶ್ಚರ್ಯವಾಗುವುದು. ಇಷ್ಟೊಂದು ಧೀರ ಸ್ವಭಾವದ ಹಿಂದೆ, ಯೋಧನ ಸ್ವಭಾವದ ಹಿಂದೆ ಆಂಗ್ಲೇಯನ ಹೃದಯದಲ್ಲಿ ಭಾವನಾಝರಿ ಇದೆ. ಅದರ ರಹಸ್ಯ ನಿಮಗೆ ಗೊತ್ತಾದರೆ, ನೀವು ಅಲ್ಲಿಗೆ ಹೋದರೆ, ಅವರ ಪರಿಚಯ ಮಾಡಿಕೊಂಡು

ನಿಕಟವಾಗಿ ಬೆರೆತರೆ ಅವರು ತಮ್ಮ ಹೃದಯವನ್ನು ಬಿಚ್ಚುವರು. ಅವರು ಎಂದೆಂದಿಗೂ ನಿಮ್ಮ ಸ್ನೇಹಿತರು, ನೀವು ಹೇಳಿದಂತೆ ಕೇಳುವರು. ಆದ ಕಾರಣವೆ, ನನ್ನ ದೃಷ್ಟಿಯಿಂದ ಬೇರೆ ಕಡೆಗಿಂತ ಇಂಗ್ಲೆಂಡಿನಲ್ಲಿ ನನ್ನ ಕೆಲಸ ಹೆಚ್ಚು ತೃಪ್ತಿಕರವಾಗಿದೆ. ನಾಳೆ ನಾನೆ ಕಾಲವಾದರೂ ಇಂಗ್ಲೆಂಡಿನ ಕೆಲಸಕ್ಕೆ ಲೋಪ ಬರುವುದಿಲ್ಲ. ಅದು ವೃದ್ಧಿಯಾಗುತ್ತಾ ಹೋಗುವು ದೆಂದು ನಾನು ದೃಢವಾಗಿ ನಂಬುತ್ತೇನೆ.

ಸಹೋದರರೆ, ನನ್ನ ಹೃದಯದ ಮತ್ತೊಂದು ನಾಡಿಯನ್ನು ಮಿಡಿ ದಿರುವಿರಿ. ಗಭೀರತಮವಾದುದು ಅದು. ಅದೇ ನನ್ನ ಗುರುದೇವ, ನನ್ನ ಆಚಾರ್ಯ, ನನ್ನ ಜೀವನಾದರ್ಶ, ನನ್ನ ಇಷ್ಟ, ನನ್ನ ಪ್ರಾಣ, ನನ್ನ ದೇವತೆ ಶ್ರೀರಾಮಕೃಷ್ಣ ಪರಮಹಂಸರ ಪವಿತ್ರ ನಾಮೋಚ್ಚಾರಣೆ ಮಾಡಿರು ವಿರಿ. ನಾನು ಕಾಯಾ ವಾಚಾ ಮನಸಾ ಯಾವುದಾದರೂ ಸತ್ಕರ್ಮ ಮಾಡಿ ದ್ದರೆ, ನನ್ನ ಬಾಯಿಂದ ಯಾರಿಗಾದರೂ ಸಹಾಯವಾಗುವಂತಹ ನುಡಿ ಯೊಂದು ಹೊರಟಿದ್ದರೆ ಅದು ನನ್ನದಲ್ಲ, ಅವೆಲ್ಲ ಅವರದು. ಆದರೆ ನನ್ನ ಬಾಯಿಂದ ನಿಂದಾನುಡಿ ಹೊರಬಿದ್ದಿದ್ದರೆ, ದ್ವೇಷಭಾವನೆ ಹೊರಬಿದ್ದಿದ್ದರೆ ಅದೆಲ್ಲ ನನ್ನದು ಅವರದಲ್ಲ. ದುರ್ಬಲವಾಗಿರುವುದೆಲ್ಲ ನನ್ನದು ಯಾವುದು ಜೀವನಪ್ರದವೊ, ಬಲಪ್ರದವೊ, ಪವಿತ್ರವಾಗಿರುವುದೊ ಅದೆಲ್ಲ ಅವರ ಶಕ್ತಿ ಲೀಲೆ, ಅವರ ವಾಣಿ, ಸ್ವಯಂ ಅವರೇ ಆಗಿರುವರು. ಹೌದು ಸ್ನೇಹಿತರೆ, ಪ್ರಪಂಚ ಆ ಮಹಾನುಭಾವರನ್ನು ಇನ್ನೂ ತಿಳಿದುಕೊಳ್ಳ ಬೇಕಾಗಿದೆ. ಪ್ರಪಂಚದ ಇತಿಹಾಸದಲ್ಲಿ ಮಹಾತ್ಮರ ಜೀವನ ಮತ್ತು ಸಂದೇಶವನ್ನು ಕುರಿತು ಓದುತ್ತೇವೆ. ಅವರ ಶಿಷ್ಯರ ಹಲವು ಶತಮಾನ ಗಳ ಬರವಣಿಗೆಯ ಮೂಲಕ ಇದು ನಮಗೆ ವ್ಯಕ್ತವಾಗುವುದು. ಸಾವಿ ರಾರು ವರುಷಗಳ ಬದಲಾವಣೆಯ ಚಕ್ರಕ್ಕೆ ಸಿಲುಕಿ ನಯವಾಗಿ ಆ ಮಹಾ ಪುರುಷರ ಜೀವನ ನಮಗೆ ದೊರಕುವುದು. ಆದರೆ ಯಾವ ಒಂದು ವ್ಯಕ್ತಿಯೂ ನನ್ನ ದೃಷ್ಟಿಯಲ್ಲಿ ನಾನೇ ಕಣ್ಣಾರ ಕಂಡ ವ್ಯಕ್ತಿಯಷ್ಟು ಉಜ್ವಲ ಜಾಜ್ವಲ್ಯಮಾನವಾಗಿಲ್ಲ. ಅದೇ ಶ್ರೀರಾಮಕೃಷ್ಣ ಪರಮಹಂಸರು. ಅವರ ಛಾಯೆಯಲ್ಲಿ ನಾನು ಬೆಳೆದಿರುವೆನು. ಎಲ್ಲವನ್ನೂ ಅವರ ಅಡಿ ದಾವರೆಯಲ್ಲಿ ಕಲಿತಿರುವೆನು.

ಸಹೋದರರೆ, ನಿಮಗೆಲ್ಲ ಆ ಗೀತೆಯ ವಾಣಿ ಪ್ರಸಿದ್ಧವಾಗಿದೆ.

ಯದಾ ಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।

ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ ॥
ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್ ।
ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ॥

"ಭಾರತ! ಎಂದು ಧರ್ಮಗ್ಲಾನಿಯಾಗುವುದೊ, ಅಧರ್ಮ ಮೇಲೇಳುವುದೊ ಆಗ ನಾನು ಅವತಾರ ಮಾಡುವೆನು. ಸಾಧುಗಳ ರಕ್ಷಣೆಗೆ ದುಷ್ಟರ ನಾಶಕ್ಕೆ ಧರ್ಮ ಸಂಸ್ಥಾಪನೆ ಮಾಡುವುದಕ್ಕೆ ಯುಗ ಯುಗದಲ್ಲಿಯೂ ನಾನು ಜನ್ಮವೆತ್ತುವೆನು."

ಇನ್ನೊಂದು ವಿಷಯವನ್ನು ತೆಗೆದುಕೊಳ್ಳಬೇಕಾಗಿದೆ. ಇಂತಹ ಒಂದು ವ್ಯಕ್ತಿ ನಮ್ಮಲ್ಲಿ ಇಂದು ಇದೆ. ಆಧ್ಯಾತ್ಮಿಕ ಮಹಾತರಂಗ ಒಂದು ಬರುವುದಕ್ಕೆ ಮುಂಚೆ ಸಮಾಜದಲ್ಲಿ ಹಲವು ಸಣ್ಣಪುಟ್ಟ ಅಲೆಗಳೇಳುತ್ತವೆ. ಅದರಲ್ಲಿ ಒಂದು, ಅಗೋಚರವಾಗಿ ಸುಳಿವು ಗೊತ್ತಾಗದೆ ಆಲೋಚನೆಗೆ ನಿಲುಕುವುದಿಲ್ಲ. ಕ್ರಮೇಣ ದೊಡ್ಡದೊಡ್ಡದಾಗಿ ಸಣ್ಣಪುಟ್ಟ ಅಲೆಗಳನ್ನೆಲ್ಲ ಒಳಗೊಂಡು ಅದ್ಭುತವಾಗಿ ಮಹಾಪ್ರವಾಹವಾಗಿ ಯಾರಿಗೂ ಎದುರಿಸಲಾಗದ ಪ್ರಚಂಡ ಶಕ್ತಿಯೊಡನೆ ಸಮಾಜದ ಮೇಲೆ ಬೀಳುವುದು. ಇಂದು ನಮ್ಮ ಕಣ್ಣೆದುರಿಗೆ ಹೀಗೆ ಆಗುತ್ತಿದೆ. ಕಣ್ಣಿದ್ದರೆ ನೋಡುವಿರಿ. ನಿಮ್ಮ ಹೃದಯ ತೆರೆದಿದ್ದರೆ ಅದನ್ನು ಸ್ವೀಕರಿಸುವಿರಿ. ನೀವು ಸತ್ಯಾನ್ವೇಷಕರಾದರೆ ನಿಮಗೆ ಅದು ದೊರಕುವುದು. ಕಾಲ ಚಿಹ್ನೆಯನ್ನು ಕಾಣದವನು ಅಂಧ, ನಿಜವಾಗಿ ಅಂಧನು. ಈ ದರಿದ್ರ ಬ್ರಾಹ್ಮಣ ಮಾತಾಪಿತರಿಗೆ ಜನಿಸಿದ ಬಾಲಕ ದೂರದ ಒಂದು ಹಳ್ಳಿಯಲ್ಲಿ ಹುಟ್ಟಿದನು. ಅದರ ಹೆಸರನ್ನೂ ನಿಮ್ಮಲ್ಲಿ ಅನೇಕರು ಕೇಳಿಲ್ಲ. ಶತಮಾನಗಳಿಂದ ಮೂರ್ತಿ ಪೂಜೆಯನ್ನು ವಿರೋಧಿಸುತ್ತಿರುವ ಪಾಶ್ಚಾತ್ಯ ಜನಾಂಗ ಅವರನ್ನು ಅಕ್ಷರಶಃ ಪೂಜಿಸುತ್ತಿರುವರು. ಇದು ಯಾರ ಶಕ್ತಿ? ನನ್ನದೆ ಅಥವಾ ನಿಮ್ಮದೆ? ಯಾವ ಶಕ್ತಿ ಶ್ರೀರಾಮಕೃಷ್ಣ ಪರಮಹಂಸರ ರೂಪಿನಲ್ಲಿ ಆವಿರ್ಭೂತವಾಯಿತೊ ಅದೇ ಈ ಶಕ್ತಿ. ನಿಮಗೆ, ನಮಗೆ, ಸಾಧು ಮಹಾಪುರುಷರಿಗೆ ಮತ್ತು ಅವತಾರ ವ್ಯಕ್ತಿಗಳಿಗೆ ಈ ಬ್ರಹ್ಮಾಂಡ ಆ ಶಕ್ತಿಯ ವಿಕಾಸಮಾತ್ರ. ಆ ಶಕ್ತಿ ಕೆಲವು ವೇಳೆ ಕಡಿಮೆ ಕೆಲವು ವೇಳೆ ಹೆಚ್ಚಾಗಿ ಘನೀಭೂತವಾಗುವುದು. ಈ ಸಮಯದಲ್ಲಿ ನಾವು ಆ ಮಹಾಶಕ್ತಿಯ ಲೀಲೆಯ ಆರಂಭ ಮಾತ್ರ ನೋಡುತ್ತಿರುವೆವು. ಈಗಿರುವವರು ಕಾಲವಾಗುವುದಕ್ಕೆ ಮುಂಚೆ ಆ ಅದ್ಭುತ ಶಕ್ತಿಯ ಲೀಲೆಯನ್ನು ನೋಡುವಿರಿ. ಭಾರತವರ್ಷ ಪುನರು

ತ್ಥಾನದ ಸಮಯಕ್ಕೆ ಸರಿಯಾಗಿ ಅದು ಬಂದಿದೆ. ಯಾವ ಮೂಲ ಜೀವನ ಶಕ್ತಿ ಭಾರತದಲ್ಲಿ ಸದಾ ಸಂಚಾರಮಾಡಬೇಕಾಗಿದೆಯೊ ಅದನ್ನು ಕಾಲ ಕಾಲಕ್ಕೆ ನಾವು ಮರೆಯುವೆವು.

ಪ್ರತಿಯೊಂದು ದೇಶಕ್ಕೂ ಉದ್ದೇಶ ಸಾಧನೆಗೆ ಬೇರೆಬೇರೆ ಮಾರ್ಗ ಗಳಿವೆ. ಕೆಲವರು ರಾಜನೀತಿಯ ಮೂಲಕ ಕೆಲವರು ಸಮಾಜ ಸುಧಾ ರಣೆಯ ಮೂಲಕ, ಮತ್ತೆ ಕೆಲವರು ಇನ್ನೂ ಬೇರೆ ಯಾವುದಾದರೂ ಮಾರ್ಗದ ಮೂಲಕ ಇದನ್ನು ಮಾಡುತ್ತಾರೆ. ನಮಗೆ ಇರುವುದು ಜ್ಞಾನ ಮಾರ್ಗ ಒಂದೆ. ಆ ಪಥ ಒಂದರಲ್ಲೇ ನಾವು ನಡೆಯಬೇಕಾಗಿದೆ. ಆಂಗ್ಲೇಯ, ಧರ್ಮವನ್ನು ರಾಜಕೀಯದ ಮೂಲಕ ತಿಳಿದುಕೊಳ್ಳಬಲ್ಲ. ಬಹುಶಃ ಅಮೆರಿಕಾದವರು ಸಮಾಜ ಸುಧಾರಣೆ ಮೂಲಕ ಧರ್ಮವನ್ನು ಅರ್ಥಮಾಡಿಕೊಳ್ಳಬಲ್ಲರು. ಆದರೆ ಹಿಂದೂ ರಾಜಕೀಯವನ್ನು ಕೂಡ ಧರ್ಮದ ಮೂಲಕ ಹೇಳಿದರೆ ಗ್ರಹಿಸಬಲ್ಲನು. ಸಮಾಜಶಾಸ್ತ್ರ ಕೂಡ ಧರ್ಮದ ಮೂಲಕ ಬರಬೇಕು. ಪ್ರತಿಯೊಂದೂ ಧರ್ಮದ ಮೂಲಕ ಬರಬೇಕು. ಜನಾಂಗದ ಜೀವನದ ಸಂಗೀತಕ್ಕೆ ಇದೇ ಮುಖ್ಯಸ್ವರ. ಉಳಿದುವೆಲ್ಲ ಬದಲಾಯಿಸುತ್ತಿರುವ ಗೌಣ ವಿಷಯಗಳು. ಅದೇ ಅಪಾಯ ದಲ್ಲಿತು. ಜನಾಂಗ ಜೀವನದ ಈ ಪ್ರಮುಖಸ್ವರವನ್ನೇ ಬದಲಾಯಿಸು ವಂತೆ ಇತ್ತು. ನಮ್ಮ ಬಾಳಿನ ಆಧಾರವನ್ನೆ ಬದಲಾಯಿಸುವಂತೆ ಕಂಡಿತು. ಧರ್ಮಕ್ಕೆ ಬದಲಾಗಿ ರಾಜಕೀಯವನ್ನು ಪ್ರಾಧಾನ್ಯಮಾಡುವಂತೆ ತೋರಿತು. ನಾವೇನಾದರೂ ಹೀಗೆ ಮಾಡಿದ್ದರೆ ನಮಗೆ ಸರ್ವನಾಶವಾಗುತ್ತಿತ್ತು. ಆದರೆ ಹಾಗೆ ಮಾಡಲಾಗಲಿಲ್ಲ. ಅದಕ್ಕೇ ಈ ಶಕ್ತಿ ಆವಿರ್ಭೂತವಾಯಿತು. ನೀವು ಈ ಮಹಾಪುರುಷರನ್ನು ಯಾವ ದೃಷ್ಟಿಯಲ್ಲಿ ನೋಡಿದರೂ ಚಿಂತೆ ಯಿಲ್ಲ, ಎಷ್ಟು ಗೌರವಕೊಟ್ಟರೂ ಚಿಂತೆಯಿಲ್ಲ. ಆದರೆ ನಿಮ್ಮೆದುರಿಗೆ ಈ ಸವಾಲನ್ನು ಹಾಕುತ್ತೇನೆ. ಭರತಖಂಡದಲ್ಲಿ ಹಲವಾರು ಶತಮಾನ ಗಳಿಂದ ವ್ಯಕ್ತವಾಗದ ಒಂದು ಪ್ರಚಂಡ ಶಕ್ತಿ ಇಲ್ಲಿ ಆವಿರ್ಭೂತವಾಗಿದೆ. ಭರತಖಂಡದ ಪುನರುತ್ಥಾನಕ್ಕೆ, ಅದರ ಹಿತಕ್ಕೆ ಮತ್ತು ಇಡೀ ವಿಶ್ವದ ಹಿತಕ್ಕೆ, ಈ ಒಂದು ಮಹಾವ್ಯಕ್ತಿ ಏನುಮಾಡಿತು ಎಂಬುದನ್ನು ತಿಳಿದು ಕೊಳ್ಳುವುದು ಹಿಂದೂಗಳ ಕರ್ತವ್ಯ. ಪ್ರಪಂಚದ ಇತರ ಕಡೆ ವಿಶ್ವಧರ್ಮ, ಭಿನ್ನಭಿನ್ನ ಧರ್ಮಗಳಿಗೆ ಸಹಾನುಭೂತಿಯೆಂಬ ಭಾವನೆಯನ್ನು ಆಲೋಚಿಸು ವುದಕ್ಕೆ ಮುಂಚೆ, ಇಲ್ಲೆ ನಮ್ಮ ನಗರದಲ್ಲೆ ಯಾರ ಜೀವನವೇ ಒಂದು

ಇದು ನಮ್ಮನ್ನು ಒಂದುಗೂಡಿಸುವುದು ಎಂದು ಪ್ರಮಾಣಪಡಿಸುವುದಕ್ಕೆ ಬೇರೆ ಉದಾಹರಣೆ ಬೇಕೆ ಎಂದು ರಾಜಕೀಯ ಭಾವನೆ ಇದ್ದವರನ್ನು ಕೇಳುತ್ತೇನೆ. ಈ ಸಭೆಯೇ ಇದಕ್ಕೆ ಸಾಕಷ್ಟು ಪ್ರಮಾಣವಾಗಿದೆ.

ಎರಡನೆಯದಾಗಿ ಸ್ವಾರ್ಥ ಆಲೋಚನೆಯನ್ನು ತೊರೆದರೂ ನಮ್ಮ ನಿಸ್ವಾರ್ಥ ಮಹಾ ಸಜೀವ ದೃಷ್ಟಾಂತಗಳು ನಮ್ಮಲ್ಲಿದೆ. ಭರತಖಂಡದ ದುರ್ದಶೆಗೆ ಅವನತಿಗೆ ಒಂದು ಮುಖ್ಯ ಕಾರಣ ಜನಾಂಗ ಕೂಪ ಮಂಡೂಕದಂತೆ ಸಂಕುಚಿತವಾಯಿತು. ಇತರ ಮಾನವ ಜನಾಂಗಕ್ಕೆ ಅನರ್ಘ್ಯ ರತ್ನವನ್ನು ಕೊಡಲಿಲ್ಲ. ಆಧ್ಯಾತ್ಮಿಕ ಪಿಪಾಸೆಯಿಂದ ನರಳುತ್ತಿರುವ ಅನಾರ್ಯರಿಗೆ ಜೀವದಾನ ಮಾಡುವಂತಹ ಅಮೃತವನ್ನು ಧಾರೆ ಎರೆಯಲಿಲ್ಲ. ನಾವು ಹೊರಗೆ ಹೋಗಲಿಲ್ಲ. ಇತರ ರಾಷ್ಟ್ರಗಳೊಂದಿಗೆ ಹೋಲಿಸಿ ನೋಡಲಿಲ್ಲ. ಇದೊಂದು ನಮ್ಮ ದೇಶದ ಅವನತಿಗೆ ಮುಖ್ಯ ಕಾರಣ. ಭರತಖಂಡದಲ್ಲಿ ಇರುವ ಸ್ವಲ್ಪ ಜಾಗೃತಿಗೆ, ಚಟುವಟಿಕೆಗೆ ಕಾರಣ ರಾಜಾರಾಮಮೋಹನರಾಯ್ ಈ ಸಂಕುಚಿತ ಚಿಪ್ಪಿನಿಂದ ಹೊರಗೆ ಹೋದ ದಿನದಿಂದ ಮೊದಲಾಯಿತೆಂದು ನಿಮಗೆಲ್ಲ ಗೊತ್ತಿದೆ. ಅಂದಿನಿಂದ ನಮ್ಮ ಇತಿಹಾಸ ಬೇರೊಂದು ರೂಪನ್ನು ತಾಳಿದೆ. ಅತಿ ವೇಗದಿಂದ ಚಲಿಸುತ್ತಿದೆ. ಹಿಂದೆ ಸಣ್ಣ ಸಣ್ಣ ನದಿಗಳಿದ್ದರೆ ಸಾಗರೋಪಮ ಮಹಾ ಪ್ರವಾಹ ಬರುತ್ತಿದೆ. ಯಾರೂ ಅದನ್ನು ತಡೆಯಲಾರರು.

ನಾವು ಹೊರಗೆ ಹೋಗಬೇಕು. ಕೊಟ್ಟು ತೆಗೆದುಕೊಳ್ಳುವುದರಲ್ಲಿದೆ ರಹಸ್ಯ. ನಾವು ಯಾವಾಗಲೂ ಸ್ವೀಕರಿಸುತ್ತಾ ಪಾಶ್ಚಾತ್ಯರ ಪದತಳದಲ್ಲಿರಬೇಕೆ? ಪ್ರತಿಯೊಂದನ್ನೂ, ಧರ್ಮವನ್ನು ಕೂಡ ಅವರಿಂದ ಕಲಿಯಬೇಕೆ? ಅವರಿಂದ ಯಂತ್ರ ಕುಶಲತೆಯನ್ನು ಕಲಿತುಕೊಳ್ಳಬಹುದು. ಇನ್ನೂ ಹಲವು ವಿಷಯಗಳನ್ನು ಕಲಿತುಕೊಳ್ಳಬಹುದು. ಆದರೆ ಅವರಿಗೆ ನಾವು ಏನನ್ನಾದರೂ ಕಲಿಸಬೇಕು. ಅದೇ ನಮ್ಮ ಧರ್ಮ, ಆಧ್ಯಾತ್ಮ ವಿದ್ಯೆ. ಪೂರ್ಣ ನಾಗರಿಕತೆಗೆ ಪ್ರಪಂಚ ಭರತಖಂಡದ ಅನರ್ಘ್ಯ ರತ್ನಗಳಿಗಾಗಿ ಕಾಯುತ್ತಿದೆ. ಹಲವು ಶತಮಾನಗಳ ದುಃಖ ಅವನತಿಯ ಕಾಲದಲ್ಲಿಯೂ ಬಿಡದೆ ಸಂರಕ್ಷಿಸಿಕೊಂಡು ಬಂದ ನಮ್ಮ ಪೂರ್ವಿಕರ ಅತ್ಯಮೋಘ ಅಧ್ಯಾತ್ಮಿಕ ಆಸ್ತಿಗಾಗಿ ಕಾಯುತ್ತಿದೆ. ಪ್ರಪಂಚ ಈ ಭಂಡಾರಕ್ಕೆ ಕಾಯುತ್ತಿದೆ. ಭರತಖಂಡದ ಹೊರಗೆ ನಮ್ಮ ಅತ್ಯಮೂಲ್ಯ ಧನಕ್ಕಾಗಿ ಜನವೆಷ್ಟು ಕಾತರಿಸುತ್ತಿರುವರು ಎಂಬುದು ನಿಮಗೆ ಗೊತ್ತಿಲ್ಲ. ನಾವಿಲ್ಲಿ ಬರೀ ಮಾತನಾಡು

ತ್ತೇವೆ. ಜಗಳ ಕಾಯುತ್ತೇವೆ. ಪವಿತ್ರವಾದುದನ್ನೆಲ್ಲ ಅಣಕಿಸುತ್ತೇವೆ. ಪರಮ ಪೂಜ್ಯ ವಸ್ತುವನ್ನು ಅಣಕಿಸುವುದೊಂದು ಜನಾಂಗದ ಬಾಳಿನ ಚಾಳಿಯಾಗಿಹೋಗಿದೆ. ಕೋಟ್ಯಂತರ ಜನರು ಹೊರಗೆ ಭರತಖಂಡದ ಕಡೆಗೆ ಕೈನೀಡಿ ಕಾತರತೆಯಿಂದ ನಮ್ಮ ಪೂರ್ವಜರು ಶೇಖರಿಸಲ್ಪಟ್ಟ ಅಮೃತ ಪಾನಕ್ಕೆ ಕಾದಿರುವುದು ನಮಗೆ ಗೊತ್ತಾಗುವುದೇ ಇಲ್ಲ. ನಾವು ಹೊರಗೆ ಹೋಗಬೇಕು. ಆಧ್ಯಾತ್ಮಿಕ ವಿದ್ಯೆಯನ್ನು ಅವರಿಗೆ ಕೊಟ್ಟು ಅವರ ವಿದ್ಯೆ ಯನ್ನು ನಾವು ಕಲಿಯುವ. ಆಧ್ಯಾತ್ಮಿಕ ಪ್ರಪಂಚದ ಅದ್ಭುತಗಳಿಗೆ ಭೌತಿಕ ಪ್ರಪಂಚದ ಅದ್ಭುತಗಳನ್ನು ಬದಲಾಯಿಸುವ. ನಾವು ಯಾವಾ ಗಲೂ ವಿದ್ಯಾರ್ಥಿಗಳೇ ಆಗಿರುವುದಿಲ್ಲ. ಗುರುಗಳೂ ಆಗುವೆವು. ಸರಿ ಸಮಾನತೆಯಿಲ್ಲದೆ ಸ್ನೇಹವಿರಲಾರದು. ಒಬ್ಬರು ಯಾವಾಗಲೂ ಕಲಿಸುತ್ತ ಮತ್ತೊಬ್ಬರು ಯಾವಾಗಲೂ ಅವರ ಪಾದದಡಿ ಕಲಿಯುತ್ತಿದ್ದರೆ ಸರಿಸಮಾ ನತೆ ಬರಲಾರದು. ನೀವು ಅಮೆರಿಕಾ ಮತ್ತು ಇಂಗ್ಲೀಷರೊಂದಿಗೆ ಸರಿಸಮ ನಾಗಬೇಕಾದರೆ ನೀವು ಕಲಿಸಬೇಕು, ಕಲಿತುಕೊಳ್ಳಬೇಕು. ಇನ್ನೂ ಹಲವು ಶತಮಾನಗಳು ಕಲಿಸುವಷ್ಟು ನಿಮ್ಮಲ್ಲಿದೆ. ಇದನ್ನು ನಾವು ಮಾಡ ಬೇಕಾಗಿದೆ. ಶ್ರದ್ಧೆ ಉತ್ಸಾಹ ನಮ್ಮ ರಕ್ತದಲ್ಲಿರಬೇಕು. ವಂಗದೇಶದಲ್ಲಿ ಬೇಕಾದಷ್ಟು ಕಲ್ಪನೆ ಇದೆ ಎನ್ನುವರು. ಅದಿದೆ ಎಂದು ನಾನೂ ನಂಬು ತ್ತೇನೆ. ಕಾಲ್ಪನಿಕ ಜೀವಿಗಳು, ಭಾವ ಪ್ರಮುಖ ಜೀವಿಗಳು, ಎಂದು ಜನ ನಮ್ಮನ್ನು ಹಾಸ್ಯಮಾಡುವರು. ಬುದ್ಧಿವಂತಿಕೆ ಏನೊ ಮುಖ್ಯ. ಆದರೆ ಸ್ವಲ್ಪದೂರ ಹೋಗಿ ನಿಲ್ಲುವುದು. ಹೃದಯದಿಂದ ಮಾತ್ರ ಯಾವಾಗಲೂ ಪ್ರತಿಭೆ ಬರಬೇಕಾದರೆ. ಭಾವನೆ ಮೂಲಕ ಮಾತ್ರ ರಹಸ್ಯತಮ ವಿಷಯ ಗಳನ್ನು ತಿಳಿದುಕೊಳ್ಳಬಹುದು. ಆದಕಾರಣವೆ ಭಾವಜೀವಿಯಾದ ವಂಗೀಯನೆ ಈ ಕೆಲಸವನ್ನು ಮಾಡಬೇಕಾಗಿದೆ.

"ಉತ್ತಿಷ್ಠತ, ಜಾಗ್ರತ, ಪ್ರಾಪ್ಯವರಾನ್ನಿಬೋಧತ." ಏಳಿ, ಜಾಗ್ರತರಾಗಿ, ಗುರಿ ಸೇರುವವರೆಗೂ ನಿಲ್ಲಬೇಡಿ. ಕಲ್ಕತ್ತೆಯ ಯುವಕರೆ, ಜಾಗ್ರತರಾಗಿ ಏಳಿ. ಸಮಯ ಸನ್ನಿಹಿತವಾಗಿದೆ. ನಿಮ್ಮ ಕಣ್ಣ ಮುಂದೆ ಆಗಲೇ ಎಲ್ಲಾ ವಿಕಾಸವಾಗುತ್ತಿದೆ. ನಿರ್ಭಯರಾಗಿ ಅಂಜಬೇಡಿ. ನಮ್ಮ ಶಾಸ್ತ್ರದಲ್ಲಿ ಮಾತ್ರ ಭಗವಂತನಿಗೆ ಅಭೀಃ ಅಭೀಃ ಎಂಬ ಗುಣವಾಚಕವನ್ನು ಆರೋಪಿಸುವರು. ನಾವು ನಿರ್ಭಯರಾಗಬೇಕು. ಆಗ ನಮ್ಮ ಕೆಲಸ ಪೂರೈಸುವುದು. ಏಳಿ, ಜಾಗ್ರತರಾಗಿ, ನಮ್ಮ ದೇಶಕ್ಕೆ ಅದ್ಭುತ ತ್ಯಾಗ

ಬೇಕಾಗಿದೆ. ಯುವಕರು ಮಾತ್ರ ಇದನ್ನು ಮಾಡಬಲ್ಲರು. ಆಶಿಷ್ಠ, ಧೃಡಿಷ್ಠ, ಬಲಿಷ್ಠ ಮೇಧಾವಿಗೆ ಈ ಕೆಲಸ ಮೀಸಲಾಗಿದೆ. ಕಲ್ಕತ್ತೆಯಲ್ಲಿ ಇಂತಹ ನೂರಾರು, ಸಹಸ್ರಾರು ಯುವಕರು ಇರುವರು. ನಾನು ಏನನ್ನೊ ಸ್ವಲ್ಪ ಸಾಧಿಸಿದೆ ಎಂದು ನೀವು ಹೇಳಿದರೆ, ನಾನು ಕಲ್ಕತ್ತೆಯಲ್ಲಿ ಕೆಲಸಕ್ಕೆ ಬಾರದೆ ಅಲೆಯುತ್ತಿದ್ದವನು, ನಾನೇ ಅಷ್ಟನ್ನು ಮಾಡಿದರೆ ನೀವು ಇನ್ನೆಷ್ಟು ಮಾಡಬಹುದು! ಇದನ್ನು ಜ್ಞಾಪಿಸಿಕೊಳ್ಳಿ. ಏಳಿ, ಜಾಗ್ರತ ರಾಗಿ, ಪ್ರಪಂಚ ನಿಮ್ಮನ್ನು ಕರೆಯುತ್ತಿದೆ. ಭರತಖಂಡದ ಬೇರೆ ಪ್ರದೇಶ ದಲ್ಲಿ ಬುದ್ಧಿ ಇದೆ, ಪಾಂಡಿತ್ಯವಿದೆ ಆದರೆ ಉತ್ಸಾಹ ನಮ್ಮ ತಾಯ್ನಾಡಿ ನಲ್ಲಿ ಮಾತ್ರ ಇರುವುದು. ಅದು ವ್ಯಕ್ತವಾಗಬೇಕು. ಆದಕಾರಣ, ಕಲ್ಕತ್ತೆಯ ಯುವಕರೆ ಶ್ರದ್ಧೋತ್ಸಾಹದಿಂದ ಜಾಗ್ರತರಾಗಿ; ದರಿದ್ರರು ನೀವು, ಸ್ನೇಹಿತರಿಲ್ಲ ಎಂದು ಆಲೋಚಿಸಬೇಡಿ. ಹಣ ಮನುಷ್ಯನನ್ನು ತಯಾರುಮಾಡುವುದನ್ನು ಯಾರು ನೋಡಿರುವರು. ಮನುಷ್ಯ ಯಾವಾ ಗಲೂ ಹಣಮಾಡುವುದು. ಇಡೀ ಪ್ರಪಂಚವೇ ಮನುಷ್ಯನ ಶಕ್ತಿ, ಉತ್ಸಾಹ, ಶ್ರದ್ಧೆಯಿಂದಾಗಿದೆ.

ಉಪನಿಷತ್ತಿನಲ್ಲೆಲ್ಲಾ ಅತಿ ಸುಂದರವಾದ ಕಠೋಪನಿಷತ್ತನ್ನು ಯಾರು ಓದಿರುವರೋ ಅವರಿಗೆ ಈ ವಿಷಯ ಜ್ಞಾಪಕದಲ್ಲಿರಬಹುದು. ರಾಜ ದೊಡ್ಡದೊಂದು ಯಾಗವನ್ನು ಮಾಡುತ್ತಿದ್ದನು. ಯೋಗ್ಯವಾದ ವಸ್ತುಗಳನ್ನು ದಾನಕೊಡುವ ಬದಲು ಕೆಲಸಕ್ಕೆ ಬಾರದ ಕುದುರೆ ಹಸು ಗಳನ್ನು ಅವನು ಕೊಡುತ್ತಿದ್ದನು. ಆ ಸಮಯದಲ್ಲಿ ನಚಿಕೇತನೆಂಬ ಅವನ ಮಗನಿಗೆ ಶ್ರದ್ಧೆಯುಂಟಾಯಿತು ಎಂದು ಉಪನಿಷತ್ತು ಹೇಳುವುದು. ಶ್ರದ್ಧೆ ಎಂಬ ಪದವನ್ನು ನಾನು ಭಾಷಾಂತರಮಾಡುವುದಿಲ್ಲ. ಅದು ಬಹಳ ತಪ್ಪಾಗುವುದು. ತಿಳಿದುಕೊಳ್ಳುವುದಕ್ಕೆ ಅತಿ ಸುಂದರವಾದ ಪದ ಇದು. ಎಲ್ಲಾ ಅದರ ಮೇಲಿದೆ. ಅದು ಹೇಗೆ ಕೆಲಸಮಾಡುತ್ತದೆ ಎಂಬುದನ್ನು ನೋಡೋಣ. ತಕ್ಷಣವೆ ಈ ಭಾವನೆ ನಚಿಕೇತನ ಮನಸ್ಸಿನಲ್ಲಿ ಹೊಳೆ ಯಿತು. "ನಾನು ಹಲವರಿಗೆ ಮೇಲಾಗಿರುವೆನು. ಎಲ್ಲೊ ಕೆಲವರಿಗೆ ಮಧ್ಯದಲ್ಲಿರುವೆನು. ಆದರೆ ಎಲ್ಲೂ ನಾನು ಕೊನೆಯಲ್ಲ, ನಾನು ಏನನ್ನಾ ದರೂ ಮಾಡಬಹುದು." ಈ ಧೈರ್ಯ ಹೆಚ್ಚಾಯಿತು. ಮನಸ್ಸಿನಲ್ಲಿದ್ದ ಸಾವಿನ ಸಮಸ್ಯೆಯನ್ನು ಬಗೆಹರಿಸಬೇಕೆಂದು ಇಚ್ಛಿಸಿದನು. ಮೃತ್ಯು ಮನೆಗೆ ಹೋದರೆ ಮಾತ್ರ ಈ ಸಮಸ್ಯೆಯನ್ನು ಬಗೆಹರಿಸಲು ಸಾಧ್ಯ.

ಹುಡುಗ ಅಲ್ಲಿಗೆ ಹೊರಟನು. ಆ ಧೀರ ನಚಿಕೇತ ಮೃತ್ಯು ಮನೆಗೆ ಹೋಗಿ ಮೂರು ದಿನ ಕಾದು ಕುಳಿತನು. ಅವನಿಗೆ ಬೇಕಾದುದು ಹೇಗೆ ದೊರಕಿತು ಎಂಬುದು ನಿಮಗೆ ಗೊತ್ತಿದೆ. ನಮಗೆ ಬೇಕಾಗಿರುವುದು ಇಂತಹ ಶ್ರದ್ಧೆ. ದುರದೃಷ್ಟವಶಾತ್ ಭರತಖಂಡದಿಂದ ಇದು ಮುಕ್ಕಾಲು ಪಾಲು ಕಣ್ಮರೆಯಾಗಿದೆ. ಅದಕ್ಕೇ ನಾವು ಇಂತಹ ಅಧೋಗತಿಗೆ ಬಂದಿರುವುದು. ಒಬ್ಬನಿಗೂ ಮತ್ತೊಬ್ಬನಿಗೂ ವ್ಯತ್ಯಾಸವೆ ಅವರಿಗೆ ಇರುವ ಶ್ರದ್ಧೆಯಲ್ಲಿ; ವ್ಯತ್ಯಾಸ, ಬೇರಲ್ಲ. ಒಬ್ಬನನ್ನು ಪ್ರಖ್ಯಾತನನ್ನಾಗಿ ಮಾಡುವುದು, ಅಧೋಗತಿಗೆ ಒಯ್ಯುವುದು ಶ್ರದ್ಧೆ. ಯಾರು ತಾನು ದುರ್ಬಲ ಎಂದು ಆಲೋಚಿಸುತ್ತಿರುವನೊ ಅವನು ದುರ್ಬಲನೇ ಆಗುತ್ತಾನೆ, ಎಂದು ನನ್ನ ಗುರು ಹೇಳುತ್ತಿದ್ದರು. ಇದು ಸತ್ಯ. ಈ ಶ್ರದ್ಧೆ ನಿಮಗೆ ಬರಬೇಕು. ಪಾಶ್ಚಾತ್ಯ ಜನಾಂಗದಲ್ಲಿ ವ್ಯಕ್ತವಾಗುತ್ತಿರುವ ಭೌತಿಕ ಶಕ್ತಿಯ ಮೂಲವೆಲ್ಲ ಶ್ರದ್ಧೆಯಲ್ಲಿದೆ. ಅವರು ತಮ್ಮ ಮಾಂಸಖಂಡದ ಶಕ್ತಿಯಲ್ಲಿ ನಂಬಿದರು. ನೀವು ನಿಮ್ಮ ಆತ್ಮಶಕ್ತಿಯಲ್ಲಿ ನಂಬಿದರೆ ಮತ್ತೆ ಎಷ್ಟನ್ನು ಸಾಧಿಸಬಹುದು? ನಿಮ್ಮ ಶಾಸ್ತ್ರಗಳು, ಮಹರ್ಷಿಗಳು ಏಕವಾಣಿಯಿಂದ ಆತ್ಮ ಅನಂತವಾದುದು, ಶಕ್ತಿ ಅನಂತವಾದುದು ಎಂದು ಬೋಧಿಸುವರು. ಅದರಲ್ಲಿ ನಂಬಿ. ಆತ್ಮನನ್ನು ಯಾವುದೂ ನಾಶಮಾಡಲಾರದು. ಅದರಲ್ಲಿ ಅನಂತ ಶಕ್ತಿ ಇದೆ. ಅದನ್ನು ವ್ಯಕ್ತಪಡಿಸಬೇಕಷ್ಟೆ. ಇಲ್ಲೆ ಭಾರತ ತತ್ತ್ವಶಾಸ್ತ್ರಗಳಿಗೂ ಇತರರಿಗೂ ಇರುವ ವ್ಯತ್ಯಾಸ. ದ್ವೈತಿಗಳಾಗಲಿ, ವಿಶಿಷ್ಟಾದ್ವೈತಿಗಳಾಗಲಿ, ಅದ್ವೈತಿಗಳಾಗಲಿ ಎಲ್ಲರೂ ಆತ್ಮನಲ್ಲಿ ಆಗಲೇ ಎಲ್ಲವೂ ಇದೆ ಎಂದು ದೃಢವಾಗಿ ನಂಬುವರು. ಅದು ವ್ಯಕ್ತವಾಗಿ ಆವಿರ್ಭೂತವಾಗಬೇಕು ಅಷ್ಟೆ. ಈ ಆತ್ಮಶ್ರದ್ಧೆ ಇಂದು ನನಗೆ ಬೇಕಾಗಿದೆ, ನಿಮಗೆಲ್ಲಾ ಬೇಕಾಗಿದೆ. ಇದನ್ನು ಪಡೆದುಕೊಳ್ಳುವ ಮಹಾಸಾಹಸ ನಿಮ್ಮ ಮುಂದೆ ಇದೆ. ಎಲ್ಲವನ್ನೂ ಹಾಸ್ಯಮಾಡುವ ಹುಡುಗಾಟಿಕೆ ಸ್ವಭಾವ ನಮ್ಮ ಜನಾಂಗ ಜೀವನಕ್ಕೆ ಧಾಳಿ ಇಡುತ್ತಿದೆ. ಅದನ್ನು ತ್ಯಜಿಸಿ. ಧೀರರಾಗಿ, ಶ್ರದ್ಧಾವಂತರಾಗಿ ಉಳಿದುವೆಲ್ಲ ತಾವೇ ಸಿದ್ಧಿಸುವುದು.

ನಾನು ಏನನ್ನೂ ಇನ್ನೂ ಮಾಡಿಲ್ಲ. ನೀವು ಕೆಲಸವನ್ನು ಸಾಧಿಸಬೇಕಾಗಿದೆ. ನಾನು ನಾಳೆ ಸತ್ತರೂ ಕಾರ್ಯ ನಿಲ್ಲುವುದಿಲ್ಲ. ಸಹಸ್ರಾರು ಜನ ಕೆಲಸಕ್ಕೆ ಕೈಹಾಕಿ ನನ್ನ ಕಲ್ಪನೆಗೂ ಅತೀತವಾಗಿ ಕೆಲಸಮಾಡುತ್ತಾ ಹೋಗುವರು ಎಂದು ದೃಢವಾಗಿ ನಂಬುತ್ತೇನೆ. ನನಗೆ ನನ್ನ ದೇಶದಲ್ಲಿ

ಶ್ರದ್ಧೆ ಇದೆ. ಅದರಲ್ಲೂ ವಂಗದೇಶದ ಯುವಕರಲ್ಲಿ ನನಗೆ ಹೆಚ್ಚು ಶ್ರದ್ಧೆ ಇದೆ. ಯುವಕರ ಪಾಲಿಗೆ ಬಂದ ಕರ್ತವ್ಯಗಳಲ್ಲಿ ಗುರುತರವಾದುದು ಅತಿ ವಂಗಯುವಕರ ಮೇಲಿದೆ. ಕಳೆದ ಹತ್ತು ವರುಷಗಳಿಂದ ಭರತಖಂಡ ವನ್ನೆಲ್ಲಾ ಸಂಚರಿಸಿರುವೆನು. ಭರತಖಂಡವನ್ನು ಯೋಗ್ಯ ಆಧ್ಯಾತ್ಮಿಕ ಶಿಖರಕ್ಕೆ ಸಾಗಿಸುವ ಶಕ್ತಿ ವಂಗ ಯುವಕರಿಂದ ಬರುವುದೆಂಬುದು ನನ್ನ ದೃಢನಂಬಿಕೆ. ಅನಂತ ಶ್ರದ್ಧೆ ಉತ್ಸಾಹದಿಂದ ತುಂಬಿ ತುಳುಕಾಡುವ ವಂಗ ಯುವಕರಿಂದ ಪೂರ್ವಜರ ಸನಾತನ ತತ್ತ್ವಗಳನ್ನು ಜಗತ್ತಿಗೆಲ್ಲಾ ಪ್ರಚಾರ ಮಾಡುವವರು ಬರುವರು. ನೀವು ಮಾಡಬೇಕಾದ ಪವಿತ್ರ ಕೆಲಸವಿದು. "ಏಳಿ, ಜಾಗೃತರಾಗಿ, ಗುರಿಸೇರುವವರೆಗೂ ನಿಲ್ಲಬೇಡಿ" ಎಂದು ನಿಮಗೆ ಜ್ಞಾಪಿಸಿ ಮುಕ್ತಾಯ ಮಾಡುತ್ತೇನೆ. ಅಂಜಬೇಡಿ. ಮಾನವ ಇತಿಹಾಸ ದಲ್ಲೆಲ್ಲಾ ಮಹಾಶಕ್ತಿ ಇದ್ದುದು ಜನರಲ್ಲಿ. ಅವರಿಂದ ಜಗದ ಮಹಾ ವಿಭೂತಿಗಳೆಲ್ಲ ಜನಿಸಿರುವರು. ಚರಿತ್ರೆ ಪುನರಾವೃತ್ತಿಯಾಗಲೇಬೇಕು. ಯಾವುದಕ್ಕೂ ಅಂಜಬೇಡಿ. ಅದ್ಭುತ ಕಾರ್ಯಗಳನ್ನು ನೀವು ಸಾಧಿಸುತ್ತೀರಿ. ಅಂಜಿದೊಡನೆಯೆ ನೀವು ಕೆಲಸಕ್ಕೆ ಬಾರದವರಾಗುತ್ತೀರಿ. ಪ್ರಪಂಚದ ದುಃಖಕ್ಕೆ ಮುಖ್ಯಕಾರಣ ಅಂಜಿಕೆ. ಇದೇ ಎಲ್ಲಕ್ಕಿಂತ ದೊಡ್ಡ ಮೂಢ ನಂಬಿಕೆ. ನಿಮ್ಮ ಕಷ್ಟಕ್ಕೆಲ್ಲಾ ಕಾರಣ ಅಂಜಿಕೆ. ಈ ಕ್ಷಣ ಸ್ವರ್ಗವನ್ನು ಕೂಡ ಕೊಡುವುದು ನಿರ್ಭಯತೆ. ಆದಕಾರಣ "ಏಳಿ, ಜಾಗೃತರಾಗಿ, ಗುರಿಸೇರುವವರೆಗೂ ನಿಲ್ಲದಿರಿ."

ಭದ್ರಮಹಾಶಯರೆ ನೀವು ತೋರಿದ ಪ್ರೀತಿಗೆ ಪುನಃ ಧನ್ಯವಾದವನ್ನು ಅರ್ಪಿಸಲು ಅನುಮತಿ ಕೊಡಿ. ನಾನು ಪ್ರಪಂಚಕ್ಕೆ ಸ್ವಲ್ಪವಾದರೂ ಉಪಯೋಗವಾಗಬೇಕು. ಎಲ್ಲಕ್ಕಿಂತ ಹೆಚ್ಚಾಗಿ ನನ್ನ ದೇಶಕ್ಕೆ, ನನ್ನ ದೇಶದ ಜನರಿಗೆ ನೆರವಾಗಬೇಕು ಎಂಬುದು ನನ್ನ ಇಚ್ಛೆ, ನನ್ನ ಅಂತರಂಗ ದಲ್ಲಿರುವ ತೀವ್ರ ಆಕಾಂಕ್ಷೆ.



# ವಿಭಿನ್ನ ವೇದಾಂತ ದರ್ಶನ

## ( ಕಲ್ಕತ್ತಾ ಭಾಷಣ )

ಬಹಳ ಹಿಂದೆ ಲಿಪಿವತ್ ಇತಿಹಾಸ, ಇಲ್ಲ ಕಿಂವದಂತಿ ಎಂಬ ಕಥೆಗಳ ಮುಂದೆ ಪ್ರಕಾಶಕೂಡ ತೂರಿಹೋಗಲಾರದೊ, ಅಲ್ಲಿ ಅನಂತ ಕಾಲ ಗರ್ಭ ದಿಂದಲೂ ಒಂದು ಕಾಂತಿ ಕೋರೈಸುತ್ತಿದೆ. ಬಾಹ್ಯಪ್ರಕೃತಿಗೆ ಅನುಗುಣ ವಾಗಿ ಕೆಲವು ವೇಳೆ ಉಜ್ವಲವಾಗಿಯೂ ಕೆಲವು ವೇಳೆ ಮಂದವಾಗಿಯೂ ಆದರೆ ಎಂದಿಗೂ ನಾಶವಾಗದೆ ಸ್ಥಿರವಾಗಿ ಭರತಖಂಡವನ್ನು ಮಾತ್ರವಲ್ಲ ಇಡೀ ಭಾವನಾ ಪ್ರಪಂಚವನ್ನೇ ಮೌನವಾಗಿ, ಅಗೋಚರವಾಗಿ, ಮೃದು ವಾಗಿ, ಆದರೂ ಅತಿ ಪ್ರಬಲವಾಗಿ ವ್ಯಾಪಿಸಿದೆ. ಮುಂಜಾನೆ ಯಾರಿಗೂ ಕಾಣದೆ, ಯಾರ ಅರಿವಿಗೂ ಬಾರದ ಹಿಮಮಣಿ ಅತಿ ಸುಂದರವಾದ ಗುಲಾಬಿಯನ್ನು ಅರಳಿಸುವಂತೆ ಇದೆ ಉಪನಿಷತ್ತಿನ ಭಾವನೆ, ವೇದಾಂತ ತತ್ತ್ವದ ಪ್ರಭಾವ. ಭರತಖಂಡದಲ್ಲಿ ಎಂದು ಈ ಭಾವನೆ ವಿಕಸಿತ ವಾಯಿತೊ ಯಾರಿಗೂ ಗೊತ್ತಿಲ್ಲ. ಊಹೆ ಸಾರ್ಥಕವಾಗಲಿಲ್ಲ. ಪಾಶ್ಚಾತ್ಯ ವಿದ್ವಾಂಸರ ಊಹೆ ಪರಸ್ಪರ ವಿರೋಧವಾಗಿದೆ. ಯಾವ ನಿರ್ದಿಷ್ಟ ಕಾಲ ವನ್ನೂ ಅದಕ್ಕೆ ಆರೋಪಿಸುವುದಕ್ಕೆ ಆಗುವುದಿಲ್ಲ. ಆದರೆ ಹಿಂದೂಗಳಾದ ನಾವು ಆಧ್ಯಾತ್ಮಿಕ ದೃಷ್ಟಿಯಿಂದ ಅದಕ್ಕೆ ಒಂದು ಆದಿಯಿದೆ ಎಂದು ಒಪ್ಪಿ ಕೊಳ್ಳುವುದಿಲ್ಲ. ವೇದಾಂತ ದರ್ಶನ ಆಧ್ಯಾತ್ಮಿಕ ರಾಜ್ಯದಲ್ಲಿ ಮಾನ ವನು ಮಾಡಿದ ಪ್ರಥಮ ಆಲೋಚನೆ ಮತ್ತು ಅದೇ ಪರಾಕಾಷ್ಠೆ ಎಂತಲೂ ನಾನು ಸಂಕೋಚವಿಲ್ಲದೆ ಹೇಳುತ್ತೇನೆ. ಈ ವೇದಾಂತ ಮಹಾ ಸಮುದ್ರ ದಿಂದ ಕಾಲಕಾಲಕ್ಕೆ ಜ್ಞಾನದ ಅಲೆಗಳೆದ್ದು ಪೂರ್ವ ಪಶ್ಚಿಮ ದೇಶಗಳಿಗೆ ಹೋಗಿವೆ. ಬಹಳ ಹಿಂದಿನ ಕಾಲದಲ್ಲಿ ಪಶ್ಚಿಮ ದೇಶದ ಕಡೆ ಅಥೆನ್ಸ್, ಅಲೆಗ್ಸಾಂಡ್ರಿಯಾ, ಆಂಟಿಯೋಕ್ ಮುಂತಾದಕಡೆ ಗ್ರೀಕರಮೇಲೆ ತನ್ನ ಪ್ರಭಾವವನ್ನು ಬೀರಿತು.

ನಿಸ್ಸಂದೇಹವಾಗಿ ಸಾಂಖ್ಯ ಸಿದ್ಧಾಂತ ಪುರಾತನ ಗ್ರೀಸರಮೇಲೆ ತನ್ನ ಪ್ರಭಾವವನ್ನು ಬೀರಿತು. ಸಾಂಖ್ಯ ಮತ್ತು ಇತರ ದರ್ಶನಗಳೆಲ್ಲಾ ಉಪನಿಷತ್ ಅಥವಾ ವೇದಾಂತದ ಮೇಲೆ ಪ್ರತಿಷ್ಠಿತವಾಗಿದೆ. ಭರತ ಖಂಡದಲ್ಲೂ ಹಿಂದೆ ಇದ್ದ ಈಗಿರುವ ವಿಭಿನ್ನ ಪಂಗಡಗಳ ಗೊಂದಲ ದಲ್ಲಿಯೂ, ಅವರಿಗೆಲ್ಲಾ ಒಂದು ಪ್ರಮಾಣ, ಒಂದು ಸಾಮಾನ್ಯ ನೆಲೆ

ಉಪನಿಷತ್ತು. ನೀವು ದ್ವೈತಿಗಳೊ ವಿಶಿಷ್ಟಾದ್ವೈತಿಗಳೊ, ಅದ್ವೈತಿಗಳೊ, ಶುದ್ಧ ಅದ್ವೈತವೊ ಅಥವಾ ಮತ್ತಾವುದಾದರೂ ಅದ್ವೈತವೊ, ಅಥವಾ ಇನ್ನೂ ಯಾವುದಾದರೂ ಸಿದ್ಧಾಂತವಾಗಲಿ, ಅವೆಲ್ಲಕ್ಕೂ ಪ್ರಮಾಣದಂತೆ ನಿಮ್ಮ ಹಿಂದೆ ನಿಲ್ಲುವ ಶಾಸ್ತ್ರ ಉಪನಿಷತ್ತು. ಯಾರು ಉಪನಿಷತ್ತನ್ನು ಅನುಸರಿಸುವುದಿಲ್ಲವೋ ಅವರು ಆಸ್ತಿಕರಲ್ಲ. ಜೈನ ಮತ್ತು ಬೌದ್ಧರು ಉಪ ನಿಷತ್ತನ್ನು ಅಲ್ಲಗಳೆದುದರಿಂದಲೇ ಭರತಖಂಡದಲ್ಲಿ ಅವರಿಗೆ ಸ್ಥಳವಿಲ್ಲ. ನಮಗೆ ಗೊತ್ತಿರಲಿ ಗೊತ್ತಿಲ್ಲದೇ ಇರಲಿ ವೇದಾಂತ ಈ ವಿಭಿನ್ನ ಪಂಗಡ ಗಳನ್ನೆಲ್ಲಾ ಪ್ರವೇಶಿಸಿದೆ. ಅನಂತ ಶಾಖೋಪಶಾಖೆಗಳಿಂದ ಕೂಡಿದ ಹಿಂದೂ ಧರ್ಮದಂತಹ ಬೃಹತ್ ವಟ ವೃಕ್ಷದಲ್ಲಿ ವೇದಾಂತದ ಪ್ರಭಾವ ಹಾಸು ಹೊಕ್ಕಾಗಿದೆ. ನಮಗೆ ತಿಳಿದೊ, ತಿಳಿಯದೆಯೊ, ನಾವು ವೇದಾಂತವನ್ನು ಆಲೋಚಿಸುವೆವು, ವೇದಾಂತದಲ್ಲಿ ಜೀವಿಸುವೆವು, ವೇದಾಂತದಲ್ಲಿ ಉಸಿ ರಾಡುವೆವು, ವೇದಾಂತದಲ್ಲೆ ಸಾಯುವೆವು. ಪ್ರತಿಯೊಬ್ಬ ಹಿಂದುವೂ ಹೀಗೆ ಮಾಡುತ್ತಿರುವನು. ಭರತಖಂಡದಲ್ಲಿ ಅದರಲ್ಲೂ ಹಿಂದುಗಳಿಗೆ ವೇದಾಂತವನ್ನು ಪ್ರಚಾರ ಮಾಡುವುದು ಅನವಶ್ಯಕವಾಗಿ ಕಾಣುವುದು. ಆದರೂ ಇದೊಂದೇ ಪ್ರಚಾರಕ್ಕೆ ಯೋಗ್ಯವಾದುದು. ಈ ಯುಗಕ್ಕೆ ಇದನ್ನು ಬೋಧಿಸಬೇಕಾಗಿದೆ. ಎಲ್ಲಾ ಹಿಂದೂ ಪಂಗಡಗಳೂ ನಾನು ಹೇಳಿದಂತೆ ಉಪನಿಷತ್ತಿಗೆ ಅಧೀನವಾಗಿರಬೇಕು. ಆದರೆ ಈ ಪಂಗಡಗಳಲ್ಲಿ ಎಷ್ಟೋ ಪರಸ್ಪರ ವಿರೋಧಾಭಿಪ್ರಾಯಗಳಿವೆ. ಅನೇಕ ವೇಳೆ ಋಷಿಗಳಲ್ಲೂ ಕೂಡ ಭಿನ್ನಾಭಿಪ್ರಾಯವಿತ್ತು. "ಭಿನ್ನಮತವಿಲ್ಲದ ಮುನಿಗಳೇ ಇಲ್ಲ" ಎಂಬುದು ನಾಣ್ಣುಡಿಯಾಯಿತು. ಉಪನಿಷತ್ತು ದ್ವೈತ ವಿಶಿಷ್ಟಾ ದ್ವೈತ ಅದ್ವೈತ ಭಾವಕೊಟ್ಟರೂ ಅವುಗಳಲ್ಲಿ ಸಾಮರಸ್ಯ ಕೊಡುವ ವಿವರಣೆಯನ್ನು ತೋರುವುದು ಆವಶ್ಯಕ. ಇದನ್ನೇ ಪ್ರಪಂಚಕ್ಕೆ ತಿಳಿಯ ಪಡಿಸಬೇಕಾಗಿದೆ. ಇದು ಭರತಖಂಡಕ್ಕೆ ಬೇಕಾದಷ್ಟೇ ಹೊರಗಿನ ಪ್ರಪಂಚಕ್ಕೂ ಬೇಕಾಗಿದೆ.

ಈಶ್ವರನ ಕೃಪೆಯಿಂದ ಒಬ್ಬ ಮಹಾಪುರುಷನ ಪದತಳದಲ್ಲಿ ಕುಳಿತು ಕಲಿತು ಕೊಳ್ಳುವ ಮಹಾಸೌಭಾಗ್ಯ ನನಗೆ ಒದಗಿತ್ತು. ಅವರ ಇಡೀ ಜೀವನ ಉಪನಿಷತ್ತಿನ ಮಹಾಸಮನ್ವಯದಂತೆ ಇತ್ತು. ಉಪದೇಶಕ್ಕಿಂತ ಸಾವಿರ ಪಾಲು ಹೆಚ್ಚಾಗಿ ಅವರ ಜೀವನ ಉಪನಿಷತ್ತಿನ ಜೀವಂತ ಭಾಷ್ಯದಂತೆ ಇತ್ತು. ಉಪನಿಷತ್ತೇ ಮಾನವರೂಪನ್ನು ಧಾರಣೆಮಾಡಿದಂತೆ ಇತ್ತು.

ಬಹುಶಃ ಆ ಸಮನ್ವಯ ನನ್ನಲ್ಲಿ ಸ್ವಲ್ಪ ಇರಬಹುದು. ಅದನ್ನು ನಿಮಗೆ ವಿವರಿಸುವುದಕ್ಕೆ ಸಾಧ್ಯವಾಗುವುದೋ ಇಲ್ಲವೋ ಗೊತ್ತಿಲ್ಲ. ಆದರೆ ಇದು ನನ್ನ ಪ್ರಯತ್ನ. ವೇದಾಂತಸಂಪ್ರದಾಯ ಪರಸ್ಪರ ವಿರೋಧವಲ್ಲ. ಒಂದು ಮತ್ತೊಂದರ ಪರಿಣಾಮ, ಒಂದು ಮತ್ತೊಂದರ ಪೂರೈಕೆ. ತತ್ತ್ವ ಮಸಿ ಎಂಬ ಅದ್ವೈತ ಶಿಖರವನ್ನು ಮುಟ್ಟುವವರೆಗೆ ಒಂದು ಮತ್ತೊಂದಕ್ಕೆ ಒಯ್ಯುವ ಮೆಟ್ಟಿಲು ಎಂಬುದನ್ನು ತೋರುವುದೇ ನನ್ನ ಜೀವನದ ಗುರಿ. ಭರತಖಂಡದಲ್ಲಿ ಕರ್ಮಕಾಂಡ ಪ್ರಬಲವಾಗಿದ್ದ ಕಾಲ ಒಂದಿತ್ತು. ಅಲ್ಲಿಯೂ ಎಷ್ಟೋ ಒಳ್ಳೆಭಾವನೆಗಳು ನಿಸ್ಸಂಶಯವಾಗಿ ಇವೆ. ಈಗಲೂ ನಮ್ಮ ನಿತ್ಯದ ಪೂಜಾವಿಧಾನ ಬಹುಭಾಗ ಅದನ್ನೇ ಅನುಸರಿಸುವುದು. ಆದರೂ ವೇದಗಳ ಕರ್ಮಕಾಂಡ ಈಗ ಭರತಖಂಡದಿಂದ ಸಂಪೂರ್ಣ ಮಾಯವಾಗಿದೆ. ವೇದಗಳ ಕರ್ಮಕಾಂಡವನ್ನು ನಮ್ಮ ನಿತ್ಯ ಜೀವನ ದಲ್ಲಿ ಅನುಸರಿಸುವುದು ಬಹಳ ಕಡಿಮೆ. ಹೆಚ್ಚು ನಮ್ಮ ನಿತ್ಯಜೀವನದಲ್ಲಿ ಪೌರಾಣಿಕ ಅಥವಾ ತಂತ್ರವನ್ನು ಅನುಸರಿಸುತ್ತೇವೆ. ಕೆಲವು ವೇದಗಳ ಭಾಗವನ್ನು ಬ್ರಾಹ್ಮಣರು ಹೇಳುವಾಗಲೂ ಅದನ್ನು ಪುರಾಣ ಮತ್ತು ತಂತ್ರಕ್ಕೆ ಹೊಂದಿಸಿಕೊಂಡು ಹೇಳುವರು. ನಾವು ವೇದೋಕ್ತ ಕರ್ಮ ಕಾಂಡಿಗಳೆಂದು ಹೇಳಿ ಕೊಳ್ಳುವುದು ಸೂಕ್ತವಾಗಿ ತೋರುವುದಿಲ್ಲ. ಆದರೆ ನಾವುಗಳೆಲ್ಲಾ ವೇದಾಂತಿಗಳು ಎನ್ನುವುದು ಸತ್ಯ. ಹಿಂದೂಗಳೆಂದು ಹೇಳಿ ಕೊಳ್ಳುವವರೆಲ್ಲಾ ವೇದಾಂತಿಗಳೆಂದು ಹೇಳಿಕೊಳ್ಳಲಿ. ವೇದಾಂತದ ಹೆಸರಿನಲ್ಲಿ ದ್ವೈತ ವಿಶಿಷ್ಟಾದ್ವೈತಗಳವರೆಲ್ಲಾ ಬರುವರು.

ಭರತಖಂಡದಲ್ಲಿ ಈಗ ಇರುವ ಮುಖ್ಯ ಸಂಪ್ರದಾಯಗಳು, ದ್ವೈತ ಅದ್ವೈತ. ಈ ಸಂಪ್ರದಾಯಗಳಲ್ಲಿ ಇರುವ ಸಣ್ಣ ಸಣ್ಣ ಭಿನ್ನಾಭಿಪ್ರಾಯ ಗಳು, ಇದರ ಸಹಾಯದ ಮೇಲೆ ಅವರು ತಾವು ದ್ವೈತಿಗಳು ಅದ್ವೈತಿಗಳು ಎಂದು ಬೇರೆ ಬೇರೆ ಕರೆದುಕೊಳ್ಳುವುದು ಅದು ಅಷ್ಟು ಮುಖ್ಯವಲ್ಲ. ಅವ ರೆಲ್ಲಾ ದ್ವೈತಿಗಳು ಇಲ್ಲವೆ ಅದ್ವೈತಿಗಳು. ಈಗಿರುವ ಸಂಪ್ರದಾಯದಲ್ಲಿ ಕೆಲವು ಬಹಳ ಹಿಂದಿನದರ ರೂಪಾಂತರ. ಒಂದನ್ನು ರಾಮಾನುಜರ ಜೀವನ ಮತ್ತು ತತ್ತ್ವಕ್ಕೆ ಸೇರಿದವರೆಂದೂ, ಮತ್ತೊಬ್ಬರನ್ನು ಶಂಕರಾ ಚಾರ್ಯರ ಜೀವನ ಮತ್ತು ಉಪದೇಶಕ್ಕೆ ಸೇರಿದವರೆಂದೂ ಕರೆಯುತ್ತೇವೆ. ರಾಮಾನುಜರು ಇತ್ತೀಚಿನ ಅತಿ ಪ್ರಮುಖ ದ್ವೈತ ಸಿದ್ಧಾಂತಿಗಳು. ಉಳಿ ದವರೆಲ್ಲರೂ ಪ್ರತ್ಯಕ್ಷವಾಗಿ ಪರೋಕ್ಷವಾಗಿ ಅದನ್ನು ಅನುಸರಿಸಿರುವರು.

ಸಿದ್ಧಾಂತ ಸರಣಿಯನ್ನು, ತಮ್ಮ ಪಂಗಡ ರಚನೆಯಲ್ಲಿ ಸಣ್ಣಪುಟ್ಟ ಆಚಾರ ಗಳವರೆಗೂ ಇದನ್ನು ಅನುಸರಿಸಿರುವರು. ರಾಮಾನುಜರನ್ನು ಭರತಖಂಡತ ಇತರ ದ್ವೈತ ವೈಷ್ಣವ ಸಂಪ್ರದಾಯದವರೊಂದಿಗೆ ಹೋಲಿಸಿದರೆ ಅವರ ಸಂಸ್ಥೆ ಬೋಧನೆ ರೀತಿ ಮುಂತಾದುವುಗಳಲ್ಲಿ ಎಷ್ಟೋ ಹೋಲಿಕೆ ಇರುವು ದನ್ನು ನೋಡಿ ಆಶ್ಚರ್ಯವಾಗುವುದು. ದಕ್ಷಿಣದಲ್ಲಿ ಮಾಧವ ಮುನಿ ಎಂಬ ಮತ್ತೊಬ್ಬ ಪ್ರಚಾರಕರಿದ್ದರು. ಚೈತನ್ಯ ಮಹಾಪ್ರಭು ಇವರ ತತ್ತ್ವವನ್ನೇ ಅನುಸರಿಸಿ ವಂಗದೇಶದಲ್ಲಿ ಪ್ರಚಾರ ಮಾಡಿದರು. ದಕ್ಷಿಣದಲ್ಲಿ ಶೈವ ವಿಶಿಷ್ಟಾದ್ವೈತಿಗಳೆಂಬ ಮತ್ತೊಂದು ಸಂಪ್ರದಾಯದವರು ಇರುವರು. ಶೈವರು ದಕ್ಷಿಣದಲ್ಲಿ ಕೆಲವು ಕಡೆ ಮತ್ತು ಸಿಲೋನಿನಲ್ಲಿ ಬಿಟ್ಟು ಇತರ ಕಡೆ ಗಳಲ್ಲೆಲ್ಲಾ ಅವರು ಅದ್ವೈತಿಗಳು. ಅವರು ಕೂಡ ವಿಷ್ಣುವಿಗೆ ಬದಲು ಶಿವನನ್ನು ತರುವರು. ಜೀವ ಸಿದ್ಧಾಂತ ಹೊರತು ಉಳಿದ ಎಲ್ಲಾ ಭಾಗ ಗಳಲ್ಲಿಯೂ ಅವರು ರಾಮಾನುಜರಂತೆಯೇ. ರಾಮಾನುಜ ಸಂಪ್ರದಾಯ ದವರು ಜೀವವನ್ನು ಅಣುವೆಂದು ಹೇಳುವರು. ಶಂಕರಾಚಾರ್ಯರ ಅನು ಯಾಯಿಗಳು ಜೀವವನ್ನು ವಿಭು ಎನ್ನುವರು. ಎಷ್ಟೊ ಅದ್ವೈತಿಗಳ ಪಂಗಡ ಗಳಿವೆ. ಹಿಂದಿನ ಕಾಲದಲ್ಲಿಯೂ ಎಷ್ಟೊ ಪಂಗಡಗಳಿದ್ದವು. ಆದರೆ ಶಂಕರಾ ಚಾರ್ಯರು ಅದನ್ನು ಸಂಪೂರ್ಣ ಸ್ವೀಕರಿಸಿ ತಮ್ಮಲ್ಲಿ ಅಳವಡಿಸಿಕೊಂಡಿ ರುವರು. ಕೆಲವು ಟೀಕಾಚಾರ್ಯರು ಶಂಕರರನ್ನೇ ಟೀಕಿಸುವರು. ವಿಜ್ಞಾನ ಭಿಕ್ಷು ಅದ್ವೈತಿಯಾದರೂ ಶಂಕರಾಚಾರ್ಯರ ಮಾಯಾವಾದವನ್ನು ಖಂಡಿಸುವನು. ಮಾಯಾವಾದದಲ್ಲಿ ನಂಬದ ಎಷ್ಟೋ ಪಂಗಡಗಳಿದ್ದುವು. ಅವರು ಶಂಕರಾಚಾರ್ಯರನ್ನು ಪ್ರಚ್ಛನ್ನ ಬೌದ್ಧರೆಂದು ಟೀಕಿಸುತ್ತಿದ್ದರು. ಮಾಯಾವಾದವನ್ನು ಬೌದ್ಧರಿಂದ ತೆಗೆದುಕೊಂಡು ಅದನ್ನು ವೇದಾಂತದಲ್ಲಿ ಸೇರಿಸಿದರು ಎಂದು ಹೇಳುವರು. ಅದು ಹೇಗಾದರೂ ಇರಲಿ, ಅಂತೂ ಈಗ ಅದ್ವೈತಿಗಳೆಲ್ಲರೂ ಶಂಕರಾಚಾರ್ಯರ ಕೆಳಗೆ ಬರುವರು. ದಕ್ಷಿಣ ಮತ್ತು ಉತ್ತರ ದೇಶದಲ್ಲಿ ಶಂಕರಾಚಾರ್ಯರ ಅನುಯಾಯಿಗಳು ಪ್ರಖ್ಯಾತ ಅದ್ವೈತ ಪ್ರಚಾರಕರು. ಶಂಕರಾಚಾರ್ಯರ ಪ್ರಭಾವ, ವಂಗ ಪಂಜಾಬ್ ಕಾಶ್ಮೀರ ದೇಶಗಳಿಗೆ ಅಷ್ಟು ಹರಡಲಿಲ್ಲ. ದಕ್ಷಿಣದಲ್ಲಿ ಸ್ಮಾರ್ತರೆಲ್ಲಾ ಶಂಕರಾಚಾರ್ಯರ ಅನುಯಾಯಿಗಳು. ಉತ್ತರ ಇಂಡಿಯಾ ದೇಶದಲ್ಲೂ ಕಾಶಿಯನ್ನು ಕೇಂದ್ರ ಮಾಡಿಕೊಂಡು ಅದ್ಭುತ ಪ್ರಭಾವವನ್ನು ಬೀರುತ್ತಿರುವರು.

ಶಂಕರ ರಾಮಾನುಜರಿಬ್ಬರೂ ತಾವು ಹೊಸ ತತ್ತ್ವವನ್ನು ಜಾರಿಗೆ ತಂದವರೆಂದು ಹೇಳುವುದಿಲ್ಲ. ರಾಮಾನುಜಾಚಾರ್ಯರು ಬೋಧಾಯನ ವೃತ್ತಿಯನ್ನು ಮಾತ್ರ ಅನುಸರಿಸುತ್ತಿರುವೆ ಎಂದು ಮಾತ್ರ ಹೇಳುವರು. "ಭಗವದ್ಬೋಧಾಯನಕೃತಾಂ ವಿಸ್ತೀರ್ಣಾಂ ಬ್ರಹ್ಮಸೂತ್ರವೃತ್ತಿಂ ಪೂರ್ವಾಚಾರ್ಯಾಃ ಸಂಚಿಕ್ಷಿಪುಃ ತನ್ಮತಾನುಸಾರೇಣ ಸೂತ್ರಾಕ್ಷರಾಣಿ ವ್ಯಾಖ್ಯಾಸ್ಯನ್ತೆ" ಬೋಧಾಯನರು ಬರೆದ ವಿಸ್ತೀರ್ಣವಾದ ಬ್ರಹ್ಮ ಸೂತ್ರ ವೃತ್ತಿಯನ್ನು ಪೂರ್ವಾಚಾರ್ಯರು ಸಂಕ್ಷಿಪ್ತವಾಗಿ ಹೇಳಿದರು. ಅವರ ಅಭಿಪ್ರಾಯದಂತೆ ಸೂತ್ರವನ್ನು ವ್ಯಾಖ್ಯಾನಮಾಡಿರುವೆನು ಎಂದು ರಾಮಾನುಜಾಚಾರ್ಯರು ಶ್ರೀ ಭಾಷ್ಯದ ಪ್ರಾರಂಭದಲ್ಲಿ ವಿವರಿಸುವರು. ಅದನ್ನು ಸಂಕ್ಷಿಪ್ತಮಾಡಿ ಹೇಳಿರುವರು. ನಮ್ಮಲ್ಲಿ ಈಗ ಇರುವುದೇ ಅದು. ಬೋಧಾಯನ ವೃತ್ತಿಯನ್ನು ನೋಡುವುದಕ್ಕೆ ನನಗೂ ಅವಕಾಶ ಸಿಕ್ಕಲಿಲ್ಲ. ಸ್ವಾಮಿ ದಯಾನಂದ ಸರಸ್ವತಿ ಬೋಧಾಯನ ವೃತ್ತಿಯೊಂದಲ್ಲದೆ ಉಳಿದ ಸೂತ್ರ ಭಾಷ್ಯವನ್ನೆಲ್ಲಾ ತಿರಸ್ಕರಿಸಿರುವರು. ರಾಮಾನುಜರನ್ನು ಸಮಯ ಬಂದಾಗಲೆಲ್ಲಾ ಟೀಕಿಸಿದರೂ ಇವರು ಬೋಧಾಯನ ವೃತ್ತಿ ಯನ್ನು ತೋರಲಿಲ್ಲ. ಭರತಖಂಡದಲ್ಲೆಲ್ಲಾ ಅದನ್ನು ಹುಡುಕಿರುವೆನು. ಆದರೂ ಸಿಕ್ಕಲಿಲ್ಲ. ರಾಮಾನುಜರು ಈ ವಿಷಯವನ್ನು ಒಪ್ಪಿಕೊಳ್ಳುವರು. ಬೋಧಾಯನರ ಭಾವನೆಯನ್ನೇ, ಕೆಲವು ವೇಳೆ ಅವರ ವಾಕ್ಯವನ್ನೇ ತೆಗೆದು ಕೊಂಡು ಶ್ರೀ ಭಾಷ್ಯದಲ್ಲಿ ಸಂಕ್ಷಿಪ್ತವಾಗಿ ಹೇಳುತ್ತಿರುವೆ ಎಂದು ಒಪ್ಪಿ ಕೊಳ್ಳುವರು. ಶಂಕರಾಚಾರ್ಯರು ಕೂಡ ಅದನ್ನೇ ಮಾಡಿದರಂತೆ. ಶಂಕರಾಚಾರ್ಯರು ತಮ್ಮ ಭಾಷ್ಯದಲ್ಲಿ ತಮಗಿಂತ ಹಿಂದಿನ ಭಾಷ್ಯಕಾರರ ಹೆಸರನ್ನು ಕೆಲವು ವೇಳೆ ಹೇಳುವರು. ಅವರ ಗುರುಗಳು, ಮತ್ತು ಗುರು ಗಳ ಗುರುಗಳು ಕೂಡ ಅದೇ ಸಂಪ್ರದಾಯಕ್ಕೆ ಸೇರಿದವರು. ಕೆಲವು ವಿಷಯಗಳಲ್ಲಿ ಶಂಕರರಿಗಿಂತ ಧೈರ್ಯವಾಗಿ ಮುನ್ನುಗ್ಗಿರುವರು. ಆದ ಕಾರಣ ಶಂಕರಾಚಾರ್ಯರು ಕೂಡ ಹೊಸದಾಗಿ ಏನನ್ನೂ ಬೋಧಿಸಲಿಲ್ಲ ಎಂಬುದು ನಿಜವಾಯಿತು. ಶಂಕರಾಚಾರ್ಯರು ಕೂಡ ರಾಮಾನುಜರು ಬೋಧಾಯನರಿಂದ ತೆಗೆದುಕೊಂಡಂತೆ ಇತರರ ಭಾಷ್ಯದಿಂದ ತೆಗೆದು ಕೊಂಡರು. ಆದರೆ ಅದು ಯಾವ ಭಾಷ್ಯವೆಂದು ಈಗ ಹೇಳಲು ಸಾಧ್ಯವಿಲ್ಲ. ನೀವು ಕೇಳಿದ ನೋಡಿದ ದರ್ಶನಗಳೆಲ್ಲಾ ಉಪನಿಷತ್ತಿನ ಆಧಾರದ ಮೇಲಿದೆ. ಅವರು ಯಾವಾಗಲಾದರೂ ಶ್ರುತಿ ಎಂದರೆ ಉಪನಿಷತು

ಎಂದು ಅರ್ಥ. ಅವರು ಯಾವಾಗಲೂ ಉಪನಿಷತ್ತನ್ನೆ ಪ್ರಮಾಣಕ್ಕೆ ತರುವರು. ಉಪನಿಷತ್ತನ್ನು ಅನುಸರಿಸಿ ಹಲವು ತತ್ತ್ವಗಳು ಬಂದವು. ಆದರೆ ವ್ಯಾಸರ ಪ್ರಭಾವದಷ್ಟು ಮತ್ತಾರಿಗೂ ಸಾಧ್ಯವಾಗಲಿಲ್ಲ. ವ್ಯಾಸರ ತತ್ತ್ವ ಕೂಡ ಅದಕ್ಕೆ ಹಿಂದೆ ಇದ್ದ ಸಾಂಖ್ಯಸಿದ್ಧಾಂತದ ವಿಕಾಸಮಾತ್ರವಾಗಿದೆ. ಪ್ರಪಂಚದ ತತ್ತ್ವ ಮತ್ತು ಸಂಪ್ರದಾಯಗಳೆಲ್ಲಾ ಕಪಿಲನಿಗೆ ಚಿರಋಣಿ. ಮಾನಸಿಕ ಶಾಸ್ತ್ರ ಮತ್ತು ದರ್ಶನ ಶಾಸ್ತ್ರದಲ್ಲಿ ಅವನು ಭರತಖಂಡದ ಅತಿಶ್ರೇಷ್ಠ ವ್ಯಕ್ತಿ. ಪ್ರಪಂಚದಲ್ಲೆಲ್ಲಾ ನಾವು ಕಪಿಲನ ಪ್ರಭಾವವನ್ನು ನೋಡಬಹುದು. ಎಲ್ಲಿ ಒಂದು ಶಾಸ್ತ್ರೀಯ ಸಿದ್ಧಾಂತ ವಿದೆಯೋ ಅಲ್ಲೆಲ್ಲಾ ವ್ಯಾಸರ ಪ್ರಭಾವವನ್ನು ನೋಡಬಹುದು. ಸಾವಿರಾರು ವರ್ಷಗಳ ಹಿಂದೆ ಹೋದರೂ ತೇಜಸ್ವಿ, ಗೌರವಯುಕ್ತ ಅಪೂರ್ವ ಪ್ರತಿಭಾಶಾಲಿ ಕಪಿಲ ಕಂಗೊಳಿಸುತ್ತಿರುವನು. ಇಂಡಿಯಾ ದೇಶದಲ್ಲಿ ಎಲ್ಲಾ ವಿಭಿನ್ನ ಪಂಗಡಗಳೂ ಮಾನಸಿಕ ಶಾಸ್ತ್ರ ಮತ್ತು ತತ್ತ್ವವನ್ನು ಎಲ್ಲೊ ಸ್ವಲ್ಪವಿನಃ ಮತ್ತೆಲ್ಲವನ್ನೂ ಒಪ್ಪಿಕೊಳ್ಳುವರು. ನಮ್ಮ ದೇಶದಲ್ಲೆ ನ್ಯಾಯ ಸಿದ್ಧಾಂತ ದವರು ಭರತಖಂಡದ ತತ್ತ್ವದ ಶಾಸ್ತ್ರದ ಮೇಲೆ ಅಷ್ಟು ಪ್ರಭಾವವನ್ನು ಬೀರಲಾಗಲಿಲ್ಲ. ಅವರು, ಸಾಮಾನ್ಯ ವಿಶೇಷ ಜಾತಿ ದ್ರವ್ಯಗುಣ ಮುಂತಾದ ಪಾರಿಭಾಷಿಕ ಶಬ್ದಗಳಲ್ಲೆ ನಿರತರಾಗಿದ್ದರು. ಅವನ್ನು ಓದುವುದಕ್ಕೆ ಒಂದು ಜೀವನವೇ ಸಾಲದು. ಅವರು ಕೇವಲ ತರ್ಕದಲ್ಲೇ ನಿರತರಾಗಿದ್ದು, ತತ್ತ್ವವನ್ನು ವೇದಾಂತಿಗಳಿಗೆ ಬಿಟ್ಟರು. ಭರತಖಂಡದ ಇತ್ತೀಚಿನ ತತ್ತ್ವ ಸಂಪ್ರದಾಯದವರೆಲ್ಲಾ ವಂಗ ನೈಯಾಯಿಕರ ಪಾರಿಭಾಷಿಕ ಶಬ್ದಗಳನ್ನು ಬಳಸಿಕೊಂಡಿರುವರು. ಜಗದೀಶ, ಗದಾಧರ, ಶಿರೋಮಣಿ ಮುಂತಾದವರು ಮಲಬಾರಿನಲ್ಲಿ ಪ್ರಖ್ಯಾತರಾಗಿದ್ದಷ್ಟೇ ನದಿಯಾದಲ್ಲಿ ಪ್ರಖ್ಯಾತರಾಗಿದ್ದರು. ವ್ಯಾಸಪ್ರಣೀತ ವೇದಾಂತ ದರ್ಶನ ಭಾರತದಲ್ಲಿ ದೃಢ ಪ್ರತಿಷ್ಠಿತವಾಗಿದೆ. ವೇದಾಂತದ ಬ್ರಹ್ಮವನ್ನು ಜನರಿಗೆ ಬೋಧಿಸುವುದೇ ಅದರ ಉದ್ದೇಶವಾಗಿತ್ತು. ಅದನ್ನು ಇದು ಸಾಧಿಸಿದೆ. ಯುಕ್ತಿ ಸಂಪೂರ್ಣವಾಗಿ ಶ್ರುತಿಗೆ ಅಧೀನ. ವ್ಯಾಸರು ಯುಕ್ತಿಯ ವಿಚಾರಕ್ಕೆ ಕೈ ಹಾಕಲಿಲ್ಲ ಎಂದು ಶಂಕರಾಚಾರ್ಯರು ಒಂದು ಕಡೆ ಹೇಳುವರು. ಅವರು ಸೂತ್ರವನ್ನು ಬರೆದದ್ದು ಎಲ್ಲವನ್ನೂ ಸಂಗ್ರಹಿಸುವುದಕ್ಕಾಗಿ. ವೇದಾಂತ ಶಾಸ್ತ್ರಪುಷ್ಪಗಳನ್ನೆಲ್ಲಾ ಒಂದು ಸೂತ್ರದಲ್ಲಿ ಬಂಧಿಸುವುದೇ ಅವರ ಗುರಿಯಾಗಿತ್ತು. ಎಲ್ಲಿಯವರೆಗೂ ಅವರ ಸೂತ್ರಗಳು ಉಪನಿಷತ್ತಿಗೆ ಅಧೀನ

ವಾಗಿವೆಯೋ ಅಲ್ಲಿಯವರೆಗೆ ಅದಕ್ಕೆ ಮಾನ್ಯತೆ, ಇಲ್ಲದೆ ಇದ್ದರೆ ಇಲ್ಲ.

ಭರತಖಂಡದ ಸಂಪ್ರದಾಯಗಳೆಲ್ಲಾ ವ್ಯಾಸ ಸೂತ್ರವನ್ನು ಅತಿ ಶ್ರೇಷ್ಠ ಪ್ರಮಾಣವೆಂದು ಒಪ್ಪಿಕೊಳ್ಳುವುವು. ಪ್ರತಿಯೊಂದು ಹೊಸ ಸಂಪ್ರದಾಯದವರು ಕೂಡ ತಮ್ಮ ಭಾವನೆಗೆ ತಕ್ಕಂತೆ ಹೊಸ ಭಾಷ್ಯ ವನ್ನು ಬರೆಯುವರು. ಕೆಲವು ವೇಳೆ ಈ ಭಾಷ್ಯಕಾರರ ಮತಗಳಿಗೆ ತುಂಬಾ ವ್ಯತ್ಯಾಸವಿರುವುದು. ಕೆಲವು ವೇಳೆ ಅವರು ಮೂಲ ಸೂತ್ರ ಗಳ ಅರ್ಥ ವಿಕೃತಿ ಮಾಡುವುದನ್ನು ನೋಡಿ ಜಿಗುಪ್ಸೆಯಾಗುವುದು. ವ್ಯಾಸಸೂತ್ರಕ್ಕೆ ಅತಿ ಶ್ರೇಷ್ಠ ಪ್ರಮಾಣಗ್ರಂಥವೆಂಬ ಸ್ಥಾನ ದೊರೆತಿದೆ. ವ್ಯಾಸಸೂತ್ರದ ಮೇಲೆ ಬೇರೊಂದು ಭಾಷ್ಯವನ್ನು ಬರೆದಲ್ಲದೆ ಯಾರೂ ಹೊಸ ಸಂಪ್ರದಾಯವನ್ನು ಜಾರಿಗೆ ತರಲಾರರು.

ವ್ಯಾಸ ಸೂತ್ರದ ನಂತರವೇ ಪ್ರಮಾಣ ವಿಶ್ವವಿಖ್ಯಾತ ಗೀತಾ. ಶಂಕರಾಚಾರ್ಯರು ಗೀತೆಯನ್ನು ಪ್ರಚಾರಮಾಡಿದರು. ಅವರ ಕೀರ್ತಿ ಇದರ ಮೇಲೆ ನಿಂತಿದೆ. ಗೀತೆಯನ್ನು ಪ್ರಚಾರ ಮಾಡಿದರು. ಅದರ ಮೇಲೆ ಅತಿ ಸುಂದರವಾದ ವ್ಯಾಖ್ಯಾನವನ್ನು ಬರೆದರು. ಈ ಮಹಾ ಪುರುಷರು ತಮ್ಮ ಮಹಾ ಜೀವನದಲ್ಲಿ ಮಾಡಿದ ಅದ್ಭುತ ಕಾರ್ಯಗಳಲ್ಲಿ ಒಂದು ಇದು. ಸನಾತನ ಸಿದ್ಧಾಂತ ಸಂಸ್ಥಾಪಕರೆಲ್ಲಾ ಇವರನ್ನು ಅನುಸರಿಸುವರು. ಅವರಲ್ಲಿ ಪ್ರತಿಯೊಬ್ಬರೂ ಗೀತೆಯ ಮೇಲೆ ಒಂದೊಂದು ಭಾಷ್ಯವನ್ನು ಬರೆದಿರುವರು.

ಹಲವು ಉಪನಿಷತ್ತುಗಳು ಇವೆ. ನೂರೆಂಟು ಎಂದು ಹೇಳುವರು. ಅದರಲ್ಲಿ ಕೆಲವು ಬಹಳ ಇತ್ತೀಚಿನದು. ಅಲ್ಲನನ್ನು ಸ್ತೋತ್ರಮಾಡಿರುವ ಅಲ್ಲೋಪನಿಷತ್ತು ಇತ್ತೀಚಿನದು. ಅದರಲ್ಲಿ ಮಹಮ್ಮದನನ್ನು ರಜಸ್ಸುಲ್ಲಾ ನನ್ನಾಗಿ ಮಾಡಿರುವರು. ಅಕ್ಬರನ ಕಾಲದಲ್ಲಿ ಹಿಂದೂ ಮಹಮ್ಮದೀಯರ ಸಖ್ಯ ಬೆಳೆಸುವುದಕ್ಕಾಗಿ ಇದನ್ನು ರಚಿಸಿದರು ಎನ್ನುವರು. ಸಂಹಿತೆಯಲ್ಲಿ ಅಲ್ಲಾ, ಇಲ್ಲಾ ಎಂಬ ಪದ ತೆಗೆದುಕೊಂಡು ಅದರ ಮೇಲೆ ಒಂದು ಉಪ ನಿಷತ್ತನ್ನು ರಚಿಸಿದರು. ಹಾಗೆಯೇ ಅಲ್ಲೋಪನಿಷತ್ತಿನಲ್ಲಿ ಮಹಮ್ಮದ ರಜಸುಲ್ಲಾ. ಅದಕ್ಕೆ ಏನಾದರೂ ಅರ್ಥವಾಗಲಿ ಚಿಂತೆಯಿಲ್ಲ. ಇಂತಹ ಹಲವು ಸಾಂಪ್ರದಾಯಿಕ ಉಪನಿಷತ್ತುಗಳಿವೆ. ಅವುಗಳೆಲ್ಲಾ ಕೇವಲ ಇತ್ತೀಚಿನದೆಂದು ತೋರುವುದು. ಇದನ್ನು ಬರೆಯುವುದೂ ಸುಲಭ. ಸಂಹಿತೆ ಭಾಷೆ ಅತಿ ಪ್ರಾಚೀನವಾದುದು. ಅಲ್ಲಿ ವ್ಯಾಕರಣವೇ ಇಲ್ಲ.

ಕೆಲವು ವರ್ಷಗಳ ಹಿಂದೆ ವೈದಿಕ ವ್ಯಾಕರಣವನ್ನು ಓದಬೇಕೆಂದು ಆಸೆ ಯಾಯಿತು. ಬಹಳ ಉತ್ಸಾಹದಿಂದ ಪಾಣಿನಿ ಮತ್ತು ಮಹಾ ಭಾಷ್ಯ ವನ್ನು ಓದಲು ಪ್ರಯತ್ನಿಸಿದೆ. ಅದರಲ್ಲಿ ಬಹಳ ಆಶ್ಚರ್ಯವಾದುದೆ ಸಾಧಾ ರಣ ನಿಯಮಕ್ಕೆ ವಿರೋಧವಾದುದು. ಒಂದು ನಿಯಮವನ್ನು ಮಾಡು ವರು. ಅನಂತರ ಒಂದು ವಿನಾಯತಿ ತರುವರು. ಈ ನಿಯಮ ಇದಕ್ಕೆ ಅನ್ವಯಿಸುವುದಿಲ್ಲ ಎನ್ನುವರು. ಯಾರಿಗಾದರೂ ಏನನ್ನಾದರೂ ಬರೆಯು ವುದಕ್ಕೆ ಎಷ್ಟೊಂದು ಸ್ವಾತಂತ್ರ್ಯವಿದೆ ಎಂಬುದನ್ನು ನೋಡಿ! ಯಾಸ್ಕನ ನಿರುಕ್ತ ಒಂದೇ ರಕ್ಷಣೆ. ಇದರಲ್ಲಿ ಹಲವು ಸಮಾನಾರ್ಥಕ ಪದಗಳಿವೆ. ಹೀಗಿದ್ದರೆ ನಿಮಗೆ ಇಚ್ಛೆ ಬಂದಷ್ಟು ಉಪನಿಷತ್ತನ್ನು ಬರೆಯುವುದು ಎಷ್ಟು ಸುಲಭ! ಸ್ವಲ್ಪ ಸಂಸ್ಕೃತ ಭಾಷಾ ಪರಿಚಯ, ಹಿಂದಿನ ಸಂಸ್ಕೃತ ಪದ ಗಳಂತೆ ಕಾಣುವ ಪದಗಳನ್ನು ಸೃಷ್ಟಿಸಿದರೆ ಸಾಕು. ವ್ಯಾಕರಣದ ಅಂಜಿ ಕೆಯೇ ಇಲ್ಲ. ಅನಂತರ ರಜಸುಲ್ಲಾನೋ ಯಾವನಾದರೂ ಒಬ್ಬ ಸುಲ್ಲಾ ನನ್ನು ತಂದರೂ ಸಾಕು. ಹೀಗೆ ಹಲವು ಉಪನಿಷತ್ತುಗಳನ್ನು ತಯಾರು ಮಾಡಿರುವರು. ಈಗಲೂ ಕೂಡ ತಯಾರು ಮಾಡುತ್ತಾ ಇರುವರು ಎಂದು ಕೇಳಿದೆ. ಪ್ರತಿಯೊಂದು ಸಂಪ್ರದಾಯದವರೂ ಇಂಡಿಯಾ ದೇಶದ ಕೆಲವು ಕಡೆ ಇಂತಹ ಉಪನಿಷತ್ತನ್ನು ಸೃಷ್ಟಿಸಲು ನಿಸ್ಸಂದೇಹವಾಗಿ ಪ್ರಯತ್ನ ಪಡುತ್ತಿರಬಹುದು. ಆದರೆ ಉಪನಿಷತ್ತಿನಲ್ಲಿ ಕೆಲವು ಅತಿಪ್ರಾಚೀನ, ಪರಿ ಶುದ್ಧವಾದುವೆಂದು ನಿರ್ವಿವಾದವಾಗಿ ಹೇಳಬಹುದು. ಇವುಗಳ ಮೇಲೆ ಪ್ರಸಿದ್ಧ ಭಾಷ್ಯಕಾರರಾದ ಶಂಕರಾಚಾರ್ಯರು ಅನಂತರ ರಾಮಾನು ಜಾಚಾರ್ಯರು ಭಾಷ್ಯ ಬರೆದಿರುವರು.

ಉಪನಿಷತ್ತಿನ ಒಂದೆರಡು ಭಾವನೆಯನ್ನು ನಿಮ್ಮ ಗಮನಕ್ಕೆ ತರ ಬೇಕೆಂದು ಇರುವೆನು. ಇವು ಒಂದು ಜ್ಞಾನ ಸಾಗರ. ನನ್ನಂತಹ ಅಪೂರ್ಣ ಅವುಗಳಮೇಲೆ ಮಾತನಾಡಬೇಕಾದರೂ ಹಲವು ವರ್ಷಗಳು ಹಿಡಿಯುವುದು. ಒಂದು ಉಪನ್ಯಾಸದಿಂದ ಸಾಧ್ಯವಿಲ್ಲ. ಒಂದೆರಡು ಭಾವನೆಯನ್ನು ಮಾತ್ರ ನಿಮ್ಮ ಗಮನಕ್ಕೆ ತರುವೆನು. ಮೊದಲನೆಯದಾಗಿ ಅವು ಪ್ರಪಂಚದಲ್ಲಿ ಶ್ರೇಷ್ಠ ಕಾವ್ಯಗಳು. ವೇದಗಳಲ್ಲಿ ಸಂಹಿತೆಯ ಭಾಗ ವನ್ನು ಓದುತ್ತಿದ್ದರೆ ಮಧ್ಯೆ ಮಧ್ಯೆ ಅತಿ ಸುಂದರವಾಗಿರುವ ಭಾಗ ದೊರಕುವುದು. ಅದರಲ್ಲಿ ಪ್ರಳಯದ ಅಂಧಕಾರವನ್ನು ವಿವರಿಸುವಾಗ "ತಮ ಆಸೀತ್ ತಮಸಾ ಗೂಢಮಗ್ರೆ" ತಮಸ್ಸು ತಮಸ್ಸಿನಲ್ಲಿ ಐಕ್ಯ

ವಾಗಿತ್ತು. ಇದನ್ನು ಓದುವಾಗ ಕವಿತ್ವದ ಅಪೂರ್ವ ಗಾಂಭೀರ್ಯ ವ್ಯಕ್ತ ವಾಗುವುದು. ಇದನ್ನು ಗಮನಿಸಿ. ಭರತಖಂಡದಲ್ಲಿ ಮತ್ತು ಹೊರಗೆ ಗಾಂಭೀರ್ಯದ ಭಾವವನ್ನು ಚಿತ್ರಿಸಲು ಪ್ರಯತ್ನಪಟ್ಟಿರುವರು. ಆದರೆ ಹೊರಗಿನವರು ಇದನ್ನು ವಿವರಿಸುವುದಕ್ಕೆ ಕೇವಲ ಜಡಪ್ರಕೃತಿಯ ಅನಂತ ಭಾವವರ್ಣನೆಗೆ ಪ್ರಯತ್ನಪಟ್ಟಿರುವರು. ಕೇವಲ ಅನಂತ ಬಹಿಃಪ್ರಕೃತಿ, ಅನಂತ ಜಡ, ಅನಂತ ದೇಶದ ವರ್ಣನೆ ಮೂಲಕ ಪ್ರಯತ್ನಪಡುವರು. ಮಿಲ್ಟನ್, ಡ್ಯಾಂಟಿ ಅಥವಾ ಈಚಿನ ಅಥವಾ ಪುರಾತನ ಪ್ರಸಿದ್ಧ ಕವಿಗಳು ಅನಂತವನ್ನು ವಿವರಿಸಬೇಕಾದರೆ ಹೊರಗೆ ಹೋಗಿ ಬಾಹ್ಯ ಪ್ರಕೃತಿಯ ಮೂಲಕ ಅನಂತದ ಭಾವನೆಯನ್ನು ಕೊಡಲು ಯತ್ನಿಸುವರು. ಇಲ್ಲಿಯೂ ಆ ಪ್ರಯತ್ನವನ್ನು ಮಾಡಿರುವರು. ಸಂಹಿತೆಯಲ್ಲಿ ಅನಂತಾಕಾಶವನ್ನು ಅತಿ ಸುಂದರವಾಗಿ ಚಿತ್ರಿಸಿರುವರು. ಆದರೆ ಹೀಗೆ ಮತ್ತೆಲ್ಲಿಯೂ ಮಾಡಿಲ್ಲ. "ತಮ ಆಸೀತ್ ತಮಸಾ ಗೂಢಂ" ಎಂಬ ಒಂದು ವರ್ಣನೆ ನೋಡಿ. ನಮ್ಮ ಕಾಳಿದಾಸನ ವರ್ಣನೆಯನ್ನೇ ತೆಗೆದುಕೊಳ್ಳಿ. (ಸೂಜಿಯಿಂದ ಭೇದಿಸುವಷ್ಟು ಘನೀ ಭೂತವಾದ ಕತ್ತಲೆ) ಸೂಚೀಭೇದ್ಯ ಅಂಧಕಾರ. ಮಿಲ್ಟನ್ "ಬೆಳಕಿಲ್ಲ ದೃಶ್ಯಮಾನ ಅಂಧಕಾರ"— ಆದರೆ ಉಪನಿಷತ್ತಿಗೆ ಬಂದರೆ, "ಅಂಧಕಾರ ಅಂಧಕಾರವನ್ನು ವ್ಯಾಪಿಸಿತ್ತು, ಅಂಧಕಾರ ಅಂಧ ಕಾರದಲ್ಲಿ ಹೊಕ್ಕಿತ್ತು" ಎಂದಿದೆ. ಉಷ್ಣವಲಯದಲ್ಲಿ ವಾಸಿಸುವ ವರಿಗೆ ಇದು ಚೆನ್ನಾಗಿ ವೇದ್ಯವಾಗುವುದು. ವರ್ಷಾಕಾಲದ ಮಳೆ ತಕ್ಷಣ ಬೀಳುವಾಗ ಕ್ಷಣದಲ್ಲಿ ಆಕಾಶವೆಲ್ಲಾ ಕಪ್ಪು ಮೋಡಗಳಿಂದ ಆವೃತವಾಗುವುದು. ಮತ್ತೂ ಹೆಚ್ಚು ಕಪ್ಪು ಮುಗಿಲುಗಳು ಅವು ಗಳಮೇಲೆ ಕವಿಯುವುವು. ಕಾವ್ಯ ಹೀಗೆ ಮುಂದುವರಿಯು ವುದು. ಆದರೆ ಸಂಹಿತೆಯಲ್ಲಿ ಇದೆಲ್ಲಾ ಬಾಹ್ಯವರ್ಣನೆ. ಎಲ್ಲಾ ಕಡೆ ಯಂತೆ ಇಲ್ಲಿಯೂ ಜೀವನದ ರಹಸ್ಯವನ್ನು ಅರಿಯುವುದಕ್ಕೆ ಬಾಹ್ಯದ ಮೂಲಕ ಪ್ರಯತ್ನಿಸುವರು. ಹೀಗೆ ಪ್ರಾಚೀನ ಗ್ರೀಸ್ ಮತ್ತು ಆಧುನಿಕ ಯೂರೋಪ್ ಜೀವನ ಮತ್ತು ಜಗತ್ಕಾರಣಸಂಬಂಧ ಪರಮಾರ್ಥ ತತ್ತ್ವ ವನ್ನು ಬಾಹ್ಯಪ್ರಕೃತಿಯಲ್ಲಿ ಹುಡುಕುವರು. ಅದರಂತೆಯೇ ನಮ್ಮ ಪೂರ್ವಿಕರೂ ಪ್ರಯತ್ನಪಟ್ಟರು. ಐರೋಪ್ಯರು ನಿರಾಶರಾದರು. ಪಾಶ್ಚಾ ತ್ಯರು ಅಲ್ಲಿಂದ ಮುಂದೆ ಹೋಗಲಿಲ್ಲ. ಬಾಹ್ಯಪ್ರಕೃತಿಯಲ್ಲಿ ಜೀವನ ಮರಣಗಳ ರಹಸ್ಯ ಅವರಿಗೆ ಗೊತ್ತಾಗಲಿಲ್ಲ. ಅವರಲ್ಲೇ ದಾರಿತಪ್ಪಿ

ನಿಂತರು. ನಮ್ಮ ಪೂರ್ವಿಕರಿಗೂ ಅಸಾಧ್ಯವೆಂದು ಗೊತ್ತಾಯಿತು. ಇಂದ್ರಿಯಗಳಿಗೆ ಈ ವಿಷಯಗಳನ್ನು ತಿಳಿದುಕೊಳ್ಳುವುದು ಅಸಾಧ್ಯವೆಂದು ಧೈರ್ಯವಾಗಿ ಒಪ್ಪಿಕೊಂಡರು. ಎಲ್ಲಿಯೂ ಉತ್ತರ ಉಪನಿಷತ್ತು ವಿವರಿಸುವುದಕ್ಕಿಂತ ಸುಂದರವಾಗಿಲ್ಲ. "ಯತೋ ವಾಚೊ ನಿವರ್ತಂತೆ ಅಪ್ರಾಪ್ಯ ಮನಸಾ ಸಹ" ಎಲ್ಲಿ ಮಾತು ಮನಸ್ಸು ಹಿಂತಿರುಗುವುದೋ, "ನ ತತ್ರ ಚಕ್ಷುರ್ಗಚ್ಛತಿ ನ ವಾಕ್ ಗಚ್ಛತಿ" ಅಲ್ಲಿಗೆ ಕಣ್ಣು ಹೋಗಲಾರದು ಮಾತು ಹೋಗಲಾರದು. ಇಂದ್ರಿಯಗಳಿಗೆ ಅದು ಅಸಾಧ್ಯ ಎಂದು ವಿವರಿಸುವ ಹಲವು ವಾಕ್ಯಗಳಿವೆ. ಆದರೆ ಅವರು ಅಲ್ಲೇ ನಿಲ್ಲಲಿಲ್ಲ. ಮನುಷ್ಯನ ಅಂತರಂಗದ ಕಡೆ ತಿರುಗಿದರು. ತಮ್ಮ ಅಂತರಾಳದಿಂದ ಅದಕ್ಕೆ ಉತ್ತರವನ್ನು ಕಂಡು ಹಿಡಿಯಲು ಯತ್ನಿಸಿದರು. ಅಂತರ್ಮುಖಿಗಳಾದರು. ಬಾಹ್ಯ ಪ್ರಕೃತಿಯಲ್ಲಿ ಏನೂ ದೊರಕಲಿಲ್ಲ, ದೊರಕುವ ಸಂಭವವೂ ಇಲ್ಲ, ಯಾವ ಉತ್ತರವೂ ಇಲ್ಲ, ಅದಕಾರಣವೇ ಪ್ರಯೋಜನವಿಲ್ಲವೆಂದು ಅದನ್ನು ತ್ಯಜಿಸಿದರು. ಜಡ ಅಚೇತನಪ್ರಕೃತಿ ನಮಗೆ ಸತ್ಯವನ್ನು ಕೊಡಲಾರದು. ಜ್ಯೋತಿರ್ಮಯ ಜೀವಾತ್ಮನ ಕಡೆ ತಿರುಗಿದರು. ಅಲ್ಲಿ ಉತ್ತರ ಸಿಕ್ಕಿತು.

ತಮೇವೈಕಂ ಜಾನಥ ಆತ್ಮಾನಂ ಅನ್ಯಾ ವಾಚೋ ವಿಮುಂಚಥ (ಕೇನೋಪ ನಿಷತ್) ಈ ಆತ್ಮನನ್ನು ಮಾತ್ರ ತಿಳಿದು ಉಳಿದುದನ್ನೆಲ್ಲಾ ತ್ಯಜಿಸಿ.

ಆತ್ಮನಲ್ಲಿ ಎಲ್ಲಾ ಸಮಸ್ಯೆಗೂ ಸಮಾಧಾನ ದೊರಕಿತು. ಪರಮಾತ್ಮ, ದೇವರು, ವಿಶ್ವೇಶ್ವರ ಎಲ್ಲ ಅಲ್ಲಿ ದೊರೆತನು. ಜೀವಾತ್ಮನಿಗೂ ಪರಮಾತ್ಮನಿಗೂ ಇರುವ ಸಂಬಂಧ, ಮಾನವ ಕರ್ತವ್ಯ, ಅವನಿಗೂ ಇತರ ಮಾನವರಿಗೂ ಇರುವ ಸಂಬಂಧ ಎಲ್ಲವನ್ನೂ ಅರಿತನು. ಆತ್ಮತತ್ತ್ವದ ವರ್ಣನೆಯಲ್ಲಿ ಪ್ರಪಂಚದ ಅತಿ ಶ್ರೇಷ್ಠ ಕಾವ್ಯವಿದೆ. ಜಡ ಭಾಷೆಯ ಮೂಲಕ ಆತ್ಮನನ್ನು ವಿವರಿಸುವ ಯತ್ನವಿನ್ನು ಇಲ್ಲ. ಅವಕ್ಕೇ ಅಸ್ತಿ ಭಾಷೆಯನ್ನೆಲ್ಲಾ ತೊರೆದಿರುವರು. ಅನಂತತೆ ಭಾವವನ್ನು ಮನಸ್ಸಿಗೆ ತರುವುದಕ್ಕೆ ಬಾಹ್ಯವರ್ಣನೆಯ ಸಂಬಂಧವೇ ಇಲ್ಲ. ಬಾಹ್ಯ ಜಡ ಅಚೇತನ ಆಕಾಶದಲ್ಲಿರುವ ಇಂದ್ರಿಯ ಗ್ರಾಹ್ಯ ಅನಂತ ಇನ್ನು ಮೇಲೆ ಇಲ್ಲ. ಅದರ ಬದಲು ಇಂತಹ ಸುಂದರ ಭಾವನೆಗಳು ಬರುವುವು.

ನ ತತ್ರ ಸೂರ್ಯೋಭಾತಿ ನ ಚಂದ್ರತಾರಕಂ ನೇಮಾ ವಿದ್ಯು
ತೋಭಾಂತಿ ಕುತೋಽಯಮಗ್ನಿಃ।

ತಮೇವ ಭಾನ್ತಮನುಭಾತಿ ಸರ್ವಂ ತಸ್ಯ ಭಾಸಾ ಸರ್ವಮಿದಂ
ವಿಭಾತಿ ॥

"ಅಲ್ಲಿ ಸೂರ್ಯ ಬೆಳಗಲಾರ, ಚಂದ್ರ ಬೆಳಗಲಾರ, ತಾರೆಗಳು ಬೆಳಗಲಾರವು. ಅಲ್ಲಿ ಮಿಂಚು ಬೆಳಗಲಾರದು. ಇನ್ನು ಅಗ್ನಿಯು ಪಾಡೇನು!" ಪೃಥ್ವಿಯಲ್ಲಿ ಯಾವ ಕಾವ್ಯ ಇದಕ್ಕಿಂತ ಸುಂದರವಾಗಿರಬಲ್ಲದು. ಇಂತಹ ಕಾವ್ಯ ಪ್ರಪಂಚದಲ್ಲಿ ಮತ್ತೆಲ್ಲಿಯೂ ದೊರಕದು. ಅಪೂರ್ವ ಕಠೋಪನಿಷತ್ತನ್ನು ತೆಗೆದುಕೊಳ್ಳಿ. ಕಾವ್ಯರಚನೆ ಚಮತ್ಕಾರ ಎಷ್ಟು ಸುಂದರವಾಗಿದೆ ನೋಡಿ. ಎಷ್ಟು ಮನೋಹರ ರೀತಿಯಲ್ಲಿ ಕಾವ್ಯವನ್ನು ಆರಂಭ ಮಾಡಿರುವರು ನೋಡಿ. ಆ ಸಣ್ಣ ಬಾಲಕ ನಚಿಕೇತನ ಹೃದಯದಲ್ಲಿ ಶ್ರದ್ಧೆ ಬಂದು ಯಮದರ್ಶನಕ್ಕೆ ಹೋಗುವನು. ಸ್ವಯಂ ಯಮನೇ ಅತಿ ಕುಶಲಿಯಾದ ಗುರು, ಜನನ ಮರಣದ ರಹಸ್ಯವನ್ನು ವಿವರಿಸುವನು. ಆ ಹುಡುಗನ ಅನ್ವೇಷಣೆ ಏನು? ಮೃತ್ಯು ರಹಸ್ಯ ಅರಿಯುವುದು!

ನೀವು ಉಪನಿಷತ್ತಿನ ಬೋಧನೆಯಲ್ಲಿ ಗಮನದಲ್ಲಿಡಬೇಕಾದ ಎರಡನೆ ಅಂಶವೇ ಅದರ ಅಪೌರುಷೇಯತ್ವ. ಅಲ್ಲಿ ಹಲವು ಹೆಸರು, ಹಲವು ವಕ್ತ್ರಗಳು, ಆಚಾರ್ಯರು ಉಪನಿಷತ್ತಿನಲ್ಲಿ ಬಂದರೂ ಯಾರೂ ಉಪನಿಷತ್ತಿಗೆ ಪ್ರಮಾಣ ಪುರುಷರಲ್ಲ, ಯಾವ ಒಂದು ಶ್ಲೋಕಕ್ಕೂ ಅವರ ಜೀವನದ ಆಧಾರ ಬೇಕಿಲ್ಲ. ಹಿನ್ನೆಲೆಯಲ್ಲಿ ಗೋಚರವಾಗದೆ ಭಾವನೆಗೆ ನಿಲುಕದೆ ಸಂಚರಿಸುತ್ತಿರುವ ಛಾಯಾ ಮೂರ್ತಿಗಳಂತೆ ಇರುವರು. ಉಪನಿಷತ್ತಿನ ಅಪೂರ್ವಮಹಿಮೆ, ಜ್ಯೋತಿರ್ಮಯ ತೇಜೋಮಯ ಮಂತ್ರದಲ್ಲಿರುವ ಶಕ್ತಿಯಲ್ಲಿದೆ. ವ್ಯಕ್ತಿ ವಿಶೇಷದ ಮೇಲೆ ಇಲ್ಲ. ಇಪ್ಪತ್ತು ಯಾಜ್ಞವಲ್ಕ್ಯರು ಹುಟ್ಟಿ ಬಾಳಿ ಅಳಿದರೂ ಚಿಂತೆಯಿಲ್ಲ. ಗ್ರಂಥ ಅಲ್ಲಿದೆ. ಆದರೂ ಇದು ಯಾವ ವ್ಯಕ್ತಿಗೂ ವಿರೋಧವಾಗಿಲ್ಲ. ಪ್ರಪಂಚದಲ್ಲಿ ಇದುವರೆಗೆ ಹುಟ್ಟಿದ ಮತ್ತು ಮುಂದೆ ಹುಟ್ಟಲಿರುವ ವ್ಯಕ್ತಿಗಳನ್ನೆಲ್ಲಾ ಸ್ವೀಕರಿಸುವಷ್ಟು ವಿಶಾಲವಾಗಿದೆ. ವ್ಯಕ್ತಿ ಅವತಾರ ಋಷಿಗಳ ಆರಾಧನೆಗೆ ವಿರೋಧವಾಗಿ ಇದು ಏನನ್ನೂ ಹೇಳುವುದಿಲ್ಲ. ಇದನ್ನು ಸಮರ್ಥಿಸುವುದು. ಆದರೂ ಅದು ಯಾವ ವ್ಯಕ್ತಿಯ ಮೇಲೂ ನಿಂತಿಲ್ಲ. ಉಪನಿಷತ್ತಿನ ಅಪೌರುಷೇಯ ವಾಕ್ಯಗಳು ಅದು ಸಾರುವ ದೇವರಷ್ಟೇ ಅದ್ಭುತವಾದುವು. ಋಷಿಗೆ, ಯೋಚನಾಪರನಿಗೆ, ತತ್ತ್ವಜ್ಞಾನಿಗೆ, ಯುಕ್ತಿಮತಿಯುವರಿಗೆ, ಆಧುನಿಕ ವಿಜ್ಞಾನಿಗಳು ಅಪೇಕ್ಷಿಸುವಷ್ಟು ಅಪೌರುಷೇಯವಾಗಿವೆ. ಇವೇ ನಮ್ಮ

ಶಾಸ್ತ್ರ. ಕ್ರೈಸ್ತರಿಗೆ ಬೈಬಲ್ಲು ಹೇಗೊ, ಮಹಮ್ಮದೀಯರಿಗೆ ಖುರಾನು ಹೇಗೋ, ಬೌದ್ಧರಿಗೆ ತ್ರಿಪಿಟಿಕಗಳು ಹೇಗೋ, ಹಾಗೆಯೇ ಹಿಂದೂಗಳಿಗೆ ಉಪನಿಷತ್ತು. ಇವೇ ನಮ್ಮ ಶಾಸ್ತ್ರ, ಮತ್ತಾವುದೂ ಅಲ್ಲ. ಪುರಾಣ ತಂತ್ರ ಇತರ ಶಾಸ್ತ್ರಗಳು ವ್ಯಾಸಸೂತ್ರಕೂಡ, ಎರಡನೆ ಮೂರನೆ ದರ್ಜೆಗೆ ಸೇರಿದವು. ಮುಖ್ಯ ವೇದ. ಮನುಸ್ಮೃತಿ ಪುರಾಣ ಮತ್ತು ಇತರ ಶಾಸ್ತ್ರಗಳೆಲ್ಲಾ ಉಪನಿಷತ್ತಿನ ಪ್ರಮಾಣವನ್ನು ಎಲ್ಲಿಯವರಿಗೆ ಒಪ್ಪಿಕೊಳ್ಳುವುದೊ ಅಲ್ಲಿಯವರೆಗೆ ಮಾತ್ರ ಅವು ಸ್ವೀಕಾರ ಯೋಗ್ಯ. ಯಾವಾಗ ಅವು ಒಪ್ಪಿಕೊಳ್ಳುವುದಿಲ್ಲವೋ ಆಗ ನಿರ್ದಾಕ್ಷಿಣ್ಯವಾಗಿ ಅವನ್ನು ತ್ಯಜಿಸಬೇಕು. ಇದನ್ನು ನಾವು ಯಾವಾಗಲೂ ಜ್ಞಾಪಕದಲ್ಲಿಡಬೇಕು. ಆದರೆ ದುರದೃಷ್ಟವಶಾತ್ ಭರತ ಖಂಡದಲ್ಲಿ ಅದನ್ನು ಮರೆತರು. ಒಂದು ಸಣ್ಣ ಗ್ರಾಮದ ಆಚಾರ ಈಗ ಉಪನಿಷತ್ತಿಗಿಂತ ಹೆಚ್ಚು ಪ್ರಧಾನವಾಗಿದೆ. ಬಂಗಾಳ ದೇಶದ ಗ್ರಾಮದಲ್ಲಿರುವ ಭಾವನೆಯೊಂದಕ್ಕೆ ವೇದದಷ್ಟೆ ಪ್ರಾಧಾನ್ಯವಿದೆ, ವೇದಕ್ಕಿಂತ ಹೆಚ್ಚೇ ಇದೆ. ಆಚಾರ ಎಂಬ ಒಂದು ಪದದ ಪ್ರಭಾವ ಎಷ್ಟು ವಿಚಿತ್ರವಾಗಿದೆ. ಹಳ್ಳಿಯವನಿಗೆ ಕರ್ಮಕಾಂಡದ ಪ್ರತಿಯೊಂದು ಅಂಶವನ್ನೂ ಅನುಸರಿಸುವುದೆ ಆಚಾರ ಶೀಲತೆಯ ಪರಮಾವಧಿ. ಯಾರು ಇದನ್ನು ಅನುಸರಿಸುವುದಿಲ್ಲವೊ ಅವರನ್ನು "ನೀವು ಹಿಂದೂಗಳಲ್ಲ ಹೊರಡಿ" ಎನ್ನುವೆವು. ದುರ್ಭಾಗ್ಯವಶದಿಂದ ನನ್ನ ತಾಯ್ನಾಡಿನಲ್ಲಿ ಈಗ ಕೆಲವರು ತಂತ್ರಶಾಸ್ತ್ರ ತೆಗೆದುಕೊಂಡು, ಈ ತಂತ್ರವನ್ನು ಅನುಸರಿಸಬೇಕು ಎನ್ನುವರು. ಯಾರು ಹೀಗೆ ಮಾಡುವುದಿಲ್ಲವೋ ಆತ ಅವನ ದೃಷ್ಟಿಯಲ್ಲಿ ಆಚಾರವಂತನಲ್ಲ. ಉಪನಿಷತ್ತು ಪ್ರಮುಖ ಪ್ರಮಾಣ ಎಂಬುದನ್ನು ನೆನಪಿನಲ್ಲಿಡುವುದು ನಮಗೆ ಒಳ್ಳೆಯದು. ಗೃಹ್ಯ ಶ್ರೌತ ಸೂತ್ರಗಳೂ ಕೂಡ ವೇದಗಳ ಪ್ರಮಾಣಕ್ಕೆ ಅಧೀನ. ಅವು ನಮ್ಮ ಪೂರ್ವಜರ ಮಹಾಋಷಿಗಳ ವಾಣಿ. ನೀವು ಹಿಂದೂಗಳಾಗಬೇಕಾದರೆ ಅದನ್ನು ನಂಬಬೇಕು. ಈಶ್ವರ ಎಂದರೆ ನೀವು ಯಾವ ವಿಚಿತ್ರ ಭಾವನೆಯನ್ನು ಬೇಕಾದರೂ ಇಟ್ಟುಕೊಂಡಿರಬಹುದು. ಆದರೆ ವೇದ ಪ್ರಮಾಣವನ್ನು ಒಪ್ಪದೇ ಇದ್ದರೆ ನೀವು ನಾಸ್ತಿಕರು. ಕ್ರೈಸ್ತ ಬೌದ್ಧರ ಶಾಸ್ತ್ರಗಳಿಗೂ ನಮಗೂ ಇರುವ ವ್ಯತ್ಯಾಸ ಇದು. ಅವೆಲ್ಲ ಪುರಾಣಶಾಸ್ತ್ರವಲ್ಲ. ಅವುಗಳಲ್ಲಿ ಪ್ರಳಯ ಆಳುವ ಅರಸರ ಮತ್ತು ವಂಶಗಳ ಹೆಸರು ಮಹಾಪುರುಷರ ಜೀವನ ಮುಂತಾದುವು ಇವೆ. ಇವು ಪೌರಾಣಿಕ ವಸ್ತುಗಳು. ವೇದಗಳೊಂದಿಗೆ ಎಲ್ಲಿಯವರೆಗೆ ಅವು ಒಪ್ಪಿಕೊಳ್ಳುವುವೋ ಅಲ್ಲಿಯ

ವರೆಗೆ ಅವಕ್ಕೆ ಗೌರವ. ಎಲ್ಲಿಯವರೆಗೆ ಬೈಬಲ್ಲು ಮತ್ತು ಪ್ರಪಂಚದ ಇತರ ಧರ್ಮಗ್ರಂಥಗಳು ವೇದಗಳೊಂದಿಗೆ ಒಪ್ಪಿಕೊಳ್ಳುವುವೊ ಅಲ್ಲಿಯುವರೆಗೆ ಸರಿ. ಅವು ಒಪ್ಪದಾಗ ಅವನ್ನು ಸ್ವೀಕರಿಸಬೇಕಾಗಿಲ್ಲ. ಅದರಂತೆಯೇ ಖೊರಾನು ಕೂಡ. ಇಲ್ಲಿ ಎಷ್ಟೊ ನೈತಿಕ ವಿಷಯಗಳಿವೆ, ಎಲ್ಲಿಯವರೆಗೆ ಅವು ವೇದಗಳೊಂದಿಗೆ ಒಪ್ಪಿಕೊಳ್ಳುವುವೋ ಅಲ್ಲಿಯವರೆಗೆ ಇವಕ್ಕೆ ಪುರಾಣದಷ್ಟೇ ಬೆಲೆ ಇದೆ. ಅದಕ್ಕೆ ಹೆಚ್ಚು ಇಲ್ಲ. ವೇದಗಳನ್ನು ಯಾರೂ ಬರೆಯಲಿಲ್ಲ, ಅದು ಹೊಸದಾಗಿ ಬರಲಿಲ್ಲ. ಒಬ್ಬ ಕ್ರೈಸ್ತಪಾದ್ರಿ ಒಂದು ಸಲ ತಮ್ಮ ಶಾಸ್ತ್ರ ಚಾರಿತ್ರಿಕವಾಗಿದೆ, ಅದಕ್ಕೇ ಸತ್ಯ ಎಂದನು. ಅದಕ್ಕೆ ನಾನು ಹೀಗೆಂದೆ: "ನಮ್ಮದು ಚರಿತ್ರೆಯಲ್ಲ ಅದಕ್ಕೇ ಇದು ಸತ್ಯ. ನಿಮ್ಮದು ಚರಿತ್ರೆಯಂತೆ ಇರುವುದರಿಂದ ಯಾರೋ ಕೆಲವು ದಿನದ ಹಿಂದೆ ಅವನ್ನು ಬರೆದಿರಬೇಕು. ನಿಮ್ಮದು ಮಾನವಕೃತ, ನಮ್ಮದಲ್ಲ. ನಮ್ಮ ಶಾಸ್ತ್ರದ ಅನೈತಿಹಾಸಿಕತ್ವವೇ ಅದರ ಸತ್ಯಕ್ಕೆ ಪ್ರಮಾಣ." ಈಗಿನ ಕಾಲದಲ್ಲಿ ವೇದಕ್ಕೂ ಇತರ ಶಾಸ್ತ್ರಗಳಿಗೂ ಇರುವ ಸಂಬಂಧ ಇದು.

ಈಗ ಉಪನಿಷತ್ತಿನ ಬೋಧನೆಗೆ ಬರುವೆವು. ಹಲವು ಬಗೆಯ ಭಾವನೆಯ ಶ್ಲೋಕಗಳಿವೆ. ಕೆಲವು ಕೇವಲ ದ್ವೈತ ದೃಷ್ಟಿಗೆ ಸೇರಿದುದು, ಮತ್ತೆ ಕೆಲವು ಅದ್ವೈತಕ್ಕೆ ಸೇರಿದುದು. ಎಲ್ಲಾ ವಿಭಿನ್ನ ಸಂಪ್ರದಾಯದವರೂ ಒಪ್ಪಿಕೊಳ್ಳುವಂತಹ ಕೆಲವು ಸಿದ್ಧಾಂತಗಳಿವೆ. ಮೊದಲನೆಯದೆ ಸಂಸಾರ ಜೀವನ ಪುನರ್ಜನ್ಮ. ಎರಡನೆಯದಾಗಿ ಮಾನಸಿಕ ತತ್ತ್ವದಲ್ಲಿ ಅವರೆಲ್ಲರಿಗೂ ಏಕಮತವಿದೆ. ಮೊದಲು ದೇಹವಿದೆ, ಅದರ ಹಿಂದೆ ಸೂಕ್ಷ್ಮ ಶರೀರ ಅಥವಾ ಮನಸ್ಸು. ಅದರ ಹಿಂದೆ ಜೀವ ಇದೆ. ಪಾಶ್ಚಾತ್ಯ ಮತ್ತು ಪೌರಾತ್ಯ ಮಾನಸಿಕ ಶಾಸ್ತ್ರಕ್ಕೆ ಇದೇ ವ್ಯತ್ಯಾಸ. ಪಾಶ್ಚಾತ್ಯ ಮಾನಸಿಕ ಶಾಸ್ತ್ರದಲ್ಲಿ ಮನಸ್ಸೇ ಜೀವ, ಇಲ್ಲಿ ಅಲ್ಲ. ಮನಸ್ಸನ್ನು ಅಂತಃಕರಣ ಎನ್ನುವರು. ಇದು ಜೀವನ ಕೈಯಲ್ಲಿ ಒಂದು ಯಂತ್ರದಂತೆ. ಇದರ ಮೂಲಕ ಜೀವ ದೇಹದ ಮೇಲೆ ಅಥವಾ ಬಾಹ್ಯ ಪ್ರಪಂಚದಲ್ಲಿ ಕೆಲಸಮಾಡುವುದು. ಇದನ್ನು ಎಲ್ಲರೂ ಒಪ್ಪುವರು. ಜೀವಾತ್ಮನಿಗೆ ಆದಿ ಅಂತ್ಯವಿಲ್ಲ. ಮೋಕ್ಷ ಸಿಕ್ಕುವವರೆಗೆ ಅದು ಹಲವು ಜನ್ಮಗಳನ್ನು ಪಡೆಯುತ್ತಾ ಹೋಗುವುದು. ಎಲ್ಲರೂ ಇದರಲ್ಲಿ ನಂಬುವರು. ಇನ್ನೊಂದು ಅತಿ ಮುಖ್ಯವಾದ ವಿಷಯದಲ್ಲೂ ಇವರೆಲ್ಲರೂ ಏಕಮತೀಯರು. ಇದೇ ಎಲ್ಲವೂ ಆಗಲೇ ಆತ್ಮನಲ್ಲಿದೆ ಎನ್ನುವುದು.

ಇದೇ ಪೌರಾತ್ಯನಿಗೂ ಪಾಶ್ಚಾತ್ಯನಿಗೂ ಇರುವ ಬಹಳ ಮುಖ್ಯ ವಾದ ವ್ಯತ್ಯಾಸ. ಇಲ್ಲಿ Inspiration ಎಂಬುದಿಲ್ಲ. (ಯಾವುದೋ ಹೊರಗಿನಿಂದ ಬಂದು ಪ್ರಚೋದಿಸುವುದಿಲ್ಲ.) ಎಲ್ಲಾ Expiration (ಅಂತರಾಳದಿಂದ ಹೊರಹೊಮ್ಮುವುದು.) ಶಕ್ತಿ ಪವಿತ್ರತೆ ಪರಿಪೂರ್ಣತೆ ಇಲ್ಲಿ ಆಗಲೇ ಆತ್ಮನಲ್ಲಿದೆ. ಯೋಗಿಗಳು ಪಡೆಯಬೇಕೆನ್ನುವ ಅಣಿಮಾ ಲಘಿಮಾ ಮುಂತಾದ ಶಕ್ತಿಗಳನ್ನು ಹೊಸದಾಗಿ ಪಡೆದುಕೊಳ್ಳಬೇಕಾಗಿಲ್ಲ. ಅವೆಲ್ಲಾ ಆಗಲೇ ಆತ್ಮನಲ್ಲಿರುವುದು. ಅವನ್ನು ವ್ಯಕ್ತಗೊಳಿಸಬೇಕಾಗಿದೆ ಅಷ್ಟೆ. ನಿಮ್ಮ ಕಾಲಕೆಳಗೆ ಹರಿದಾಡುತ್ತಿರುವ ಅತಿ ಕ್ಷುದ್ರ ಕೀಟ ದಲ್ಲಿಯೂ ಕೂಡ ಅಣಿಮಾದಿ ಅಷ್ಟಸಿದ್ಧಿಗಳಿವೆ. ವ್ಯತ್ಯಾಸವಿರುವುದು ದೇಹದಲ್ಲಿ ಮಾತ್ರ. ಉತ್ತಮ ಶರೀರ ದೊರೆತೊಡನೆಯೇ ಅದು ವ್ಯಕ್ತ ವಾಗುವುದು. ಅವು ಆಗಲೇ ಅಲ್ಲಿವೆ. "ನಿಮಿತ್ತಮಪ್ರಯೋಜಕಂ ಪ್ರಕೃತೀನಾಂ ವರಣಭೇದಸ್ತು ತತಃ ಕ್ಷೇತ್ರಿಕವತ್" ಒಳ್ಳೆಯ ಕೆಟ್ಟ ಕ್ರಿಯೆಗಳೇ ನಮ್ಮ ಸ್ವಭಾವದ ಬದಲಾವಣೆಗೆ ಮುಖ್ಯ ಕಾರಣವಲ್ಲ. ವಿಕಾಸಕ್ಕೆ ಇರುವ ಆತಂಕವನ್ನು ಅವು ನಿವಾರಿಸುವುದು. ರೈತ ನೀರು ಹರಿಯುವುದಕ್ಕೆ ಇರುವ ಆತಂಕವನ್ನು ತೆಗೆಯುವುದರಿಂದ ಕಾಲುವೆಯ ನೀರು ಹರಿಯುವಂತೆ. ಪತಂಜಲಿ ದೂರದ ದೊಡ್ಡಕೆರೆಯಿಂದ ಬರುವ ಒಂದು ಕಾಲುವೆಯ ಉಪಮಾನವನ್ನು ಕೊಡುವನು. ಕೆರೆಯಲ್ಲಿ ಆಗಲೇ ನೀರು ತುಂಬಾ ಇದೆ. ತಕ್ಷಣವೇ ತನ್ನ ಗದ್ದೆಗೆ ನೀರು ಬರುವುದು. ತನ್ನ ಗದ್ದೆಗೂ ಕೆರೆಗೂ ಮಧ್ಯ ಮಣ್ಣಿನ ಆತಂಕ ಒಂದು ಇದೆ. ಆತಂಕ ವನ್ನು ತೆಗೆದೊಡನೆಯೇ ನೀರು ಸ್ವಭಾವತಃ ಹರಿದು ಬರುವುದು. ಶಕ್ತಿ, ಪವಿತ್ರತೆ, ಪರಿಪೂರ್ಣತೆ, ಆಗಲೇ ಆತ್ಮನಲ್ಲಿದೆ. ಅದರ ಮೇಲೆ ಇರುವ ಆವರಣವೇ ವ್ಯತ್ಯಾಸಕ್ಕೆ ಕಾರಣ. ಆವರಣ ಹೋದ ಮೇಲೆ ಆತ್ಮ ಪರಿಶುದ್ಧವಾಗುವುದು. ಆತ್ಮನ ಶಕ್ತಿ ವ್ಯಕ್ತವಾಗುವುದು. ಪೌರ ಮತ್ತು ಪಾಶ್ಚಾತ್ಯರಿಗೆ ಇರುವ ಭಾವನೆಯ ವ್ಯತ್ಯಾಸವೆ ಇದು. ನಾವು ಹುಟ್ಟು ಪಾಪಿಗಳು ಎಂಬ ಪಾಶ್ಚಾತ್ಯ ಭಾವನೆಯಲ್ಲಿ ನಂಬದೇ ಇರುವುದರಿಂದ ನಾವೆಲ್ಲಾ ಜನ್ಮತಃ ದುಷ್ಟರು ಎಂದು ಅವರು ನಿಂದಿಸುವರು. ನಾವು ಎಂದಿಗೂ ಸಜ್ಜನರಾಗಲಾರೆವು. ಸ್ವಭಾವ ಹೇಗೆ ಬದಲಾಯಿಸಬಲ್ಲದು? ಇದನ್ನು ಅವರು ಆಲೋಚಿಸುವುದೇ ಇಲ್ಲ. ಅದು ಬದಲಾಯಿಸಿದರೆ ತನಗೇ ವಿರೋಧವಾಗುವುದು. ಅದು ಸ್ವಭಾವ ಆಗುವುದಿಲ್ಲ. ನಾವು

ಇದನ್ನು ನೆನಪಿನಲ್ಲಿಡಬೇಕು. ದ್ವೈತಿಗಳೆಲ್ಲರೂ ಇದನ್ನು ಒಪ್ಪಿಕೊಳ್ಳುವರು.

ಎಲ್ಲ ವಿಭಿನ್ನ ಸಂಪ್ರದಾಯದವರೂ ಒಪ್ಪಿಕೊಳ್ಳುವ ನಂತರ ಭಾವನೆಯೇ ದೇವರು. ಅವರ ದೇವರ ಭಾವನೆ ವ್ಯತ್ಯಾಸವಾಗಬಹುದು. ದ್ವೈತಿಗಳು ಸಾಕಾರ ದೇವರನ್ನು ಮಾತ್ರ ಒಪ್ಪಿಕೊಳ್ಳುವರು. ಈ ಸಾಕಾರ ಈಶ್ವರನನ್ನು ನೀವು ಸ್ವಲ್ಪ ಚೆನ್ನಾಗಿ ತಿಳಿದುಕೊಳ್ಳಬೇಕು. ಈಶ್ವರ ಎಂದರೆ ಅವನಿಗೊಂದು ದೇಹವಿದೆ, ಅವನೆಲ್ಲೋ ಸಿಂಹಾಸನದ ಮೇಲೆ ಕುಳಿತು ಪ್ರಪಂಚವನ್ನು ಆಳುತ್ತಿರುವನು ಎಂದು ಅಲ್ಲ. ಅವನು ಸಗುಣ ಎಂದು ಅರ್ಥ. ಸಾಕಾರ ದೇವರ ಎಷ್ಟೋ ವರ್ಣನೆಗಳಿವೆ. ಈ ಪ್ರಪಂಚದ ಸೃಷ್ಟಿ ಸ್ಥಿತಿ ಲಯಕ್ಕೆಲ್ಲಾ ಈಶ್ವರ ಕಾರಣನೆಂದು ಎಲ್ಲಾ ಸಂಪ್ರದಾಯದವರೂ ಒಪ್ಪಿಕೊಳ್ಳುವರು. ಅದ್ವೈತಿಗಳು ಇದಕ್ಕೂ ಹೆಚ್ಚು ಸಗುಣ ನಿರಾಕಾರವನ್ನು ನಂಬುತ್ತಾರೆ. ವಿಶೇಷಣವೇ ಇಲ್ಲದಾಗ ಯಾವ ಗುಣವಾಚಕವೂ ಅದನ್ನು ನಿದರ್ಶಿಸಲಾರದು. ಅದ್ವೈತಿಗಳು ಅದನ್ನು ಸಚ್ಚಿದಾನಂದ ಎಂದು ಮಾತ್ರ ಹೇಳುವರು. ಶಂಕರಾಚಾರ್ಯರು ಹೇಳಿರುವುದೇ ಇದನ್ನು. ಉಪನಿಷತ್ತಿನಲ್ಲಿ ಇದಕ್ಕೂ ಮುಂದೆ ಹೋಗಿ ಅದನ್ನು "ನೇತಿ, ನೇತಿ" ಎಂದು ಮಾತ್ರ ಹೇಳಬಹುದು ಎನ್ನುವರು.

ಭರತಖಂಡದ ವಿಭಿನ್ನ ಸಂಪ್ರದಾಯದವರೆಲ್ಲಾ ಇದನ್ನು ಒಪ್ಪಿಕೊಳ್ಳುವರು. ದ್ವೈತಿಗಳಲ್ಲಿ ರಾಮಾನುಜರನ್ನು ಆಧುನಿಕ ದ್ವೈತ ಪ್ರತಿನಿಧಿ ಎಂದು ನಾನು ತೆಗೆದುಕೊಳ್ಳುವೆನು. ಭರತಖಂಡದಲ್ಲಿ ಬೇರೆ ಕಡೆ ಜನ್ಮಧಾರಣೆ ಮಾಡಿದ ಆಚಾರ್ಯರ ಪರಿಚಯ ವಂಗದೇಶದವರಿಗೆ ಅಷ್ಟು ಇಲ್ಲದೇ ಇರುವುದು ವಿಷಾದಕರ. ಮುಹಮ್ಮದೀಯರ ಕಾಲದಲ್ಲಿ ನಮ್ಮ ಚೈತನ್ಯ ಮಹಾಪ್ರಭು ಹೊರತು ಮಿಕ್ಕ ಪ್ರಖ್ಯಾತ ಆಚಾರ್ಯರೆಲ್ಲ ದಕ್ಷಿಣದಲ್ಲಿ ಹುಟ್ಟಿದರು. ಚೈತನ್ಯರು ಕೂಡ ಮಧ್ವಾಚಾರ್ಯರ ಒಂದು ಸಂಪ್ರದಾಯಕ್ಕೆ ಸೇರಿದವರು. ರಾಮಾನುಜರ ದೃಷ್ಟಿಯಲ್ಲಿ, ಈಶ್ವರ ಜೀವ ಜಗತ್ ಬೇರೆ ಬೇರೆ. ಜೀವಿಗಳು ಅನಾದಿ, ಎಂದೆಂದಿಗೂ ಇರುವರು, ತಮ್ಮ ವ್ಯಕ್ತಿತ್ವವನ್ನು ಚಿರಕಾಲ ಇಟ್ಟುಕೊಂಡಿರುವರು. ಎಂದೆಂದಿಗೂ ನಿಮ್ಮ ನಮ್ಮ ಆತ್ಮ ಬೇರೆಯಾಗಿರುವುದು. ಅದರಂತೆಯೇ ಜೀವ ದೇವರಷ್ಟೇ ಸತ್ಯವಾದ ಜಗತ್ತು ಕೂಡ ಬೇರೆಯಾಗಿರುವುದು. ದೇವರು ಜೀವಿಯಲ್ಲಿ ಹಾಸುಹೊಕ್ಕಾಗಿರುವನು, ಅವನ ಸಾರವಾಗಿರುವನು. ಅವನು ಅಂತರ್ಯಾಮಿ. ಈ ದೃಷ್ಟಿಯಿಂದ ರಾಮಾನುಜರು ಕೆಲವು ವೇಳೆ ಜೀವಾತ್ಮ ಪರಮಾತ್ಮರ

ಸ್ವಭಾವ ಒಂದೇ ಎಂದು ಹೇಳುವರು. ಪ್ರಳಯದಲ್ಲಿ ಪ್ರಕೃತಿಯೆಲ್ಲಾ ಸಂಕುಚಿತವಾದಾಗ ಜೀವಿಗಳು ಸೂಕ್ಷ್ಮವಾಗಿ ಅಣುವಿನಂತೆ ಕೆಲವು ಕಾಲ ಇರುವುವು. ಕಲ್ಪದ ಆದಿಯಲ್ಲಿ ಅವೆಲ್ಲ ಪುನಃ ತಮ್ಮ ಕರ್ಮಕ್ಕೆ ತಕ್ಕಂತೆ ವ್ಯಕ್ತವಾಗಿ ಪರಿಣಾಮ ಹೊಂದುವುವು. ಆತ್ಮನ ಪವಿತ್ರತೆ ಮತ್ತು ಪರಿಪೂರ್ಣತೆಯನ್ನು ಸಂಕುಚಿತಮಾಡುವ ಪ್ರತಿಯೊಂದು ಕ್ರಿಯೆಯೂ ಪಾಪ. ಯಾವ ಕ್ರಿಯೆ ಆ ಗುಣಗಳು ವ್ಯಕ್ತವಾಗಿ ವಿಕಾಸವಾಗುವಂತೆ ಮಾಡುವುದೋ ಅವೆಲ್ಲ ಪುಣ್ಯ, ಎಂದು ರಾಮಾನುಜರು ಹೇಳುವರು. ಯಾವುದು ಆತ್ಮ ವಿಕಾಸಕ್ಕೆ ಸಹಾಯ ಮಾಡುವುದೋ ಅದು ಒಳ್ಳೆಯದು. ಯಾವುದು ಸಂಕೋಚವಾಗುವಂತೆ ಮಾಡುವುದೋ ಅದು ಕೆಟ್ಟದ್ದು. ಜೀವಿ ಭಗವಂತನ ದಯೆಯಿಂದ ಮೋಕ್ಷಪಡೆಯುವವರೆಗೆ ಸಂಕೋಚ ವಿಕಾಸವಾಗುತ್ತಾ ಹೋಗುವುದು. ಯಾರು ಪರಿಶುದ್ಧರೋ ಭಗವಂತನ ದಯೆಗೆ ಹೋರಾಡುವರೋ ಅವರಿಗೆಲ್ಲಾ ಅದು ದೊರಕುವುದು.

"ಆಹಾರಶುದ್ಧೌ ಸತ್ತ್ವಶುದ್ಧಿಃ ಸತ್ತ್ವಶುದ್ಧೌ ಧ್ರುವಾ ಸ್ಮೃತಿಃ" ಎಂಬ ಪ್ರಖ್ಯಾತ ಶ್ರುತಿ ವಾಕ್ಯವಿದೆ. ಆಹಾರ ಶುದ್ಧವಾದರೆ ಸತ್ತ್ವ ಶುದ್ಧವಾಗಿರುವುದು. ಸತ್ತ್ವ ಶುದ್ಧವಾದರೆ ಸ್ಮೃತಿ ಶುದ್ಧವಾಗುವುದು — ಭಗವಂತನಸ್ಮೃತಿ; ಅಥವಾ ಅದ್ವೈತಿಯಾಗಿದ್ದರೆ ನಮ್ಮ ಪೂರ್ಣತೆಯ ಸ್ಮೃತಿ. ಅದು ಸತ್ಯವಾಗಿ ಸ್ಥಿರವಾಗಿ ನಿತ್ಯವಾಗುವುದು. ಇಲ್ಲಿ ದೊಡ್ಡದೊಂದು ಚರ್ಚೆ ಇದೆ. ಮೊದಲನೆಯದಾಗಿ ಸತ್ತ್ವ ಎಂದರೆ ಏನು? ಸಾಂಖ್ಯರು ಮತ್ತು ಎಲ್ಲರೂ ಒಪ್ಪಿಕೊಳ್ಳುವಂತೆ ನಮ್ಮ ದೇಹ ಮೂರು ವಸ್ತುಗಳಿಂದ ಆಗಿದೆ — ಗುಣಗಳಲ್ಲ. ತಮಸ್ಸು ರಜಸ್ಸು ಸತ್ತ್ವಗುಣ ಎಂದು ಸಾಧಾರಣವಾಗಿ ತಿಳಿಯುವರು. ಅವು ಗುಣಗಳಲ್ಲ. ಪ್ರಪಂಚ ಆಗಿರುವ ವಸ್ತು. ಆಹಾರ ಶುದ್ಧಿಯಾದರೆ ಸತ್ತ್ವಾಂಶ ಶುದ್ಧಿಯಾಗುವುದು. ವೇದಾಂತದ ಒಂದು ಗುರಿಯೇ ಈ ಸತ್ತ್ವವನ್ನು ಪಡೆಯುವುದು. ಆತ್ಮ ಆಗಲೇ ಪರಿಶುದ್ಧವಾಗಿದೆ. ಪರಿಪೂರ್ಣವಾಗಿದೆ. ವೇದಾಂತದ ದೃಷ್ಟಿಯಿಂದ ಅದು ತಮೋರಜೋಗುಣಗಳಿಂದ ಪರಿವೃತವಾಗಿದೆ. ಸತ್ತ್ವ ಎಲ್ಲಕ್ಕಿಂತಲೂ ಪ್ರಕಾಶಮಾನವಾದುದು. ಆತ್ಮಜ್ಯೋತಿ, ಬೆಳಕು ಹೇಗೆ ಗ್ಲಾಸಿನ ಮೂಲಕ ಪ್ರವೇಶಿಸುವುದೋ ಹಾಗೆ ಸತ್ತ್ವದ ಮೂಲಕ ಪ್ರಕಾಶಿಸುವುದು. ತಮೋರಜೋಗುಣಗಳು ಹೋಗಿ ಸತ್ತ್ವಗುಣ ನಿಂತರೆ ಆತ್ಮನ ಪೂರ್ಣತೆ ಪರಿಶುದ್ಧತೆ ವ್ಯಕ್ತವಾಗಿ ಆತ್ಮನೂ ಕೂಡ ಹೆಚ್ಚು ಪ್ರಕಾಶಮಾನವಾಗುವನು.

ಆದಕಾರಣವೇ ಈ ಸತ್ತ್ವಮುಖ್ಯ. ಆಹಾರ ಶುದ್ಧವಾದ ಮೇಲೆ ಎಂದು ಶ್ರುತಿ ಹೇಳುವುದು. ರಾಮಾನುಜರು ಆಹಾರವೆಂದರೆ ನಾವು ಭಕ್ಷಿಸುವ ವಸ್ತು ಎನ್ನುವರು. ಅವರು ತಮ್ಮ ಸಿದ್ಧಾಂತದಲ್ಲಿ ಇದಕ್ಕೆ ಪ್ರತ್ಯೇಕ ಅರ್ಥವನ್ನೇ ಕೊಟ್ಟಿರುವರು. ಇದು ನಮ್ಮ ಭರತಖಂಡದಲ್ಲಿ ವಿಭಿನ್ನ ಪಂಗಡಗಳಮೇಲೂ ತನ್ನ ಪ್ರಭಾವವನ್ನು ಬೀರಿದೆ. ಆದಕಾರಣ ಆಹಾರ ಎಂದರೆ ಏನು ಎಂಬುದನ್ನು ತಿಳಿದುಕೊಳ್ಳಬೇಕು. ರಾಮಾನುಜರ ದೃಷ್ಟಿಯಲ್ಲಿ ಇದೊಂದು ಅತಿ ಮುಖ್ಯ ವಿಷಯ. ನಮ್ಮ ಜೀವನದಲ್ಲಿ ಆಹಾರ ಹೇಗೆ ಅಶುದ್ಧವಾಗುವುದು ಎಂದು ರಾಮಾನುಜರು ಕೇಳುವರು. ಮೂರು ದೋಷಗಳಿಂದ ಆಹಾರ ಅಶುದ್ಧವಾಗುವುದು ಎನ್ನುವರು. ಮೊದಲನೆಯದು ಜಾತಿದೋಷ. ಇದು ಆಹಾರದ ಜಾತಿಗೆ ಸೇರಿರುವುದು. ಈರುಳ್ಳಿ ಬೆಳ್ಳುಳ್ಳಿ ಮುಂತಾದ ವಾಸನೆಯ ಪದಾರ್ಥಗಳಂತೆ. ಎರಡನೆಯದು ಆಶ್ರಯದೋಷ. ಯಾರಿಂದ ಆಹಾರ ಬರುವುದೊ ಅವರ ದೋಷವೂ ಅದನ್ನು ಸ್ವೀಕರಿಸುವವನಮೇಲೆ ಪರಿಣಾಮವನ್ನು ಉಂಟು ಮಾಡುವುದು. ನಾನೇ ಅನೇಕ ಮಹಾತ್ಮರು ಇದನ್ನು ತಮ್ಮ ಇಡೀ ಜೀವನದಲ್ಲಿ ಅನುಸರಿಸುತ್ತಿರುವುದನ್ನು ನೋಡಿರುವೆನು. ಯಾರು ಆಹಾರ ತಂದರು, ಅದನ್ನು ಮುಟ್ಟಿದರು, ಎಂಬುದು ಕೂಡ ಅವರಿಗೆ ತಿಳಿಯುತ್ತಿತ್ತು. ನಾನೇ ಜೀವನದಲ್ಲಿ ಒಂದು ವೇಳೆಯಲ್ಲ ಹಲವು ವೇಳೆ ಇದನ್ನು ನೋಡಿರುವೆನು. ನಂತರ ನಿಮಿತ್ತದೋಷ. ಆಹಾರಕ್ಕೆ ಕೊಳೆ ಮುಂತಾದುವು ಸೇರುವುದು. ಅದಕ್ಕೆ ನಾವು ಈಗ ಸ್ವಲ್ಪ ಹೆಚ್ಚು ಗಮನ ಕೊಡಬೇಕು. ಆಹಾರದಲ್ಲಿ ಕೊಳೆ ಕಸ್ಮಲ ಕೂದಲು ಮುಂತಾದುವನ್ನು ತೆಗೆದುಕೊಳ್ಳುವುದು ಇಂಡಿಯಾದೇಶದಲ್ಲಿ ಬಳಕೆಯಲ್ಲಿದೆ. ಈ ಮೂರು ದೋಷದಿಂದ ಆಹಾರವನ್ನು ಪಾರುಮಾಡಿದರೆ ಸತ್ತ್ವಶುದ್ಧಿಯಾಗುವುದು. ಅನಂತರ ಧರ್ಮ ಬಹಳ ಸುಲಭ. ಶುದ್ಧ ಆಹಾರದಿಂದಲೇ ಧಾರ್ಮಿಕರಾಗುವ ಹಾಗಿದ್ದರೆ ಎಲ್ಲರೂ ಧಾರ್ಮಿಕರಾಗುವರು. ಈ ಮೂರು ದೋಷಗಳಿಂದ ಪಾರಾಗುವುದು ಕಷ್ಟವಲ್ಲ ಪ್ರಪಂಚದಲ್ಲಿ. ಶಂಕರಾಚಾರ್ಯರು ನಂತರ ಬಂದು, ಆಹಾರವೆಂದರೆ ಮನಸ್ಸಿನಲ್ಲಿ ಸ್ವೀಕರಿಸುವ ಆಲೋಚನೆ, ಅದು ಶುದ್ಧವಾದರೆ ಸತ್ತ್ವ ಶುದ್ಧವಾಗುವುದು, ಅದಕ್ಕೆ ಮುಂಚೆ ಅಲ್ಲ ಎಂದರು. ನೀವು ಏನನ್ನು ಬೇಕಾದರೂ ತೆಗೆದುಕೊಳ್ಳಬಹುದು. ಆಹಾರ ಒಂದೇ ಸತ್ತ್ವಶುದ್ಧಿಮಾಡುವಹಾಗಿದ್ದರೆ ಒಂದು ಕಪಿಗೆ ಬರೀ

ಅನ್ನ ಹಾಲು ಕೊಡಿ. ಅದು ದೊಡ್ಡ ಯೋಗಿಯಾಗುವುದೇನೋ ನೋಡೋಣ. ದನ ಜಿಂಕೆ ದೊಡ್ಡಯೋಗಿಗಳಾಗುವುವು. ಹೆಚ್ಚು ಸ್ನಾನ ದಿಂದ ಸ್ವರ್ಗ ಸಿಕ್ಕುವಹಾಗಿದ್ದರೆ ಮೀನು ಮೊದಲು ಸ್ವರ್ಗಕ್ಕೆ ಹೋಗು ವುದು. ಶಾಕಾಹಾರದಿಂದ ಸ್ವರ್ಗ ಸಿಕ್ಕುವಹಾಗೆ ಇದ್ದರೆ ಜಿಂಕೆ ದನಗಳು ಮೊದಲು ಅಲ್ಲಿಗೆ ಹೋಗುತ್ತವೆ.

ಇದಕ್ಕೆ ಪರಿಹಾರವೇನು? ಎರಡೂ ಆವಶ್ಯಕ. ಶಂಕರಾಚಾರ್ಯರ ಆಹಾರ ವಿವರಣೆ ಮುಖ್ಯ. ಒಳ್ಳೆಯ ಆಹಾರ ಒಳ್ಳೆಯ ಮನಸ್ಸಿಗೆ ಸಹಾಯ ಮಾಡುತ್ತದೆ. ಎರಡಕ್ಕೂ ನಿಕಟ ಸಂಬಂಧವಿದೆ. ಎರಡೂ ಇರಬೇಕು. ಭರತಖಂಡದ ಈಗಿನ ನ್ಯೂನತೆಯೇ ಶಂಕರಾಚಾರ್ಯರ ವಿವರಣೆ ಮರೆತು ಕೇವಲ ಶುದ್ಧ ಆಹಾರವನ್ನು ಮಾತ್ರ ತೆಗೆದುಕೊಂಡಿರು ವೆವು. ಅದಕ್ಕೇ ಧರ್ಮ ಅಡಿಗೆ ಮನೆಗೆ ನುಗ್ಗಿದೆ ಎಂದರೆ ಜನಕ್ಕೆ ನನ್ನ ಮೇಲೆ ಕೋಪ. ನೀವು ನನ್ನೊಂದಿಗೆ ಮದ್ರಾಸಿಗೆ ಬಂದಿದ್ದರೆ ಒಪ್ಪಿಕೊಳ್ಳು ತ್ತಿದ್ದಿರಿ. ಬಂಗಾಳಿಯುವರು ಅವರಿಗಿಂತ ಮೇಲು. ಮದ್ರಾಸಿನಲ್ಲಿ ಆಹಾರವನ್ನು ಯಾರಾದರೂ ನೋಡಿದರೆ ಅದನ್ನು ಬಿಸಾಡುವರು. ಇಷ್ಟು ಮಾಡಿದರೂ ಜನರೇನೂ ಉತ್ತಮರಾಗಿ ಕಾಣುವುದಿಲ್ಲ. ಯಾವುದಾದರೂ ಕೆಲವು ಆಹಾರ ಸೇವಿಸಿ, ಜನರ ದೃಷ್ಟಿಯಿಂದ ಅದನ್ನು ಸಂರಕ್ಷಿಸಿದರೆ, ಮುಕ್ತಿ ಸಿಕ್ಕುವಹಾಗೆ ಇದ್ದರೆ, ಅವರೆಲ್ಲ ಇಷ್ಟುಹೊತ್ತಿಗೆ ಸಿದ್ಧಮನುಷ್ಯ ರಾಗಿರಬೇಕು. ಆದರೆ ಅವರು ಆಗಿಲ್ಲ.

ಇವೆರಡನ್ನೂ ಒಟ್ಟುಗೂಡಿಸಿ ಒಂದುಮಾಡಬೇಕಾದರೂ ಕುದುರೆಗೆ ಮುಂದೆ ಗಾಡಿ ಕಟ್ಟಬೇಡಿ. ಆಹಾರ ವರ್ಣಾಶ್ರಮ ಮುಂತಾದ ವಿಷಯ ಗಳ ಮೇಲೆ ಜನ ಬಹಳ ಮಾತನಾಡುತ್ತಿರುವರು. ವಂಗೀಯರ ಗದ್ದಲ ಇದರಲ್ಲಿ ಬಹಳ ಜೋರಾಗಿದೆ. ವರ್ಣಾಶ್ರಮದ ವಿಷಯ ನಿಮಗೆ ಏನುಗೊತ್ತಿದೆ ಎಂದು ನಿಮ್ಮನ್ನು ಕೇಳುತ್ತೇನೆ. ದೇಶದಲ್ಲಿ ಈಗ ನಾಲ್ಕು ಜಾತಿಗಳೆಲ್ಲಿವೆ? ಉತ್ತರಹೇಳಿ. ನನಗೆ ವರ್ಣಗಳು ಕಾಣುತ್ತಿಲ್ಲ. 'ತಲೆಯೇ ಇಲ್ಲ ತಲೆನೋವು' ಎಂಬ ಬಂಗಾಳಿ ಗಾದೆಯಂತಿದೆ ನೀವು ವರ್ಣಾಶ್ರಮವನ್ನು ವಿಚಾರಿಸುತ್ತಿರುವುದು. ನಾಲ್ಕು ವರ್ಣಗಳಲ್ಲಿ ಕೇವಲ ಬ್ರಾಹ್ಮಣ ಮತ್ತು ಶೂದ್ರರನ್ನು ಮಾತ್ರ ನೋಡುತ್ತೇವೆ. ಕ್ಷತ್ರಿಯ ವೈಶ್ಯ ರಿದ್ದರೆ ಎಲ್ಲಿ? ಬ್ರಾಹ್ಮಣರು ಅವರಿಗೆ ಯಜ್ಞೋಪವೀತ ಕೊಟ್ಟು ವೇದ ಗಳನ್ನು ಏತಕ್ಕೆ ಅಧ್ಯಯನ ಮಾಡುವಂತೆ ಹೇಳಕೂಡದು. ಇದು ಹಿಂದೂ

ಗಳ ಕರ್ತವ್ಯ. ವೈಶ್ಯ ಕ್ಷತ್ರಿಯರಿಲ್ಲದೆ ಕೇವಲ ಬ್ರಾಹ್ಮಣ ಶೂದ್ರರು ಮಾತ್ರ ಇದ್ದರೆ, ಅಂತಹ ಸ್ಥಳದಲ್ಲಿ ಬ್ರಾಹ್ಮಣರು ಇರಕೂಡದು. ಗಂಟು ಮೂಟೆ ಕಟ್ಟಿ ಹೊರಡಲಿ! ಯಾರು ಮ್ಲೇಚ್ಛರ ಕೆಳಗೆ ಇರುವರೋ, ಅವರ ಆಹಾರವನ್ನು ಸ್ವೀಕರಿಸುವರೋ ಅಂತಹವರಿಗೆ ಶಾಸ್ತ್ರ ಏನು ಪ್ರಾಯಶ್ಚಿತ್ತ ಹೇಳುವುದು ಗೊತ್ತೆ? ತಾನೇ ಚಿತೆಗೆ ಬೆಂಕಿಹಚ್ಚಿಕೊಂಡು ಬೇಯುವುದು. ನೀವು ಸಾವಿರ ವರ್ಷದಿಂದ ಹಾಗೆ ಮಾಡುತ್ತಿರುವಿರಿ. ಗುರುಗಳಂತೆ ನಟಿಸಿ ಕಪಟಿಗಳಂತೆ ಆಚರಿಸುವಿರೇನು? ಅಲೆಗ್ಸಾಂಡರ ನೊಂದಿಗೆ ಹೋದ ಬ್ರಾಹ್ಮಣನಂತೆ ನೀವು ಮಾಡಿಕೊಳ್ಳಿ. ಆತ ಮ್ಲೇಚ್ಛರ ಆಹಾರ ತಿಂದಿರಬಹುದೆಂದು ಭಾವಿಸಿ ಆತ್ಮಹತ್ಯಮಾಡಿ ಕೊಂಡನು. ನೀವೂ ಹಾಗೆ ಮಾಡಿ. ಇಡೀ ದೇಶ ನಿಮ್ಮ ಪದತಳಕ್ಕೆ ಬೀಳುವುದು. ನಿಮಗೇ ಶಾಸ್ತ್ರದಲ್ಲಿ ನಂಬಿಕೆ ಇಲ್ಲ. ಆದರೂ ಇತರರನ್ನು ನಂಬಿಸುವುದಕ್ಕೆ ಪ್ರಯತ್ನಪಡುತ್ತಿರುವಿರಿ. ಈಗ ಅದನ್ನು ಮಾಡುವುದಕ್ಕೆ ಆಗುವುದಿಲ್ಲವೆಂದು ನಿಮ್ಮ ದುರ್ಬಲತೆಯನ್ನು ಒಪ್ಪಿಕೊಂಡರೆ, ಇತರರ ದುರ್ಬಲತೆಯನ್ನೂ ಕ್ಷಮಿಸಿ. ಇತರ ವರ್ಣದವರನ್ನೂ ಸ್ವೀಕರಿಸಿ ಮೇಲೆತ್ತಿ. ಅವರೂ ವೇದವನ್ನು ಓದಲಿ. ವಂಗ ಬ್ರಾಹ್ಮಣರೇ ನೀವೂ ಕೂಡ ಪ್ರಪಂಚದ ಇತರ ಆರ್ಯರಂತೆ ಆಗಿ.

ನಮ್ಮ ದೇಶವನ್ನೇ ನಾಶಮಾಡುತ್ತಿರುವ ಅನಿಷ್ಟ ವಾಮಾಚಾರವನ್ನು ತ್ಯಜಿಸಿ. ನೀವು ಇಂಡಿಯಾ ದೇಶದ ಬೇರೆ ಭಾಗವನ್ನು ನೋಡಿಲ್ಲ. ನಮ್ಮ ಸಮಾಜದಲ್ಲಿ ಎಷ್ಟೊಂದು ವಾಮಾಚಾರವಿದೆ ಎಂಬುದನ್ನು ನೋಡಿದಾಗ, ನಮ್ಮ ಸಂಸ್ಕೃತಿಯನ್ನು ಕುರಿತು ಎಷ್ಟೇ ಜಂಭ ಕೊಚ್ಚಿಕೊಂಡರೂ ನಾಚಿ ಕೊಳ್ಳಬೇಕಾಗುವುದು. ವಾಮಾಚಾರಸಂಗಡ ವಂಗ ಸಮಾಜವನ್ನೆಲ್ಲಾ ಮುತ್ತುತ್ತಿದೆ. ಹಗಲು ಆಚಾರವನ್ನು ಘಂಟಾಘೋಷವಾಗಿ ಸಾರುವರು. ರಾತ್ರಿಹೊತ್ತು ಅನಿಷ್ಟವ್ಯಭಿಚಾರ ನಡೆಸುವರು. ಇವರಿಗೆ ಹಲವು ಶಾಸ್ತ್ರ ಗಳು ಬೇರೆ ಸಹಾಯಕ್ಕೆ ಬರುತ್ತವೆ. ಹೀಗೆ ಮಾಡಬೇಕೆಂದು ಶಾಸ್ತ್ರಗಳೇ ಅವರಿಗೆ ವಿಧಿಸುತ್ತವೆ. ವಂಗೀಯರಿಗೆ ಇದು ಗೊತ್ತು. ವಂಗಶಾಸ್ತ್ರವೇ ವಾಮಾಚಾರ ಗ್ರಂಥ. ಗಾಡಿಗಟ್ಟಲೆ ಇಂತಹ ಪುಸ್ತಕ ಪ್ರತಿವರ್ಷವೂ ತಯಾರಾಗುತ್ತಿದೆ. ನಿಮ್ಮ ಮಕ್ಕಳಿಗೆ ಶ್ರುತಿಕೊಡುವುದು ಬಿಟ್ಟು ಇಂತಹ ವಿಷವನ್ನು ತುಂಬುವಿರಿ. ಕಲ್ಕತ್ತಾ ನಗರದ ಪಿತರೆ ವಾಮಾಚಾರ ತಂತ್ರ ಮತ್ತು ಅವುಗಳ ಭಾಷಾಂತರವನ್ನು ನಿಮ್ಮ ಗಂಡು ಹೆಣ್ಣು ಮಕ್ಕಳಿಗೆ

ಕೊಡುವುದಕ್ಕೆ ನಿಮಗೆ ನಾಚಿಕೆಯಾಗುವುದಿಲ್ಲವೇ? ಅವರ ಮನಸ್ಸು ಹಾಳಾಗಿ ಇವೇ ಹಿಂದೂ ಶಾಸ್ತ್ರ ಎಂದು ಅವರು ಭಾವಿಸುವರು. ವೇದ ಗೀತಾ ಉಪನಿಷತ್ತು ಇಂತಹ ನಿಜವಾದ ಶಾಸ್ತ್ರ ಓದಲಿ.

ಭರತಖಂಡದ ದ್ವೈತಿಗಳ ದೃಷ್ಟಿಯಲ್ಲಿ, ಜೀವಿ ಕೊನೆಯವರೆಗೂ ಬೇರೆಯಾಗಿಯೇ ಇರುವನು. ದೇವರು ಸೃಷ್ಟಿಯನ್ನು ಆಗಲೇ ಇರುವ ವಸ್ತುವಿನಿಂದ ಸೃಷ್ಟಿಸಿರುವನು. ಅವನು ಕೇವಲ ನಿಮಿತ್ತಕಾರಣ. ಅದ್ವೈತಿಗಳ ದೃಷ್ಟಿಯಲ್ಲಿ ದೇವರು ಉಪಾದಾನ ಮತ್ತು ನಿಮಿತ್ತಕಾರಣ. ಅವನು ಕೇವಲ ಸೃಷ್ಟಿಕರ್ತ ಮಾತ್ರ ಅಲ್ಲ, ಅವನು ಸೃಷ್ಟಿಯನ್ನು ತನ್ನಿಂದಲೇ ರಚಿಸುವನು. ಇದೇ ಅದ್ವೈತಿಯ ದೃಷ್ಟಿ. ಮತ್ತೊಂದು ಅಪರಿಪಕ್ವವಾದ ದ್ವೈತಿಗಳ ಗುಂಪಿರುವುದು. ಅವರು ದೇವರು ತನ್ನಿಂದ ಸೃಷ್ಟಿಯನ್ನು ರಚಿಸಿ ಆದಮೇಲೆ ಸೃಷ್ಟಿಗಿಂತ ಸಂಪೂರ್ಣ ಬೇರೆಯಾಗಿರುವನು ಎಂದು; ಪ್ರಪಂಚದಲ್ಲಿ ಎಲ್ಲವೂ ಅವನ ಅಧೀನ ಎಂದು ಹೇಳುವರು. ಮತ್ತೆ ಕೆಲವರು ದೇವರು ತನ್ನಿಂದಲೇ ಈ ಸೃಷ್ಟಿಯನ್ನು ರಚಿಸಿದನು, ಜೀವಿಗಳು ಕೊನೆಗೆ ತಮ್ಮ ವ್ಯಕ್ತಿತ್ವವನ್ನು ತೊರೆದು ನಿರ್ವಾಣವನ್ನು ಪಡೆಯುವರು; ಆಗ ಅನಂತವಾಗುವರು ಎನ್ನುವರು. ಈ ಪಂಗಡದವರೂ ಈಗ ಮಾಯವಾಗಿರುವರು. ಆಧುನಿಕ ಭರತಖಂಡದಲ್ಲಿರುವ ಅದ್ವೈತಿಗಳೆಲ್ಲಾ ಶಂಕರಾಚಾರ್ಯರ ಅನುಯಾಯಿಗಳು. ಶಂಕರಾಚಾರ್ಯರ ಮತದಲ್ಲಿ ದೇವರು ಸೃಷ್ಟಿಯ ಉಪಾದಾನ ಮತ್ತು ನಿಮಿತ್ತ ಕಾರಣ. ಆದರೆ ಇದು ಮಾಯೆಯಲ್ಲ ಸತ್ಯವಾಗಿಯೂ ಅಲ್ಲ. ದೇವರು ಪ್ರಪಂಚವಾಗಿಲ್ಲ, ಪ್ರಪಂಚವಿಲ್ಲ. ದೇವರೊಬ್ಬನೇ ಇರುವುದು. ಈ ಮಾಯಾ ಭಾವನೆ ನಾವು ಅದ್ವೈತದಲ್ಲಿ ತಿಳಿದುಕೊಳ್ಳಬೇಕಾದ ಅತಿ ಮುಖ್ಯ ವಿಷಯ. ನಮ್ಮ ತತ್ತ್ವದಲ್ಲೆಲ್ಲ ಅತಿ ಕಷ್ಟವಾದ ವಿಷಯ ಇದು. ಇದನ್ನು ನಿಮಗೆ ವಿವರಿಸುವುದಕ್ಕೆ ನನಗೆ ಕಾಲಾವಕಾಶವಿಲ್ಲ. ಪಾಶ್ಚಾತ್ಯ ತತ್ತ್ವ ಶಾಸ್ತ್ರದ ಪರಿಚಯವಿದ್ದವರಿಗೆ ಕಾಂಟನಲ್ಲಿ ಇಂತಹ ಕೆಲವು ಭಾವನೆಗಳಿರುವುದು ಗೊತ್ತಾಗುವುದು. ಆದರೆ ಯಾರು ಕಾಂಟನ ವಿಚಾರವಾಗಿ ಪ್ರೊಫೆಸರ್ ಮ್ಯಾಕ್ಸ್ ಮುಲ್ಲರ್ ಬರೆದಿರುವುದನ್ನು ಓದಿರುವರೊ ಅವರು ಬಹಳ ಜೋಪಾನವಾಗಿರಬೇಕು. ಅದರಲ್ಲಿ ಒಂದು ತಪ್ಪು ಭಾವನೆ ಇದೆ. ಮಾಯೆಯಲ್ಲಿ ಕಾಲ ದೇಶ ಕಾರ್ಯ ಕಾರಣ ಅಭಿನ್ನವಾಗಿದೆ ಎಂದು ಶಂಕರಾಚಾರ್ಯರು ಮೊದಲು ಕಂಡುಹಿಡಿದರು. ಶಂಕರಾ

ಚಾರ್ಯರ ಭಾಷ್ಯಗಳಲ್ಲಿ ಇದಕ್ಕೆ ಸೇರಿದ ಕೆಲವು ವಾಕ್ಯಗಳನ್ನು ನನ್ನ ಸ್ನೇಹಿತ ಪ್ರೊಫೆಸರಿಗೆ ಕಳುಹಿಸಿದೆ. ಆ ಭಾವನೆ ಕೂಡ ಭರತಖಂಡದಲ್ಲಿತ್ತು. ಅದ್ವೈತ ದರ್ಶನದ ಮಾಯಾ ಸಿದ್ಧಾಂತ ಅತಿ ವಿಚಿತ್ರವಾದುದು. ಬ್ರಹ್ಮ ನೊಂದೇ ಇರುವುದು. ಈ ವೈವಿಧ್ಯತೆ ಮಾಯೆಯಿಂದಾಗಿದೆ. ಬ್ರಹ್ಮ ಐಕ್ಯತೆ, ಅದೇ ಪರಮ ಗುರಿ. ಇದೇ ಪೌರಾತ್ಯರಿಗೂ ಪಾಶ್ಚಾತ್ಯರಿಗೂ ಇರುವ ಅಂತ್ಯವಿಲ್ಲದ ವ್ಯತ್ಯಾಸ. ಸಾವಿರಾರು ವರುಷಗಳಿಂದ ಭರತ ಖಂಡ ಪ್ರಪಂಚವನ್ನು ಎದುರಿಸಿದೆ. ಇತರ ರಾಷ್ಟ್ರಗಳು ಇದನ್ನು ತೆಗೆದು ಕೊಂಡವು. ಅವರೆಲ್ಲ ಮಾಯವಾದರು. ನೀವು ಮಾತ್ರ ಇರುವಿರಿ. ಅವರ ನಿರ್ಣಯವೇ, ಈ ಸೃಷ್ಟಿಯೊಂದು ಭ್ರಾಂತಿ ಮಾಯೆ ಎಂಬುದು. ನೀವು ನೆಲದಮೇಲೆ ಕುಳಿತು ಬೆರಳಿನಿಂದ ಊಟ ಮಾಡುವಿರೋ, ಅಥವಾ ಚಿನ್ನದ ತಟ್ಟೆಯಲ್ಲಿ ಊಟ ಮಾಡುವಿರೋ, ನೀವು ಅರಮನೆಯಲ್ಲಿ ವಾಸಿಸು ವಿರೊ, ಅಥವಾ ಅತಿ ದರಿದ್ರ ಭಿಕಾರಿಗಳಾಗಿರುವಿರೊ ಎಲ್ಲರೂ ಮೃತ್ಯು ವಶರಾಗಲೇಬೇಕು. ಎಲ್ಲಾ ಮಾಯೆ. ಇದೇ ಭರತಖಂಡದ ಸನಾತನ ಪಲ್ಲವಿ. ಪುನಃ ಪುನಃ ಹೊಸ ಹೊಸ ರಾಷ್ಟ್ರಗಳೆದ್ದು ಅದನ್ನು ವಿರೋಧಿಸು ವುದಕ್ಕೆ ಪ್ರಯತ್ನಿಸುತ್ತಿವೆ. ಭೋಗವನ್ನೇ ಪರಮ ಧ್ಯೇಯ ಮಾಡಿ ಕೊಂಡು ಅಧಿಕಾರದಿಂದ ಪ್ರಖ್ಯಾತರಾಗುವರು. ಸಾಕಾದಷ್ಟು ಅಧಿಕಾರ ವನ್ನು ಭೋಗಕ್ಕೆ ಉಪಯೋಗಿಸಿ ಮರುಕ್ಷಣ ನಾಶವಾಗುವರು. ಎಲ್ಲಾ ಮಾಯೆಯೆಂದು ನಾವು ನೋಡುವುದರಿಂದಲೇ ನಾವು ಇನ್ನೂ ಇರುವುದು. ಮಾಯಾಸುತರು ಎಂದೆಂದಿಗೂ ಬದುಕಿರುವರು, ಭೋಗದಸುತರು ಸಾಯುವರು.

ಇಲ್ಲಿ ಮತ್ತೊಂದು ವ್ಯತ್ಯಾಸವಿದೆ. ಜರ್ಮನಿ ತತ್ತ್ವ ಶಾಸ್ತ್ರದಲ್ಲಿ ಹೆಗಲ್ ಶೋಫನಿಯರ್ ಪ್ರಯತ್ನದಂತೆಯೇ ಅದೇ ಭಾವನೆಯನ್ನು ಪ್ರಾಚೀನ ಭರತಖಂಡದಲ್ಲಿ ಹಿಂದೆ ತಂದಿದ್ದರು. ಅದೃಷ್ಟವಶಾತ್ ಹೆಗಲ್‌ನ ಭಾವನೆಯನ್ನು ಅಂಕುರದಲ್ಲೇ ನಾಶಮಾಡಿದರು. ಅದು ಬೆಳೆದು ಮರವಾಗಿ ನಾಶಕಾರಕ ರೆಂಬೆಗಳನ್ನು ಭರತಖಂಡದ ಮೇಲೆ ಹರಡಲು ಅವಕಾಶ ಕೊಡ ಲಿಲ್ಲ. ಹೆಗಲ್‌ನ ಭಾವನೆ, ಅವ್ಯಕ್ತ ಇನ್ನೂ ಅಸ್ಪಷ್ಟವಾಗಿದೆ, ವ್ಯಕ್ತ ಅದ ಕ್ಕಿಂತ ಉತ್ತಮ, ಅವ್ಯಕ್ತಕ್ಕಿಂತ ವ್ಯಕ್ತಪ್ರಪಂಚ ಮೇಲು, ಮುಕ್ತಿಗಿಂತ ಸಂಸಾರ ಮೇಲು, ಎಂಬುದೇ ಅವನ ಮುಖ್ಯ ಭಾವನೆ. ನೀವು ಸಂಸಾರದಲ್ಲಿ ಹೆಚ್ಚು ಮುಳುಗಿದಷ್ಟೂ, ಹೆಚ್ಚು ಅದರ ಚಟುವಟಿಕೆಯಲ್ಲಿ ನಿರತರಾದಷ್ಟೂ

ನೀವು ಮೇಲೆ ಇರುವಿರಿ. ನಾವು ಮನೆ ಹೇಗೆ ಕಟ್ಟುತ್ತೇವೆ, ಬೀದಿ ಹೇಗೆ ಗುಡಿಸುತ್ತೇವೆ ಇಂದ್ರಿಯಗಳ ಮೂಲಕ ಹೇಗೆ ಸುಖಪಡುತ್ತೇವೆ ಎಂಬುದು ನಿಮಗೆ ಕಾಣುವುದಿಲ್ಲವೆ? ಪ್ರತಿಯೊಂದು ಸುಖದ ಹಿಂದೆ ದುಃಖ ಭಯ ಮನಸ್ತಾಪ ಅವಿತುಕೊಂಡಿರಬಹುದು. ನಮ್ಮ ದಾರ್ಶನಿಕರು ಮೊದಲಿನಿಂದಲೂ ವಿಕಾಸವೆನ್ನುವ ಪ್ರತಿಯೊಂದು ಆವಿರ್ಭಾವನೆಯೂ, ಅವ್ಯಕ್ತ ವ್ಯಕ್ತವಾಗಲೆಣಿಸುವ ವೃಥಾ ಪ್ರಯತ್ನ. ಇಡೀ ಬ್ರಹ್ಮಾಂಡದ ಸೃಷ್ಟಿಕರ್ತರಾದ ಮಹಾಮಹಿಮರೇ, ಕೆಸರಿನ ಗುಂಡಿಯಲ್ಲಿ ಪ್ರತಿಬಿಂಬಿಸಲು ಏತಕ್ಕೆ ಪ್ರಯತ್ನಿಸುತ್ತಿರುವಿರಿ! ಕೆಲವು ಕಾಲ ಪ್ರಯತ್ನಪಟ್ಟು ಇವೆಲ್ಲ ನಿರಾಶೆ ಎಂದು ತೋರಿ ಬಂದೆಡೆಗೆ ಹಿಂತಿರುಗುವಿರಿ. ಇದೇ ವೈರಾಗ್ಯ ಧರ್ಮದ ಪ್ರಾರಂಭ. ಧರ್ಮ ನೀತಿ ತ್ಯಾಗವಿಲ್ಲದೆ ಹೇಗೆ ಸಾಧ್ಯ? ತ್ಯಾಗವೇ ಮುಖ್ಯ. "ತ್ಯಜಿಸಿ, ತ್ಯಜಿಸಿ" ಎನ್ನುವುದು ವೇದ. ತ್ಯಾಗವೊಂದೇ ಇರುವ ಮಾರ್ಗ. "ನ ಪ್ರಜಯಾ ಧನೇನ ತ್ಯಾಗೇನೈಕೇ ಅಮೃತತ್ವಮಾನಶುಃ" ಸಂತಾನದಿಂದಲ್ಲ, ದ್ರವ್ಯದಿಂದಲ್ಲ, ಕೇವಲ ತ್ಯಾಗದಿಂದ ಮುಕ್ತಿಯನ್ನು ಗಳಿಸಿದರು. ಹಿಂದೂಶಾಸ್ತ್ರ ಸಾರುವುದೇ ಇದನ್ನು. ಸಿಂಹಾಸನದ ಮೇಲೆ ಕುಳಿತಿದ್ದರೂ ಅನೇಕ ಮಹಾ ಪುರುಷರು ತ್ಯಾಗಿಗಳಾಗಿದ್ದರು. ಜನಕ ಕೂಡ ತ್ಯಾಗ ಮಾಡಬೇಕಾಯಿತು. ಅವನಿಗಿಂತ ಹೆಚ್ಚು ತ್ಯಾಗಿಗಳಾರು? ಆಧುನಿಕ ಕಾಲದಲ್ಲಿ ನಮಗೆಲ್ಲ ಜನಕರೆಂದು ಕರೆಸಿಕೊಳ್ಳಲು ಆಸೆ. ನಾವೆಲ್ಲ ಹೊಟ್ಟೆಗಿಲ್ಲದೆ, ಬಟ್ಟೆಗಿಲ್ಲದೆ, ನರಳುತ್ತಿರುವ ಮಕ್ಕಳ ಜನಕರು (ತಂದೆ). ಜನಕ ಎಂಬ ಪದವನ್ನು ಈ ಭಾವನೆಯಲ್ಲಿ ಮಾತ್ರ ನಾವು ಉಪಯೋಗಿಸಬಹುದು. ಹಿಂದಿನ ಜನಕನಲ್ಲಿದ್ದ ಜ್ಯೋತಿರ್ಮಯ ದೈವೀ ಗುಣಗಳಿಲ್ಲ. ಇವರೇ ನಮ್ಮ ಈಗಿನಕಾಲದ ಜನಕರು. ಈ ಜನಕತತ್ವವನ್ನು ಬಿಟ್ಟು ಸೀದಾರಸ್ತೆಗೆ ಬನ್ನಿ. ತ್ಯಾಗಮಾಡಿದರೆ ನಿಮಗೆ ಧರ್ಮ ದೊರಕುವುದು. ಅದು ಸಾಧ್ಯವಿಲ್ಲದೇ ಇದ್ದರೆ ಪ್ರಪಂಚದಲ್ಲಿರುವ ಪ್ರಾಚ್ಯ ಪೌರಾತ್ಯ ಗ್ರಂಥವನ್ನೆಲ್ಲ ಓದಬಹುದು. ಪುಸ್ತಕ ಭಂಡಾರವನ್ನೆಲ್ಲ ಪೂರೈಸಬಹುದು. ಪ್ರಪಂಚದಲ್ಲೇ ದೊಡ್ಡ ಪಂಡಿತರಾಗಬಹುದು. ಆದರೆ ನಿಮ್ಮಲ್ಲಿ ಕರ್ಮಕಾಂಡ ಒಂದೇ ಇದ್ದರೆ ಏನೂ ಪ್ರಯೋಜನವಿಲ್ಲ. ಅಲ್ಲಿ ಆಧ್ಯಾತ್ಮಿಕತೆ ಏನೂ ಇಲ್ಲ.

ತ್ಯಾಗದಿಂದ ಮಾತ್ರ ಅಮೃತತ್ವವನ್ನು ಪಡೆಯಬಹುದು. ತ್ಯಾಗವೇ ಮಹಾ ಶಕ್ತಿ. ಈ ಶಕ್ತಿ ಪ್ರಪಂಚವನ್ನು ಕೂಡ ನಿರ್ಲಕ್ಷಿಸುವುದು.

"ಬ್ರಹ್ಮಾಂಡಂ ಗೋಷ್ಪದಾಯತೆ." ಬ್ರಹ್ಮಾಂಡವೆಲ್ಲ ಗೋವಿನ ಪಾದ ದಿಂದಾದ ಗುರುತಿನಂತಾಗುವುದು. ತ್ಯಾಗವೇ ಭಾರತದ ಸನಾತನ ಪತಾಕೆ. ಇದೇ ಭರತಖಂಡ ಪ್ರಂಚದಲ್ಲೆಲ್ಲ ಹಾರಿಸುವುದು. ನಾಶ ವಾಗುತ್ತಿರುವ ಜನಾಂಗಗಳಿಗೆ, ಎಲ್ಲಾ ದುರಾಚಾರಿಗಳಿಗೆ, ದೌರ್ಜನ್ಯ ಪರ ರಿಗೆ, ಪದೇ ಪದೇ "ತ್ಯಾಗ" ವೆಂಬ ಸಂದೇಶದಿಂದ ಮುಂಜಾಗ್ರತೆ ಕೊಡುತ್ತಿದೆ. ಹಿಂದೂಗಳೇ ಈ ಪತಾಕೆಯನ್ನು ಎಂದಿಗೂ ತ್ಯಜಿಸ ಬೇಡಿ. ಅದನ್ನು ಎತ್ತಿಹಿಡಿಯಿರಿ. ನೀವು ದುರ್ಬಲರಾಗಿ ತ್ಯಾಗ ಮಾಡುವುದಕ್ಕೆ ಶಕ್ತಿ ಇಲ್ಲದೇ ಇದ್ದರೂ ಆದರ್ಶವನ್ನು ಕೆಳಗೆ ಎಳೆಯ ಬೇಡಿ. "ನನ್ನ ಕೈಲಾಗುವುದಿಲ್ಲ. ನಾನು ತ್ಯಜಿಸಲಾರೆ" ಎನ್ನಿ. ಆದರೆ ಮಿಥ್ಯಾಚಾರಿಗಳಾಗಬೇಡಿ. ಗ್ರಂಥಪೀಡನೆ ಮಾಡಬೇಡಿ. ವಾದ ಮಾಡಿ ಇತರರ ಕಣ್ಣಿಗೆ ಮಣ್ಣು ಹಾಕಲು ಯತ್ನಿಸಬೇಡಿ. ಇದನ್ನು ಮಾಡಬೇಡಿ. ನಮ್ಮ ಕೈಲಾಗುವುದಿಲ್ಲ ಎಂದು ಒಪ್ಪಿಕೊಳ್ಳಿ. ತ್ಯಾಗ ಭಾವನೆ ಅತಿ ಶ್ರೇಷ್ಠವಾದುದು. ಕೋಟ್ಯಂತರ ಜನ ಸೋತು ಕೇವಲ ಹತ್ತು ಅಥವಾ ಇಬ್ಬರೇ ಜಯಶಾಲಿಗಳಾಗಿ ಹಿಂತಿರುಗಿದರೆ ಏನಂತೆ! ಧನ್ಯರು ಸತ್ತ ಕೋಟಿ ಜನರು! ಅವರ ರಕ್ತದಿಂದ ಜಯ ಸಿಕ್ಕಿತು. ವಿಭಿನ್ನ ವೈದಿಕ ಸಂಪ್ರದಾಯದ ಒಂದು ಆದರ್ಶ ಈ ತ್ಯಾಗ. ಬೊಂಬಾಯಿ ಪ್ರಾಂತ್ಯದಲ್ಲಿರುವ ವಲ್ಲಭಾಚಾರ್ಯರ ಪಂಗಡ ಒಂದು ಮಾತ್ರ ಇದಕ್ಕೆ ಸೇರಿಲ್ಲ. ತ್ಯಾಗ ಎಲ್ಲಿಲ್ಲವೊ ಅಲ್ಲಿ ಏನಾಗುವುದೆಂಬುದು ನಿಮ್ಮಲ್ಲಿ ಅನೇಕ ರಿಗೆ ಗೊತ್ತಿದೆ. ನಮಗೆ ಸಂಪ್ರದಾಯ ಬೇಕು, ಮೈಗೆ ಬೂದಿ ಬಳಿದು ಕೊಳ್ಳುವ ಕೈಯನ್ನು ಯಾವಾಗಲೂ ಎತ್ತಿರುವ ಭಯಾನಕ ಸಂಪ್ರದಾ ಯವೂ ಬೇಕು. ಅವು ಅಸ್ವಭಾವಿಕವಾದರೂ ನಮಗೆ ಅದು ಬೇಕು. ಇವು ತ್ಯಾಗಕ್ಕೆ ನಿಂತಿವೆ. ಭರತಖಂಡದಲ್ಲಿ ಧಾಳಿ ಇಡುತ್ತಿರುವ ನಮ್ಮನ್ನು ಬಲಹೀನರನ್ನಾಗಿ ಮಾಡುವ ಆಮೋದಪ್ರಮೋದಗಳಿಗೆ ಬಲಿಯಾಗುವು ದಕ್ಕೆ ಮುಂಚೆ ನಮಗೆ ಎಚ್ಚರಿಕೆ ಕೊಡುವುದಕ್ಕೆ ಈ ತ್ಯಾಗಭಾವನೆ ಬೇಕು.

ಎಲ್ಲಾ ಪಂಗಡದಲ್ಲಿಯೂ ರೂಢಿಯಲ್ಲಿರುವ ಮತ್ತೊಂದು ಭಾವನೆ ಯನ್ನು ನಿಮ್ಮ ಮುಂದಿಡುವೆನು. ಇದೂ ಕೂಡ ದೊಡ್ಡ ವಿಷಯ. ಧರ್ಮ ವನ್ನು ಸಾಕ್ಷಾತ್ಕಾರ ಮಾಡಿಕೊಳ್ಳಬೇಕು ಎಂಬ ಅಪೂರ್ವ ಭಾವನೆ ಈ ಒಂದು ಧರ್ಮದಲ್ಲಿ ಮಾತ್ರ ಇರುವುದು. "ನಾಯಮಾತ್ಮಾ ಪ್ರವಚ ನೇನ ಲಭ್ಯೋ ನ ಮೇಧಯಾ ನ ಬಹುನಾ ಶ್ರುತೇನ" ಹೆಚ್ಚು ಮಾತ

ನಾಡಿದರೆ ಆತ್ಮ ದೊರಕುವುದಿಲ್ಲ. ಹೆಚ್ಚು ಬುದ್ಧಿಯಿಂದಲೂ ದೊರಕುವುದಿಲ್ಲ. ಶಾಸ್ತ್ರಾಧ್ಯಯನದಿಂದಲೂ ದೊರಕುವುದಿಲ್ಲ. ನಮ್ಮ ಶಾಸ್ತ್ರವೊಂದೇ ಪ್ರಪಂಚದಲ್ಲಿ ಕೇವಲ ಶಾಸ್ತ್ರಾಧ್ಯಯನದಿಂದ ಆತ್ಮಸಾಕ್ಷಾತ್ಕಾರವಾಗುವುದಿಲ್ಲವೆಂದು ಹೇಳುವುದು. ಮಾತು ಉಪನ್ಯಾಸ ಯಾವುದೂ ಪ್ರಯೋಜನವಿಲ್ಲ. ಅದನ್ನು ಸ್ವತಃ ಸಾಕ್ಷಾತ್ಕಾರ ಮಾಡಿಕೊಳ್ಳಬೇಕು. ಅದು ಗುರುವಿನಿಂದ ಶಿಷ್ಯನಿಗೆ ಬರುವುದು. ಈ ಅಂತರ್ದೃಷ್ಟಿ ಶಿಷ್ಯನಿಗೆ ಬಂದಾಗ ಆತಂಕಗಳೆಲ್ಲ ದೂರವಾಗಿ ಆತ್ಮಸಾಕ್ಷಾತ್ಕಾರ ಸಿದ್ಧಿಸುವುದು.

ಮತ್ತೊಂದು ಭಾವನೆ. ಕುಲಗುರು ಅಥವಾ ವಂಶಪಾರಂಪರ್ಯವಾಗಿ ಬಂದ ಗುರುಗಳು ಎಂಬ ಭಾವನೆ ವಂಗದೇಶದಲ್ಲಿ ರೂಢಿಯಲ್ಲಿದೆ. "ನಮ್ಮ ತಂದೆ ನಿಮ್ಮ ಗುರುವಾಗಿದ್ದರು, ಈಗ ನಾನು ನಿನ್ನ ಗುರುವಾಗುವೆನು. ನನ್ನ ತಂದೆ ನಿನ್ನ ತಂದೆಗೆ ಗುರು, ಅದಕ್ಕೆ ನಾನು ನಿನ್ನ ಗುರು." ಗುರು ಎಂದರೆ ಏನು? ಶ್ರುತಿಗೆ ಹೋಗೋಣ. ಯಾರಿಗೆ ಶಾಸ್ತ್ರಸಾರ ಗೊತ್ತಿದೆಯೊ ಅವನು ಗುರು. ಸುಮ್ಮನೆ ಪುಸ್ತಕಪಾಂಡಿತ್ಯವಲ್ಲ. ಶಾಸ್ತ್ರಗಳ ಅರ್ಥ ಗೊತ್ತಿರಬೇಕು. "ಗಂಧದ ಮರದ ಭಾರವನ್ನು ಹೊರುವ ಕತ್ತೆಗೆ ಅದರ ಭಾರ ಮಾತ್ರ ವೇದ್ಯವಾಗುವುದು. ಅದರ ಗುಣವಲ್ಲ." ಹಾಗೆಯೆ ಪಂಡಿತರೂ ಕೂಡ. ನಮಗೆ ಅಂತಹವರು ಬೇಕಾಗಿಲ್ಲ. ತಮಗೇ ಸಾಕ್ಷಾತ್ಕಾರವಾಗಿಲ್ಲದೇ ಇದ್ದವರು ಏನು ತಿಳಿಸಬಲ್ಲರು? ನಾನು ಕಲ್ಕತ್ತೆಯಲ್ಲಿ ಹುಡುಗನಾಗಿದ್ದಾಗ ಧರ್ಮವನ್ನು ಹುಡುಕಿಕೊಂಡು ಮನೆಮನೆ ಅಲೆಯುತ್ತಿದ್ದೆ. ದೊಡ್ಡ ಉಪನ್ಯಾಸ ಹೇಳಿ ಆದ ಮೇಲೆ ಅವರನ್ನು "ನೀವು ದೇವರನ್ನು ಕಂಡಿರುವಿರಾ?" ಎಂದು ಕೇಳಿದೆ. ದೇವರನ್ನು ನೋಡಿದೆಯ ಎಂಬ ಪದ ಕೇಳಿ ಅವರಿಗೆ ಆಶ್ಚರ್ಯವಾಗುತ್ತಿತ್ತು. ದೇವರನ್ನು ನೋಡಿರುವೆನು ಎಂದು ಹೇಳಿದವರು ರಾಮಕೃಷ್ಣ ಪರಮಹಂಸರು ಮಾತ್ರ. ಇಷ್ಟು ಮಾತ್ರವಲ್ಲ. "ಅವನನ್ನು ನೋಡುವುದಕ್ಕೆ ನಿನಗೂ ಸಹಾಯಮಾಡುತ್ತೇನೆ" ಎಂದರು, ಶಾಸ್ತ್ರಕ್ಕೆ ಹಲವು ಬಗೆ ಅರ್ಥ ಕೊಡುವವನು ಗುರುವಲ್ಲ.

"ವಾಗ್ವೈಖರೀ ಶಬ್ದಝರೀ ಶಾಸ್ತ್ರವ್ಯಾಖ್ಯಾನಕೌಶಲಂ ।
ವೈದುಷ್ಯಂ ವಿದುಷಾಂತದ್ವದ್ಭುಕ್ತಯೇ ನ ತು ಮುಕ್ತಯೇ ॥

ಹಲವು ಬಗೆ ಮಾತಿನ ಚಮತ್ಕಾರ, ಶಬ್ದವನ್ನು ಉಪಯೋಗಿಸುವುದು, ಶಾಸ್ತ್ರಗಳಿಗೆ ಹಲವು ಬಗೆ ವಿವರಣೆ ಕೊಡುವುದು ಕೇವಲ ಪಂಡಿತ

ರಂಜನೆಗೆ ಮಾತ್ರ, ಮುಕ್ತಿಗಲ್ಲ. ಶ್ರೋತ್ರಿಯು ಶ್ರುತಿಸಾರ ತಿಳಿದಿರುವನು. ಅವೃಜಿನ, ಪಾಪದೂರನು. ಅಕಾಮಹತ, ಕಾಮದಿಂದ ಪಾರಾದವನು. ನಿಮಗೆ ಕಲಿಸಿ ಹಣಮಾಡಲು ಇಚ್ಛೆ ಇಲ್ಲದವನು. ಅವನೇ ಶಾಂತ, ಸಾಧು. ಅವನು ತಳಿರು ಹೂವುಗಳನ್ನು ತರುವಿಗೆ ತರುವ ವಸಂತನಂತೆ ಇರುವನು. ಮರದಿಂದ ಏನನ್ನೂ ಆಶಿಸುವುದಿಲ್ಲ. ಅದರ ಸ್ವಭಾವವೇ ಒಳ್ಳೆಯದನ್ನು ಮಾಡುವುದು. ಅದು ಒಳ್ಳೆಯದನ್ನು ಮಾಡಿ ಸುಮ್ಮನೆ ಇರುವುದು. ಅಂಥವನೆ ಗುರು.

"ತೀರ್ಣಾಃ ಸ್ವಯಂ ಭೀಮಭವಾರ್ಣವಂ ಜನಾನ್ ಅಹೇತುನಾನ್ಯಾನಪಿ ತಾರಯನ್ತಃ" ಯಾರು ಈ ಅಗಾಧ ಸಂಸಾರ ಸಾಗರವನ್ನು ದಾಟಿರುವನೋ ಯಾವ ಪ್ರತಿಫಲಾಪೇಕ್ಷೆಯೂ ಇಲ್ಲದೆ ಯಾರು ಇತರರಿಗಾಗಿ ಸಹಾಯ ಮಾಡಿರುವನೊ ಅವನು ಮಾತ್ರ ಗುರು, ಇತರರಲ್ಲ.

"ಅವಿದ್ಯಾಯಾಮಂತರೆ ವರ್ತಮಾನಾಃ ಸ್ವಯಂ ಧೀರಾಃ
ಪಂಡಿತಂಮನ್ಯಮಾನಾಃ ।
ಜಂಘನ್ಯಮಾನಾಃ ಪರಿಯನ್ತಿ ಮೂಢಾಃ ಅನ್ಧೇನೈವ
ನೀಯಮಾನಾ ಯಥಾಂಧಾಃ ॥"

"ಅವರೇ ಅವಿದ್ಯೆಯ ಕೂಪದಲ್ಲಿರುವರು. ಆದರೂ ತಮಗೆ ಎಲ್ಲಾ ತಿಳಿದಿರುವುದೆಂದು ಭಾವಿಸುವರು. ಇತರರಿಗೆ ಸಹಾಯಮಾಡಲು ಕಾತುರರಾಗಿರುವರು. ಎಷ್ಟೋ ತಪ್ಪುದಾರಿಯಲ್ಲಿ ಅಲೆದಾಡುತ್ತಿರುವರು. ಕುರುಡ ಕುರುಡನಿಗೆ ದಾರಿ ತೋರುವಂತೆ ಇಬ್ಬರೂ ಭಾವಿಗೆ ಬೀಳುವರು" (ಕಠೋಪನಿಷತ್). ನಿಮ್ಮ ಈಗಿನ ಸ್ಥಿತಿಯನ್ನು ಅವರೊಂದಿಗೆ ಹೋಲಿಸಿ ನೋಡಿ. ನೀವು ವೇದಾಂತಿಗಳು. ಬಹಳ ಆಚಾರ ಶೀಲರು. ನಾನು ನಿಮ್ಮನ್ನು ಹೆಚ್ಚು ಆಚಾರಶೀಲರನ್ನಾಗಿ ಮಾಡಲಿಚ್ಛಿಸುವೆನು. ನೀವು ಹೆಚ್ಚು ಆಚಾರಶೀಲರಾದಷ್ಟೂ ಜಾಗ್ರತರಾಗುವಿರಿ. ಆಧುನಿಕ ಆಚಾರ ಶೀಲತೆಯನ್ನು ಹೆಚ್ಚು ಪರಿಗಣಿಸಿದಷ್ಟೂ ಹುಚ್ಚರಾಗುವಿರಿ. ನಿಮ್ಮ ಹಿಂದಿನ ಆಚಾರಕ್ಕೆ ಹೋಗಿ. ಆಗಿನ ಕಾಲದಲ್ಲಿ ಶಾಸ್ತ್ರದಿಂದ ಬಂದ ಪ್ರತಿಯೊಂದು ವಾಣಿಯ ಪ್ರತಿಯೊಂದು ಆಚಾರಣೆಯ ಹಿಂದೆಯೂ ಧೀರ ಸ್ಥಿರ ಶುದ್ಧ ಹೃದಯವಿತ್ತು. ಪ್ರತಿಯೊಂದೂ ಸತ್ಯವಾಗಿತ್ತು. ಅನಂತರ ಕಲೆ ವಿಜ್ಞಾನ ಧರ್ಮ ಮತ್ತು ಪ್ರತಿಯೊಂದು ಕಾರ್ಯ ಕ್ಷೇತ್ರದಲ್ಲಿಯೂ ಅಧೋಗತಿ ಆರಂಭವಾಯಿತು. ಅದರ ಕಾರಣವನ್ನು ವಿಚಾರಿಸಲು ಸಮಯವಿಲ್ಲ.

ಆಗಿನ ಕಾಲದಲ್ಲಿ ಬರೆದ ಗ್ರಂಥಗಳೆಲ್ಲ ಈ ಜಾಡ್ಯವನ್ನ ಅಧೋಗತಿಯನ್ನು ವ್ಯಕ್ತಪಡಿಸುವುವು. ಧೈರ್ಯದ ಬದಲು ಗೋಳು, ಅಳು. ಸ್ಫೂರ್ತಿ ಇದ್ದ ಹಿಂದಿನಕಾಲಕ್ಕೆ ಹೋಗಿ. ಮತ್ತೊಮ್ಮೆ ಬಲಾಢ್ಯರಾಗಿ. ಹಿಂದಿನ ಅಮೃತ ಚಿಲುಮೆಯಲ್ಲಿ ಪಾನಮಾಡಿ. ಭಾರತವನ್ನು ಪುನರುಜ್ಜೀವನ ಗೊಳಿಸುವುದಕ್ಕೆ ಇದೊಂದೆ ಉಪಾಯ.

ಅದ್ವೈತದ ಪ್ರಕಾರ ನಮ್ಮಲ್ಲಿ ಇರುವ ವ್ಯಕ್ತಿತ್ವ ಒಂದು ಭ್ರಾಂತಿ. ಪ್ರಪಂಚದಲ್ಲೆಲ್ಲಾ ಇದೊಂದು ದೊಡ್ಡ ಪ್ರಶ್ನೆ. ತಕ್ಷಣ ನೀವು ಒಬ್ಬನಿಗೆ ನೀನು ಒಬ್ಬ ವ್ಯಕ್ತಿಯಲ್ಲ ಎಂದು ಹೇಳಿ. ತಕ್ಷಣ ತನ್ನ ವ್ಯಕ್ತಿತ್ವ ಏನಾಗಿ ಹೋಗುವುದೊ ಎಂದು ಅವನು ಭಯಭ್ರಾಂತನಾಗುವನು. ಅದ್ವೈತಿ ನಿಮಗೆ ಎಂದಿಗೂ ವ್ಯಕ್ತಿತ್ವ ಇರಲೇ ಇಲ್ಲ ಎನ್ನುವನು. ನೀವು ಪ್ರತಿಕ್ಷಣವೂ ಬದಲಾಯಿಸುತ್ತಿದ್ದೀರಿ. ಮಗುವಾಗಿದ್ದಾಗ ಒಂದು ರೀತಿ ಆಲೋಚನೆ ಮಾಡುತ್ತಿದ್ದಿರಿ. ಈಗ ಮನುಷ್ಯರಾಗಿರುವಿರಿ. ಈಗೊಂದು ಬಗೆ ಆಲೋಚನೆ ಮಾಡುವಿರಿ. ಮುದುಕನಾದ ಮೇಲೆ ಬೇರೊಂದು ಬಗೆ ಆಲೋಚಿಸುವಿರಿ. ಪ್ರತಿಯೊಬ್ಬರೂ ಬದಲಾಯಿಸುತ್ತಿರುವರು. ಹೀಗಿರುವಾಗ ನಿಮ್ಮ ವ್ಯಕ್ತಿತ್ವ ಎಲ್ಲಿದೆ? ಅದು ನಿಜವಾಗಿ ದೇಹ, ಮನಸ್ಸು, ಆಲೋಚನೆಯಲ್ಲಿಲ್ಲ. ಅದರಾಚೆ ಆತ್ಮನಿರುವುದು. ಆತ್ಮನೇ ಬ್ರಹ್ಮ. ಎರಡು ಅನಂತ ಇರಲಾರದು ಎಂದು ಅದ್ವೈತ ಹೇಳುವುದು. ಇರುವುದು ಒಂದೇ ಒಂದು ವ್ಯಕ್ತಿ. ಅದೇ ಅನಂತ. ಸೀದಾಮಾತಿನಲ್ಲಿ ಹೇಳುವುದಾದರೆ ನಾವು ವಿಚಾರ ಮತಿಗಳು, ಆಲೋಚಿಸಬೇಕಾಗಿದೆ. ವಿಚಾರ ಎಂದರೆ ಏನು? ಇನ್ನು ಮುಂದೆ ಹೋಗದಂತೆ ಒಂದು ಹೆಚ್ಚು ವಸ್ತುವನ್ನು ತೋರುವ ಗುಂಪಿಗೆ ತರುವುದು. ಮಿತಿಯಿಂದ ಕೂಡಿದ ವಸ್ತುವನ್ನು ವಿಭಜನೆ ಮಾಡುತ್ತಾ ಹೋಗಿ. ಅನಂತವನ್ನು ಸೇರುವವರೆಗೆ ನೀವು ಎಲ್ಲಿಯೂ ನಿಲ್ಲಲಾರಿರಿ. ಆ ಅನಂತ ಒಂದೇ ಇರುವುದು. ಉಳಿದುದೆಲ್ಲ ಮಾಯೆ. ಮತ್ತಾವುದೂ ನಿಜವಾಗಿ ಇಲ್ಲ. ಯಾವುದಾದರೂ ವಸ್ತುವಿನಲ್ಲಿ ಸತ್ಯಾಂಶವಿದ್ದರೆ ಅದೇ ಬ್ರಹ್ಮ. ನಾವೇ ಆ ಬ್ರಹ್ಮ, ನಾಮ ರೂಪಗಳೆಲ್ಲ ಮಾಯೆ. ನಾಮ ರೂಪಗಳನ್ನು ತೆಗೆದುಬಿಟ್ಟರೆ ನಾವೆಲ್ಲ ಒಂದೆ. ಆದರೆ "ನಾನು" ಎಂದರೆ ಜೋಪಾನವಾಗಿರಬೇಕು. ನಾನು ಬ್ರಹ್ಮನಾದರೆ ಏತಕ್ಕೆ ನಾನು ಯಾವ ಕೆಲಸವನ್ನೂ ಮಾಡಲಾಗುವುದಿಲ್ಲ. ಪದವನ್ನು ಬೇರೆ ರೀತಿ ಉಪಯೋಗಿಸುತ್ತಿರುವೆವು. ನೀವು ಎಲ್ಲಿಯುವರೆಗೂ ಬದ್ಧರೆಂದು ಭಾವಿಸುವಿರೊ ನೀವು ಅಲ್ಲಿಯವರೆಗೆ ಬ್ರಹ್ಮನಲ್ಲ.

ಅವನಿಗೆ ಯಾವುದೂ ಬೇಕಾಗಿಲ್ಲ. ಅವನು ಅಂತರ್ಜ್ಯೋತಿ. ಅವನ ಆನಂದ ಸುಖವೆಲ್ಲ ಆತ್ಮದಲ್ಲಿರುವುದು. ಅವನು ಆತ್ಮತೃಪ್ತನಾಗಿರುವನು. ಅವನಿಗೆ ಏನೂ ಬೇಕಾಗಿಲ್ಲ. ಏನನ್ನೂ ನಿರೀಕ್ಷಿಸುವುದಿಲ್ಲ. ಅವನು ಸಂಪೂರ್ಣ ನಿರ್ಭಯ, ಸಂಪೂರ್ಣ ಸ್ವಾಧೀನ. ಅದೇ ಬ್ರಹ್ಮ. ಆ ಬ್ರಹ ಸ್ವರೂಪದಲ್ಲಿ ನಾವೆಲ್ಲ ಒಂದೇ.

ಇಲ್ಲೇ ದ್ವೈತವಾದಿಗಳಿಗೂ ಅದ್ವೈತವಾದಿಗಳಿಗೂ ದೊಡ್ಡ ಅಂತರ ವಿರುವುದು. ದೊಡ್ಡ ಭಾಷ್ಯಕಾರರಾದ ಶಂಕರಾಚಾರ್ಯರೇ ಕೆಲವು ವೇಳೆ ಶ್ಲೋಕಗಳಿಗೆ ಕೊಡುವ ಅರ್ಥ ನನಗೆ ಸರಿಯಾಗಿ ಕಾಣುವುದಿಲ್ಲ. ಕೆಲವು ವೇಳೆ ರಾಮಾನುಜರು ಕೂಡ ಹೇಳುವುದು ಸ್ಪಷ್ಟವಾಗಿಲ್ಲ. ನಮ್ಮ ಪಂಡಿತ ರಲ್ಲಿ ಕೂಡ ಇದರಲ್ಲಿ ಒಂದು ಸತ್ಯವಾಗಿರಬೇಕು, ಉಳಿದುದು ಮಿಥ್ಯೆ ವಾಗಿರಬೇಕು ಎಂಬ ಭಾವನೆ ಬಂದು ಹೋಗಿದೆ. ಅವರ ಕೃತಿಯಲ್ಲಿ "ಏಕಂ ಸತ್ ವಿಪ್ರಾ ಬಹುಧಾ ವದನ್ತಿ" ಎಂಬ ಭಾವನೆ ಬಂದಿದ್ದರೂ ಗಮನಿಸುವುದಿಲ್ಲ. ನಮ್ಮ ಜಾತಿ ಜೀವನದ ಮೂಲಮಂತ್ರ ಇದು. ಇದನ್ನು ಅನುಷ್ಠಾನದಲ್ಲಿ ತರುವುದೇ ನಮ್ಮ ಇಡೀ ಜೀವನದ ಸಮಸ್ಯೆ ಯಾಗಿದೆ. ಕೆಲವು ಆಧ್ಯಾತ್ಮಿಕ ಜೀವಿಗಳನ್ನು ಜ್ಞಾನಿಗಳನ್ನು ಬಿಟ್ಟರೆ ಈ ಸಂದೇಶವನ್ನು ನಾವು ಯಾವಾಗಲೂ ಮರೆತಿರುವೆವು. ಪಂಡಿತರಲ್ಲಿ ಶೇಕಡ ತೊಂಬತ್ತೆಂಟು ಮಂದಿ ಅದ್ವೈತಿಗಳು ವಿಶಿಷ್ಟಾದ್ವೈತಿಗಳು ಇಲ್ಲದೆ ದ್ವೈತಿಗಳು, ಮೂವರಲ್ಲಿ ಒಬ್ಬರು ಮಾತ್ರ ಸತ್ಯ ಎಂದು ಭಾವಿಸು ವರು. ನೀವು ಕಾಶಿಗೆ ಹೋಗಿ ಯಾವುದಾದರೂ ಘಾಟಿನಲ್ಲಿ ಐದು ನಿಮಿಷ ಕುಳಿತರೆ ನಾನು ಹೇಳುವುದು ನಿಮಗೆ ಗೊತ್ತಾಗುವುದು.

ಇಂತಹ ದ್ವಂದ್ವ ಮತ್ತು ಕಲಹರವದಿಂದ ಒಬ್ಬ ಮಹಾಪುರುಷ ಉದಿ ಸಿದರು. ಅವರು ವಿಭಿನ್ನ ಭರತಖಂಡದ ಸಂಪ್ರದಾಯವನ್ನೆಲ್ಲ ಸಮಂಜಸ ಮಾಡಿ ತಮ್ಮ ಜೀವನದಲ್ಲೇ ಅದನ್ನು ತೋರಿದರು. ಅವರೇ ಶ್ರೀರಾಮ ಕೃಷ್ಣಪರಮಹಂಸರು. ಇವೆರಡೂ ಆವಶ್ಯಕ ಎಂದು ಅವರ ಜೀವನ ತೋರುವುದು. ಖಗೋಳ ಶಾಸ್ತ್ರದಲ್ಲಿ ಭೂಕೇಂದ್ರ (Geocentric) ಸೂರ್ಯಕೇಂದ್ರದಂತೆ (Heliocentrie). ಮಗುವಿಗೆ ಭೂಗೋಳ ಕಲಿಸು ವಾಗ ಭೂಕೇಂದ್ರವನ್ನು ಕಲಿಸುವರು; ಇದಕ್ಕೆ ಸಂಬಂಧಪಟ್ಟ ಸಮಸ್ಯೆ ಯನ್ನು ಅವನು ಕಲಿತುಕೊಳ್ಳುವನು. ಖಗೋಳಶಾಸ್ತ್ರದ ಸೂಕ್ಷ್ಮ ವಿಷಯಗಳಿಗೆ ಬಂದಾಗ ಸೂರ್ಯಕೇಂದ್ರ ಆವಶ್ಯಕ. ಆಗ ಅವನು ವಿಷಯ

ವನ್ನು ಚೆನ್ನಾಗಿ ತಿಳಿದುಕೊಳ್ಳುವನು. ದ್ವೈತವೇ ಪಂಚೇಂದ್ರಿಯಗಳ ಸ್ವಾಭಾವಿಕ ಭಾವನೆ. ಎಲ್ಲಿಯವರೆಗೆ ನಾವು ಇಂದ್ರಿಯಗಳಿಗೆ ಬದ್ಧರಾಗಿ ರುವೆವೊ ಅಲ್ಲಿಯವರೆಗೆ ಸಾಕಾರ ದೇವರನ್ನು ಮಾತ್ರ ನೋಡಲು ಸಾಧ್ಯ ಬೇರೆ ಇಲ್ಲ. ಪ್ರಪಂಚವನ್ನು ಈಗಿರುವಂತೆ ನೋಡಲೇಬೇಕಾಗಿದೆ. ರಾಮಾನುಜರು, "ಎಲ್ಲಿಯವರೆಗೆ ನೀನು ದೇಹವೆಂದು ಭಾವಿಸುವೆಯೊ, ಮನಸ್ಸು ಎಂದು ಭಾವಿಸುವೆಯೊ, ಜೀವ ಎಂದು ಭಾವಿಸುವೆಯೊ, ಅಲ್ಲಿಯ ವರೆಗೆ ಪ್ರತಿಯೊಂದು ಇಂದ್ರಿಯ ಗ್ರಹಣದ ಹಿಂದೆ ಜೀವ ಜಗತ್ ಮತ್ತು ಇವೆರಡಕ್ಕೂ ಕಾರಣವಾದ ಈಶ್ವರನ ಭಾವನೆ ಇರುತ್ತದೆ" ಎನ್ನುತ್ತಾರೆ. ಮನುಷ್ಯ ಜೀವನದಲ್ಲಿ ಕೆಲವು ಸಮಯ ಬರಬಹುದು. ಆಗ ಶರೀರ ಭಾವನೆ ಮಾಯವಾಗುವುದು. ಮನಸ್ಸು ಕ್ರಮೇಣ ಸೂಕ್ಷ್ಮವಾಗುತ್ತಾ ಬಂದು ಅಂತರ್ನಿಹಿತವಾಗುವುದು. ಆಗ ನಮ್ಮನ್ನು ಅಂಜಿಸುವ ದುರ್ಬಲರ ನ್ನಾಗಿ ಮಾಡುವ ದೇಹಕ್ಕೆ ಬಂಧಿಸುವ ಭಾವನೆಗಳೆಲ್ಲ ಮಾಯವಾಗುವುವು. ಆಗ ಮಾತ್ರ ಪ್ರಾಚೀನ ಮಹಾ ಉಪದೇಶದ ಸತ್ಯ ನಮಗೆ ಮನವರಿಕೆ ಯಾಗುವುದು.

ಇಹೈವ ತೈರ್ಜಿತಃ ಸರ್ಗೋ ಯೇಷಾಂ ಸಾಮ್ಯೇ ಸ್ಥಿತಂ ಮನಃ ।
ನಿರ್ದೋಷಂ ಹಿ ಸಮಂ ಬ್ರಹ್ಮ ತಸ್ಮಾತ್ ಬ್ರಹ್ಮಣಿ ತೇ ಸ್ಥಿತಾಃ ॥

ಯಾರ ಮನಸ್ಸು ಸಮತ್ವದಲ್ಲಿ ಸ್ಥಿರವಾಗುವುದೋ ಅವರು ಈ ಜನ್ಮದಲ್ಲಿ ಜನನ ಮರಣದಿಂದ ಪಾರಾಗಿರುವರು. ಬ್ರಹ್ಮ ನಿರ್ದೋಷ ಎಲ್ಲರಿಗೂ ಸಮ. ಅಂತಹವರು ಬ್ರಹ್ಮನಲ್ಲಿ ಐಕ್ಯರಾಗಿರುವರು.

ಸಮಂ ಪಶ್ಯನ್ ಹಿ ಸರ್ವತ್ರ ಸಮವಸ್ಥಿತಮೀಶ್ವರಮ್ ।
ನ ಹಿನಸ್ತ್ಯಾತ್ಮನಾತ್ಮಾನಂ ತತೋ ಯಾತಿ ಪರಾಂ ಗತಿಮ್ ॥

ಎಲ್ಲರೆಡೆಯಲ್ಲಿಯೂ ಸಮನಾಗಿರುವ ದೇವರನ್ನು ನೋಡಿ, ಜ್ಞಾನಿ ಆತ್ಮ ನಿಂದ ಆತ್ಮನಿಗೆ ಹಾನಿಮಾಡದೆ ಪರಮ ಗತಿಯನ್ನು ಪಡೆಯುವನು.



# ಆಲ್ಮೋರ ಅಭಿನಂದನೆಗೆ ಉತ್ತರ

ನಮ್ಮ ಪೂರ್ವಜರ ಸ್ವಪ್ನದೇಶವಿದು. ಭಾರತಜನನಿ ಪಾರ್ವತಿ ಉದಿಸಿದ ಸ್ಥಳ. ಭಾರತ ವರ್ಷದ ಸತ್ಯಪಿಪಾಸುಗಳೆಲ್ಲ ತಮ್ಮ ಜೀವನದ ಕೊನೆಗಾಲವನ್ನು ಕಳೆಯಬೇಕೆಂದು ಬಯಸುವ ಸ್ಥಳ. ಈ ಪವಿತ್ರ ಗಿರಿಶಿಖರದ ಮೇಲೆ ಸುತ್ತಮುತ್ತಲಿರುವ ಗಹ್ವರಗಳಲ್ಲಿ ರಭಸದಿಂದ ಸಾಗುತ್ತಿರುವ ನದೀ ತೀರದಲ್ಲಿ, ಅತಿ ಗಹನವಿಷಯಗಳನ್ನು ಪ್ರಾಚೀನಕಾಲದಲ್ಲಿ ಆಲೋಚಿಸಿದರು. ಅದರಲ್ಲಿ ಒಂದು ಅಂಶ ಮಾತ್ರ ಪ್ರಕಟವಾಗಿದೆ. ಅದೇ ಪಾಶ್ಚಾತ್ಯರ ಆದರಕ್ಕೆ ಅಷ್ಟೊಂದು ಪಾತ್ರವಾಗಿದೆ. ಧುರೀಣ ವಿದ್ವಾಂಸರೇ ಇದನ್ನು ಅಸಾಧಾರಣ ಎಂದುಕೊಂಡಿರುವರು. ನಾನು ಬಾಲ್ಯದಿಂದಲೂ ವಾಸಮಾಡಬೇಕೆಂದು ಕನಸು ಕಾಣುತ್ತಿದ್ದ ಸ್ಥಳವೇ ಇದು. ನಾನು ಪುನಃ ಪುನಃ ಇಲ್ಲಿಗೆ ಬಂದು ವಾಸಿಸುವುದಕ್ಕೆ ಪ್ರಯತ್ನಿಸುತ್ತಿರುವೆನು ಎಂಬುದು ನಿಮಗೆಲ್ಲ ಗೊತ್ತು. ಅದಕ್ಕೆ ಸರಿಯಾದ ಸಮಯ ಒದಗಿಬರಲಿಲ್ಲ. ಮಾಡುವುದಕ್ಕೆ ಕೆಲಸವಿತ್ತು. ಈ ಪವಿತ್ರ ಸ್ಥಳದಿಂದ ಹೊರಗೆ ಹೋಗಬೇಕಾಗಿ ಬಂತು. ಆದರೂ ಋಷಿಗಳ ನೆಲೆಬೀಡಾಗಿದ್ದ ನಮ್ಮ ತತ್ತ್ವಶಾಸ್ತ್ರ ಹುಟ್ಟಿದ ಗಿರಿರಾಜನ ಎಡೆಯಲ್ಲಿ ನನ್ನ ಜೀವನವನ್ನು ಕಳೆಯಬೇಕೆಂದು ಇಚ್ಛೆ. ಬಹುಶಃ ನಾನು ಹಿಂದೆ ಆಲೋಚಿಸಿದಂತೆ ಮಾಡುವುದಕ್ಕಾಗದೆ ಇರಬಹುದು. ಆ ಮೌನ ಅಜ್ಞಾತವಾಸ ದಯಪಾಲಿಸಬೇಕೆಂದು ನಾನು ಎಷ್ಟು ಪ್ರಾರ್ಥಿಸುತ್ತೇನೆ. ಅದಕ್ಕಾಗಿ ನಾನು ಹೃತ್ಪೂರ್ವಕ ಪ್ರಾರ್ಥಿಸುತ್ತೇನೆ, ಆಶಿಸುತ್ತೇನೆ. ಪ್ರಪಂಚದಲ್ಲೆಲ್ಲಾ ಈ ಸ್ಥಳದಲ್ಲಿ ನಾನು ನನ್ನ ಕೊನೆಗಾಲವನ್ನು ಕಳೆಯುತ್ತೇನೆ ಎಂದು ನಂಬುವೆನು.

ಪಾಶ್ಚಾತ್ಯ ದೇಶದಲ್ಲಿ ನಾನು ಮಾಡಿದ ಅಲ್ಪ ಕೆಲಸವನ್ನು ನೀವು ಶ್ಲಾಘಿಸಿರುವಿರಿ. ಅದಕ್ಕೆ ನನ್ನ ಅನಂತ ಧನ್ಯವಾದ. ಆ ಕಾರ್ಯವನ್ನು ಪಾಶ್ಚಾತ್ಯದೇಶದಲ್ಲಾಗಲಿ ಪೌರಾತ್ಯ ದೇಶದಲ್ಲಾಗಲಿ ಮಾತನಾಡುವುದಕ್ಕೆ ಇಚ್ಛೆ ಇಲ್ಲ. ನನ್ನ ಕಣ್ಣಿಗೆ ಈ ಗಿರಿರಾಜನ ಶಿಖರಗಳು ಒಂದಾದ ಮೇಲೊಂದು ಕಂಡಾಗ ಕೆಲಸಮಾಡುವ ಕುತೂಹಲವೆಲ್ಲ ಹಲವು ವರುಷಗಳಿಂದ ಕುದಿಯುತ್ತಿದ್ದ ಆ ಇಚ್ಛೆಯೆಲ್ಲ ತಣ್ಣಗಾಯಿತು. ಏನು ಹಿಂದೆ ಮಾಡಿದೆ, ಮುಂದೆ ಮಾಡಬೇಕೆಂದಿರುವೆ ಎಂಬುದನ್ನು ಮಾತನಾಡುವ ಬದಲು ಹಿಮಾಲಯ ನಮಗೆ ಸನಾತನವಾಗಿ ಯಾವ ಸಂದೇಶವನ್ನು

ಬೋಧಿಸುತ್ತದೆಯೊ, ಯಾವ ಸಂದೇಶ ಈ ವಾತಾವರಣದಲ್ಲಿ ಅನುರಣಿತವಾಗುತ್ತಿದೆಯೊ, ಈ ಗಿರಿಝುರಿಗಳು ಹಾಡುವ ಯಾವ ಪಲ್ಲವಿ ನನ್ನ ಕಿವಿಗೆ ಬೀಳುತ್ತಿದೆಯೊ ಅದೇ, ''ಸರ್ವಂ ವಸ್ತು ಭಯಾನ್ವಿತಂ ಭುವಿ ನೃಣಾಂ ವೈರಾಗ್ಯಮೇವಾಭಯಂ'' ಈ ಪ್ರಪಂಚದಲ್ಲಿ ಎಲ್ಲಾ ಭಯದಿಂದ ಕೂಡಿದೆ. ವೈರಾಗ್ಯವೊಂದೆ ಒಬ್ಬನನ್ನು ನಿರ್ಭಯನನ್ನಾಗಿ ಮಾಡುವುದು. ಈ ಭಾವನೆಯನ್ನು ಮನಸ್ಸು ಚಿಂತಿಸತೊಡಗಿದೆ. ಇದು ತ್ಯಾಗಭೂಮಿ.

ಇಂದು ಮಾತನಾಡುವುದಕ್ಕೆ ಸಮಯವಿಲ್ಲ. ಅದಕ್ಕೆ ಸರಿಯಾದ ಸನ್ನಿವೇಶವೂ ಇಲ್ಲ. ಹಿಮಾಲಯ ತ್ಯಾಗಕ್ಕೆ ಚಿಹ್ನೆಯಾಗಿದೆ. ಈ ತ್ಯಾಗವೊಂದೇ ಪ್ರಪಂಚಕ್ಕೆ ನಾವು ಬೋಧಿಸಬೇಕಾದ ಮಹಾ ಸಂದೇಶ ಎಂದು ಹೇಳಿ ಉಪನ್ಯಾಸವನ್ನು ಪೂರೈಸಬೇಕಾಗಿದೆ. ನಮ್ಮ ಪೂರ್ವಿಕರು ಹೇಗೆ ತಮ್ಮ ಜೀವನದ ಕೊನೆಗಾಲದಲ್ಲಿ ಈ ಗಿರಿ ಪಿತಾಮಹನೆಡೆಗೆ ಆಕರ್ಷಿತರಾಗುತ್ತಿದ್ದರೋ ಹಾಗೆಯೆ ಧರ್ಮದ ಹೆಸರಿನಲ್ಲಿ ಆಗುವ ಕಾದಾಟ ಮನಸ್ತಾಪ ಭಿನ್ನಾಭಿಪ್ರಾಯಗಳು ಮಾಯವಾಗಿ, ಸನಾತನ ಧರ್ಮ ಒಂದಿದೆ, ಅದೇ ಪ್ರತಿಯೊಬ್ಬರಲ್ಲಿಯೂ ಪವಿತ್ರತೆಯನ್ನು ಸಂದರ್ಶಿಸುವುದು, ಇದೊಂದೇ ಧರ್ಮ, ಉಳಿದುದೆಲ್ಲ ಬರಿ ಬಾಯಿಮಾತು ಎಂದು ಯಾವಾಗ ಗೊತ್ತಾಗುವುದೊ ಆಗ, ಧರ್ಮ ಪಿಪಾಸುಗಳು ಈಶ್ವರ ಪೂಜೆಯಲ್ಲದೆ ಉಳಿದುದೆಲ್ಲ ನಶ್ವರ, ಪ್ರಯೋಜನವಿಲ್ಲವೆಂದು ತಿಳಿದು ಇಲ್ಲಿಗೆ ಬರುವರು.

ಸ್ನೇಹಿತರೆ, ಹಿಮಾಲಯದಲ್ಲಿ ನಾನೊಂದು ಆಶ್ರಮವನ್ನು ಸ್ಥಾಪಿಸಬೇಕೆಂದಿರುವೆನೆಂದು ನೀವು ಹೃತ್ಪೂರ್ವಕ ಪ್ರಸ್ತಾಪಿಸಿರುವಿರಿ. ವಿಶ್ವಧರ್ಮವನ್ನು ಬೋಧಿಸುವುದಕ್ಕೆ ಎಲ್ಲಕ್ಕಿಂತಲೂ ಇದು ಪವಿತ್ರೋತ್ತಮ ಎಂಬುದನ್ನು ನಾನಾಗಲೆ ನಿಮಗೆ ವಿವರಿಸಿರುವೆನು. ಈ ಹಿಮಾಲಯ ಶ್ರೇಣಿಯೊಂದಿಗೆ ನಮ್ಮ ಪೂರ್ವಿಕರ ಸ್ಮೃತಿ ಸಂಬಂಧವಿದೆ. ಭಾರತದ ಧಾರ್ಮಿಕ ಇತಿಹಾಸದಿಂದ ಹಿಮಾಲಯವನ್ನು ತೆಗೆದುಬಿಟ್ಟರೆ ಉಳಿಯುವುದು ಅತ್ಯಲ್ಪ. ಇಲ್ಲಿ ಒಂದು ಕಾರ್ಮಿಕ ಕ್ಷೇತ್ರ ಮಾತ್ರ ಇರುವುದಲ್ಲ, ನೀರವ ಧ್ಯಾನ, ಶಾಂತಿಮಯ ಜೀವನವಿರಬೇಕು. ಒಂದು ದಿನ ಇದು ಸಿದ್ಧಿಸುತ್ತದೆ ಎಂದು ಯೋಚಿಸುತ್ತೇನೆ. ಮತ್ತೊಮ್ಮೆ ನಿಮ್ಮನ್ನು ನೋಡಿ ಮಾತನಾಡುವ ಅವಕಾಶ ಬರುವುದೆಂದೂ ಯೋಚಿಸುವೆನು. ಸದ್ಯಕ್ಕೆ ನೀವು ನನಗೆ ತೋರಿದ ಆದರಕ್ಕೆಲ್ಲ ಅನಂತ ಧನ್ಯವಾದ. ಇದನ್ನು ನೀವು ಕೇವಲ ನನಗೆ ತೋರಿದ ಗೌರವ ಎಂದು ಭಾವಿಸುವುದಿಲ್ಲ. ಇದು ನಮ್ಮ ಧರ್ಮಕ್ಕೆ ತೋರಿದ

ಗೌರವ. ಇದೆಂದಿಗೂ ನಮ್ಮ ಹೃದಯದಿಂದ ಮಾಯವಾಗದೆ ಇರಲಿ. ನಾವು ಎಂದೆಂದಿಗೂ ಈಗ ಪರಿಶುದ್ಧರಾಗಿರುವಂತೆ, ಆಧ್ಯಾತ್ಮಿಕ ಉತ್ಸಾಹಿಗಳಾಗಿರುವಂತೆಯೇ ಇರೋಣ.



# ಭಕ್ತಿ

## ( ಸಿಯಾಲ್‌ಕೋಟೆಯ ಭಾಷಣ )

ಪ್ರಪಂಚದಲ್ಲಿರುವ ಧರ್ಮಗಳೆಲ್ಲ ಉಪಾಸನಾ ದೃಷ್ಟಿಯಿಂದ ವಿಭಿನ್ನ
ಾದರೂ ಅವುಗಳ ಮೂಲರೂಪ ಒಂದೇ ಆಗಿದೆ. ಕೆಲವುಕಡೆ ಜನ ಗುಡಿ
ಟ್ಟಿ ಅಲ್ಲಿ ಪೂಜಿಸುವರು, ಕೆಲವುಕಡೆ ಬೆಂಕಿ ಪೂಜಿಸುವರು, ಕೆಲವುಕಡೆ
ಗ್ರಹಕ್ಕೆ ಅಡ್ಡ ಬೀಳುವರು, ಮತ್ತೆ ಕೆಲವರು ದೇವರಲ್ಲಿ ನಂಬುವುದೇ
ಲ್ಲ. ಅವರೆಲ್ಲರೂ ಸತ್ಯ. ಅವುಗಳ ಮೂಲ ಉದ್ದೇಶ ತತ್ತ್ವ ಮತ್ತು ಸತ್ಯ
ಲ್ಲ ಒಂದೇ ಆಗಿರುವುದು. ಕೆಲವು ಧರ್ಮದಲ್ಲಿ ದೇವರನ್ನು ಪೂಜಿಸು
ದಿಲ್ಲ. ಅವನಲ್ಲಿ ನಂಬಿಕೆಯೂ ಇಲ್ಲ. ಆದರೆ ಸತ್ಪುರುಷರನ್ನು ದೇವ
ಂತೆ ಪೂಜಿಸುವರು. ಭಕ್ತಿರೂಪವನ್ನು ತಾಳಿದ ಉಪಾಸನೆ ಎಲ್ಲಾ ಕಡೆ
ಎಲ್ಲಿಯೂ ಪ್ರಬಲವಾಗಿದೆ. ಜ್ಞಾನಕ್ಕಿಂತ ಭಕ್ತಿಯನ್ನು ಪಡೆಯುವುದು
ುಲಭ. ಜ್ಞಾನಕ್ಕೆ ಯೋಗ್ಯಕಾಲ ಬೇಕು. ಕಠಿಣ ಅಭ್ಯಾಸ ಬೇಕು.
ೋಗವನ್ನು ಅಭ್ಯಾಸಮಾಡಬೇಕಾದರೆ ಒಬ್ಬ ಆರೋಗ್ಯವಾಗಿರಬೇಕು.
ಂಸಾರದ ಆಸಕ್ತಿಯಿಂದ ದೂರವಿರಬೇಕು. ಯಾವ ಸ್ಥಿತಿಯಲ್ಲಿದ್ದರೂ
ಕ್ತಿಯನ್ನು ಬಹಳ ಸುಲಭವಾಗಿ ಎಲ್ಲರೂ ಅಭ್ಯಾಸಮಾಡಬಹುದು.
ಕ್ತಿ ಶಾಸ್ತ್ರವನ್ನು ಬರೆದ ಶಾಂಡಿಲ್ಯರು ಪರಮಪ್ರೇಮ ಸ್ವರೂಪವೇ ಭಕ್ತಿ
ನ್ನುವರು. ಪ್ರಹ್ಲಾದನೂ ಹೀಗೆಯೇ ಹೇಳುವನು. ಒಬ್ಬನಿಗೆ ಒಪ್ಪತ್ತು
ಊಟ ಸಿಕ್ಕದೆ ಇದ್ದರೆ ವ್ಯಾಕುಲಪಡುವನು. ಅವನ ಮಗ ಸತ್ತರೆ ಎಷ್ಟು
ಾರುಣ ದುಃಖಪಡುವನು ! ನಿಜವಾದ ಭಕ್ತ ಭಗವಂತನಿಗೆ ಹಂಬಲಿಸು
ಾಗ ಹೀಗೆಯೇ ವ್ಯಥೆಪಡುವನು. ಭಕ್ತಿಯ ಒಂದು ಗುಣವೇ ಮನಸ್ಸನ್ನು
ದ್ಧಮಾಡುವುದು. ಪರಮಾತ್ಮನ ಮೇಲೆ ಇಡುವ ದೃಢ ಭಕ್ತಿಯೊಂದೆ
ಾಕು ಮನಸ್ಸನ್ನು ಶುದ್ಧಮಾಡುವುದಕ್ಕೆ. " ಹೇ ದೇವರೆ, ಅನಂತ ನಾಮ
ಳು ನಿನಗಿವೆ. ಪ್ರತಿಯೊಂದು ಹೆಸರಿನಲ್ಲಿಯೂ ನಿನ್ನ ಶಕ್ತಿ ತುಂಬಿದೆ.
ತಿಯೊಂದು ಹೆಸರೂ ಯಾವುದೊ ವಿಭೂತಿಗೆ ಚಿಹ್ನೆಯಾಗಿದೆ. ಭಗವಂತ
ನ್ನು ನಾವು ಸದಾ ಚಿಂತಿಸಬೇಕು. ಹಾಗೆ ಮಾಡುವುದಕ್ಕೆ ಕಾಲ ದೇಶ
ನ್ನು ಪರಿಗಣಿಸಬೇಕಾಗಿಲ್ಲ.

ಸಾಧಕ ಬೇರೆ ಬೇರೆ ಹೆಸರಿನಿಂದ ಪೂಜಿಸುವ ದೇವರೆಲ್ಲ ತೋರಿಕೆಗೆ
ಭಿನ್ನವಾಗಿವೆ. ಒಬ್ಬ ತಾನು ದೇವರನ್ನು ಪೂಜಿಸುವ ರೀತಿಯೆ ಬಹಳ

ಪ್ರಯೋಜನಕಾರಿ ಎಂದು ಭಾವಿಸುವನು. ಮತ್ತೊಬ್ಬ ಮುಕ್ತಿಗಳಿಸುವು ದಕ್ಕೆ ತನ್ನ ಮಾರ್ಗವೇ ಅತಿ ಶ್ರೇಷ್ಠವೆಂದು ಭಾವಿಸುವನು. ಮೂಲ ತತ್ತ್ವದ ದೃಷ್ಟಿಯಿಂದ ಎಲ್ಲರೂ ಒಂದೆ. ಶೈವರು ಶಿವನನ್ನು ಅಮಿತ ಶಕ್ತಿ ಶಾಲಿ ಎನ್ನುವರು. ವೈಷ್ಣವರು ತಮ್ಮ ಪ್ರಚಂಡ ಪರಾಕ್ರಮಶಾಲಿ ವಿಷ್ಣು ವನ್ನು ನಂಬುವರು. ದೇವಿಯ ಉಪಾಸಕರು ತಮ್ಮ ದೇವಿಯೆ ಪ್ರಪಂಚ ದಲ್ಲೆಲ್ಲಾ ಸರ್ವಶಕ್ತಳು ಎಂದು ಯಾರಿಗೂ ಸೋಲುವ ಹಾಗಿಲ್ಲ. ನಿಮಗೆ ಶಾಶ್ವತ ಭಕ್ತಿ ಬೇಕಾದರೆ ದ್ವೇಷಭಾವನೆ ತ್ಯಜಿಸಿ. ಭಕ್ತಿ ಮಾರ್ಗಕ್ಕೆ ದೊಡ್ಡ ಆತಂಕ ದ್ವೇಷ. ಯಾರ ಭಕ್ತಿ ಯಾರನ್ನೂ ದ್ವೇಷಿ ಸುವುದಿಲ್ಲವೊ ಅವನು ದೇವರನ್ನು ಸೇರುತ್ತಾನೆ. ಆದರೂ ತನ್ನ ಇಷ್ಟದ ಮೇಲೆ ಭಕ್ತಿ ಆವಶ್ಯಕ. "ವಿಷ್ಣು ರಾಮ ಇಬ್ಬರೂ ಒಂದೇ ಎನ್ನುವುದು ನನಗೆ ಗೊತ್ತಿದೆ. ಆದರೂ ಕಮಲಲೋಚನನಾದ ರಾಮನೆ ನನ್ನ ಸರ್ವಸ್ವ" ಎನ್ನುವನು ಹನುಮಂತ.

ಪ್ರತಿಯೊಬ್ಬರೂ ವಿವಿಧ ಸ್ವಭಾವದವರು. ಈ ಸ್ವಭಾವ ವೈವಿಧ್ಯತೆ ಅವರಲ್ಲಿರಬೇಕು. ಆದಕಾರಣ ಪ್ರಪಂಚದಲ್ಲಿ ಒಂದೇ ಧರ್ಮ ಇರ ಲಾರದು. ಸದ್ಯಕ್ಕೆ ದೇವರ ದಯೆಯಿಂದ ಒಂದೇ ಧರ್ಮ ಇಲ್ಲದಿರಲಿ. ಒಂದೇ ಧರ್ಮವಿದ್ದರೆ ಸಾಮರಸ್ಯ ವಿಶೃಂಖಲತೆ ಪ್ರಾಪ್ತವಾಗುವುದು. ಒಬ್ಬನು ತನ್ನ ಸ್ವಭಾವದಂತೆ ವರ್ತಿಸಬೇಕು. ತನ್ನ ದಾರಿಯಲ್ಲೆ ಮುಂದು ವರಿಯಲು ಪ್ರೋತ್ಸಾಹಿಸುವಂತಹ ಗುರು ಸಿಕ್ಕಿದರೆ ಅವನಿಗೆ ಅನುಕೂಲ ಅವನು ಮುಂದೆ ಸಾಗುವನು. ಪ್ರತಿಯೊಬ್ಬನೂ ತನ್ನ ಸ್ವಭಾವಕ್ಕೆ ತಕ್ಕಂತೆ ವರ್ತಿಸಲು ಅವಕಾಶ ಕೊಡೋಣ. ಅವನನ್ನೇ ಬೇರೆ ಮಾರ್ಗದಲ್ಲಿ ಹೋಗುವಂತೆ ಬಲಾತ್ಕರಿಸಿದರೆ ಆಗಲೆ ಏನನ್ನು ಅವನು ಪಡೆದಿರುವನೋ ಅದನ್ನು ಕಳೆದುಕೊಂಡು ಕೆಲಸಕ್ಕೆ ಬಾರದವನಾಗುವನು. ಒಬ್ಬನ ಮುಖ ಮತ್ತೊಬ್ಬನ ಮುಖದಂತೆ ಹೇಗೆ ಇಲ್ಲವೊ ಹಾಗೆಯೆ ಒಬ್ಬನ ಸ್ವಭಾವ ಮತ್ತೊಬ್ಬನ ಸ್ವಭಾವದಂತೆ ಇಲ್ಲ. ತನ್ನ ವೈವಿಧ್ಯತೆಗೆ ತಕ್ಕಂತೆ ಅವನ ಪ್ರಗತಿಗೆ ಅವಕಾಶವನ್ನೇಕೆ ಕೊಡಬಾರದು. ಒಂದೊಂದು ಮನಸ್ಸು ಒಂದೊಂದು ಕಡೆ ಹರಿಯುತ್ತಿದೆ. ಅದನ್ನು ಒಂದೇ ಕಡೆಗೆ ಹರಿಯುವಂತೆ ಮಾಡಿದರೆ ಅದರ ವೇಗ ಮತ್ತು ಶಕ್ತಿ ಹೆಚ್ಚುವುದು. ಅದನ್ನು ಬೇರೊಂದು ಕಡೆಗೆ ತಿರುಗಿಸಲು ಪ್ರಯತ್ನ ಪಟ್ಟರೆ ಪರಿಣಾಮ ಬೇರೆ ಆಗುವುದು. ಅದರ ಗಾತ್ರ, ವೇಗ ಎರಡೂ ಕಡಿಮೆಯಾಗುವುದು. ಈ ಜೀವನ ಅತಿ ಮುಖ್ಯ

ವಾದುದು. ಒಬ್ಬನ ಪ್ರಕೃತಿಗೆ ತಕ್ಕಂತೆ ಅದನ್ನು ವೃದ್ಧಿಗೊಳಿಸಬೇಕು. ಭರತಖಂಡದಲ್ಲಿ ಧರ್ಮದ ಹೆಸರಿನಲ್ಲಿ ದ್ವೇಷವಿರಲಿಲ್ಲ. ಪ್ರತಿಯೊಂದು ಧರ್ಮವೂ ಸುರಕ್ಷಿತವಾಗಿತ್ತು. ಅದಕ್ಕೇ ಧರ್ಮ ಈಗಲೂ ಜೀವಂತ ವಾಗಿದೆ. ಧರ್ಮದ ವ್ಯಾಜ್ಯಕ್ಕೆ ಮೂಲಕಾರಣ ಒಂದು ಮಾತ್ರ ಸತ್ಯವಾಗಿರ ಬೇಕು ಎಂಬ ಭಾವನೆ. ಯಾರು ಅದನ್ನು ನಂಬುವುದಿಲ್ಲವೊ ಅವರು ಮೂರ್ಖ ರಾಗಿರಬೇಕು. ಇಲ್ಲವೇ ಮಿಥ್ಯಾಚಾರಿಯಾಗಿರಬೇಕು. ಹಾಗೆ ಆಗಿಲ್ಲದೆ ಇದ್ದರೆ ಇವನು ತನ್ನನ್ನು ಅನುಸರಿಸುತ್ತಿದ್ದ ಎಂದು ಭಾವಿಸುವನು.

ದೇವರು ಮನುಷ್ಯ ಒಂದೇ ಧರ್ಮವನ್ನು ಅನುಸರಿಸಬೇಕೆಂದು ಯೋಚಿಸಿದ್ದರೆ ಇಷ್ಟೊಂದು ಧರ್ಮಗಳು ಏತಕ್ಕೆ ಹುಟ್ಟಿದುವು? ಒಂದೇ ಧರ್ಮವನ್ನು ಎಲ್ಲರ ಮೇಲೂ ಬಲಾತ್ಕರಿಸುವುದಕ್ಕೆ ಬೇಕಾದಷ್ಟು ಪ್ರಯತ್ನ ನಡೆದಿದೆ. ಕತ್ತಿಯ ಬಲದಿಂದ ಎಲ್ಲರೂ ಒಂದೇ ಧರ್ಮವನ್ನು ಅನುಸರಿಸ ಬೇಕೆಂದು ಬಲಾತ್ಕಾರ ಮಾಡಿದರೂ ಅಲ್ಲೇ ಹತ್ತಾರು ಧರ್ಮಗಳು ಹುಟ್ಟಿವೆ ಎಂದು ಇತಿಹಾಸ ಸಾರುವುದು. ಒಂದೇ ಧರ್ಮ ಎಲ್ಲರಿಗೂ ಸರಿಹೋಗುವು ದಿಲ್ಲ. ಮನುಷ್ಯ ಕ್ರಿಯೆ ಪ್ರತಿಕ್ರಿಯೆ ಎರಡರ ಪರಿಣಾಮ. ಇದರಿಂದಲೇ ಅವನು ಆಲೋಚಿಸುವುದಕ್ಕೆ ಸಾಧ್ಯ. ಇಂತಹ ಶಕ್ತಿ ಮನುಷ್ಯನ ಬುದ್ಧಿಶಕ್ತಿ ಯನ್ನು ಪ್ರಚೋದಿಸದೆ ಇದ್ದರೆ ಅವನಿಗೆ ಆಲೋಚಿಸುವುದಕ್ಕೆ ಸಾಧ್ಯವಾಗು ತ್ತಿರಲಿಲ್ಲ. ಮನುಷ್ಯ ಆಲೋಚನಾ ಜೀವಿ. ಮನಸ್ಸು ಇರುವವನೇ ಮನುಷ್ಯ. ಆಲೋಚನಾಶಕ್ತಿಯನ್ನು ಕಳೆದುಕೊಂಡೊಡನೆಯೆ ಅವನು ಪ್ರಾಣಿಗಿಂತ ಮೇಲಾಗಲಾರ. ಯಾರಿಗೆ ಅಂತಹ ಮನುಷ್ಯ ಇಷ್ಟ? ಭರತಖಂಡದ ಜನರು ದೇವರ ದಯೆಯಿಂದ ಸದ್ಯಕ್ಕೆ ಹಾಗೆ ಆಗದಿರಲಿ.

ಏಕತ್ವದಲ್ಲಿ ವೈವಿಧ್ಯತೆಯ ಜ್ಞಾನ ಮನುಷ್ಯನನ್ನು ಮನುಷ್ಯನಂತೆ ಇಟ್ಟಿರುವುದಕ್ಕೆ ಆವಶ್ಯಕ. ಪ್ರತಿಯೊಂದರಲ್ಲಿಯೂ ವೈವಿಧ್ಯತೆಯನ್ನು ನಾವು ಕಾಪಾಡಬೇಕು. ವೈವಿಧ್ಯತೆ ಇರುವವರೆಗೆ ಸೃಷ್ಟಿ ಇರುವುದು. ವೈವಿಧ್ಯತೆ ಎಂದರೆ ಒಂದು ಸಣ್ಣದು ಮತ್ತೊಂದು ದೊಡ್ಡದು ಎಂದು ಅರ್ಥ ವಲ್ಲ. ಪ್ರತಿಯೊಬ್ಬನೂ ತನ್ನ ಜೀವನ ಕಾರ್ಯಕ್ಷೇತ್ರದಲ್ಲಿ ತನ್ನ ಪಾಲಿನ ಪಾತ್ರವನ್ನು ಸರಿಯಾಗಿ ಅಭಿನಯಿಸಿದರೆ ವೈವಿಧ್ಯತೆಯನ್ನು ಸುರಕ್ಷಿತವಾಗಿ ಕಾಪಾಡಬಹುದು. ಪ್ರತಿಯೊಂದು ಧರ್ಮದಲ್ಲಿಯೂ ಯೋಗ್ಯರು ಮಹಾ ಪುರುಷರು ಇರುವರು. ಇದರಿಂದ ಅವರ ಧರ್ಮಕ್ಕೆ ಗೌರವ ತರುವರು. ಎಲ್ಲಾ ಧರ್ಮದಲ್ಲಿಯೂ ಇಂತಹವರು ಇರುವುದರಿಂದ ಯಾವ ಧರ್ಮದ

ವರಿಗೂ ಮನಸ್ತಾಪ ಇರಬೇಕಾಗಿಲ್ಲ. ಹಾಗಾದರೆ ಯಾವ ಧರ್ಮ ಪಾಪಕ್ಕೆ ಉತ್ತೇಜನ ಕೊಡುವುದೋ ಅದನ್ನು ಗೌರವಿಸಬೇಕೆ ಎಂಬ ಪ್ರಶ್ನೆ ಏಳು-ವುದು. ಅದನ್ನು ಗೌರವಿಸಕೂಡದು. ಇದೇ ಉತ್ತರ. ಅಂತಹ ಧರ್ಮ ವನ್ನು ತಕ್ಷಣ ಹೊರದೂಡಬೇಕು. ಇದು ಅನಾಹುತಕ್ಕೆ ಕಾರಣ. ಎಲ್ಲಾ ಧರ್ಮವೂ ನೀತಿಯ ಮೇಲೆ ನಿಂತಿರಬೇಕು. ವ್ಯಕ್ತಿಯ ಶೀಲಶುದ್ಧಿ ಧರ್ಮಕ್ಕಿಂತ ಮೇಲಾದುದು. ಆಚಾರವೆಂದರೆ ಬಾಹ್ಯ ಮತ್ತು ಆಂತರಿಕ ಪರಿಶುದ್ಧಿ ಎಂಬುದನ್ನು ಗಮನಿಸಬೇಕು. ಬಾಹ್ಯ ಶುದ್ಧಿಯನ್ನು ಸ್ನಾನ ಮುಂತಾದುವುಗಳಿಂದ ಪಡೆಯಬಹುದು. ಶಾಸ್ತ್ರದಲ್ಲಿ ಇದನ್ನು ಹೇಳಿರು ವರು. ಆಂತರಿಕ ಪರಿಶುದ್ಧಿಯನ್ನು ಪಡೆಯಬೇಕಾದರೆ ಸುಳ್ಳು ಹೇಳ ಕೂಡದು, ಮಾದಕವಸ್ತುವನ್ನು ಸೇವಿಸಬಾರದು, ಯಾವಾಗಲೂ ಒಳ್ಳೆಯ ಕೆಲಸ ಮಾಡಬೇಕು. ನೀನು ಪಾಪವನ್ನು ಮಾಡದೆ ಇದ್ದರೆ, ಸುಳ್ಳು ಹೇಳದೆ ಇದ್ದರೆ, ಕುಡಿಯದೇ ಇದ್ದರೆ, ಜೂಜು ಆಡದೆ ಇದ್ದರೆ, ಕಳ್ಳತನ ಮಾಡದೆ ಇದ್ದರೆ ಒಳ್ಳೆಯದು. ಆದರೆ ಇವು ಕೇವಲ ನಿನ್ನ ಕರ್ತವ್ಯ. ಇದನ್ನು ಮಾಡಿದ ಮಾತ್ರಕ್ಕೆ ನಿನ್ನನ್ನು ಹೊಗಳಬೇಕಾಗಿಲ್ಲ. ಇತರರಿಗೆ ಯಾವುದಾದರೂ ಸೇವೆಯನ್ನು ಮಾಡಬೇಕು. ನಿನಗೆ ಒಳ್ಳೆಯದನ್ನು ಮಾಡಿಕೊಳ್ಳುವಂತೆ ಇತರರಿಗೂ ಒಳ್ಳೆಯದನ್ನು ಮಾಡಬೇಕು.

ಆಹಾರದ ನಿಯಮವನ್ನು ಕುರಿತು ನಿಮಗೆ ಸ್ವಲ್ಪ ಹೇಳುತ್ತೇನೆ. ಹಿಂದಿನ ಆಚಾರಗಳೆಲ್ಲ ಈಗ ಮಾಯವಾಗಿವೆ. ಇವನೊಂದಿಗೆ ಊಟಮಾಡ ಬಾರದು, ಅವನೊಂದಿಗೆ ಊಟಮಾಡಬಾರದು ಎನ್ನುವುದು ಮಾತ್ರ ನಮ್ಮ ದೇಶದಲ್ಲಿ ಈಗ ಉಳಿದಿದೆ. ನೂರಾರು ವರುಷಗಳ ಹಿಂದೆ ನಮಗೆ ಹೇಳಿದ ಒಳ್ಳೆ ವಿಷಯಗಳಲ್ಲಿ ಸ್ಪರ್ಶದೋಷವೊಂದೇ ಉಳಿದಿರುವ ಅವಶೇಷ. ಮೂರು ವಿಧದ ಆಹಾರವನ್ನು ಶಾಸ್ತ್ರ ನಿಷೇಧಿಸುವುದು. ಮೊದಲನೆಯದು ಜಾತಿ ದೋಷ, ಈರುಳ್ಳಿ ಬೆಳ್ಳುಳ್ಳಿ ಮುಂತಾದುವು. ಇದನ್ನು ಹೆಚ್ಚು ಸೇವಿಸಿ ದರೆ ಕಾಮೋದ್ರೇಕವಾಗಿ ದೇವರು ಮತ್ತು ಮನುಷ್ಯರಿಗೆ ಆಗದ ಹಲವು ಹೀನ ಕೃತ್ಯಗಳನ್ನು ಅವನು ಮಾಡಬಹುದು. ಎರಡನೆಯದು ನಿಮಿತ್ತ ದೋಷ. ಬಾಹ್ಯ ವಸ್ತುಗಳಿಂದ ಅಶುದ್ಧವಾದುದು. ಆಹಾರವನ್ನು ಇಡುವುದಕ್ಕೆ ಒಳ್ಳೆಯ ಪರಿಶುದ್ಧವಾದ ಸ್ಥಳವನ್ನು ನೋಡಬೇಕು. ಮೂರನೆ ಯದೆ ಆಶ್ರಯ ದೋಷ. ದುಷ್ಟ ಜನರು ತಂದ ಆಹಾರವನ್ನು ಸೇವಿಸ ಬಾರದು. ಅವನ್ನು ಸ್ಪರ್ಶಿಸಿದರೆ ನಮಗೂ ಹೀನ ಭಾವನೆ ಬರುವುದು.

ಒಬ್ಬ ಬ್ರಾಹ್ಮಣನ ಮಗನಾದರೂ ಅವನು ಸ್ತ್ರೀಲಂಪಟ ಕುಕರ್ಮಿ ಆದರೆ ಅವನಿಂದ ಆಹಾರವನ್ನು ಸೇವಿಸಬಾರದು.

ಈ ಆಚಾರದ ಅರ್ಥವೆಲ್ಲ ಈಗ ಮಾಯವಾಗಿದೆ. ಶ್ರೇಷ್ಠ ಕುಲಕ್ಕೆ ಸೇರಿದವನ ಕೈಯಿಂದ ಮಾತ್ರ ಸ್ವೀಕರಿಸಬೇಕು. ಅವರು ಆ ಕುಲಕ್ಕೆ ಸೇರದೇ ಇದ್ದರೆ ಎಷ್ಟೇ ಧರ್ಮಿಷ್ಠನಾದರೂ ಯೋಗ್ಯನಾದರೂ ಸ್ವೀಕರಿಸ ಕೂಡದು ಎಂಬ ಭಾವನೆ ಮಾತ್ರ ಉಳಿದಿದೆ. ಹಳೆಯ ನಿಯಮಗಳನ್ನೆಲ್ಲ ಮಿಠಾಯಿ ಮಾರುವವರು ಅಲ್ಲಗಳೆದಿರುವರು. ಅವನ ಅಂಗಡಿ ನೋಡಿದರೆ ಮಿಠಾಯಿಮೇಲೆಲ್ಲ ನೊಣ ಹಾರಾಡುತ್ತಿರುವುದು. ದಾರಿಯ ಧೂಳೆಲ್ಲ ಅದರ ಮೇಲೆ ಇರುವುದು. ಆ ಮಿಠಾಯಿ ಮಾರುವನ ಉಡುಪು ಕೂಡ ಶುಭ್ರವಿಲ್ಲ. ಅಂಗಡಿಯಲ್ಲಿ ಮಿಠಾಯಿಯನ್ನು ಗಾಜಿನ ಪೆಟ್ಟಿಗೆಯಲ್ಲಿಡದಿದ್ದರೆ ತೆಗೆದುಕೊಳ್ಳುವುದಿಲ್ಲವೆಂದು ಜನ ಹಟ ಹಿಡಿಯಬೇಕು. ಇದರಿಂದ ಕಾಲರ ಪ್ಲೇಗು ನೊಣಗಳ ಮೂಲಕ ಹರಡದಂತೆ ಮಾಡಬಹುದು. ನಾವು ಇದನ್ನು ಉತ್ತಮಗೊಳಿಸಬೇಕು. ಆದರೆ ಹಾಗೆ ಮಾಡದೆ ಇನ್ನೂ ಅಧೋ ಗತಿಗೆ ಬಂದಿರುವೆವು. ಮನು ನೀರಿನಲ್ಲಿ ಉಗುಳ ಬೇಡಿ ಎನ್ನುವನು. ಆದರೆ ನದಿಗೆ ಬೇಕಾದಷ್ಟು ಕಸವನ್ನೆಲ್ಲ ಹಾಕುವೆವು. ಇದನ್ನೆಲ್ಲ ನೋಡಿದರೆ ಬಾಹ್ಯ ಶುದ್ಧಿ ಬಹಳ ಆವಶ್ಯಕವೆಂದು ಕಾಣುವುದು. ಶಾಸ್ತ್ರ ಕಾರರಿಗೆ ಇದು ಚೆನ್ನಾಗಿ ಗೊತ್ತಿತ್ತು. ಆದರೆ ಈಗ ಆಹಾರ ನಿಯಮದ ಅರ್ಥವೆಲ್ಲ ಮಾಯವಾಗಿ ಬಾಹ್ಯ ಆಚಾರ ಒಂದು ಉಳಿದಿದೆ. ನಮ್ಮ ಜಾತಿ ಯಲ್ಲಿ ಕಳ್ಳರು, ಕುಡುಕರು, ಕೊಲೆಪಾತಕರು ಇರಬಹುದು. ಆದರೆ ಒಬ್ಬ ಒಳ್ಳೆ ಮನುಷ್ಯ ತನ್ನ ಜಾತಿಗಿಂತ ಕೆಳಗೆ ಇರುವವರೊಂದಿಗೆ ಅವನು ತನ್ನಷ್ಟೇ ಯೋಗ್ಯನಿದ್ದರೂ ಅವನೊಂದಿಗೆ ಊಟಮಾಡಿದರೆ ಅವನನ್ನು ಬಹಿಷ್ಕರಿಸಿದರು. ಇದೊಂದು ನಮ್ಮ ದೇಶದ ದೊಡ್ಡ ದೋಷ. ಪಾಪಿ ಗಳೊಂದಿಗೆ ಬಂದಾಗ ಪಾಪ ಸೋಕುವುದು, ಪುಣ್ಯಾತ್ಮರ ಸಂಗದಿಂದ ಪುಣ್ಯಬರುವುದು. ಪಾಪಿಗಳಿಂದ ದೂರವಿರುವುದೇ ಬಾಹ್ಯ ಶುದ್ಧಿ ಎಂಬು ದನ್ನು ನಾವು ಗಮನದಲ್ಲಿಡಬೇಕು. ಅಂತರಂಗ ಶುದ್ಧಿ ಇದಕ್ಕಿಂತ ಬಹಳ ಕಷ್ಟ. ಸತ್ಯ ಹೇಳುವುದು, ದೀನರಿಗೆ ಸೇವೆಮಾಡುವುದು, ಕಷ್ಟದಲ್ಲಿದ್ದ ವರಿಗೆ ಸಹಾಯಮಾಡುವುದು ಇದರಲ್ಲಿದೆ ಅಂತರಂಗ ಶುದ್ಧಿ. ನಾವು ಯಾವಾಗಲೂ ಸತ್ಯವನ್ನು ಹೇಳುವೆವೆ? ಅನೇಕ ವೇಳೆ ಹೀಗೆ ಆಗುವುದು. ಶ್ರೀಮಂತನ ಮನೆಗೆ ತನ್ನ ಸ್ವಂತ ಕೆಲಸಕ್ಕೆ ಹೋಗಿ ದೀನರಕ್ಷಕ ಎಂದು

ಅವನನ್ನು ಹೊಗಳುವರು. ಅವನು ತನ್ನ ಮನೆಗೆ ಬರುವ ಬಡವನ ನಾಶ ಮಾಡುವುದು ಇವನಿಗೆ ಗೊತ್ತಿದ್ದರೂ ಹಾಗೆ ಹೇಳುವರು. ಇದೇನು, ಸುಳ್ಳಲ್ಲದೆ ಬೇರೆಯಲ್ಲ. ಇದೇ ಮನಸ್ಸನ್ನು ಅಶುದ್ಧಿಮಾಡುವುದು. ಹನ್ನೆರಡು ವರುಷ ಯಾರು ಹೀನ ಆಲೋಚನೆಮಾಡದೆ ತಮ್ಮ ಮನಸ್ಸನ್ನು ಶುದ್ಧಿಮಾಡಿಕೊಂಡಿರುವರೊ ಅವರು ಆಡಿದ ಮಾತು ಸತ್ಯವಾಗುವುದರಲ್ಲಿ ಸಂದೇಹವಿಲ್ಲ. ಇದೇ ಸತ್ಯ ಶಕ್ತಿ. ಯಾರು ತನ್ನ ಬಾಹ್ಯ ಮತ್ತು ಅಂತರಂಗವನ್ನು ಶುದ್ಧಿಮಾಡಿಕೊಂಡಿರುವನೊ ಅವನೇ ಭಕ್ತ. ಆದರೆ ವಿಶೇಷವೇ, ಭಕ್ತಿಯೇ ಒಬ್ಬನ ಮನಸ್ಸನ್ನು ಎಷ್ಟೋ ಪಾಲು ಪರಿಶುದ್ಧ ಮಾಡುವುದು. ಯಹೂದ್ಯರು ಮಹಮ್ಮದೀಯರು ಕ್ರೈಸ್ತರು ಹಿಂದೂಗಳಷ್ಟು ಬಾಹ್ಯಶುದ್ಧಿಗೆ ಪ್ರಾಮುಖ್ಯತೆಯನ್ನು ಕೊಡದೇ ಇದ್ದರೂ ಅದು ಸ್ವಲ್ಪ ಹೆಚ್ಚು ಕಡಿಮೆ ಇದ್ದೇ ಇರುವುದು. ಸ್ವಲ್ಪ ಅದೂ ಕೂಡ ಆವಶ್ಯಕ ಎಂದು ಅವರೂ ಭಾವಿಸುವರು.

ಯಹೂದ್ಯರು ವಿಗ್ರಹಾರಾಧನೆಯನ್ನು ದೂರುವರು. ಆದರೆ ಅವರ ಗುಡಿಯಲ್ಲಿ ಒಂದು ಪೆಟ್ಟಿಗೆ ಇದೆ. ಅದನ್ನು ಆರ್ಕ್ ಎನ್ನುತ್ತಾರೆ. ಅದರಲ್ಲಿ ಅವರ ಧರ್ಮದ ನಿಯಮಗಳನ್ನು ಇಟ್ಟಿರುವರು. ಆ ಪೆಟ್ಟಿಗೆ ಮೇಲೆ ಇಬ್ಬರು ದೇವತೆಗಳು ಗರಿಗೆದರಿ ನಿಂತಿರುವರು. ಅವರ ಮಧ್ಯ ಭಗವಂತನ ಶಕ್ತಿ ಒಂದು ಮೋಡದಂತೆ ಆವಿರ್ಭವಿಸುವುದು ಎಂದು ಅವರು ಭಾವಿಸುವರು. ಆ ದೇವಸ್ಥಾನವನ್ನು ಎಂದೋ ನಾಶಮಾಡಿದರು. ಆದರೆ ಹೊಸ ಗುಡಿಯನ್ನು ಅದರಂತೆಯೆ ಕಟ್ಟುತ್ತಾರೆ. ಪೆಟ್ಟಿಗೆಯಲ್ಲಿ ಧಾರ್ಮಿಕ ಗ್ರಂಥವನ್ನು ಇಡುತ್ತಾರೆ. ರೋಮನ್ ಕ್ಯಾಥೊಲಿಕ್ ಮತ್ತು ಗ್ರೀಕ್ ಕ್ರೈಸ್ತರಲ್ಲಿ ಒಂದು ಬಗೆಯ ವಿಗ್ರಹಾರಾಧನೆ ಇದೆ. ಜೀಸಸ್ ಮತ್ತು ಅವನ ತಾಯಿ ವಿಗ್ರಹ ಪೂಜಿಸುವರು. ಪ್ರಾಟೆಸ್ಟೆಂಟರಲ್ಲಿ ವಿಗ್ರಹಾರಾಧನೆ ಇಲ್ಲ. ಆದರೂ ದೇವರನ್ನು ಅವರು ಸಾಕಾರವಾಗಿ ಉಪಾಸಿಸುವರು. ಇದನ್ನು ಬೇರೆ ವಿಧದ ವಿಗ್ರಹಾರಾಧನೆ ಎನ್ನಬಹುದು. ಪಾರ್ಸಿ ಮತ್ತು ಇರಾನಿಯರು ಬೆಂಕಿ ಪೂಜೆಯನ್ನು ಮಾಡುವುದು ಬಹಳ ರೂಢಿಯಲ್ಲಿದೆ. ಮಹಮ್ಮದೀಯರಲ್ಲಿ ಪ್ರಾಫೆಟ್ ಮಹಮುದ್ ಮತ್ತು ಇತರ ಮಹಾತ್ಮರನ್ನು ಪೂಜಿಸುವರು. ಪ್ರಾರ್ಥಿಸುವಾಗ ಕಾಬಾದ ಕಡೆ ತಮ್ಮ ಮುಖವನು ತಿರುಗಿಸುವರು. ಧರ್ಮದ ಆರಂಭದಲ್ಲಿ ಜನ ಬಾಹ್ಯದಲ್ಲಿ ಯಾವುದನಾದರೂ ಸ್ವೀಕರಿಸಬೇಕು ಎನ್ನುವುದನ್ನು ತೋರುವುದು. ಮನಸ್ಸು ಶುದ್ಧ

ವಾದ ಮೇಲೆ ಸೂಕ್ಷ್ಮಭಾವನೆಗಳನ್ನು ಸ್ವೀಕರಿಸುವರು. "ಉತ್ತಮ ಬ್ರಹ್ಮಸದ್ಭಾವ, ಮಧ್ಯಮ ಧ್ಯಾನ, ಅಧಮ ಸ್ತುತಿ ಪೂಜೆ, ಅಧಮಾಧಮ ಬಾಹ್ಯಪೂಜೆ." ಕೊನೆಯದನ್ನು ಅನುಸರಿಸಿದರೂ ಪಾಪವಿಲ್ಲ ಎಂಬುದನ್ನು ತಿಳಿಯಬೇಕು. ಪ್ರತಿಯೊಬ್ಬರೂ ತನಗೆ ಸಾಧ್ಯವಾದುದನ್ನು ಮಾಡಬೇಕು. ಅದನ್ನು ತಪ್ಪಿಸಿದರೆ ಬೇರೊಂದು ರೀತಿಯಿಂದ ಅದನ್ನೇ ಮಾಡುವನು. ವಿಗ್ರಹಾರಾಧನೆ ಮಾಡುವವರಲ್ಲಿ ತಪ್ಪು ಕಂಡುಹಿಡಿಯ ಕೂಡದು. ಅವನು ಆ ಸ್ಥಿತಿಯಲ್ಲಿ ಇರುವನು. ಅವನು ಅದನ್ನು ಇಟ್ಟು ಕೊಳ್ಳಲಿ. ಬುದ್ಧಿವಂತರು ಅಂತಹವರಿಗೆ ಸಹಾಯಮಾಡಿ ಉತ್ತಮ ಆದರ್ಶದೆಡೆಗೆ ಒಯ್ಯಬೇಕು. ಹಲವು ಬಗೆಯ ಪೂಜಾ ವಿಧಾನವನ್ನು ಕುರಿತು ಜಗಳವಾಡಿ ಪ್ರಯೋಜನವಿಲ್ಲ.

ಕೆಲವರು ಐಶ್ವರ್ಯಕ್ಕಾಗಿ ದೇವರನ್ನು ಪ್ರೀತಿಸುವರು. ಮತ್ತೆ ಕೆಲವರು ಮಕ್ಕಳಿಗಾಗಿ ಪೂಜಿಸುವರು. ತಾವೂ ಕೂಡ ಭಕ್ತರು ಎಂದು ಭಾವಿಸುವರು. ಇದು ಭಕ್ತಿಯೂ ಅಲ್ಲ, ಅವರು ನಿಜವಾದ ಭಕ್ತರೂ ಅಲ್ಲ. ಸಾಧು ಒಬ್ಬ ಚಿನ್ನಮಾಡುತ್ತೇನೆ ಎಂದರೆ ಎಲ್ಲರೂ ಅವನ ಹತ್ತಿರ ಓಡುವರು. ಆದರೂ ತಾವು ಭಕ್ತರು ಎಂದು ಭಾವಿಸುವರು. ಮಕ್ಕಳಿಗಾಗಿ ದೇವರನ್ನು ಪೂಜಿಸುವುದು ಭಕ್ತಿಯಲ್ಲ. ಸ್ವರ್ಗಕ್ಕಾಗಿ ದೇವರನ್ನು ಪೂಜಿಸುವುದು ಭಕ್ತಿಯಲ್ಲ. ನರಕಯಾತನೆಯಿಂದ ಪಾರಾಗಬೇಕೆಂದು ದೇವರನ್ನು ಪೂಜಿಸುವುದು ಕೂಡ ಭಕ್ತಿಯಲ್ಲ. ಭಕ್ತಿ, ಅಂಜಿಕೆ ಅಥವಾ ಆಸೆಯಿಂದ ಹುಟ್ಟುವುದಿಲ್ಲ. ನಿಜವಾದ ಭಕ್ತ "ದೇವರೆ, ನನಗೆ ಸುಂದರ ಸತಿ ಬೇಕಾಗಿಲ್ಲ, ಜ್ಞಾನ ಬೇಕಾಗಿಲ್ಲ, ಮುಕ್ತಿ ಬೇಕಾಗಿಲ್ಲ. ನಾನು ನೂರಾರು ಸಲಿ ಹುಟ್ಟಿ ಸತ್ತರೂ ಚಿಂತೆಯಿಲ್ಲ. ಯಾವಾಗಲೂ ನಿನ್ನ ಮೇಲೆ ಅಚಲ ಭಕ್ತಿಯೊಂದನ್ನು ಮಾತ್ರ ಕರುಣಿಸು" ಎಂದು ಪ್ರಾರ್ಥಿಸುವನು. ಎಲ್ಲದರಲ್ಲಿಯೂ ಯಾವಾಗ ಒಬ್ಬ ದೇವರನ್ನು ಕಾಣುತ್ತಾನೆಯೋ, ಎಲ್ಲವನ್ನೂ ದೇವರಲ್ಲಿ ನೋಡುತ್ತಾನೆಯೊ, ಆಗ ಅವನಿಗೆ ಪೂರ್ಣ ಭಕ್ತಿ ಬಂದಿದೆ. ಕೀಟದಿಂದ ಬ್ರಹ್ಮನವರೆಗೆ ವಿಷ್ಣುಮಯವಾಗಿ ಕಾಣುವುದು. ಸರ್ವವೂ ವಿಷ್ಣುಮಯವಾಗಿ ಕಾಣುವುದು. ಆಗ ದೇವರಿಲ್ಲದೆ ಇರುವುದು ಯಾವುದೂ ಇಲ್ಲ. ಆಗ ಮಾತ್ರ ತಾನು ಕ್ಷುದ್ರ ಜೀವಿ ಎಂದು ಭಾವಿಸಿ ನಿಜವಾದ ಭಕ್ತನಂತೆ ದೇವರನ್ನು ಪೂಜಿಸುವನು. ಆಗ ತೀರ್ಥ ಬಾಹ್ಯಪೂಜೆ ಎಲ್ಲವನ್ನೂ ಬಹಳ ಹಿಂದೆ ತೊರೆಯುವರು. ಪ್ರತಿಯೊಂದು ಜೀವಿಯೂ ಭಗವಂತನ

ಪರಿಪೂರ್ಣ ದೇವಾಲಯದಂತೆ ಕಾಣುವುದು. ಶಾಸ್ತ್ರ, ಭಕ್ತಿಯನ್ನು ಹಲವು ರೀತಿ ವಿವರಿಸುವುದು. ದೇವರನ್ನು ನಮ್ಮ ತಂದೆ ಎನ್ನುವೆವು. ಹಾಗೆಯೆ ತಾಯಿ ಮುಂತಾಗಿ ಕರೆಯುವೆವು. ನಮ್ಮಲ್ಲಿರುವ ಭಕ್ತಿ ವೃದ್ಧಿಯಾಗುವುದಕ್ಕೆ ನಾವು ಅವನಿಗೆ ಅವನ ಬಹಳ ಸಮೀಪದ ಬಂಧುಗಳು ಪ್ರೇಮಕ್ಕೆ ಪಾತ್ರರು ಎಂಬುದನ್ನು ತಿಳಿಯುವುದಕ್ಕೆ ಈ ಭಾವನೆಯನ್ನು ಆಲೋಚಿಸುವೆವು. ಇದನ್ನು ನಾವು ಒಂದು ರೀತಿ ಸಮರ್ಥಿಸಬಹುದು. ನಿಜವಾದ ಭಕ್ತ ಭಗವಂತನನ್ನು ಪ್ರೀತಿಯಿಂದ ಕರೆಯುವ ಪದಗಳು ಇವು. ರಾಸಲೀಲೆಯಲ್ಲಿ ಬರುವ ರಾಧಾಕೃಷ್ಣರ ಕಥೆ ತೆಗೆದುಕೊಳ್ಳಿ. ಭಕ್ತನ ನಿಜವಾದ ಸ್ಥಿತಿಯನ್ನು ಇದು ವಿವರಿಸುವುದು. ಪ್ರಪಂಚದಲ್ಲಿ ಯಾವ ಪ್ರೀತಿಯೂ ಗಂಡಸಿಗೂ ಹೆಂಗಸಿಗೂ ಇರುವ ಪ್ರೀತಿಯನ್ನು ಮೀರಲಾರದು. ಎಲ್ಲಿ ಇಂತಹ ತೀವ್ರ ಪ್ರೇಮವಿದೆಯೊ ಅಲ್ಲಿ ಅಂಜಿಕೆ ಇಲ್ಲ. ಪ್ರೇಯಕ ಪ್ರೇಯಸಿಯರನ್ನು ಎಂದೆಂದಿಗೂ ಅಗಲದಂತೆ ಬಂಧಿಸುವ ಬಂಧನವಲ್ಲದೆ ಮತ್ತಾವುದೂ ಇರುವುದಿಲ್ಲ. ಆದರೆ ನಮಗೆ ತಾಯಿ ತಂದೆಗಳ ಮೇಲೆ ಇರುವ ಪ್ರೀತಿಯಲ್ಲಿ ಅವರ ಮೇಲೆ ಇರುವ ಗೌರವದಿಂದ ಸ್ವಲ್ಪ ಅಂಜಿಕೆ ಇರುವುದು. ದೇವರು ಏನನ್ನಾದರೂ ಸೃಷ್ಟಿಸಿದನೋ ಇಲ್ಲವೊ, ಅವನು ನನ್ನನ್ನು ರಕ್ಷಿಸುವನೊ ಇಲ್ಲವೊ, ಆ ವಿಷಯವೇ ಬೇಕಾಗಿಲ್ಲ. ಅವನು ನಮ್ಮ ಪ್ರಿಯತಮ. ಎಲ್ಲಾ ಅಂಕೆ ಅಂಜಿಕೆಯಿಂದ ಪಾರಾಗಿ ಅವನನ್ನು ಪ್ರೀತಿಸಬೇಕು. ಮತ್ತಾವ ಆಸೆಯೂ ಇಲ್ಲದೆ ಮತ್ತಾವ ಆಲೋಚನೆಯೂ ಇಲ್ಲದೆ, ದೇವರನ್ನು ಕುರಿತು ಹುಚ್ಚನಾದಾಗ ಮಾತ್ರ ಅವನು ದೇವರನ್ನು ಪ್ರೀತಿಸುವನು. ಗಂಡನಿಗೆ ಹೆಂಡತಿಯ ಮೇಲೆ ಪ್ರೇಮ, ದೇವರಮೇಲೆ ಇರಬೇಕಾದ ಪ್ರೇಮಕ್ಕೆ ಉದಾಹರಣೆಯಾಗಿವೆ. ಕೃಷ್ಣ ದೇವರು, ರಾಧೆ ಅವನನ್ನು ಪ್ರೀತಿಸುವಳು. ಈ ಕಥೆಯನ್ನು ವಿವರಿಸುವ ಪುಸ್ತಕ ಓದಿ. ಆಗ ದೇವರನ್ನು ಹೇಗೆ ಪ್ರೀತಿಸಬೇಕು ಎನ್ನುವುದು ಗೊತ್ತಾಗುವುದು. ಆದರೆ ಎಷ್ಟು ಜನಕ್ಕೆ ಇದು ಅರ್ಥವಾಗುವುದು ? ಯಾರು ಪಾಪಾತ್ಮರೋ, ನೀತಿಯ ಭಾವನೆಯೇ ಇಲ್ಲವೊ, ಅವರು ಇದನ್ನು ಹೇಗೆ ತೆಗೆದುಕೊಳ್ಳಬಲ್ಲರು ? ಪ್ರಾಪಂಚಿಕ ಆಲೋಚನೆಯನ್ನೆಲ್ಲ ಮನಸ್ಸಿನಿಂದ ಓಡಿಸಿ ಶುದ್ಧ ಧಾರ್ಮಿಕ ಆಧ್ಯಾತ್ಮಿಕ ವಾತಾವರಣದಲ್ಲಿದ್ದರೆ ಆಗ ಮಾತ್ರ ವಿದ್ಯೆ ಇಲ್ಲದೇ ಇದ್ದರೂ ಇಂತಹ ಅತಿಸೂಕ್ಷ್ಮ ವಿಷಯಗಳನ್ನು ತಿಳಿದುಕೊಳ್ಳಬಲ್ಲರು. ಆದರೆ ಇಂತಹ ಸ್ವಭಾವದವರು ಎಷ್ಟು ಕಡಿಮೆ !

ಮನುಷ್ಯ ತಪ್ಪು ತಿಳಿದುಕೊಳ್ಳದ ಒಂದು ಧರ್ಮವೂ ಇಲ್ಲ. ಉದಾಹರಣೆಗೆ, ಆತ್ಮ ದೇಹದಿಂದ ಸಂಪೂರ್ಣ ಬೇರೆ, ದೇಹದಿಂದ ಪಾಪ ಮಾಡುತ್ತಿರುವಾಗ ಆತ್ಮನಿಗೆ ಇದು ಸೋಕುವುದಿಲ್ಲ ಎಂದು ತಿಳಿಯಬಹುದು. ಧರ್ಮವನ್ನು ನಿಜವಾಗಿ ಅನುಷ್ಠಾನಕ್ಕೆ ತಂದಿದ್ದರೆ, ಹಿಂದೂ ಮುಹಮ್ಮದೀಯ ಕ್ರೈಸ್ತ ಯಾರೂ ಪರಿಶುದ್ಧರಾಗದೆ ಇರುತ್ತಿರಲಿಲ್ಲ. ಆದರೆ ಜನ ಒಳ್ಳೆಯದೊ ಕೆಟ್ಟದ್ದೊ, ತಮ್ಮ ಸ್ವಭಾವವನ್ನು ಅನುಸರಿಸುವರು. ಇದನ್ನು ಒಪ್ಪಿಕೊಳ್ಳದೇ ಇದ್ದರೆ ಏನು ಪ್ರಯೋಜನ? ಆದರೂ ಪ್ರಪಂಚದಲ್ಲಿ ಕೆಲವರು ಇರುವರು. ದೇವರ ಹೆಸರನ್ನು ಕೇಳಿದೊಡನೆಯೇ ಭಾವೋನ್ಮತ್ತರಾಗುವರು. ಅವನ ವಿಷಯವನ್ನು ಓದುವಾಗ ಕಂಬನಿ ಸುರಿಸುವರು. ಇವರೇ ನಿಜವಾದ ಭಕ್ತರು.

ಧರ್ಮದ ಪ್ರಾರಂಭದಲ್ಲಿ ದೇವರನ್ನು ತನ್ನ ಸ್ವಾಮಿ ಎಂದೂ ತಾನು ಆತನ ಸೇವಕನೆಂದೂ ಯೋಚಿಸುವನು. ತನ್ನ ಜೀವನಕ್ಕೆ ಆಧಾರವಾದುದನ್ನೆಲ್ಲ ಕರುಣಿಸಿದುದಕ್ಕೆ ಅವನಿಗೆ ಚಿರಋಣಿಯಾಗಿರುವನು. ಇಂತಹ ಭಾವನೆಯನ್ನು ಕಿತ್ತೊಗೆಯಿರಿ. ಎಲ್ಲರನ್ನೂ ಆಕರ್ಷಿಸುವ ಶಕ್ತಿಯೊಂದಿದೆ. ಅದೇ ದೇವರು. ಆ ಆಕರ್ಷಣೆಗೆ ತಲೆಬಾಗಿ ಸೂರ್ಯ ಚಂದ್ರಾದಿಗಳು ಸಂಚರಿಸುವರು. ಪ್ರಪಂಚದಲ್ಲಿರುವ ಪ್ರತಿಯೊಂದೂ ಒಳ್ಳೆಯದು, ಕೆಟ್ಟದ್ದು ಎಲ್ಲಾ ದೇವರಿಗೆ ಸೇರಿದುದು. ಪ್ರಪಂಚದಲ್ಲಿ ನಮಗೆ ಏನಾದರೂ ಆಗಲಿ ಒಳ್ಳೆಯದು ಕೆಟ್ಟದ್ದು ಎಲ್ಲವೂ ನಮ್ಮನ್ನು ಅವನ ಹತ್ತಿರ ಕರೆದುಕೊಂಡು ಹೋಗುತ್ತಿವೆ. ಒಬ್ಬ ಮತ್ತೊಬ್ಬನನ್ನು ಕೊಲ್ಲುತ್ತಾನೆ. ಯಾವುದೋ ಸ್ವಾರ್ಥತೆಯಿಂದ ಪ್ರೇರೇಪಿತನಾಗುತ್ತಾನೆ. ಆದರೆ ಉದ್ದೇಶ ಪ್ರೀತಿ. ಅದು ತನಗೊ ಅಥವಾ ಮತ್ತೊಬ್ಬರಿಗೊ ಇರಬಹುದು. ನಾವು ಒಳ್ಳೆಯದು ಮಾಡಲಿ ಕೆಟ್ಟದ್ದು ಮಾಡಲಿ ಮೂಲಕಾರಣ ಪ್ರೀತಿ. ಒಂದು ಹುಲಿ ಎಮ್ಮೆಯೊಂದನ್ನು ಕೊಂದರೆ ತನಗೋ ತನ್ನ ಮರಿಗೋ ಹಸಿವಾಗಿದೆ, ಅದಕ್ಕಾಗಿ ಕೊಲ್ಲುವುದು.

ದೇವರು ಪ್ರೇಮ ಸ್ವರೂಪ. ಎಲ್ಲದರಲ್ಲಿಯೂ ಅವನು ಇರುವನು. ಪ್ರತಿಯೊಬ್ಬರಿಗೂ ಗೊತ್ತಾಗಲಿ, ಗೊತ್ತಾಗದೆ ಇರಲಿ, ಎಲ್ಲರೂ ದೇವರೆಡೆಗೆ ಆಕರ್ಷಿತರಾಗುತ್ತಿರುವರು. ಹೆಂಡತಿ ತನ್ನ ಗಂಡನನ್ನು ಪ್ರೀತಿಸಿದರೆ ತನ್ನ ಗಂಡನಲ್ಲಿರುವ ದೈವೀಭಾವನೆ ಈ ಆಕರ್ಷಣೆಗೆ ಕಾರಣ ಎನ್ನುವುದನ್ನು ಅವಳು ಅರಿಯಳು. ಪ್ರೇಮೇಶ್ವರ ಮಾತ್ರ ಪೂಜಾಯೋಗ್ಯ. ಎಲ್ಲಿಯು

ವರೆಗೂ ಅವನು ಸೃಷ್ಟಿ ಸ್ಥಿತಿ ಪಾಲಕ ಎಂದು ನೋಡುತ್ತಿರುವೆವೊ ಅಲ್ಲಿಯ ವರೆಗೆ ಬಾಹ್ಯಪೂಜೆ ಮಾಡಬಹುದು. ಆದರೆ ಎಂದು ಇದನ್ನು ಮೀರಿ ಅವನು ಪ್ರೇಮೇಶ್ವರನೆಂದು ಬಾವಿಸಿ, ಎಲ್ಲಾ ವಸ್ತುಗಳಲ್ಲಿಯೂ ಅವನನ್ನು ಕಂಡು ಅವನಲ್ಲಿ ಎಲ್ಲಾ ವಸ್ತುಗಳನ್ನೂ ನೋಡುವೆವೊ ಆಗ ಪರಮಭಕ್ತಿ ಪ್ರಾಪ್ತವಾಗುವುದು.



# ಹಿಂದೂ ಧರ್ಮದ ಸಾಮಾನ್ಯ ತತ್ತ್ವ

## ( ಲಾಹೋರ್ ಉಪನ್ಯಾಸ )

ಪವಿತ್ರ ಆರ್ಯಾವರ್ತದಲ್ಲಿ ಪವಿತ್ರತಮ ಪುಣ್ಯಭೂಮಿ ಎಂದು ಯಾವುದು ಖ್ಯಾತಿಗೊಂಡಿದೆಯೋ ಅದೇ ಇದು. ಸ್ಮೃತ ಪುಣ್ಯ ಮನು ಯಾವುದನ್ನು ಬ್ರಹ್ಮಾವರ್ತವೆಂದು ಸಾರಿದನೋ ಆ ಪುಣ್ಯದೇಶವೇ ಇದು. ಚರಿತ್ರೆ ಸಾರುತ್ತಿರುವಂತೆ ಕಾಲಕ್ರಮೇಣ ಈ ಜಗತ್ತನ್ನೆಲ್ಲಾ ಆವರಿಸಿದ, ಅಗಾಧ ಆಧ್ಯಾತ್ಮಿಕ ಆಕಾಂಕ್ಷೆಯ ತರಂಗ ಹುಟ್ಟಿದುದು ಇಲ್ಲಿ. ಪ್ರಪಂಚದ ಮೂಲೆ ಮೂಲೆಗೆ ನುಗ್ಗಿ ಮೇಘ ಘರ್ಜನೆಯಿಂದ ಉದ್ಘೋಷಿಸುತ್ತಿರುವ ಈ ಆಧ್ಯಾತ್ಮಿಕ ಆಶಾಪ್ರವಾಹಗಳು ಹುಟ್ಟಿ ಒಂದುಗೂಡಿದುದು ಇಲ್ಲಿ. ಇಂಡಿಯಾ ದೇಶಕ್ಕೆ ತಂಡೋಪತಂಡವಾಗಿ ದಂಡೆತ್ತಿ ಬಂದ ಜನರ ಹಾವಳಿಯನ್ನು ತಡೆದು ಆರ್ಯಾವರ್ತಕ್ಕೆ ನುಗ್ಗಿದ ಅನಾಗರಿಕ ಜನರಿಗೆ ತನ್ನ ವಿಶಾಲ ವಕ್ಷಸ್ಥಳವನ್ನು ಮೊದಲು ಒಡ್ಡಿದ ಭೂಮಿ ಇದೇ ಅಲ್ಲವೇ? ಎಷ್ಟು ಕಷ್ಟಗಳನ್ನನುಭವಿಸಿದರೂ, ತನ್ನ ಮಹಿಮೆಯನ್ನು, ಶಕ್ತಿಯನ್ನು ಸಂಪೂರ್ಣವಾಗಿ ಕಳೆದುಕೊಳ್ಳದಿರುವ ನಾಡೇ ಇದು. ಇತ್ತೀಚಿಗೆ ಸಾಧು ನಾನಕನು ತನ್ನ ಅದ್ಭುತವಾದ ವಿಶ್ವಪ್ರೇಮವನ್ನು ಬೋಧಿಸಿದುದು ಇಲ್ಲಿ. ಇಲ್ಲೇ ಅಲ್ಲವೇ ಆತನ ವಿಶಾಲಹೃದಯವು ವಿಕಸಿತವಾದುದು? ಆತನ ಬಾಹುಗಳು ಹಿಂದೂ ಮಹಮ್ಮದೀಯ ಜನಾಂಗಗಳನ್ನು ಆಲಂಗಿಸಲು ಹೊರಚಾಚಿದುದು ಇಲ್ಲೆ ಅಲ್ಲವೆ? ನಮ್ಮ ಜನಾಂಗದ ಕಟ್ಟ ಕಡೆಯ ಮಹಾತ್ಮರಲ್ಲಿ ಒಬ್ಬನೆನ್ನಬಹುದಾದ ಗುರು ಗೋವಿಂದಸಿಂಗನು ಧರ್ಮಕ್ಕಾಗಿ ತನ್ನ ಮತ್ತು ತನ್ನಿಷ್ಟಮಿತ್ರ ಕಳತ್ರರ ರಕ್ತವನ್ನು ಚೆಲ್ಲಿ, ಯಾರಿಗೋಸ್ಕರ ಕಾದಾಡಿದನೋ ಅವರೇ ತನ್ನನ್ನು ದೂರ ನೂಕಲು, ತನ್ನ ಮಾತೃಭೂಮಿಯನ್ನು ಶಪಿಸದೆ, ಅದರ ವಿಚಾರದಲ್ಲಿ ಸ್ವಲ್ಪವೂ ಗೊಣಗುಟ್ಟದೆ, ಗಾಯಹೊಂದಿದ ಮೃಗರಾಜನಂತೆ ತನ್ನ ಪ್ರಾಣವನ್ನು ಬಿಡಲು ದಕ್ಷಿಣ ದೇಶಕ್ಕೆ ಬಂದುಬಿಟ್ಟುದು ಈ ನಾಡಿನಿಂದ ಅಲ್ಲವೆ?

ಪಂಚನದಿಗಳ ನಾಡಿನಲ್ಲಿ, ಈ ನಮ್ಮ ಪುರಾತನ ದೇಶದಲ್ಲಿ, ನಾನು ನಿಮ್ಮ ಮುಂದೆ ಗುರುವಿನಂತೆ ನಿಂತಿಲ್ಲ; ಏಕೆಂದರೆ ನಾನು ಇತರರಿಗೆ ಬೋಧಿಸುವಷ್ಟು ಪ್ರಾಜ್ಞನಲ್ಲ. ನಮ್ಮ ಪಶ್ಚಿಮ ದಿಕ್ಕಿನ ಭ್ರಾತೃಗಳಲ್ಲಿ ಕುಶಲಪ್ರಶ್ನೆಯನ್ನು ಮಾಡಲು, ನಮ್ಮ ಅಭಿಪ್ರಾಯಗಳನ್ನು ಹೋಲಿಸಿ

ನೋಡಲು ಪೂರ್ವದೇಶದಿಂದ ಬಂದು ನಿಂತಿದ್ದೇನೆ. ನಮ್ಮಲ್ಲಿರುವ ಭೇದ ಭಾವನೆಗಳಲ್ಲ, ಸಾಮಾನ್ಯ ಭಾವನೆಗಳನ್ನು ಮಾತ್ರ ಕಂಡುಕೊಳ್ಳಲು ಇಲ್ಲಿಗೆ ಬಂದಿರುತ್ತೇನೆ. ಯಾವ ತತ್ತ್ವದ ಆಧಾರದ ಮೇಲೆ ನಾವು ಸರ್ವದಾ ಅಣ್ಣ ತಮ್ಮಂದಿರಂತಿರಬಹುದೋ, ಯಾವುದರ ಆಧಾರದಮೇಲೆ ಅನಾದಿಯಾಗಿರುವ ವಾಣಿಯು ವೃದ್ಧಿಯಾದ ಹಾಗೆಲ್ಲ ಬಲವಾಗ ಬಹುದೋ, ಅವುಗಳನ್ನು ತಿಳಿದುಕೊಳ್ಳಲು ಯತ್ನಿಸಲು ಇಲ್ಲಿಗೆ ಬಂದಿರು ವೆನು. ನಾಶಕರವಲ್ಲ, ರಚನಾತ್ಮಕ ಕಾರ್ಯಕ್ರಮವನ್ನು ನಿಮ್ಮ ಮುಂದಿ ಡುವ ಪ್ರಯತ್ನಮಾಡಲು ಇಲ್ಲಿ ನಿಂತಿರುವೆನು. ನಿಂದೆಯಕಾಲ ಮುಗಿದು ನಾವು ರಚನಾತ್ಮಕ ಕಾರ್ಯಗಳ ಪ್ರವರ್ತನೆಯನ್ನು ನಿರೀಕ್ಷಿಸು ತ್ತಿದ್ದೇವೆ. ಕೆಲವು ವೇಳೆ ಈ ಪ್ರಪಂಚಕ್ಕೆ ನಿಂದೆ—ಪ್ರಾಯಶಃ ಈಗಿನ ನಿಂದೆ ಗಿಂತ ಬಲವಾದ ನಿಂದೆ—ಆವಶ್ಯಕ. ಆದರೆ ಅವುಗಳು ಸ್ವಲ್ಪಕಾಲದ ಮಟ್ಟಿಗೆ ಮಾತ್ರ ಬೇಕಾಗಿರುವುವು. ನಿರಂತರವೂ ಬೇಕಾಗಿರುವುದು ವರ್ಧಿಸುವ ರಚನಾಶಕ್ತಿಯುಳ್ಳ ಕಾರ್ಯಕಲಾಪಗಳು; ನಿಂದೆ, ನಾಶಕರ ಕಾರ್ಯಕಲಾಪಗಳಲ್ಲ. ನೂರು ವರ್ಷಗಳಿಂದ ನಮ್ಮದೇಶದಲ್ಲಿ ನಿಂದೆ ಯೆಂಬ ಪ್ರವಾಹ ಎಲ್ಲೆಲ್ಲಿಯೂ ತುಂಬಿ ಹರಿಯುತ್ತಿದೆ. ಪಾಶ್ಚಾತ್ಯ ವಿಜ್ಞಾನಶಾಸ್ತ್ರ ಅಂಧಕಾರಾವೃತ ಪ್ರದೇಶಗಳಲ್ಲೆಲ್ಲಾ ಸಂಪೂರ್ಣ ಪಸರಿಸಿದ ಫಲವಾಗಿ ಎಲ್ಲದಕ್ಕಿಂತಲೂ ಹೆಚ್ಚಾಗಿ ಸಂದು ಗೊಂದುಗಳೂ ಮೂಲೆ ಮುಡುಕುಗಳೂ ಎತ್ತಿ ಕಾಣಿಸುತ್ತಿವೆ. ಆದುದರಿಂದ ನಮ್ಮ ದೇಶದಲ್ಲಿ ಎಲ್ಲೆಡೆಯಲ್ಲಿಯೂ ಸತ್ಯಪ್ರೇಮಿಗಳೂ ನ್ಯಾಯಪಕ್ಷಪಾತಿಗಳೂ ವಿಶಾಲ ಮತಿಗಳೂ ಆದ ಮಹಾಪುರುಷರು ಜನ್ಮವೆತ್ತಿದರು. ಇವರಲ್ಲಿ ದೇಶ ವಾತ್ಸಲ್ಯ, ಉಚ್ಚತರ ಧರ್ಮಾಭಿಮಾನ, ದೈವಭಕ್ತಿ, ಇವು ತುಂಬಿ ತುಳುಕುತ್ತಿದ್ದುವು. ಈ ಮಹನೀಯರಿಗೆ ಅಷ್ಟು ಪ್ರೇಮವಿದ್ದುದರಿಂದಲೇ, ಇವರು ತಮ್ಮ ಮಾತೃಭೂಮಿಯಲ್ಲಿರುವ ಕುಂದುಕೊರತೆಗಾಗಿ ಅಷ್ಟು ಹಿರಿದಾದ ದುಃಖವನ್ನನುಭವಿಸುತ್ತಿದ್ದುದರಿಂದಲೇ, ಅವರಿಗೆ ಯಾವು ಯಾವುವು ತಪ್ಪೆಂದು ಕಂಡವೋ ಅವುಗಳನ್ನೆಲ್ಲಾ ಬಲವಾಗಿ ಖಂಡಿಸಿದರು. ಗತಿಸಿಹೋದ ಈ ಮಹಾತ್ಮರಿಗೆ ಜಯವಾಗಲಿ! ಅವರು ಬಹಳ ಒಳ್ಳೆಯ ದನ್ನು ಮಾಡಿರುತ್ತಾರೆ; ಆದರೆ ವರ್ತಮಾನಕಾಲದ ವಾಣಿಯು "ಸಾಕು", ಎಂಬ ಕೂಗು ನಮಗೆ ಕೇಳಬರುತ್ತಿದೆ. ಸಾಕಾದಷ್ಟು ನಿಂದೆ ಆಗಿದೆ. ಸಾಕಾದಷ್ಟು ತಪ್ಪುಗಳು ಹೊರಬಿದ್ದಿವೆ. ರಚನಾತ್ಮಕ ಕಾಲ ಪುನಃ

ವಿದೇಶೀ ಭಾವದಲ್ಲಿ ತನ್ಮಯವಾಗಿತ್ತು. ಅವರು ಅಲ್ಲಿ ವಾಸವಾಗಿದ್ದರು. ಪುಸ್ತಕ ಪಾಂಡಿತ್ಯವೇ ಇರಲಿಲ್ಲ. ಅಂತಹ ಮಹಾ ಪ್ರತಿಭಾ ಸಂಪನ್ನ ರಾವರೂ ತಮ್ಮ ಹೆಸರನ್ನು ಕೂಡ ಬರೆಯಲು ಬರುತ್ತಿರಲಿಲ್ಲ. ಆದರೆ ನಮ್ಮ ವಿಶ್ವ ವಿದ್ಯಾನಿಲಯದ ಪ್ರಚಂಡ ಪ್ರತಿಭಾಸಂಪನ್ನ ಪದವೀಧರರು ಅವರಲ್ಲಿ ಮೇರುದಂಡ ಪ್ರತಿಭೆಯನ್ನು ಕಂಡರು. ಶ್ರೀರಾಮಕೃಷ್ಣ ಪರಮ ಹಂಸರು ಒಬ್ಬ ಅಲೌಕಿಕ ಮಹಾಪುರುಷರು. ಇದೊಂದು ಬೃಹತ್ಕಥೆ. ಇದನ್ನು ಲಂಬಿಸಲು ನನಗಿಂದು ಸಮಯವಿಲ್ಲ. ಭಾರತೀಯ ಮಹಾ ಪುರುಷರ ಪೂರ್ಣ ಪ್ರಕಾಶ ಸ್ವರೂಪ ಯುಗಾಚಾರ್ಯ ಶ್ರೀರಾಮಕೃಷ್ಣ ಪರಮಹಂಸರು. ಅವರ ಉಪದೇಶ ಇಂದಿಗೆ ವಿಶೇಷ ಕಲ್ಯಾಣಕಾರಿ. ಅವ ರಲ್ಲಿ ಈಶ್ವರೀಶಕ್ತಿ ಕೆಲಸ ಮಾಡುತ್ತಿರುವುದನ್ನು ಗಮನಿಸಿ. ಒಬ್ಬ ದರಿದ್ರ ಬ್ರಾಹ್ಮಣರ ಮಗುವಾಗಿದ್ದರು. ಅವರ ಜನ್ಮ ವಂಗದೇಶದಲ್ಲಿ ಸುದೂರ ಅಜ್ಞಾತ ಅಪರಿಚಿತ ಗ್ರಾಮ ಒಂದರಲ್ಲಿ. ಇಂದು ಯೂರೋಪ್ ಅಮೆರಿಕಾ ದೇಶದಲ್ಲಿ ಸಹಸ್ರಾರುಜನ ವಾಸ್ತವಿಕವಾಗಿ ಅವರನ್ನು ಪೂಜಿ ಸುತ್ತಿರುವರು. ಭವಿಷ್ಯದಲ್ಲಿ ಮತ್ತೂ ಸಹಸ್ರಾರುಜನ ಅವರನ್ನು ಪೂಜಿ ಸುವರು. ಈಶ್ವರನ ಲೀಲೆಯನ್ನು ಯಾರು ಅರಿಯಬಲ್ಲರು? ಸಹೋ ದರರೇ, ಯಾರು ಇದರಲ್ಲಿ ವಿಧಾತನ ಕರವನ್ನು ನೋಡಲಾರರೋ ಅವರು ಅಂಧರು, ಜನ್ಮಾಂಧರು. ಮುಂದೆ ಸಮಯ ದೊರೆತರೆ ಅವಕಾಶ ದೊರೆತರೆ ಅದರ ವಿಷಯವನ್ನು ವಿಸ್ತಾರವಾಗಿ ವಿವರಿಸುವೆನು. ಸದ್ಯಕ್ಕೆ ಇಷ್ಟನ್ನು ಮಾತ್ರ ನಿಮಗೆ ಹೇಳುತ್ತೇನೆ. ನಾನೇನಾದರೂ ಒಂದು ಸತ್ಯ ವಾಕ್ಯವನ್ನು ನುಡಿದಿದ್ದರೆ ಅದೆಲ್ಲಾ ಅವರ ವಾಕ್ಯ. ಯಾವುದು ಅಸತ್ಯ ವಾಗಿರುವುದೋ, ಭ್ರಮೆ ಪೂರ್ಣ ಅಥವಾ ಮಾನವ ಜಾತಿಗೆ ಹಿತಕಾರಿ ಯಲ್ಲವೋ ಅದೆಲ್ಲಾ ನನ್ನದು. ಅದರ ಜವಾಬ್ದಾರಿ ನನ್ನದು.

---

*

# ನಮ್ಮ ಪ್ರಸ್ತುತ ಕರ್ತವ್ಯ

**(ಮದ್ರಾಸ್ ಟ್ರಿಪ್ಲಿಕೇನ್ ಸಾಹಿತ್ಯ ಸಂಘದಲ್ಲಿ ಕೊಟ್ಟ ಉಪನ್ಯಾಸ)**

ದಿನ ಸಾಗಿದಂತೆಲ್ಲಾ ಜೀವನ ಸಮಸ್ಯೆ ಗಾಢವಾಗುತ್ತಿದೆ, ವಿಶಾಲವಾಗುತ್ತಿದೆ. ವೇದಾಂತ ಸತ್ಯಗಳನ್ನು ಮೊದಲು ಆವಿಷ್ಕಾರ ಮಾಡಿದಾಗ ಸಮಸ್ತ ಜೀವನದ ಅಖಂಡತ್ವವನ್ನು ಬಹಳ ಹಿಂದೆಯೇ ಸಾರಿದರು. ಅದೇ ಮೂಲ ಮಂತ್ರ ಮತ್ತು ಬೋಧನೆಯ ಸಾರ. ವಿಶ್ವದಲ್ಲಿ ಒಂದು ಪರಮಾಣುವು ಚಲಿಸುವಾಗಲೂ ಜಗತ್ತನ್ನು ಚಲಿಸುವಂತೆ ಮಾಡದೆ ಇರಲಾರದು. ಇಡೀ ವಿಶ್ವ ಪ್ರಗತಿ ಮಾರ್ಗವನ್ನು ಹಿಡಿಯದೆ ಕೇವಲ ವ್ಯಕ್ತಿಗೆ ಪ್ರಗತಿ ಎಂಬುದಿಲ್ಲ. ಜನಾಂಗದ ಯಾವ ಸಮಸ್ಯೆಯನ್ನೂ ಕೇವಲ ಒಂದು ಜಾತಿಯ ಅಥವಾ ಜನಾಂಗದ ದೃಷ್ಟಿಯಿಂದಲೇ ಬಗೆ ಹರಿಸಲಾಗುವುದಿಲ್ಲವೆಂಬುದು ದಿನ ಕಳೆದಂತೆ, ಸ್ಪಷ್ಟವಾಗುತ್ತಿದೆ. ಪ್ರತಿ ಒಂದು ಭಾವನೆಯೂ ವಿಶ್ವವೆಲ್ಲವನ್ನೂ ವ್ಯಾಪಿಸುವಷ್ಟು ವಿಸ್ತಾರವಾಗಬೇಕು. ಪ್ರತಿಯೊಂದು ಆದರ್ಶವೂ ಇಡೀ ಮಾನವಕೋಟಿಗೆ ವ್ಯಾಪಿಸುವ ಪರಿಯಂತವೂ, ಇಲ್ಲ ಇಡೀ ಪ್ರಾಣಿಕೋಟಿಗೆ ವ್ಯಾಪಿಸುವ ಪರಿಯಂತವೂ ವಿಶಾಲವಾಗುತ್ತಾ ಹೋಗಬೇಕು. ನಮ್ಮ ದೇಶ ಕಳೆದ ಕೆಲವು ಶತಮಾನಗಳಿಂದ, ಹಿಂದೆ ಇದ್ದಂತೆ ಇಲ್ಲದೆ ಇರುವುದಕ್ಕೆ ಇದೇ ಕಾರಣ. ನಮ್ಮ ಅವನತಿಗೆ ಮುಖ್ಯ ಕಾರಣವೇ ನಮ್ಮ ದೃಷ್ಟಿ ಸಂಕೋಚ, ಕರ್ತವ್ಯ ಕ್ಷೇತ್ರ ಸಂಕೋಚ.

ಪ್ರಪಂಚದಲ್ಲಿ ಎರಡು ಆಶ್ಚರ್ಯಜನಕ ರಾಷ್ಟ್ರಗಳು ಒಂದೇ ಜನಾಂಗದಿಂದ ಕವಲೊಡೆದರೂ ಬೇರೆ ಬೇರೆ ವಾತಾವರಣದಲ್ಲಿ ಅಭಿವೃದ್ಧಿಯಾಗುತ್ತಿವೆ. ಅದೇ ಒಂದು ಮತ್ತು ಗ್ರೀಸ್ ದೇಶ. ಪ್ರತಿಯೊಂದು ಜನಾಂಗವೂ ತನ್ನ ದೃಷ್ಟಿಯಿಂದ ಜೀವನ ಸಮಸ್ಯೆಯನ್ನು ಬಗೆಹರಿಸಲು ಯತ್ನಿಸುತ್ತಿದೆ. ಭಾರತೀಯ ಆರ್ಯನ ಉತ್ತರಕ್ಕೆ ಹಿಮಾವೃತ ಪರ್ವತವಿದೆ, ಕೆಳಗೆ ಪ್ರಸ್ಥಭೂಮಿಯಲ್ಲಿ, ಸಮುದ್ರದಂತೆ ಹರಿಯುತ್ತಿರುವ ಸ್ವಚ್ಛ ನೀರಿನ ನದಿಗಳೂ, ಇದೇ ಪೃಥ್ವಿಯ ತುದಿಯೋ ಎಂಬಂತೆ ಇರುವ ಅನಂತ ಅರಣ್ಯ, ಅವನ ದೃಷ್ಟಿಯನ್ನು ಅಂತರ್ಮುಖಿ ಮಾಡಿತು. ಸುತ್ತಲೂ ಮನೋಹರವಾದ ಪ್ರಕೃತಿ ದೃಶ್ಯದಿಂದ ಆವೃತನಾದ ಸೂಕ್ಷ್ಮ ಬುದ್ಧಿಶಾಲಿ ಆರ್ಯನು ಸ್ವಭಾವತಃ ಅಂತರ್ಮುಖಿಯಾದನು. ಚಿತ್ತ ವಿಭಜನೆ ಆರ್ಯರ ಮುಖ್ಯ

ವುದು, ಅದು ಅನ್ಯರಿಗೆ ಕೊಡಬೇಕಾದ ಸಂದೇಶವೊಂದಿರುವುದು. ಆದುದರಿಂದ, ನಾವು ಪ್ರಾರಂಭದಲ್ಲಿಯೇ, ನಮ್ಮ ಜನಾಂಗವು ಮಾಡಬೇಕಾದ ಕೆಲಸವಾವುದು, ಉದ್ದೇಶವಾವುದು, ಜನಾಂಗಗಳ ಗಮನದಲ್ಲಿ ಹೊಂದಬೇಕಾದ ಸ್ಥಾನವಾವುದು, ಜನಾಂಗಗಳ ಪರಸ್ಪರ ಸೌಹಾರ್ದಕ್ಕೆ ನಮ್ಮ ಜನಾಂಗ ಒದಗಿಸಿಕೊಡಬೇಕಾಗಿರುವ ಆವಶ್ಯಕವಾದ ಭಾವಗಳು ಯಾವುವು ಎಂಬೀ ವಿಚಾರಗಳನ್ನು ತಿಳಿದುಕೊಳ್ಳಬೇಕು. ನಾವು ನಮ್ಮ ದೇಶದಲ್ಲಿ ಬಾಲಕರಾಗಿದ್ದಾಗ ಕೆಲವು ಕಥೆಗಳನ್ನು ಕೇಳಿದ್ದೇವೆ. ಸರ್ಪಗಳ ಹೆಡೆಗಳಲ್ಲಿ ರತ್ನಗಳು ಇರುವುವು, ರತ್ನ ಹೆಡೆಯಲ್ಲಿರುವ ತನಕ ಸರ್ಪಕ್ಕೆ ಸಾವಿಲ್ಲ. ಹೀಗೆಯೇ ಕೆಲವು ರಾಕ್ಷಸರ ಜೀವಗಳು ಪಕ್ಷಿಗಳಲ್ಲಿ ಅಡಗಿಕೊಂಡಿರುವುವು. ಆ ಪಕ್ಷಿಗಳನ್ನು ಕೊಂದಲ್ಲದೆ, ಆ ರಾಕ್ಷಸರಿಗೆ ಬೇರಾವ ವಿಧದಲ್ಲಿಯೂ ಸಾವಿಲ್ಲ. ಜನಾಂಗ ಜೀವವೂ ಹೀಗೆಯೇ. ಜನಾಂಗ ಜೀವನದ ಮೂಲ ಒಂದಿದೆ. ಅದನ್ನು ಮುಟ್ಟದಲ್ಲದೆ ಆ ಜನಾಂಗಕ್ಕೆ ನಾಶವಿಲ್ಲ. ಈ ದೃಷ್ಟಿಯಿಂದ ನೋಡಿದರೆ, ಚರಿತ್ರೆಯಲ್ಲಿ ಕಂಡು ಬರುವ ಅತ್ಯದ್ಭುತ ವಿಷಯವೊಂದು ನಮಗೆ ಸ್ಪಷ್ಟವಾಗುವುದು. ಅನಾಗರಿಕರ ತರಂಗಪ್ರಾಯವಾದ ದಂಡಯಾತ್ರೆಗಳು ಈ ಪವಿತ್ರ ಭೂಮಿಗೆ ಬಂದುವು. "ಅಲ್ಲಾಹೋ ಅಕ್ಬರ್," ಎಂಬ ಧ್ವನಿ ನೂರಾರು ವರ್ಷಗಳು ಆಕಾಶವನ್ನೆಲ್ಲಾ ನಡುಗಿಸಿತು. ಹಿಂದೂವಿಗೆ ತನಗೆ ಯಾವ ಗಳಿಗೆಗೆ ಸಾವು ಪ್ರಾಪ್ತವಾಗುತ್ತಿತ್ತೆಂಬುದು ಗೊತ್ತಾಗುತ್ತಿರಲಿಲ್ಲ. ಚರಿತ್ರೆಯಲ್ಲಿ ಸುಪ್ರಸಿದ್ಧವಾದ ದೇಶಗಳಲ್ಲೆಲ್ಲಾ ನಮ್ಮ ದೇಶವೂ ಅತಿ ಓರಿದಾದ ದುಃಖವನ್ನೂ ಪರಾಧೀನತೆಯನ್ನೂ ಅನುಭವಿಸಿರುವುದು. ಆದರೂ ನಾವು ವಿಕಾರ ಹೊಂದಿಲ್ಲ. ಅವಶ್ಯಕವಾದಲ್ಲಿ, ಪುನಃ ಪುನಃ ಕಷ್ಟಗಳನ್ನು ಸಹಿಸಲು ಸಿದ್ಧರಾಗಿದ್ದೇವೆ. ನಮ್ಮ ಜನಾಂಗ ಏಕರೀತಿಯಾಗಿದೆ. ಇಷ್ಟೇ ಅಲ್ಲ. ನಾವು ಈಗ ಶಕ್ತಿವಂತರಾಗಿದ್ದೇವೆ. ಇಂಥಹ ಪಸರಿಸುವಿಕೆಯೇ ನಾವು ಜೀವಿಸುತ್ತಿರುವುದಕ್ಕೆ ಹೆಗ್ಗುರುತು.

ನಮ್ಮ ಭಾವನೆಯನ್ನೂ ತತ್ತ್ವಗಳನ್ನೂ ಈಗಿನ ಕಾಲದಲ್ಲಿ, ಇಂಡಿಯಾ ದೇಶದ ಮೇರೆಯಲ್ಲಿ ಬಂಧಿಸಿ, ನಿಲ್ಲಿಸಲು ನಿಮ್ಮಿಂದ ಸಾಧ್ಯವಾಗಲಿಲ್ಲ. ನಮಗೆ ಅದು ಇಷ್ಟವಾಗಿರಲಿ, ಇಲ್ಲದಿರಲಿ, ಅವು ಹೊರಹೊರಟಿವೆ. ಇತರ ಜನಾಂಗಗಳ ಭಾಷೆಗಳಲ್ಲಿ ಸೇರಿ ಹೋಗಿದೆ, ಆ ಜನಾಂಗಗಳಲ್ಲಿ ಒಂದು ಗೌರವ ಸ್ಥಾನವನ್ನು ಪಡೆದಿದೆ. ಇದಕ್ಕೆ ಕಾರಣ

ವಾವುದು? ಮಾನವನ ಮನಸ್ಸನ್ನು ಆವರಿಸಬಲ್ಲ ವಿಷಯಗಳಲ್ಲಿ ಮಹತ್ತಾದ, ಘನವಾದ ಮತ್ತು ಅತ್ಯುತ್ತಮವಾದ ಪ್ರಸಂಗ ಯಾವು ದೆಂದರೆ ತತ್ತ್ವ ವಿಚಾರ ಮತ್ತು ಆತ್ಮ ವಿದ್ಯೆ. ಇವುಗಳನ್ನು ದಾನ ಮಾಡಿ ನಮ್ಮ ಭಾರತ ಭೂಮಿ ಈ ಜಗತ್ತಿನ ಪ್ರಗತಿ ಮಾರ್ಗಕ್ಕೆ ಮಹಾ ಸಹಾಯವನ್ನು ಮಾಡಿರುವುದು. ನಮ್ಮ ಪೂರ್ವಿಕರು ಇನ್ನೂ ಅನೇಕ ವಿಷಯಗಳನ್ನು ತಿಳಿಯಲು ಪ್ರಯತ್ನಿಸಿದ್ದರೆಂಬುದೂ, ಇತರ ಜನಾಂಗದವ ರಂತೆ ಅವರು ಬಾಹ್ಯಪ್ರಪಂಚದ ಗುಟ್ಟನ್ನು ಹೊರಗೆಡಹಲು ಯತ್ನಿಸಿದ್ದ ರೆಂಬುದೂ ಎಲ್ಲರಿಗೂ ತಿಳಿದ ವಿಷಯ. ಈ ವಿಷಯಗಳಲ್ಲಿ, ಪ್ರತಿಭಾ ಶಾಲಿಗಳಾದ ಈ ಅದ್ಭುತ ಜನರು ಪ್ರಪಂಚ ಸ್ವಪ್ನದಲ್ಲಿ ಕೂಡ ಕಾಣ ದಿರುವ ವಿಚಿತ್ರ ಸಂಗತಿಗಳನ್ನು ಪ್ರಕಟಿಸಬಹುದಾಗಿತ್ತು. ಆದರೆ ಇದಕ್ಕೂ ಅತಿಶಯವಾದ ಇನ್ನೊಂದು ಪ್ರಸಂಗದ ಸಲುವಾಗಿ, ಬಾಹ್ಯ ವಿಷಯಗಳ ಪ್ರಸ್ತಾಪವನ್ನು ಬಿಟ್ಟರು. ಅತ್ಯುತ್ತಮವಾದ ವಿಷಯಗಳನ್ನು ನಮ್ಮ ವೇದ ಗಳು ಸಾರುತ್ತಿವೆ. ಅವು "ವಿಕಾರ ರಹಿತನಾದ ಪರಮಾತ್ಮನನ್ನು ನಮಗೆ ಯಾವ ಶಾಸ್ತ್ರ ತೋರಿಸಿಕೊಡುತ್ತದೆಯೋ ಅದೇ ಸರ್ವೋತ್ಕೃಷ್ಟವಾದ ಶಾಸ್ತ್ರ"ವೆಂದು ಉಲಿಯುತ್ತಿರುವುವು. ಸಾವು ಕೇಡು, ಸುಖದುಃಖ ಇವು ಗಳಿಂದ ತುಂಬಿರುವ ವಿಕಾರಹೊಂದುವ ಬಾಹ್ಯ ಪ್ರಪಂಚದ ಅರಿವನ್ನು ನಮಗೆ ಮಾಡಿಕೊಡುವ ವಿಜ್ಞಾನ ಕಂಡಾಗ ಮಾತ್ರ ಶಾಂತಿ, ಅಮೃತತ್ವ, ಪರಿಪೂರ್ಣತೆ ಇವು ದೊರಕಿ ದುಃಖ ಸಂಪೂರ್ಣವಾಗಿ ಅಳಿಸಿಹೋಗು ವುದೋ ಅಂತಹ ಅಚ್ಯುತನೂ ಮಂಗಳಮಯನೂ ಆದ ಪರಬ್ರಹ್ಮನನ್ನು ತೋರಿಸುವ ಶಾಸ್ತ್ರವೇ ಅತಿ ಭವ್ಯವಾದುದೆಂದು ಅಭಿಪ್ರಾಯಪಡುತ್ತಿದ್ದರು. ನಮ್ಮವರು ಇಷ್ಟಪಟ್ಟಿದ್ದರೆ, ನಮಗೆ ಅನ್ನವಸ್ತ್ರಗಳನ್ನೂ, ಸ್ವಜನರ ಮೇಲೆ ಅಧಿಕಾರವನ್ನೂ, ಅನ್ಯರನ್ನು ಜಯಿಸಿ ಅವರನ್ನಾಳುವ ಮರ್ಮವನ್ನು ಕಲಿಸಿ ಕೊಡುವ ಶಾಸ್ತ್ರಗಳನ್ನೂ ಕಂಡುಹಿಡಿಯಬಹುದಾಗಿತ್ತು. ದೈವಕೃಪೆ ಯಿಂದ ಅವರು ಪ್ರಾರಂಭದಲ್ಲೇ ಅತಿ ಮಹತ್ತಾದ ಅತ್ಯುನ್ನತವಾದ ಅತಿ ಮಂಗಳದಾಯಕವಾದ ಬೇರೊಂದು ಮಾರ್ಗವನ್ನು ಹಿಡಿದರು. ಈ ಮಾರ್ಗ ನಮ್ಮ ಜನಾಂಗದ ಮುಖ್ಯಗುಣವಾಗಿಬಿಟ್ಟಿದೆ. ನಮ್ಮಲ್ಲಿ ಈ ಗುಣವು ಸಾವಿರಾರುವರ್ಷಗಳಿಂದಲೂ ವಂಶಪಾರಂಪರ್ಯವಾಗಿ ಬರುತ್ತಿದೆ. ಅದು ನಮ್ಮಲ್ಲಿ ಮುಖ್ಯಾಂಶವಾಗಿಬಿಟ್ಟಿದೆ. ನಮ್ಮ ರಕ್ತನಾಳಗಳಲ್ಲಿ ಹರಿಯುವ ಒಂದೊಂದು ಬಿಂದುವಿನಲ್ಲಿಯೂ ಕಂಪಿಸತೊಡಗಿದೆ. ನಮ್ಮ ಎರಡನೆಯ

ಸ್ವಭಾವವಾಗಿ ಪರಿಣಮಿಸಿದೆ. ಧರ್ಮ ಮತ್ತು ಹಿಂದೂ ಎಂಬೀ ಎರಡು ಶಬ್ದಗಳೂ ಒಂದೇ ಅರ್ಥವನ್ನು ಕೊಡುವಂತೆ ಮಾಡಿದೆ. ಇದೇ ಜನಾಂಗದ ಜೀವಕಳೆ. ಇದನ್ನು ಯಾರೂ ಮುಟ್ಟಬಾರದು. ಕೋವಿ ಮತ್ತೂ ಕತ್ತಿಯನ್ನು ತಂದ ಅನಾಗರಿಕರು ಜನಾಂಗದ 'ಈ ಸಾರ ವಸ್ತುವನ್ನು' ಈ 'ರತ್ನ' ವನ್ನು ಮುಟ್ಟಲಾಗಲಿಲ್ಲ; ಜನರ ಜೀವಕಳೆಯನ್ನು ಪಡೆದಿರುವ ಈ 'ಪಕ್ಷಿ' ಯನ್ನು ಕೊಲ್ಲಲು ಸಮರ್ಥರಾಗಲಿಲ್ಲ. ಇದೇ ಜನಾಂಗದ ಸತ್ವ. ಈ ಚೈತನ್ಯವಿರುವ ತನಕ ನಮ್ಮ ಜನಾಂಗವನ್ನು ಕೊಲ್ಲುವ ಶಕ್ತಿ ಈ ಜಗತ್ತಿನಲ್ಲಿಲ್ಲ. ಈ ಪ್ರಪಂಚದ ಚಿತ್ರಹಿಂಸೆ, ದುಃಖ, ನಮ್ಮನ್ನು ಅಲುಗಿಸದೆ ನಮ್ಮ ಮೇಲೆ ಹಾದುಹೋಗುವುವು. ನಮಗೆ ಹಿಂದಿನಿಂದ ಬಂದ ಆಸ್ತಿಗಳಲ್ಲಿ ಸರ್ವೋತ್ತಮ ಆಸ್ತಿಯಾದ ಆ ಆತ್ಮ ಸಾಕ್ಷಾತ್ಕಾರ ವಿದ್ಯೆಯನ್ನು ನಾವು ಎಲ್ಲಿಯವರೆಗೆ ಬಿಗಿಯಾಗಿ ಹಿಡಿದಿರುವೆವೊ, ಅಲ್ಲಿಯವರೆಗೆ, ನಾವು ಪ್ರಹ್ಲಾದನಂತೆ, ಈ ಹಿಂಸೆ, ದುಃಖಗಳೆಂಬ ಜ್ವಾಲೆಯಿಂದ ಸುಖವಾಗಿ ಪಾರಾಗುವೆವು. ಪಾರಮಾರ್ಥಿಕ ದೃಷ್ಟಿಯಿಲ್ಲದ ಹಿಂದೂವನ್ನು ನಿಜವಾದ ಹಿಂದುವೆಂದು ನಾನು ಒಪ್ಪುವುದಿಲ್ಲ. ಇತರ ದೇಶಗಳಲ್ಲಿ ಜನರು ಮೊದಲು ರಾಜಕಾರ್ಯಗಳಲ್ಲಿ ಭಾಗವಹಿಸಿ ಅನಂತರ ಧಾರ್ಮಿಕ ವಿಚಾರದಲ್ಲಿ ಸ್ವಲ್ಪ ಶ್ರದ್ಧೆಯನ್ನು ತೋರಬಹುದು. ಆದರೆ ನಮ್ಮ ದೇಶದಲ್ಲಿ ನಮ್ಮ ಜೀವನದ ಪ್ರಥಮ ಕರ್ತವ್ಯ ಪಾರಮಾರ್ಥಿಕ ದೃಷ್ಟಿಯನ್ನು ಪಡೆಯುವುದು. ಅನಂತರ ಸಮಯ ದೊರೆತರೆ ಇತರ ವಿಷಯಗಳಿಗೆ ಗಮನಕೊಡಬಹುದು. ಈ ವಿಷಯವನ್ನು ನಾವು ಗ್ರಹಿಸಿದ್ದೇ ಆದರೆ ನಮ್ಮ ಪೂರ್ವಿಕರು ಏಕೆ ಜನಾಂಗದ ಏಳಿಗೆಗಾಗಿ ತಮ್ಮ ಆಧ್ಯಾತ್ಮಿಕ ಶಕ್ತಿಯನ್ನೆಲ್ಲಾ ಸಂಗ್ರಹಿಸಿಟ್ಟುಕೊಳ್ಳುತ್ತಿದ್ದರೆಂಬುದೂ, ನಾವೂ ನಮ್ಮ ದೇಶದ ಏಳಿಗೆಯನ್ನು ಬಯಸುವೆವಾದರೆ ಹೀಗೆಯೇ ಮಾಡಬೇಕು ಎಂಬುದೂ, ನಮ್ಮ ಪುತ್ರ ಪೌತ್ರರು ಹೀಗೆಯೇ ನಡಿಸಿಕೊಂಡು ಬರುವರು ಎಂಬುದೂ ವ್ಯಕ್ತವಾಗುತ್ತದೆ. ನಮ್ಮ ದೇಶದಲ್ಲಿ ಜನಗಳ ಐಕ್ಯತೆ ಇದರ ಆಧಾರದ ಮೇಲೆ ಉಂಟಾಗಬೇಕು. ನಮ್ಮಲ್ಲಿ ಚದುರಿಹೋಗಿರುವ ಆಧ್ಯಾತ್ಮಿಕ ಶಕ್ತಿಗಳನ್ನು ಸಂಗ್ರಹಿಸುವುದರಿಂದ ಐಕ್ಯತೆ ಬರುವುದು. ಯಾರ ಹೃದಯ ಒಂದೇ ತೆರನಾದ ಆಧ್ಯಾತ್ಮಿಕ ಶ್ರುತಿಗೆ ಸರಿಯಾಗಿ ಮಿಡಿಯುತ್ತಿವೆಯೋ ಅಂಥವರ ಐಕ್ಯತೆಯಿಂದ ಅಲ್ಲವೇ ನಮ್ಮ ದೇಶದಲ್ಲಿ ಒಂದು ಜನಾಂಗ ನಿರ್ಮಾಣವಾಗಬೇಕು?

ನಮ್ಮ ದೇಶದಲ್ಲಿ ಸಂಪ್ರದಾಯಗಳು ಹೇರಳವಾಗಿವೆ. ಈಗಲೂ
ವೆ. ಮುಂದೆಯೂ ಇರುತ್ತವೆ. ಏಕೆಂದರೆ ಇದೊಂದು ನಮ್ಮ ಧರ್ಮದ
ಶೇಷ ಲಕ್ಷಣ. ಮೂಲತತ್ತ್ವಗಳಲ್ಲಿ ವಿಶೇಷ ಸ್ವಾತಂತ್ರ್ಯವಿರುವುದು.
ವೇಣ ಇವುಗಳ ಆಧಾರದ ಮೇಲೆ ನೂರಾರು ಒಳತತ್ತ್ವಗಳು
ವಿಸ್ತಾರವಾಗಿ ವಿರಚಿತವಾದುವು. ಆದರೂ ಇವೆಲ್ಲವೂ ನಮ್ಮ ನೆತ್ತಿಯ
ೕಲಿರುವ ಆಕಾಶದಂತೆ ವಿಶಾಲವಾಗಿಯೂ ಪ್ರಕೃತಿಯಂತೆ ಶಾಶ್ವತ
ಾಗಿಯೂ ಇರುವ ಮೂಲತತ್ತ್ವಗಳನ್ನು ದಿನಂಪ್ರತಿ ವ್ಯವಹಾರದಲ್ಲಿ
ೂಢಿಗೆ ತರುವುದಕ್ಕೋಸ್ಕರ ಸೃಷ್ಟಿಸಿದರು. ಆದುದರಿಂದ ಭಿನ್ನ
ಂಪ್ರದಾಯಗಳು ಇರಬೇಕಾದುದು ಸಹಜ. ಆದರೆ ಯಾವುದು ಇರಬಾರ
ಂದರೆ–ಸಂಪ್ರದಾಯ ಸ್ಪರ್ಧೆ. ಭಿನ್ನ ಸಂಪ್ರದಾಯಗಳಿರಬೇಕು, ಆದರೆ
ವುಗಳಲ್ಲಿನ ಕ್ಷುದ್ರ ಬುದ್ಧಿಯಿರಬಾರದು. ಈ ಕ್ಷುದ್ರ ಬುದ್ಧಿಯಿಂದ
ಪಂಚ ಯಾವ ರೀತಿಯಲ್ಲಿಯೂ ಉತ್ತಮಗತಿಯನ್ನು ಪಡೆಯು
ಂತಿಲ್ಲ. ಆದರೆ ಭಿನ್ನ ಸಂಪ್ರದಾಯಗಳನ್ನುಳಿದು ಪ್ರಪಂಚ ಮುಂದೆ
ಾಗುವಂತಿಲ್ಲ. ಒಂದೇ ಪಂಗಡದವರು ಸರ್ವಸ್ವವನ್ನೂ ಕೈಕೊಂಡು
ಾಧಿಸುವುದು ಅಸಾಧ್ಯ. ಜಗತ್ತಿನಲ್ಲಿ ಪ್ರಾಯಶಃ ಅನಂತವಾಗಿರುವ
ಕ್ತಿರಾಶಿಯನ್ನು ಹಲವರಿಂದ ಸುಧಾರಿಸುವುದು ಕಷ್ಟಸಾಧ್ಯ. ಆದ್ದ
ಂದಲೇ ನಮ್ಮಲ್ಲಿ ಭಿನ್ನ ಭಿನ್ನ ಕರ್ಮಗಳಿಗನುಸಾರವಾಗಿ ಸಂಪ್ರದಾಯ
ಭೇದಗಳಾಗಲೇಬೇಕಾಯಿತು. ಆತ್ಮಶಕ್ತಿಯ ಪ್ರಯೋಜನಕ್ಕಾಗಿ
ಂಪ್ರದಾಯಗಳಿರಲಿ. ಆದರೆ ನಮ್ಮ ಪ್ರಾಚೀನ ಗ್ರಂಥಗಳು "ಈ ಭೇದ
ಾವಗಳು ನಿಜವಲ್ಲ, ಹಾಗೆ ಭೇದಭಾವಗಳಿದ್ದರೂ, ಇವುಗಳೆಲ್ಲವನ್ನು ಅಂದ
ಾದ ಏಕತ್ವವೆಂಬ ಎಲ್ಲವನ್ನೂ ಸರಿಹೊಂದಿಸುವ ಸೂತ್ರ ಒಂದುಗೂಡಿಸು
ದೆ." ಎಂದು ಸಾರುತ್ತಿವೆ. ಹೀಗಿರುವಲ್ಲಿ ನಾವು ನಮ್ಮಲ್ಲೇ ಕಾದಾಡುವ
ವಶ್ಯಕವೇನಿದೆ? "ಏಕಂ ಸತ್, ವಿಪ್ರಾ ಬಹುಧಾ ವದಂತಿ", "ಸತ್ಯ
ಂದೇ, ಜ್ಞಾನಿಗಳು ಅದನ್ನು ಅನಂತ ನಾಮಗಳಿಂದ ಕರೆಯುತ್ತಾರೆ"
ಂದು ನಮ್ಮ ಪುರಾತನ ಗ್ರಂಥಗಳು ಸಾರಿ ಹೇಳುತ್ತಿವೆ. ಆದುದರಿಂದ ಎಲ್ಲ
ಂಪ್ರದಾಯಗಳನ್ನೂ ಎಲ್ಲ ಕಾಲಗಳಲ್ಲಿಯೂ ಸನ್ಮಾನಿಸುತ್ತಿರುವ ಈ ಭರತ
ಂಡದಲ್ಲಿ, ನಾನಾ ಸಂಪ್ರದಾಯಗಳಲ್ಲಿ ಸ್ಪರ್ಧೆಗಳೂ, ಅಂತಃಕಲಹಗಳೂ,
ರಸ್ಪರ ದ್ವೇಷಾಸೂಯೆಗಳೂ ಇದ್ದುದೇ ಆದರೆ, ಆ ಮಹನೀಯರ ವಂಶೀಯ
ಂದು ಹೆಮ್ಮೆ ಕೊಚ್ಚಿಕೊಳ್ಳುವುದು ನಮಗೆ ಅಪಮಾನಕರವಲ್ಲವೇ?

ನಮ್ಮಲ್ಲಿ ಪ್ರತಿಯೊಬ್ಬನೂ ಶೈವ, ಶಾಕ್ತ, ಇಲ್ಲವೇ ಗಾಣಪತ್ಯ ಇತ್ಯಾದಿ ಸಂಪ್ರದಾಯಗಳಲ್ಲಿ ಒಂದು ಸಂಪ್ರದಾಯಸ್ಥನಾಗಿದ್ದಾನೆ. ಪುರಾತನ ವೇದಾಂತಿಗಳ ಗುಂಪಿಗೇ ಇಲ್ಲವೆ ನವೀನ ವೇದಾಂತಿಗಳ ಗುಂಪಿಗೋ ಸೇರಿದ್ದಾನೆ. ಹಿಂದಿನಿಂದ ಬಂದ, ಶಾಸ್ತ್ರಬದ್ಧವಾದ ಸಂಪ್ರದಾಯಗಳ ಅಥವಾ ಪರಿಷ್ಕೃತವಾದ ಆಧುನಿಕ ಸಂಪ್ರದಾಯಗಳ ಅನುಯಾಯಿಯಾಗಿದ್ದಾನೆ. ಆದರೂ ನಾನು ಭಾವಿಸಿರುವುದೇನೆಂದರೆ, ನಾವೆಲ್ಲರೂ ಹಲವು ಶ್ರೇಷ್ಠ ಮೂಲತತ್ತ್ವಗಳ ವಿಷಯದಲ್ಲಿ ಏಕಾಭಿಪ್ರಾಯವುಳ್ಳವರಾಗಿದ್ದೇವೆ. ಅಲ್ಲದೆ ತಾನು ಹಿಂದೂ ಎಂದು ಯಾವನು ಹೇಳಿಕೊಳ್ಳುತ್ತಾನೆಯೋ ಅವನಿಗೆ ಕೆಲವು ಮೂಲತತ್ತ್ವಗಳಲ್ಲಿ ನಂಬಿಕೆಯಿದ್ದೇ ಇದೆ. ಈ ತತ್ತ್ವಗಳಿಗೆ ಭಿನ್ನವ್ಯಾಖ್ಯಾನಗಳೂ, ಭಿನ್ನ ಟೀಕೆಗಳೂ ಇರುವುದು ಸರಿ. ಈ ವ್ಯತ್ಯಾಸಗಳು ಇರುವುದು ಆವಶ್ಯಕ, ಅವಕ್ಕೆ ನಾವು ಅವಕಾಶ ಕೊಡಲೇಬೇಕು. ಏತಕ್ಕೋಸ್ಕರವೆಂದು ಪ್ರಶ್ನೆಮಾಡಬಹುದು. ಈಗ ನೋಡಿ, ಪ್ರತಿಯೊಬ್ಬನನ್ನು ನಮ್ಮ ಸಿದ್ಧಾಂತವನ್ನೊಪ್ಪುವಂತೆ ಬಲಾತ್ಕರಿಸುವುದು ನಮ್ಮಭಿಪ್ರಾಯವಲ್ಲ; ನಮ್ಮ ವ್ಯಾಖ್ಯಾನುಸಾರ ನಡೆದುಕೊಳ್ಳುವಂತೆಯೂ, ನಮ್ಮ ಆಚಾರ ಪದ್ಧತಿಗಳನ್ನನುಸರಿಸಿ ತನ್ನ ಜೀವನ ಯಾತ್ರೆಯನ್ನು ನಡೆಸುವಂತೆಯೂ, ಇನ್ನೊಬ್ಬನನ್ನು ಹಿಂಸಿಸುವುದು ಪಾಪಕರ. ಇಂದು ಇಲ್ಲಿರುವ ಮಹನೀಯರೆಲ್ಲರೂ, ವೇದಗಳು ಧರ್ಮರಹಸ್ಯಗಳನ್ನು ಆಚಂದ್ರಾರ್ಕವಾಗಿ ಬೋಧಿಸುವ ಗ್ರಂಥಗಳೆಂಬುದನ್ನು ಒಪ್ಪುವರು. ನಾವೆಲ್ಲರೂ ಈ ಪವಿತ್ರ ವಿದ್ಯೆ ಆದ್ಯಂತ ರಹಿತವಾದುದೆಂದೂ, ಆದ್ಯಂತ ರಹಿತವಾದ ಪ್ರಕೃತಿಯ ಸಮಕಾಲೀನವಾದುದೆಂದೂ ನಂಬಿರುತ್ತೇವೆ. ಈ ಪವಿತ್ರ ಗ್ರಂಥದ ಸಮ್ಮುಖದಲ್ಲಿ ನಾನಾ ಸಂಪ್ರದಾಯಗಳ ಒಳ ಜಗಳಗಳೂ ಹೋರಾಟಗಳೂ ಮಾಯವಾಗುವುವು. ವೇದಗಳು ಯಾವುವೆಂಬ ವಿಚಾರದಲ್ಲಿ ನಾವು ಬೇರೆಬೇರೆ ಅಭಿಪ್ರಾಯವುಳ್ಳವರಾಗಿರಬಹುದು. ಒಂದು ಸಂಪ್ರದಾಯದವರಿಗೆ ವೇದಗಳ ಒಂದು ಭಾಗ ಇತರ ಭಾಗಗಳಿಗಿಂತ ಹೆಚ್ಚು ಪವಿತ್ರವಾದುದೆಂದು ಕಾಣಬಹುದು. ಆದರೂ ನಾವು ಎಂದಿನವರೆಗೆ ಈ ಪೂಜಾರ್ಹವಾದ ವೇದಗಳ ಪ್ರಾಮಾಣ್ಯವನ್ನೊಪ್ಪಿ, ಆ ಕಾರಣದಿಂದ ನಾವು ಅಣ್ಣತಮ್ಮಂದಿರೆಂಬ ಭಾವನೆಯುಳ್ಳವರಾಗಿರುವೆವೋ, ಎಂದಿನವರೆಗೆ ಈ ಪೂಜಾರ್ಹವಾದ, ನಿತ್ಯ ಅದ್ಭುತವಾದ ಗ್ರಂಥಗಳಿಂದ ನಮ್ಮಲ್ಲಿ ಶ್ರೇಯಸ್ಕರವಾದ, ಪವಿತ್ರವಾದ, ಪರಿಶುದ್ಧವಾದ

ವಿಷಯಗಳೇನೇನು ಇರುವುವೋ ಅವುಗಳೆಲ್ಲವೂ ಬಂದಿರುವುವೆಂದು ತಿಳಿದಿರುವೆವೋ, ಅಂದಿನವರೆಗೆ, ವೇದಗಳ ವಿಚಾರವಾಗಿ ನಮಗಿರುವ ಭಿನ್ನ ಭಾವನೆಗಳಿಂದ ನಮಗೆ ಯಾವ ತೊಂದರೆಯೂ ಆಗುವುದಿಲ್ಲ. ಆದುದರಿಂದ ಈ ವಿಷಯಗಳಲ್ಲಿ ನಮಗೆ ನಂಬಿಕೆಯಿದ್ದರೆ, ಈ ಮೂಲತತ್ತ್ವಗಳನ್ನು ಇಂಡಿಯಾ ದೇಶದಲ್ಲೆಲ್ಲಾ ಸಾರೋಣ. ನಾನು ಹೇಳಿದುದೆಲ್ಲ ನಿಜವಾದರೆ, ವೇದಗಳಿಗೆ ಸಹಜವಾಗಿ ಸಲ್ಲುವ, ಅವುಗಳಿಗೆ ಸಲ್ಲುವುದು ಸರಿಯೆಂದು ನಾವು ಒಪ್ಪುವ, ಶ್ರೇಷ್ಠತ್ವವನ್ನು ಕೊಡೋಣ. ಆದುದರಿಂದ ನಾವೆಲ್ಲರೂ ಒಪ್ಪಿರುವ ಮೊದಲನೆಯ ವಿಷಯ, ವೇದಗಳ ಪ್ರಾಮಾಣ್ಯ. ನಾವೆಲ್ಲರೂ ಒಪ್ಪುವ ಎರಡನೆಯ ವಿಷಯ ಈಶ್ವರ ಭಾವ. ಯಾರಲ್ಲಿ ಅವ್ಯಕ್ತವಾದ ಅಗೋಚರವಾದ ವಿಶ್ವವು ಆಗಾಗ ಅಡಗಿ ಮತ್ತೆ ಮತ್ತೆ ಹೊರಬಿದ್ದು ವ್ಯಕ್ತವಾಗುವುದೋ ಆ ವಿಶ್ವದ ಸೃಷ್ಟಿ ಸಂಹಾರ ಕರ್ತನಾದ ಈಶ್ವರನು ಇರುವನೆಂದು ನಾವೆಲ್ಲರೂ ನಂಬುತ್ತೇವೆ. ನಮಗೆ ಈಶ್ವರ ಭಾವನೆಯಲ್ಲಿ ಭಿನ್ನಾಭಿಪ್ರಾಯಗಳು ಇರಬಹುದು. ಕೆಲವರ ದೃಷ್ಟಿಗೆ ಭಗವಂತನು ಸಗುಣ ಸಾಕಾರನೆಂದೂ, ಮತ್ತೆ ಕೆಲವರಿಗೆ ಸಗುಣನಾದರೂ ನಿರಾಕಾರನೆಂದೂ, ಇನ್ನು ಕೆಲವರಿಗೆ ನಿರ್ಗುಣನೂ ನಿರಾಕಾರನೂ ಎಂದೂ ತೋರಬಹುದು. ಹೀಗಿದ್ದರೂ ಇವರೆಲ್ಲರೂ ತಮ್ಮ ತಮ್ಮ ಅಭಿಪ್ರಾಯಗಳಿಗೆ ಪ್ರಮಾಣಗಳನ್ನು ವೇದಗಳಲ್ಲೇ ತೋರಿಸುವರು. ಇಷ್ಟು ಭಿನ್ನಾಭಿಪ್ರಾಯಗಳಿದ್ದರೂ ನಾವೆಲ್ಲರೂ ಆಸ್ತಿಕರೂ ದೈವಭಕ್ತರೂ ಆಗಿರುವೆವು. ಎಲ್ಲಿಂದ ಎಲ್ಲವೂ ಉದ್ಭವಿಸಿರುವುವೋ, ಎಲ್ಲಿ ಎಲ್ಲವೂ ಜೀವಿಸುತ್ತಿವೆಯೋ, ಎಲ್ಲಿ ಎಲ್ಲವೂ ಕೊನೆಗಾಣುತ್ತವೆಯೋ, ಅಂತಹ ಅದ್ಭುತವಾದ, ಅನಂತವಾದ ಶಕ್ತಿಯೊಂದರಲ್ಲಿ ನಂಬಿಕೆ ಇಡದವನನ್ನು ಹಿಂದೂ ಎಂದು ಕರೆಯಲಾಗುವುದಿಲ್ಲ. ಈ ಮಾತು ಸತ್ಯವಾದರೆ ಈ ಈಶ್ವರ ಭಾವನೆಯನ್ನು ನಮ್ಮ ದೇಶದ ಎಲ್ಲ ಕಡೆಗಳಲ್ಲೂ ತಿಳಿಸಲು ಪ್ರಯತ್ನಿಸೋಣ. ನಿಮಗೆ ಈಶ್ವರನಲ್ಲಿ ಯಾವ ಭಾವನೆ ಇದ್ದರೂ ಚಿಂತೆ ಇಲ್ಲ, ನೀವು ಅದನ್ನೇ ಇತರರಿಗೆ ತಿಳಿಸಿ, ಈ ವಿಷಯವಾಗಿ ನಾವು ಹೋರಾಡಬೇಕಾಗಿಲ್ಲ. ಆದರೆ ಈಶ್ವರನನ್ನು ಬೋಧಿಸಿ– ಅಷ್ಟೇ ನಮಗೆ ಬೇಕಾದುದು. ಈಶ್ವರ ಭಾವನೆಯಲ್ಲಿ ಒಂದು ಭಾವನೆಯು ಇನ್ನೊಂದಕ್ಕಿಂತ ಉತ್ತಮವಾಗಿರಬಹುದು. ಆದರೆ ಇವುಗಳಲ್ಲಿ ಯಾವುದೂ ತಪ್ಪಲ್ಲವೆಂಬ ಅಂಶವನ್ನು ನೀವು ನೆನಪಿನಲ್ಲಿಡಬೇಕು. ಒಂದು ಶ್ರೇಷ್ಠವಾದುದು; ಇನ್ನೊಂದು

ಶ್ರೇಷ್ಠತರವಾದುದು ಆಗಿರಬಹುದು. ಆದರೆ ನಮ್ಮ ಧರ್ಮಸಿದ್ಧಾಂತ ಗಳಲ್ಲಿ ಅಸತ್ಯ ಅಶುಭ ಎಂಬ ಶಬ್ದಗಳೇ ಇರುವುದಿಲ್ಲ. ಆದುದರಿಂದ ಈಶ್ವರ ಭಾವವನ್ನು ಪ್ರಚಾರಮಾಡುವವರೆಲ್ಲರೂ ಅವನ ಅನುಗ್ರಹಕ್ಕೆ ಪಾತ್ರರಾಗಲಿ. ಅವನ ಭಾವವನ್ನು ಪ್ರಚಾರಮಾಡಿದಷ್ಟೂ ನಮ್ಮ ಜನಾಂಗಕ್ಕೆ ಶುಭ. ನಮ್ಮ ಪುತ್ರ ಪೌತ್ರರು ಈಶ್ವರ ಭಾವದಲ್ಲಿ ಬೆಳೆಯಲಿ. ಈ ಭಾವನೆ ದರಿದ್ರರ ಪಾಮರರ ಜೋಪಡಿಗಳನ್ನೂ, ಕೋಟೀಶ್ವರರ ಉತ್ತಮರ ಗೃಹಗಳನ್ನೂ ಪ್ರವೇಶಿಸಲಿ.

ಈ ಪ್ರಪಂಚದ ಇತರ ಜನಾಂಗಗಳು ಈ ವಿಶ್ವ ಇಷ್ಟು ಸಾವಿರ ವರ್ಷಗಳ ಹಿಂದೆ ನಿರ್ಮಿತವಾಯಿತು, ಒಂದು ದಿನ ನಿರ್ನಾಮವಾಗುತ್ತ ದೆಂದೂ, ಈ ವಿಶ್ವವೂ ಮಾನವ ಜೀವನವೂ ಶೂನ್ಯದಿಂದ ಆದುವೆಂದೂ ಹೇಳುವರು. ನಾವು ಯಾರೂ ಈ ಮಾತಿಗೆ ಬೆಲೆಕೊಡುವುದಿಲ್ಲ. ಇದೇ ನಾನು ನಿಮಗೆ ತಿಳಿಸಬೇಕೆಂದಿರುವ ಮೂರನೆಯ ವಿಷಯ. ಈ ವಿಷಯ ವಾಗಿ ನಮ್ಮಲ್ಲಿ ಏಕಾಭಿಪ್ರಾಯವಿರುವುದು. ಪ್ರಕೃತಿ ಆದ್ಯಂತ ರಹಿತ ವಾದುದು. ಬಾಹ್ಯ ಪ್ರಪಂಚದ ಸ್ಥೂಲ ಭೂತಗಳು ಒಂದು ಅವಸ್ಥೆಯಲ್ಲಿ ಸೂಕ್ಷ್ಮ ಸ್ಥಿತಿಯನ್ನು ಪಡೆಯುವುವು. ಈ ಸ್ಥಿತಿಯಲ್ಲಿ ಸ್ವಲ್ಪ ಕಾಲ ವಿರುವುವು. ಅನಂತರ ಮರಳಿ ವ್ಯಕ್ತವಾಗಿ ಈ ಅನಂತವಾದ ಸುಂದರ ದೃಶ್ಯಗಳಾಗಿ ಪರಿಣಮಿಸುವುವು. ಇವನ್ನೇ ನಾವು ಪ್ರಕೃತಿಯೆಂದು ಹೇಳು ವೆವು. ಈ ಅಲೆಗೆ ಸಾದೃಶವಾದ ಚಲನೆಯು ಕಾಲ ಸೃಷ್ಟಿಗೆ ಮೊದಲೂ ಇತ್ತು. ಕಾಲ ಸೃಷ್ಟಿಯಾದ ನಂತರವೂ ನಡೆಯುತ್ತಿದೆ, ಅನಂತ ಕಾಲ ನಡೆಯುವುದು. ನಾವು ಹೇಳುವುದು ಇಷ್ಟೇ ಅಲ್ಲ. ಮನುಷ್ಯನ ಸತ್ಯ ಸ್ಥೂಲ ದೇಹಮಾತ್ರವಲ್ಲ. ಸೂಕ್ಷ್ಮ ದೇಹ ( ಎಂದರೆ ಮನಸ್ಸು ) ಸ್ಥೂಲ ದೇಹದಲ್ಲಿರುವುದೆಂಬುದೂ ಅಲ್ಲ; ಈ ದೇಹ, ಮನಸ್ಸು ವಿಕಾರಗಳಿಗೊಳ ಗಾದುವು. ಇವುಗಳಿಗೂ ಆಚೆ, ಇವುಗಳಿಗಿಂತಲೂ ಉತ್ತಮವಾದ ನಿರ್ವಿ ಕಾರ ವಸ್ತುವೊಂದು ಇದೆ. ಅದೇ ಸಾವನ್ನರಿಯದ, ತುದಿ ಮೊದಲಿಲ್ಲದ ಆತ್ಮ. ಅನ್ಯಮತವಾವುದೂ ಕಾಣದ ಭಾವನೆಯೊಂದು ನಮ್ಮ ಲ್ಲಿರುತ್ತದೆ. ಏನೆಂದರೆ ಈ ಆತ್ಮನು ಒಂದಾದ ಮೇಲೊಂದು ದೇಹವನ್ನು ಅನೇಕವಾಗಿ ಪೊಂದುತ್ತಾನೆ. ಎಂದು ಹೀಗೆ ಮಾಡುವುದರ ಆವಶ್ಯಕತೆ ತೋರುವುದಿಲ್ಲವೋ ಅಂದು, ಹೊಸ ದೇಹಗಳನ್ನು ತೆಗೆದುಕೊಳ್ಳುವುದನ್ನು ನಿಲ್ಲಿಸಿ, ಮುಕ್ತನಾಗುತ್ತಾನೆ. ಇದನ್ನೇ ನಮ್ಮ ಶಾಸ್ತ್ರ, ಸಂಸಾರ ಮತ್ತು

ಅನಾದಿ ಜೀವವಾದವೆನ್ನುವುದು. ಈ ಸಿದ್ಧಾಂತವನ್ನು ಎಲ್ಲ ಸಂಪ್ರದಾಯ ಸ್ಥರೂ ಒಪ್ಪಿರುವರು. ಜೀವ ಬ್ರಹ್ಮರ ಸಂಬಂಧ ಏನು ಎಂಬ ವಿಷಯದಲ್ಲಿ ಭಿನ್ನಾಭಿಪ್ರಾಯಗಳಿವೆ. ಕೆಲವು ಸಂಪ್ರದಾಯದವರು ಜೀವ ಬ್ರಹ್ಮರು ಸದಾ ಬೇರೆ ಎಂದೂ, ಇನ್ನು ಕೆಲವರು ಜೀವನು ಬ್ರಹ್ಮನೆಂಬ ಬೆಂಕಿಯ ಒಂದು ಕಿಡಿಯೆಂದೂ, ಮತ್ತೆ ಕೆಲವರು ಜೀವ ಬ್ರಹ್ಮರಿಗೆ ಭೇದವೇ ಇಲ್ಲ ವೆಂದೂ ಹೇಳುವರು. ಆದರೂ ಈ ಜೀವನು ಅನಂತನು, ಜನನವಿಲ್ಲದ ಕಾರಣ ಮರಣ ರಹಿತನು, ಭಿನ್ನದೇಹಗಳಾಗಿ ಪರಿಣಮಿಸಿ, ಕಡೆಗೆ ಮನುಷ್ಯ ದೇಹವನ್ನು ಪಡೆದು ಅದರಲ್ಲಿ ಮುಕ್ತಿಯನ್ನು ಪಡೆಯುವನು ಎಂದು ನಾವೆಲ್ಲರೂ ಒಪ್ಪುತ್ತೇವೆ. ಈ ಸರ್ವಸಮ್ಮತವಾದ ವಿಷಯದಲ್ಲಿ ನಂಬಿಕೆ ನಮ್ಮೆಲ್ಲರಿಗೂ ಎಲ್ಲಿಯವರೆಗಿರುವುದೋ ಅಲ್ಲಿಯವರೆಗೆ ಜೀವ ಬ್ರಹ್ಮರ ಸಂಬಂಧದಲ್ಲಿ ಭಿನ್ನಾಭಿಪ್ರಾಯಗಳಿದ್ದರೂ ಬಾಧಕವಿಲ್ಲ. ನಮಗೂ ಪಾಶ್ಚಾತ್ಯರಿಗೂ ಎಲ್ಲ ವಿಷಯಗಳಲ್ಲಿಯೂ ವ್ಯತ್ಯಾಸವಿರುವುದು. ನಮ್ಮಿಬ್ಬರ ಆತ್ಮ ತತ್ತ್ವಗಳಿಗಿರುವ ವ್ಯತ್ಯಾಸವೇ ಇದಕ್ಕೆ ಕಾರಣ. ನಮ್ಮಲ್ಲಿ ಶಾಕ್ತರೂ ಸೌರರೂ ವೈಷ್ಣವರೂ ಬೌದ್ಧರೂ ಜೈನರೂ ಎಲ್ಲರೂ ಆತ್ಮನು ಸ್ವಭಾ ವತಃ ಶುದ್ಧನೂ ಮುಕ್ತನು ಸರ್ವ ಶಕ್ತನು ಮಂಗಳಮಯನು ಎಂದು ದೃಢವಾಗಿ ತಿಳಿದಿರುತ್ತಾರೆ. ದ್ವೈತಿಗಳು ಮಾತ್ರ, ಜೀವನ ಸ್ವಾಭಾವಿಕ ಸುಖವು ತನ್ನ ಜನ್ಮಾಂತರ ಕುಸಂಸ್ಕಾರ ಪ್ರಯುಕ್ತ ಸಂಕುಚಿಸುವುದೆಂದೂ, ದೈವಕೃಪೆಯಿಂದ ಅದು ಪುನಃ ಅರಳಿ ಪರಿಪೂರ್ಣತೆಯನ್ನು ವ್ಯಕ್ತಪಡಿಸಿ ಕೊಳ್ಳುವುದೆಂದೂ ಹೇಳುವರು. ಅದ್ವೈತಿಗಳು, ಈ ಸಂಕುಚಿಸುವುದೆಂಬ ಭಾವವೂ ಕೂಡ ಅಸತ್ಯವೆಂದೂ ಅಜ್ಞಾನ ಜನ್ಯವೆಂದೂ, ಜೀವನು ಸ್ವಶಕ್ತಿ ಯನ್ನು ಕಳೆದುಕೊಂಡಿರುವ ಭಾವನೆಯು, ಮಾಯೆಯ ಆವರಣದಿಂ ದುಂಟಾದುದೆಂದೂ, ವಾಸ್ತವವಾಗಿ ಅದರ ಶಕ್ತಿ ಸದಾ ಪೂರ್ಣವಾಗಿ ಪ್ರಕಾ ಶಿಸುತ್ತಿರುವುದೆಂದೂ ಅಭಿಪ್ರಾಯ ಪಡುವರು. ಭಿನ್ನಭಾವನೆಗಳೆಂತಾದರೂ ಇರಲಿ. ತತ್ತ್ವ ವಿಚಾರದಲ್ಲಿ ನಮಗಿರುವ ಸಾಮಾನ್ಯ ಭಾವನೆ ಪಾಶ್ಚಾತ್ಯ ರಿಗೂ ನಮಗೂ ಯಾವ ವಿಷಯಗಳಲ್ಲಿಯೂ ಹೊಂದಿಕೆಯಾಗದಂತೆ ಮಾಡಿ ರುತ್ತದೆ. ಪೂರ್ವದೇಶಗಳಿಗೆ ಸೇರಿದ ನಾವು ಮಹತ್ತಾದ ಶುಭದಾಯಕ ವಾದ ವಿಷಯಗಳನ್ನು ನಮ್ಮ ಅಂತರಂಗದಲ್ಲಿ ಹುಡುಕುತ್ತೇವೆ. ನಾವು ದೇವತಾರ್ಚನೆಯ ಕಾಲದಲ್ಲಿ, ನಮ್ಮ ಕಣ್ಣುಗಳನ್ನು ಮುಚ್ಚಿ ಈಶ್ವರನನ್ನು ಮನಸ್ಸಿನಲ್ಲಿ ನೋಡಲು ಪ್ರಯತ್ನಿಸುತ್ತೇವೆ. ಪಾಶ್ಚಾತ್ಯನಾದರೋ, ತನ್ನ

ದೇವರನ್ನು ಬಾಹ್ಯ ಪ್ರಪಂಚದಲ್ಲಿ ಹುಡುಕುತ್ತಾನೆ. ಅವನ ದೃಷ್ಟಿಯಲ್ಲಿ, ಅವನ ಮತಗ್ರಂಥಗಳು ಈ ಬಾಹ್ಯ ಪ್ರಪಂಚದಲ್ಲಿರುವ ದೇವರಿಂದ ಪ್ರೇರಿತ ವಾದುವು. ನಮಗಾದರೋ, ನಮ್ಮ ಗ್ರಂಥಗಳೆಲ್ಲವೂ ಅಂತರಾತ್ಮನಿಂದ ಪ್ರೇರಿತವಾದುವು. ಅವು ಈಶ್ವರನ ಉಸಿರು. ಅವು ಉಸಿರಿನಂತೆ ಹೊರ ಬಂದುವು. ಅವು ಮಂತ್ರ ದ್ರಷ್ಟರಾದ ಋಷಿಗಳ ಹೃದಯದಿಂದ ಹೊರ ಚಿಮ್ಮಿದುವು.

ನನ್ನ ಮಿತ್ರರೇ, ಭ್ರಾತೃಗಳೇ, ನಾವು ತಿಳಿದು ಮುಖ್ಯವಾಗಿ ಸಾಧಿಸ ಬೇಕಾಗಿರುವ ಒಂದು ವಿಷಯವನ್ನು ನಿಮಗೆ ತಿಳಿಸಲು ಇಷ್ಟಪಡುತ್ತೇನೆ. ಈ ವಿಷಯದಲ್ಲಿ ನನಗೆ ಪೂರ್ಣ ವಿಶ್ವಾಸವುಂಟು. ನೀವೆಲ್ಲರೂ ಈ ವಿಷ ಯಕ್ಕೆ ಗಮನ ಕೊಡಬೇಕೆಂದು ಕೇಳಿಕೊಳ್ಳುತ್ತೇನೆ. ಯಾವನು ಅಹೋ ರಾತ್ರಿ ತಾನು ಯಾವ ಕೆಲಸಕ್ಕೂ ಬಾರದವನೆಂದು ಭಾವಿಸುವನೋ, ಅವ ನಿಂದ ಪ್ರಪಂಚಕ್ಕೆ ಯಾವ ಪ್ರಯೋಜನವೂ ಆಗುವಂತಿಲ್ಲ. ಹಗಲೂ ಇರುಳೂ ಒಬ್ಬನು, ತಾನು ದುಃಖಿ, ನೀಚ, ಶೂನ್ಯನೆಂದು ಎಣಿಸಿದ್ದೇ ಆದರೆ, ಅವನು ಶೂನ್ಯವಾಗುವುದರಲ್ಲಿ ಸಂದೇಹವಿಲ್ಲ. ಒಬ್ಬನು "ನಾನು ಹಾಗೆ ನಾನು ಹೀಗೆ" ಎಂದು ಮನಃಪೂರ್ವಕ ಅಂದುಕೊಂಡರೆ ಅವನು ಹಾಗೆಯೇ ಆಗುವನು. ಹಾಗಲ್ಲದೆ, ಹಗಲೂ ಇರುಳೂ "ನಾನು ಹಾಗಲ್ಲ, ನಾನು ಹೀಗಲ್ಲ, ನಾನು ಕೆಲಸಕ್ಕೆ ಬಾರದವ" ಎಂದು ಧ್ಯಾನಿಸುತ್ತಿದ್ದರೆ, ಅವನು ಕೆಲಸಕ್ಕೆ ಬಾರದವನಾಗುವುದೇ ನಿಜ. ಈ ವಿಷಯವನ್ನು ನೀವು ನೆನಪಿನಲ್ಲಿಡಬೇಕು. ನಾವು ಸರ್ವಶಕ್ತನ ಪುತ್ರರೂ, ಅನಂತವಾದ ದಿವ್ಯ ವಾದ ಜ್ವಾಲೆಯ ಕಿಡಿಗಳೂ ಆಗಿರುವಾಗ ನಾವು ಕೆಲಸಕ್ಕೆ ಬಾರದವರಾಗು ವುದು ಹೇಗೆ? ನಾವು ಎಲ್ಲವೂ ಆಗಿದ್ದೇವೆ; ಎಲ್ಲವನ್ನೂ ಸಮರ್ಥಿಸಲು ಸಿದ್ಧವಾಗಿದ್ದೇವೆ, ಎಲ್ಲವನ್ನೂ ಸಮರ್ಥಿಸಬಲ್ಲೆವು. ನನ್ನ ಅಭಿಪ್ರಾಯದಲ್ಲಿ ಮಾನವನು ಎಲ್ಲವನ್ನೂ ಸಮರ್ಥಿಸಲೇಬೇಕು. ನಮ್ಮ ಪೂರ್ವಿಕರಲ್ಲಿ ಅಂಥಹ ಆತ್ಮಶ್ರದ್ಧೆಯಿತ್ತು. ಈ ಆತ್ಮಶ್ರದ್ಧೆಯೇ ಅವರಿಗೆ ಶಕ್ತಿಯನ್ನಿತ್ತು, ಅವ ರನ್ನು ನಾಗರಿಕರನ್ನಾಗಿ ಮಾಡಿತು. ನಾವು ಅಧೋಗತಿಗಿಳಿಯುತ್ತಿರು ವುದೂ ನಮ್ಮಲ್ಲಿ ಕುಂದುಕೊರತೆಗಳಿರುವುದೂ ನಿಮಗೆ ನಿಜವಾಗಿ ತೋರಿ ದರೆ, ಇದು ಪ್ರಾರಂಭವಾದುದು ನಾವು ಆತ್ಮಶ್ರದ್ಧೆಯನ್ನು ಕಳೆದು ಕೊಂಡಂದಿನಿಂದ ಎಂದು ತಿಳಿಯಿರಿ. ಆತ್ಮಶ್ರದ್ಧೆ ತಪ್ಪಿತೆಂದರೆ ಈಶ್ವರ ಶ್ರದ್ಧೆಯೂ ತಪ್ಪಿದಹಾಗೆಯೆ. ಅನಂತನೂ ಮಂಗಳದಾಯಕನೂ ಆದ

ಈಶ್ವರನು ನಿಮ್ಮಲ್ಲಿ ನಿಂತು ನಿಮ್ಮ ಮೂಲಕ ಕೆಲಸಮಾಡುತ್ತಿರುವನೆಂದೂ, ಅವನು ಸರ್ವವ್ಯಾಪಿಯೆಂದೂ, ಅಂತರ್ಯಾಮಿಯೆಂದೂ ಪ್ರತಿಯೊಂದು ಅಣುರೇಣುವಿನಲ್ಲಿಯೂ, ನಮ್ಮ ದೇಹ, ಮನಸ್ಸು ಜೀವ ಇವುಗಳೆಲ್ಲದರಲ್ಲಿಯೂ ಓತಪ್ರೋತನಾಗಿರುವನೆಂದೂ, ನಾವು ನಂಬಿರುವಾಗ, ನಾವು ಅಧೈರ್ಯ ಪಡುವುದು ತಾನೆ ಹೇಗೆ? ಅಗಾಧವಾದ ಸಮುದ್ರದಲ್ಲಿ ನಾನೊಂದು ಸಣ್ಣ ನೀರುಗುಳ್ಳೆಯಾಗಿಯೂ, ನೀವು ದೊಡ್ಡದೊಂದು ಅಲೆಯಾಗಿಯೂ ಇರಬಹುದು. ಆದರೇನು? ನನ್ನ ಮತ್ತು ನಿಮ್ಮ ಇಬ್ಬರ ಹಿಂದೆಯೂ ಇರುವುದು ಒಂದೇ ವಿಸ್ತಾರವಾದ ಸಾಗರ. ನಮ್ಮ ಈರ್ವರ ಹಿಂದೆಯೂ, ಜೀವಶಕ್ತಿ ಆತ್ಮಚೈತನ್ಯವೆಂಬ ಅನಂತ ಸಾಗರವಿರುವುದು. ನೀವು ಬೆಟ್ಟದುದ್ದವಿದ್ದರೂ, ನಿಮ್ಮಂತೆಯೇ ಹುಟ್ಟಿದಂದಿನಿಂದಲೂ ನನಗೂ ಆ ಅನಂತ ಜೀವ, ಆ ಅನಂತ ಕಲ್ಯಾಣ, ಆ ಅನಂತ ಶಕ್ತಿ ಇವುಗಳಿಗೂ ಸಂಬಂಧವಿದೆ. ಹಾಗಿಲ್ಲದಿದ್ದರೆ ನಾನು ಜೀವಿಸುತ್ತಿರಲಿಲ್ಲ. ಭ್ರಾತೃವರ್ಯರೇ, ನೀವು ಈ ಉದ್ಧಾರಮಾಡುವ ಉತ್ತಮಗೊಳಿಸುವ, ಭವ್ಯವಾದ ಸಿದ್ಧಾಂತವನ್ನು ನಿಮ್ಮ ಪುತ್ರಪೌತ್ರರಿಗೆ ಹುಟ್ಟಿದಂದಿನಿಂದಲೂ ಕಲಿಸಿ. ನೀವು ಅವರಿಗೆ ಅದ್ವೈತವನ್ನೇ ಹೇಳಿಕೊಡಬೇಕೆಂದು ನನ್ನ ಅಭಿಪ್ರಾಯವಲ್ಲ. ದ್ವೈತವನ್ನೋ ಇಲ್ಲವೇ ನಿಮಗೆ ಇಷ್ಟಬಂದ ಮತ್ತಾವ ಸಿದ್ಧಾಂತವನ್ನೋ ಹೇಳಿಕೊಡಿ. ಆದರೆ ಸರ್ವಸಮ್ಮತವಾದ ಈ ಅದ್ಭುತವಾದ ಆತ್ಮ ತತ್ತ್ವವನ್ನು, ಆತ್ಮನ ಪೂರ್ಣತೆಯನ್ನು ಬೋಧಿಸಿ. ತತ್ತ್ವದರ್ಶಿ ಕಪಿಲನು ಹೇಳಿರುವಂತೆ ಆತ್ಮನು ಸ್ವಭಾವತಃ ಶುದ್ಧನಾಗಿಲ್ಲದ ಪಕ್ಷದಲ್ಲಿ ಅವನು ಶುದ್ಧನಾಗುವ ಸಂಭವವೇ ಇಲ್ಲ. ಒಂದುವೇಳೆ ಪೂರ್ಣತೆಯನ್ನು ಪಡೆದರೂ ಅದು ಮತ್ತೆ ಹೊರಟುಹೋಗುವ ಸಂಭವವಿರುವುದು. ಮನುಷ್ಯನ ಸ್ವಭಾವವೇ ಅಶುದ್ಧವಾದರೆ ಅವನು ಸದಾ ಅಶುದ್ಧವಾಗಿಯೇ ಇರಬೇಕಾಗುವುದು. ಕೆಲವು ವೇಳೆ ಶುದ್ಧನಾದರೂ ಉತ್ತರ ಕ್ಷಣದಲ್ಲಿಯೇ ಅವನಮೇಲೆ ತಾತ್ಕಾಲಿಕವಾಗಿ ಬಂದ ಶುದ್ಧತೆ ಕೊಚ್ಚಿಹೋಗಿ ಅವನ ನೈಜ ಗುಣವಾದ ಅಶುದ್ಧತೆ ಪುನಃ ಪ್ರಕಾಶವಾಗುತ್ತದೆ. ಆದಕಾರಣವೇ ನಮ್ಮ ತತ್ತ್ವದರ್ಶಿಗಳು ನಮ್ಮ ನೈಜಗುಣವು ಶುದ್ಧತೆ ಮತ್ತು ಪೂರ್ಣತೆ, ಅಶುದ್ಧತೆ ಮತ್ತು ಅಪೂರ್ಣತೆಯಲ್ಲವೆಂದು ಹೇಳುವರು. ನಾವಿದನ್ನು ನೆನಪಿನಲ್ಲಿಡಬೇಕು. ಒಬ್ಬ ಮಹರ್ಷಿಯು ತನ್ನ ಅವಸಾನ ಕಾಲದಲ್ಲಿ ತಾನು ಮಾಡಿದ್ದ ಧೀರ ಕೃತ್ಯಗಳನ್ನೂ, ತಾನು ಭಾವಿಸಿದ್ದ ಧೀರ ಭಾವನೆಗಳನ್ನೂ

ನೆನಸುವಂತೆ ತನ್ನ ಮನಸ್ಸಿಗೆ ಆಜ್ಞಾಪಿಸಿದನಲ್ಲದೆ ತಾನು ಮಾಡಿದ ತಪ್ಪು ಗಳನ್ನೂ ತಾನು ತೋರಿಸಿದ್ದ ದೌರ್ಬಲ್ಯವನ್ನೂ ನೆನಸಿಕೊಳ್ಳುವ ಹಾಗೆ ಹೇಳ ಲಿಲ್ಲ. ಈತನ ಉದಾಹರಣೆಯನ್ನು ಮನಸ್ಸಿನಲ್ಲಿಡಿ. ನಮ್ಮಲ್ಲಿ ತಪ್ಪು ಗಳಿವೆ. ದೌರ್ಬಲ್ಯವಿದ್ದೇ ಇರಬೇಕು. ಆದರೇನು? ಸರ್ವದಾ ನಿಮ್ಮ ನೈಜಗುಣವನ್ನು ಸ್ಮರಿಸಿಕೊಳ್ಳಿ. ನಿಮ್ಮ ದೌರ್ಬಲ್ಯವನ್ನು ನೀಗಿಕೊಳ್ಳುವು ದಕ್ಕೂ ನಿಮ್ಮ ತಪ್ಪುಗಳನ್ನು ತಿದ್ದುಕೊಳ್ಳುವುದಕ್ಕೂ ಇರುವುದು ಇದೊಂದೇ ಮಾರ್ಗ.

ನಮ್ಮ ದೇಶದಲ್ಲಿ ಪ್ರಚಾರದಲ್ಲಿರುವ ಸಂಪ್ರದಾಯಗಳಿಗೆಲ್ಲ ಈ ಹಲವು ಭಾವನೆ ಸಾಮಾನ್ಯವೆಂದು ತೋರುವುದು. ಈಗ ನಮ್ಮಲ್ಲಿ ಕೆಲ ವರು ನಮ್ಮ ಹಿರಿಯರ ಧರ್ಮವನ್ನೇ ನಂಬಿರುವರು, ಕೆಲವರು ಈ ಧರ್ಮವನ್ನು ತಿದ್ದಲೆಳಸುವರು. ಕೆಲವರು ಹಳೆಯಮಾದರಿ ಕೆಲವರು ಹೊಸ ಮಾದರಿ ಸಂಪ್ರದಾಯಗಳನ್ನನುಸರಿಸುತ್ತಿರುವರು. ಇವರೆಲ್ಲರೂ ಕಲೆತು ಸಹೋದರ ಭಾವದಿಂದ ಈ ಸಾಮಾನ್ಯವಿಷಯಗಳ ಆಧಾರದ ಮೇಲೆ ನಡೆದುಕೊಳ್ಳುವುದು ಪ್ರಾಯಶಃ ಸಾಧ್ಯ. ಇವೆಲ್ಲಕ್ಕಿಂತಲೂ ಹೆಚ್ಚಾಗಿ ನಾವು ಮನಸ್ಸಿನಲ್ಲಿಡಬೇಕಾದ ವಿಷಯ ಇನ್ನೊಂದಿರುವುದು. ಈ ವಿಷಯವನ್ನು ನಾವು ಪದೇ ಪದೇ ಮರೆಯುತ್ತಿದ್ದೇವೆಂದು ಹೇಳಲು ವಿಷಾದವಾಗುತ್ತದೆ. ಭರತಖಂಡದಲ್ಲಿ ಧರ್ಮದಗುರಿ ಸಾಕ್ಷಾತ್ಕಾರ, ಮುಕ್ತಿಸಾಧನ, ಮತ್ತಾವುದೂ ಧರ್ಮವಲ್ಲ. "ನೀವು ನಮ್ಮ ಮತ ವನ್ನು ನಂಬಿ ನಿಮಗೆ ಯಾವ ತೊಂದರೆಯೂ ಬಾರದಂತೆ ನಮ್ಮ ದೇವರು ನೋಡಿಕೊಳ್ಳುವನು" ಎಂಬ ಅನ್ಯರ ಬೋಧನೆ ನಮ್ಮವರು ಒಪ್ಪುವ ಮಾತಲ್ಲ. ಆ ಮಾತಿನಲ್ಲಿ ನಮಗೆ ವಿಶ್ವಾಸವಿಲ್ಲ. ನಮ್ಮ ಈಗಿನ ಸ್ಥಿತಿಗೆ ನಾವೇ ಕಾರಣರು. ದೈವಕೃಪೆಯಿಂದಲೂ ಸ್ವಪ್ರಯತ್ನದಿಂದಲೂ ನಮಗೆ ನಮ್ಮ ಈಗಿನ ಸ್ಥಿತಿ ಪ್ರಾಪ್ತವಾಗಿರುವುದು. ಒಂದು ಧರ್ಮದಲ್ಲಿ ನಂಬಿಕೆ ಯಿಟ್ಟ ಮಾತ್ರದಿಂದ ನಮಗೆ ಹೆಚ್ಚು ಪ್ರಯೋಜನವಾಗುವುದು ಅಸಂಭವ. ಭರತಖಂಡದ ಆಧ್ಯಾತ್ಮಗಮನದಿಂದ ಬಂದ ಪ್ರಬಲವಾದ ಶಬ್ದ ಯಾವು ದೆಂದರೆ ಅನುಭೂತಿ ಎಂಬುದು. "ಈಶ್ವರನನ್ನು ಸಾಕ್ಷಾತ್ಕಾರ ಮಾಡಿ ಕೊಳ್ಳಬೇಕು" ಎಂದು ಮೇಲಿಂದ ಮೇಲೆ ಸಾರುವುದು ನಮ್ಮ ಗ್ರಂಥ ಗಳು ಒಂದೇ. ಸತ್ಯವೂ ಧೀರವೂ ಆದ ಮಾತುಗಳಿವು. ಇವುಗಳಲ್ಲಿ ಪ್ರತಿ ಯೊಂದು ಮಾತೂ, ಪ್ರತಿಯೊಂದು ಧ್ವನಿಯೂ ಸತ್ಯವಾದುದು. ಧಾರ್ಮಿಕ

ವಿಷಯುವನ್ನು ಕೇಳಿದರೆ ಸಾಲದು, ಅದನ್ನು ಸಾಧಿಸಿಕೊಳ್ಳಬೇಕು, ಗಿಳಿಯು ಹಾಗೆ ಕೆಲವು ಸಿದ್ಧಾಂತಗಳನ್ನು ಕಂಠಪಾಠಮಾಡಿದರೆ ಸಾಲದು. ಅವುಗಳನ್ನು ಸಂಗ್ರಹಿಸಿದರೂ ಸಾಲದು — ಹೀಗೆ ಮಾಡುವುದೇನೂ ಹೆಚ್ಚಿನ ಕೆಲಸವಲ್ಲ — ಅವು ನಮ್ಮಲ್ಲಿ ಹೊಕ್ಕು ನಮ್ಮದಾಗಬೇಕು. ಹೌದು ದೇವರಿದ್ದಾನೆಂಬುದಕ್ಕೆ ಸರ್ವೋತ್ತಮವಾದ ಪ್ರಮಾಣವಾವುದು? ಅವನನ್ನು ನಾವು ನಮ್ಮ ಬುದ್ಧಿಯಿಂದ ತಿಳಿಯಬಲ್ಲೆವೆಂಬುದಲ್ಲ; ಈಗಲೂ, ಹಿಂದೆಯೂ, ಈಶ್ವರನನ್ನು ಕೆಲವರು ನೋಡಿರುವರೆಂಬುದು. ನಾವು ಆತ್ಮನಲ್ಲಿ ನಂಬಿರುವುದು ಏಕೆ? ಆತ್ಮನ ಇರುವಿಕೆಗೆ ಕಾರಣಗಳಿರುವುವು. ಆದರೆ ಇದರಿಂದ ನಮಗೆ ಆತ್ಮನಿರುವಿಕೆಯಲ್ಲಿ ನಂಬಿಕೆ ಹುಟ್ಟುವುದಿಲ್ಲ. ನಮ್ಮ ಭಾರತ ಭೂಮಿಯಲ್ಲಿ, ಹಿಂದೆ ಸಾವಿರಾರು ಜನರು ಆತ್ಮ ಸಾಕ್ಷಾತ್ಕಾರ ಮಾಡಿಕೊಂಡರು, ಈಗಲೂ ಅನೇಕರು ಆತ್ಮನನ್ನು ಕಂಡಿರುವರು, ಇನ್ನು ಮುಂದೆಯೂ ಸಾವಿರಾರು ಜನರು ಆತ್ಮ ಸಾಕ್ಷಾತ್ಕಾರವನ್ನು ಪಡೆದು ಆತ್ಮನನ್ನು ನೋಡುವರು, ಎಂಬ ವಿಷಯ ನಮಗೆ ಆತ್ಮನಲ್ಲಿ ನಂಬಿಕೆಯನ್ನು ಕೊಡುವುದು. ಈಶ್ವರನನ್ನು ಕಂಡು ಆತ್ಮಸಾಕ್ಷಾತ್ಕಾರ ಮಾಡಿಕೊಳ್ಳುವವರೆಗೂ ಮನುಷ್ಯನಿಗೆ ಮುಕ್ತಿಯಿಲ್ಲ. ಆದ್ದರಿಂದ, ಎಲ್ಲದಕ್ಕಿಂತಲೂ ಹೆಚ್ಚಾಗಿ ಇದನ್ನು ಗ್ರಹಿಸಬೇಕು. ನಾವು ಈ ವಿಷಯುವನ್ನು ಹೆಚ್ಚಾಗಿ ಗ್ರಹಿಸಿದಷ್ಟೂ, ನಮಗೆ ಸಂಪ್ರದಾಯಗಳಲ್ಲಿರುವ ಕ್ಷುದ್ರ ಬುದ್ಧಿ ಕಡಿಮೆಯಾಗುವುದು. ಏಕೆಂದರೆ ಈಶ್ವರಾನುಭೂತಿಯಾದ ಮಾನವನಿಗೆ ಮಾತ್ರ ಧರ್ಮಿಷ್ಠನೆಂಬ ಮಾತು ಸಲ್ಲುವುದು, ಅವನಲ್ಲಿ ಮಾತ್ರ ಬಂಧನಗಳು ಹರಿದು ಹೋಗಿರುವುವು. ಸಂಶಯಗಳು ನಾಶವಾಗಿರುವುವು, ಅತ್ಯಂತ ಸಮೀಪನೂ ಹಾಗೂ ಅತ್ಯಂತ ದೂರನೂ ಆದ ಈಶ್ವರನನ್ನು ಕಂಡವನು ಮಾತ್ರ ಕರ್ಮ ಬದ್ಧನಲ್ಲ; ಆದರೆ ಕೆಲವು ವೇಳೆ ನಾವು ಕೇವಲ ಭಾಷೆಯನ್ನು ಧರ್ಮದ ನಿಜಾಂಶವೆಂದೂ, ಚಮತ್ಕಾರ ಶಬ್ದ ಜಾಲವನ್ನು ಮಹಾ ಆತ್ಮಾನುಭೂತಿಯೆಂದೂ ತಪ್ಪಾಗಿ ತಿಳಿದುಕೊಳ್ಳುವೆವು. ಈ ತಪ್ಪು ತಿಳಿವಳಿಕೆಯಿಂದ ಸಂಪ್ರದಾಯ ಸ್ಪರ್ಧೆಗಳೂ ಹೋರಾಟಗಳೂ ಹುಟ್ಟುವುವು. ಹೀಗೆ ಮೋಸಹೋಗದೆ, ಪರಮಾರ್ಥ ಸಾಧನೆಯೇ ಧರ್ಮವೆಂದು ನಾವು ತಿಳಿದಕೂಡಲೇ ನಾವು ನಮ್ಮ ಮನಸ್ಸನ್ನು ಶೋಧಿಸಿ ನೋಡೋಣ. ನಾವು ಧರ್ಮದ ನಿಜಾಂಶವನ್ನು ಎಷ್ಟರಮಟ್ಟಿಗೆ ನಮ್ಮದನ್ನಾಗಿ ಮಾಡಿಕೊಂಡಿರುವೆನೆಂಬುದನ್ನು ಗೊತ್ತುಮಾಡಿಕೊಳ್ಳುತ್ತೇವೆ. ಆಗ ನಾವು ಕತ್ತಲಲ್ಲಿ

ನಡೆದುಕೊಂಡು ಹೋಗುತ್ತಿರುವೆವೆಂಬುದನ್ನೂ ತಿಳಿದು ನಮ್ಮ ಕ್ಷುದ್ರ ಬುದ್ಧಿಯನ್ನು ಬಿಟ್ಟು ಹೋರಾಟಗಳನ್ನು ನಿಲ್ಲಿಸುವೆವು. ಸಂಪ್ರದಾಯಗಳ ಕಲಹಗಳನ್ನೆಬ್ಬಿಸುವವರನ್ನು ಕಂಡರೆ ಅವರನ್ನು ಕುರಿತು, "ನೀವು ದೇವರನ್ನು, ಆತ್ಮವನ್ನು ಕಂಡಿದ್ದೀರಾ?" ಎಂದು ಕೇಳಿ; "ನೀವು ಕಂಡಿಲ್ಲವಾದರೆ ಈಶ್ವರನ ವಿಷಯವಾಗಿ ಇತರರಿಗೆ ತಿಳಿಸಲು ನಿಮಗೆ ಅಧಿಕಾರ ವಿತ್ತವರಾರು? ಕುರುಡನು ಕುರುಡನಿಗೆ ದಾರಿ ತೋರಿದರೆ ಇಬ್ಬರೂ ಹಳ್ಳದಲ್ಲಿ ಬೀಳುವಂತೆ ಅಂಧಕಾರದಲ್ಲಿ ವರ್ತಿಸುತ್ತಿರುವ ನಿಮಗೆ ನನ್ನನ್ನು ಕರೆದೊಯ್ಯುವ ಅಧಿಕಾರ ಎಲ್ಲಿಂದ ಬಂದಿತು?" ಎಂದು ಕೇಳಿ. ಆದ್ದರಿಂದ ಇತರರಲ್ಲಿರುವ ದೋಷಗಳನ್ನು ಹುಡುಕಲು ಹೋಗುವ ಮುನ್ನ ಚೆನ್ನಾಗಿ ಆಲೋಚಿಸಿ, ಸತ್ಯವನ್ನು ತಮ್ಮ ಅಂತರಂಗದಲ್ಲಿ ಕಾಣಲು ಯಾರಾದರೂ ಪ್ರಯತ್ನಪಡುತ್ತಿದ್ದರೆ, ಅವರ ಈ ಪ್ರಯತ್ನದಲ್ಲಿ ತಮ್ಮ ಸ್ವಧರ್ಮವನ್ನನುಸರಿಸಿ ಸತ್ಯವನ್ನು ಕಾಣಲು ಅವರಿಗೆ ಅವಕಾಶಕೊಡಿ. ವಿಶಾಲವಾದ ಸ್ಪಷ್ಟವಾದ ಸತ್ಯ ಅವರಿಗೆ ಗೋಚರವಾದಾಗ, ನಮ್ಮ ಭಾರತಭೂಮಿಯಲ್ಲಿ ಪ್ರತಿಯೊಬ್ಬ ಋಷಿಯೂ ಸತ್ಯವನ್ನು ಕಂಡ ಇತರರೂ ಸಾರಿ ಹೇಳುವಹಾಗೆ, ಅವರೂ ಆಶ್ಚರ್ಯವೂ ಅದ್ಭುತವೂ ಆದ ಶಾಂತಿಯನ್ನು ಪಡೆಯುವರು. ಆಗ ಅವರ ಹೃದಯದಿಂದ ಪ್ರೇಮಪೂರ್ಣನುಡಿಗಳು ಮಾತ್ರ ಹೊರಬೀಳುವುವು. ಏಕೆಂದರೆ ಅವರ ಹೃದಯವನ್ನು ಪ್ರೇಮಮಯನಾದ ಈಶ್ವರನು ಸ್ಪರ್ಶಿಸಿರುವನು. ಆಗ ಸಂಪ್ರದಾಯಗಳ ಜಗಳಗಳಿಗೆ ಗಮನಕೊಡದೆ ಹಿಂದೂ ಎಂಬ ಹೆಸರನ್ನು ತಾಳಿದ ಪ್ರತಿಯೊಬ್ಬನ ಮಹತ್ವವನ್ನು ತಿಳಿದು ಅವನನ್ನು ಆಲಂಗಿಸಿ, ಅವನನ್ನು ಪ್ರೀತಿಸುತ್ತೇವೆ. ಎಂದು ಹಿಂದೂ ಎಂಬ ಹೆಸರನ್ನು ಕೇಳಿದ ತಕ್ಷಣ ಶಕ್ತಿ ಉದ್ಭವಿಸುವುದೋ ಅಂದು ನಾವು ನಿಜವಾದ ಹಿಂದೂಗಳು. ಎಂದು ಆ ಹೆಸರಿನಿಂದ ಜೀವಿಸುತ್ತಿರುವ ಪ್ರತಿಯೊಬ್ಬನ ಸಂಕಟವೂ ನಿಮ್ಮ ಮನಸ್ಸನ್ನು ತಾಗಿ, ನಿಮ್ಮ ಪುತ್ರನ ಸಂಕಟ ನಿಮಗೆ ಎಷ್ಟು ವ್ಯಥೆಯನ್ನುಂಟುಮಾಡುತ್ತದೆಯೋ ಅಷ್ಟು ವ್ಯಥೆಯನ್ನು ಕೊಟ್ಟಾಗ, ನೀವು ನಿಜವಾದ ಹಿಂದೂಗಳು. ಈ ಉಪನ್ಯಾಸದ ಪ್ರಾರಂಭದಲ್ಲಿ ನಾನು ನಿಮಗೆ ಉದಹರಿಸಿರುವ ಆದರ್ಶ ಪುರುಷನಾದ ಗುರು ಗೋವಿಂದಸಿಂಗರಂತೆ, ನೀವು ಅವರಿಗಾಗಿ, ಬಂದ ಕಷ್ಟಗಳನ್ನೆಲ್ಲ ಅನುಭವಿಸಲು ಅಣಿಯಾದಾಗ ನೀವು ನಿಜವಾದ ಹಿಂದೂಗಳು. ನಿಮ್ಮ ಮಾತೃಭೂಮಿಯಾದ

ಪಂಜಾಬನ್ನು ಪೀಡಿಸುತ್ತಿದ್ದ ಶತ್ರುಗಳೊಡನೆ ಹೋರಾಡಿ ಧರ್ಮರಕ್ಷಣೆಗಾಗಿ ತನ್ನ ರಕ್ತವನ್ನು ಚೆಲ್ಲಿದನು. ರಣರಂಗದಲ್ಲಿ ತನ್ನ ವೀರ ಕುಮಾರರು ಹತರಾದುದನ್ನು ಕಣ್ಣಾರೆ ನೋಡಿದನು. ಯಾರಿಗಾಗಿ ತಾನು ತನ್ನ ಮತ್ತು ತನ್ನ ಆಪ್ತೇಷ್ಟರ ರಕ್ತವನ್ನು ಬಸಿದನೋ ಅವರೂ ಕೂಡ ತನ್ನನ್ನು ದೂರ ಮಾಡಲು, ಗಾಯಹೊಂದಿದ ಸಿಂಹದಂತೆ, ಈ ಮಹಾಪುರುಷನು ರಣಭೂಮಿಯನ್ನು ಬಿಟ್ಟು, ತನ್ನನ್ನು ದೂರಮಾಡಿದ ಕೃತಘ್ನರನ್ನು ಕೊಂಚವೂ ಶಪಿಸದೆ ಶಾಂತಚಿತ್ತದಿಂದ ದಕ್ಷಿಣದೇಶಕ್ಕೆ ಬಂದು, ಇಹಲೋಕವನ್ನು ಬಿಟ್ಟನು. ಈ ದೇಶದ ಶ್ರೇಯಸ್ಸನ್ನು ನೀವು ಕೋರುವಿರಾದರೆ, ನಾನು ಹೇಳುವುದನ್ನು ಲಾಲಿಸಿರಿ, ನಿಮ್ಮಲ್ಲಿ ಪ್ರತಿಯೊಬ್ಬನೂ ಒಬ್ಬ ಗೋವಿಂದ ಸಿಂಗನಾಗಿರಬೇಕು. ನಿಮ್ಮ ದೇಶದ ಜನರಲ್ಲಿರುವ ಸಾವಿರಾರು ಹುಳುಕುಗಳು ನಿಮ್ಮ ಕಣ್ಣಿಗೆ ಬಿದ್ದರೂ, ಅವರಲ್ಲಿ ಹರಿಯುತ್ತಿರುವ ಹಿಂದೂ ರಕ್ತದ ಕಡೆಗೆ ದೃಷ್ಟಿಯಿಡಿ. ಅವರು ನಿಮಗೆ ಎಷ್ಟು ತೊಂದರೆ ಕೊಟ್ಟರೂ, ಅವರು ನಿಮ್ಮ ಗೌರವಕ್ಕೆ ಪಾತ್ರರಾದವರಲ್ಲಿ ಮೊದಲನೆಯವರೆಂಬುದನ್ನು ಮರೆಯದಿರಿ. ಅವರಲ್ಲಿ ಪ್ರತಿಯೊಬ್ಬನೂ, ನಿಮ್ಮನ್ನು ಶಪಿಸಿದರೂ ನೀವು ಪ್ರತಿಯಾಗಿ ವಿಶ್ವಾಸಪೂರ್ವಕ ಮಾತುಗಳನ್ನು ಅವರಿಗೆ ಕಳುಹಿಸಿ. ಅವರು ನಿಮ್ಮನ್ನು ದೇಶಭ್ರಷ್ಟರನ್ನಾಗಿ ಮಾಡಿದರೆ, ಆ ಕೇಸರಿ, ಆ ಪ್ರತಾಪಶಾಲಿ ಗೋವಿಂದಸಿಂಗರಂತೆ ಮೌನವಾಗಿ ದೇಶವನ್ನು ಬಿಟ್ಟು ಹೊರಟು ಹೋಗಿ. ಆಗ ನಿಮಗೆ ಹಿಂದೂ ಎಂಬ ಹೆಸರು ಸಲ್ಲುವುದು. ಇಂತಹ ಆದರ್ಶ ಸದಾ ನಿಮ್ಮ ಮುಂದಿರಲಿ. ನಿಮ್ಮ ಗಂಡು ಗೊಡಲಿಗಳನ್ನೆಲ್ಲಾ ನೆಲದಲ್ಲಿ ಹೂತಿಟ್ಟು, ಎಲ್ಲೆಲ್ಲಿಯೂ ಶ್ರೇಷ್ಠವಾದ ಪ್ರೇಮವೆಂಬ ಪ್ರವಾಹವನ್ನು ಹರಿಸಿರಿ.

ನಮ್ಮ ದೇಶದ ಪುನರುದ್ಧಾರದ ವಿಚಾರವಾಗಿ ಅನೇಕರು ಅನೇಕ ವಿಧವಾಗಿ ಮನಬಂದಂತೆ ಮಾತನಾಡುತ್ತಾರೆ, ಆಡಲಿ. ಹುಟ್ಟಿದಂದಿನಿಂದ ಈ ಕಾರ್ಯದಲ್ಲಿ ಕೈಹಾಕಿರುವ, ಇಲ್ಲವೇ ಕೈಹಾಕಲು ಪ್ರಯತ್ನಿಸುತಿರುವ ನಾನು, ನಿಮಗೆ ಸಾರಿ ಹೇಳುವುದೇನೆಂದರೆ— ನಮ್ಮ ದೇಶದ ಪುನರುದ್ಧಾರ, ನೀವು ಧರ್ಮದಲ್ಲಿ ನಿರತರಾಗುವತನಕ ಆಗಲಾರದು. ಇಷ್ಟೇ ಅಲ್ಲ; ನೀವು ಧರ್ಮನಿರತರಾಗದಿದ್ದರೆ, ಈ ಇಡೀ ಜಗತ್ತಿನ ಶ್ರೇಯಸ್ಸಿಗೇ ಕುಂದುಕ ಬರುವುದು. ಏಕೆಂದರೆ ನಾನು ನೋಡಿದ್ದರಲ್ಲಿ, ಈಗ ಪಾಶ್ಚಾತ್ಯರ ನಾಗರಿಕತೆಯ ತಳಹದಿ ಬುಡಸಹಿತ ಜರ್ಝರಿತವಾಗಿದೆ. ನಿರೀಶ್ವರ

ವಾದದ ಮರಳಿನ ತಳಹದಿಯ ಮೇಲೆ ಭದ್ರವಾಗಿ ಕಟ್ಟಿದ ಭವನಗಳು ಕೂಡ ಒಂದು ದಿನ ಕೆಳಗೆ ಉರುಳಲೇಬೇಕು. ಜಗತ್ತಿನ ಚರಿತ್ರೆಯೇ ಇದಕ್ಕೆ ಸಾಕ್ಷಿ. ಜನಾಂಗದ ಮೇಲೆ ಜನಾಂಗಗಳು ಹುಟ್ಟಿ ನಿರೀಶ್ವರ ವಾದದ ಮೇಲೆ ತಮ್ಮ ಮಹತ್ವದ ಭವನಗಳನ್ನು ಕಟ್ಟಿದವು. ಮನುಷ್ಯ ಪಂಚ ಭೌತಿಕ ವಸ್ತುವೆಂದು ಸಾರಿದುವು. ಪಾಶ್ಚಾತ್ಯರು ಯಾವನಾದರೂ ಸತ್ತರೆ ಅವನು ತನ್ನ ಜೀವವನ್ನು ಬಿಟ್ಟನೆನ್ನುವರು. ನಾವಾದರೋ ಸತ್ತವನು ತನ್ನ ದೇಹವನ್ನು ಬಿಟ್ಟನೆಂದು ಹೇಳುವೆವು. ಮನುಷ್ಯನು ಮುಖ್ಯವಾಗಿ ಶರೀರ, ಆ ಶರೀರದಲ್ಲಿ ಜೀವವು ನೆಲಸಿದೆಯೆಂಬುದು ಪಾಶ್ಚಾತ್ಯರ ಭಾವನೆ. ಮನುಷ್ಯನು ಮುಖ್ಯವಾಗಿ ಆತ್ಮ, ಅವನು ಶರೀರವನ್ನು ಹೊಂದುವನು ಎಂಬುದು ನಮ್ಮ ಭಾವನೆ. ಇದೇ ಈ ಎರಡು ನಾಗರಿಕತೆಗಳಿಗಿರುವ ಅಗಾಧವಾದ ವ್ಯತ್ಯಾಸ. ಆದ್ದರಿಂದ ದೇಹಸುಖ ಇತ್ಯಾದಿ ಮರಳು ಆಧಾರಗಳ ಮೇಲೆ ಕಟ್ಟಿದ ಅವರ ನಾಗರಿಕತೆಗಳೆಲ್ಲವೂ ಸ್ವಲ್ಪಕಾಲವಿದ್ದು, ಒಂದಾದಮೇಲೊಂದು ಅಳಿಸಿಹೋದವು. ಆದರೆ ಭಾರತಭೂಮಿಯ ಮತ್ತು ಭಾರತಭೂಮಿಯ ಪದತಳದಲ್ಲಿ ಕುಳಿತು ಕಲಿತ ಜಪಾನ್ ಮತ್ತು ಚೀನಾ ದೇಶಗಳ ನಾಗರಿಕತೆಗಳು ಇಂದಿನವರೆಗೂ ಸಜೀವವಾಗಿದೆ. ಅಲ್ಲದೆ ಅವುಗಳು ಪುನಃ ತಲೆಯೆತ್ತುವ ಚಿಹ್ನೆಗಳು ಕಾಣಿಸುತ್ತಿವೆ. ಅವುಗಳ ಜೀವಕಳೆಯು ರಕ್ತ ಬೀಜದಂತೆ, ಎಷ್ಟುಸಲ ನೆಲಕ್ಕುರುಳಿದರೂ, ಅಧಿಕ ವಾದ ಮಹಿಮೆಯಿಂದ ಕೂಡಿ ಮತ್ತೆ ಮತ್ತೆ ಏಳುವುವು. ನಿರೀಶ್ವರ ವಾದದ ಆಧಾರದ ಮೇಲೆ ನಿಂತ ನಾಗರಿಕತೆಯು ಒಂದು ಸಲ ನಾಶವಾದರೆ, ಪುನಃ ಏಳುವುದೇ ಇಲ್ಲ. ಆ ಭವನವು ಒಂದು ಸಲ ಕೆಳಗೆ ಬಿದ್ದರೆ ಪುಡಿಪುಡಿ ಯಾಗುವುದು. ಪುನಃ ಅದನ್ನು ಸರಿಪಡಿಸಲು ಅವಕಾಶವೇ ಇರುವುದಿಲ್ಲ. ಆದ್ದರಿಂದ ತಾಳ್ಮೆ ಇರಲಿ, ಸಾವಧಾನದಿಂದಿರಿ, ಭವಿಷ್ಯ ನಮಗಾಗಿ ಕಾದಿದೆ. ಜಗತ್ತಿನ ಕಲ್ಯಾಣ ನಮ್ಮಿಂದ ಆಗಬೇಕಾಗಿರುವುದು.

ಅವಸರ ಪಡಬೇಡಿ. ನಿಮ್ಮ ಸಾಧನೆಗಾಗಿ ಇತರರನ್ನು ಕಣ್ಣು ಮುಚ್ಚಿಕೊಂಡು ಅನುಕರಿಸಲು ಹೋಗಬೇಡಿ. ಈ ನೀತಿಯನ್ನು ನೀವು ನೆನಪಿನಲ್ಲಿಡಿ. ಅಂಧಾನುಕರಣೆ ನಾಗರಿಕತೆಯಲ್ಲ. ಒಬ್ಬ ರಾಜನ ಉಡುಗೆ ಗಳನ್ನು ತೊಟ್ಟುಕೊಂಡ ಮಾತ್ರಕ್ಕೆ ನಾನು ರಾಜನಾಗುವುದು ಅಸಾಧ್ಯ. ಸಿಂಹದ ಚರ್ಮವನ್ನು ಹೊದ್ದ ಕತ್ತೆ ಎಂದಿಗೂ ಸಿಂಹವಾಗಲಾರದು. ಅಂಧ ಅನುಕರಣೆ, ವಿಚಾರ ಹೀನ ಹೇಡಿ ಅನುಕರಣೆ ಎಂದಿಗೂ, ನಮ್ಮ

ಏಳಿಗೆಗೆ ಕಾರಣವಾಗಲಾರದು. ಇಷ್ಟು ಮಾತ್ರವಲ್ಲ ಅದು ನಮ್ಮ ಅಧೋ ಗತಿಯು ಹೆಗ್ಗುರುತು. ಯಾವಾಗ ತನ್ನನ್ನು ನೋಡಿ, ತಾನೆ ಅಸಹ್ಯ ಪಟ್ಟು ಕೊಳ್ಳುತ್ತಾನೆಯೊ, ಆಗ ಅವನನ್ನು ನಾಶಮಾಡುವ ಕೊನೆಯ ಪೆಟ್ಟು ಅವನಿಗೆ ಬಿತ್ತೆಂದು ತಿಳಿಯಿರಿ. ಯಾವನು ತನ್ನ ಪೂರ್ವಿಕರಿಂದ ತನಗೆ ಅವಮಾನವಾಯಿತೆಂದು ಖಿನ್ನಮನಸ್ಕನಾಗುವನೋ, ಆಗ ಅವನಿಗೆ ಕೊನೆ ಗಾಲ ಸಮೀಪಿಸಿತೆಂದು ತಿಳಿಯಿರಿ. ಹಿಂದೂ ಜನಾಂಗದಲ್ಲಿ ನಾನೊಬ್ಬ ತೃಣ ಪ್ರಾಯನು. ಆದರೂ ನಿಮ್ಮ ಮುಂದೆ ಧೈರ್ಯವಾಗಿ ನಿಂತಿದ್ದೇನೆ. ಇಷ್ಟು ಧೈರ್ಯ ನನಗೆ ಹೇಗೆ ಬಂತು ? ನಮ್ಮ ಜನಾಂಗದ ವಿಷಯ ದಲ್ಲಿಯೂ, ನಮ್ಮ ಪೂರ್ವಿಕರ ವಿಷಯದಲ್ಲಿಯೂ, ನನಗಿರುವ ಹೆಮ್ಮೆಯೇ ಇದಕ್ಕೆ ಕಾರಣ. ನಾನು ಹಿಂದೂ ಎಂದು ಹೇಳಿಕೊಳ್ಳುವುದೇ ನನಗೊಂದು ಹೆಮ್ಮೆ. ನಿಮ್ಮ ಸೇವಕರಲ್ಲಿ ನಾನೊಬ್ಬ ಕೀಳು ಸೇವಕನಾಗಿರುವುದೇ ನನಗೊಂದು ಹೆಮ್ಮೆ. ಜಗತ್ತು ಎಂದೂ ಇನ್ನೆಲ್ಲಿಯೂ ಕಾಣದ ಮಹಾ ಮಹಿಮ ಋಷಿಗಳ ವಂಶಕ್ಕೆ ಸೇರಿದ ನೀವು ನನ್ನ ಭಾಂದವರಾಗಿರುವುದೇ ನನಗೊಂದು ಹೆಮ್ಮೆ. ಆದ್ದರಿಂದ ಆತ್ಮ ಶ್ರದ್ಧೆಯುಳ್ಳವರಾಗಿ, ನಿಮ್ಮ ಹಿರಿಯರಿಂದ ನಿಮಗೆ ಅಪಕೀರ್ತಿ ತಾಗಿತೆನ್ನದಿರಿ. ಅವರಿಂದ ನಿಮಗೆ ಕೀರ್ತಿ ಬಂದಿತೆಂದು ಹೆಮ್ಮೆಪಡಿ. ಆದರೆ ದಯವಿಟ್ಟು ವಿಚಾರ ಮಾಡದೆ, ಕುರುಡರಂತೆ ಇತರರನ್ನು ಅನುಕರಿಸಬೇಡಿ, ನೀವು ಅನ್ಯರ ಅಧೀನರಾದಂದಿ ನಿಂದ ನಿಮಗೆ ಬಾಹ್ಯ ಸ್ವಾತಂತ್ರ್ಯ ಹೋಯಿತು. ದೈಹಿಕ ವಿಷಯ ದಲ್ಲಿಯೂ ನೀವು ಅನ್ಯರ ಆಜ್ಞಾನುವರ್ತಿಗಳಾದರೆ ಕ್ರಮೇಣ ನಿಮ್ಮ ಯೋಚನಾ ಶಕ್ತಿಯೂ ನಾಶವಾಗುವುದು. ಶ್ರಮಪಟ್ಟು ನಿಮ್ಮಲ್ಲಿರುವ ಮಹತ್ವವನ್ನು ವ್ಯಕ್ತಗೊಳಿಸಿ, ಅನುಕರಿಸಬೇಡಿ. ಹೀಗೆಂದ ಮಾತ್ರಕ್ಕೆ ಅನ್ಯರ ಸದ್ಗುಣಗಳನ್ನು ನೀವು ಗ್ರಹಿಸಬಾರದೆಂದು ನನ್ನ ಅಭಿಪ್ರಾಯವಲ್ಲ. ಅನ್ಯರಿಂದ ನಾವು ಅನೇಕ ವಿಷಯಗಳನ್ನು ಕಲಿಯಲೇ ಬೇಕು. ಬೀಜ ವನ್ನು ನೆಲದಲ್ಲಿ ಬಿತ್ತಿ ಅದು ಚೆನ್ನಾಗಿ ಬೆಳೆಯಲು ಅತ್ಯಾವಶ್ಯಕವಾದ ಮಣ್ಣು ಗಾಳಿ ನೀರು ಇವುಗಳನ್ನು ಯಥೇಚ್ಛವಾಗಿ ಕೊಟ್ಟರೆ ಆ ಬಿತ್ತವು ಗಿಡವಾಗಿ ಅನಂತರ ಹೆಮ್ಮರನಾಗುತ್ತದೆಯಲ್ಲದೆ, ಅದು ಮಣ್ಣು ಗಾಳಿ, ನೀರು ಇವುಗಳಲ್ಲಿ ಯಾವುದೂ ಆಗುವುದಿಲ್ಲ. ತನಗೆ ಕೊಟ್ಟುದೆಲ್ಲವನ್ನೂ ತನ್ನಲ್ಲಿ ಐಕ್ಯಮಾಡಿಕೊಂಡು ತನ್ನ ಸ್ವಭಾವಾನುಸಾರ ಅದು ಒಂದು ದೊಡ್ಡ ಗಿಡ ಅಥವಾ ಮರವಾಗುವುದು. ನೀವೂ ಹೀಗೆಯೇ ಮಾಡಬೇಕು.

ನೀವು ಅನ್ಯರಿಂದ ಕಲಿಯಬೇಕಾದ ವಿಷಯಗಳು ನಿಜವಾಗಿಯೂ ಹೇರಳ ವಾಗಿವೆ. ಅನ್ಯರಿಂದ ಕಲಿಯಲೊಲ್ಲದವನು ಜೀವವಿರುವಶವವೆಂದು ತಿಳಿಯಿರಿ.

ನಮ್ಮ ಸ್ಮೃತಿಕಾರ ಮನು ಅನ್ಯರಿಂದ ಕಲಿಯುವ ವಿಷಯದಲ್ಲಿ ಹೀಗೆ ಹೇಳಿರುವನು. "ಆದದೀತ ಪರಾಂ ವಿದ್ಯಾಂ ಪ್ರಯತ್ನಾದವ ರಾದಪಿ। ಅಂತ್ಯಾದಪಿ ಪರಂ ಧರ್ಮಂ ಸ್ತ್ರೀರತ್ನಂ ದುಷ್ಕುಲಾದಪಿ॥" "ಹೀನ ಕುಲಜಳಾದರೂ ಸ್ತ್ರೀ ರತ್ನ ಪ್ರಾಯಳಾಗಿದ್ದರೆ ಅವಳನ್ನು ಮದುವೆ ಯಾಗು. ಹೀನ ಕುಲಜನಾದರೂ ಚಂಡಾಲನಾದರೂ ಸರಿ ಅವನನ್ನು ಸೇವಿಸಿ ಮೋಕ್ಷ ಧರ್ಮವನ್ನು ಮುಕ್ತಿ ಮಾರ್ಗವನ್ನು ಕಲಿ". ಇತರರ ಸುಗುಣಗಳೆಲ್ಲವನ್ನೂ ಅವರಿಂದ ಕಲಿಯಿರಿ, ಆದರೆ ಅವುಗಳನ್ನು ನಿಮ್ಮ ಸಂಪ್ರದಾಯಕ್ಕನುಸಾರವಾಗಿ ನಿಮ್ಮವನ್ನಾಗಿ ಮಾಡಿಕೊಳ್ಳಿ, ನೀವೇ ಅನ್ಯ ರಾಗಬೇಡಿ. ಈ ಹಿಂದೂ ಧಾರ್ಮಿಕ ಜೀವನದಿಂದ ದೂರವಾಗುವ ಪ್ರಯತ್ನ ಮಾಡಬೇಡಿ. ಭಾರತೀಯರೆಲ್ಲರೂ ಅನ್ಯದೇಶೀಯರ ಉಡುಗೆ ಯನ್ನುಟ್ಟು, ತಿಂಡಿಯನ್ನು ತಿಂದು, ನಡತೆಯನ್ನು ಕಲಿತರೆ ನಮ್ಮ ದೇಶಕ್ಕೆ ಮಂಗಳವಾಗುವುದೆಂದು ಒಂದು ಘಳಿಗೆಯೂ ಭಾವಿಸದಿರಿ. ಕೆಲವು ವರ್ಷ ಗಳಿಂದ ಅನುಸರಿಸಿ ಬಂದ ಅಭ್ಯಾಸವನ್ನು ಬಿಡುವುದು ಎಷ್ಟು ಕಷ್ಟವೆಂಬುದು ಎಲ್ಲರಿಗೂ ಗೊತ್ತು. ನಿಮ್ಮ ರಕ್ತದಲ್ಲಿ ಎಷ್ಟು ಸಾವಿರ ವರ್ಷಗಳ ಅಭ್ಯಾಸ ಹರಿಯುತ್ತಿರುವುದೆಂಬುದು ಜಗದೀಶ್ವರನಿಗೇ ಗೊತ್ತು. ಸಮುದ್ರವನ್ನು ಸೇರಲು ಇನ್ನು ಸ್ವಲ ದೂರವಿರುವ ನದಿ ಹಿಮಾಲಯದ ಮಂಜುಗೆಡ್ಡೆಗಳಿಗೆ ಹಿಂದಿರುಗಿ ಹೋಗುವುದು ಹೇಗೆ ಅಸಾಧ್ಯವೋ ಹಾಗೆ ನೀವು ನಿಮಗೆ ಶತಮಾನಗಳಿಂದ ಬಂದ ಅಭ್ಯಾಸಕ್ಕೆ ವಿರುದ್ಧವಾಗಿ ಹೋಗುವುದು ಅಸಾಧ್ಯ. ಆದ್ದರಿಂದ ಜನಾಂಗದ ಜೀವನ ಪ್ರವಾಹಕ್ಕೆ ದಾರಿ ಬಿಡಿಸಿ. ಈ ಅಗಾಧ ವಾದ ನದಿಗೆ ಅಡ್ಡಲಾಗಿ ಬಿದ್ದಿರುವ ಅಡಚಣೆಗಳನ್ನು ತೆಗೆದುಹಾಕಿ. ಅದರ ಮಾರ್ಗದಲ್ಲಿ ಶೇಖರವಾಗಿರುವ ಕಶ್ಮಲವನ್ನು ಗುಡಿಸಿ ಎಸೆಯಿರಿ, ಅದರ ದಡಗಳಲ್ಲಿ ಬೆಳೆದಿರುವ ಜೊಂಡುಗಳನ್ನು ಕಿತ್ತುಹಾಕಿ. ಆಗ ಜನಾಂಗವೆಂಬ ನದಿ ಸ್ವವೇಗದಿಂದ ತಾನಾಗಿಯೇ ಮುಂದೆ ನುಗ್ಗುತ್ತದೆ. ಜನಾಂಗವು ಏಳಿ ಗೆಗೆ ಬಂದು ತನ್ನ ಜೀವನವನ್ನು ಸರಾಗವಾಗಿ ನಡೆಸಿಕೊಂಡುಹೋಗುತ್ತದೆ.

ನಮ್ಮ ಭರತಖಂಡದಲ್ಲಿ ಧರ್ಮ ಪ್ರಚಾರ ಮಾಡಲು ನಾವು ಅನು ಸರಿಸಬೇಕಾದ ಕೆಲವು ರೀತಿನೀತಿಗಳನ್ನು ನಿಮಗೆ ಇಲ್ಲಿ ತಿಳಿಸಿರುತ್ತೇನೆ. ಕಾಲ ಸ್ವಲ್ಪವಿರುವುದರಿಂದ ನಾವು ಯೋಚಿಸಬೇಕಾದ ಅನೇಕ ದೊಡ್ಡ

ವಿಷಯಗಳನ್ನು ನಿಮ್ಮ ಮುಂದಿಡಲು ಅವಕಾಶವಿಲ್ಲ. ಉದಾಹರಣೆಗಾಗಿ ಅಂತಹ ವಿಷಯಗಳಲ್ಲಿ ಒಂದೆರಡನ್ನು ಸೂಚಿಸುತ್ತೇನೆ. ಜಾತಿ ಎಂಬ ಅತ್ಯದ್ಭುತವಾದ ಸಮಸ್ಯೆಯನ್ನು ನಾವು ಶೀಘ್ರದಲ್ಲಿಯೇ ಬಿಡಿಸಬೇಕಾಗಿದೆ. ನಾನು ಹುಟ್ಟಿದಂದಿನಿಂದಲೂ ಜಾತಿಯ ವಿಷಯವನ್ನು ಎಲ್ಲ ದೃಷ್ಟಿಯಿಂದಲೂ ವಿಮರ್ಶೆ ಮಾಡುತ್ತಿದ್ದೇನೆ. ಅದರ ಸ್ಥಿತಿಗತಿಗಳನ್ನು ನಮ್ಮ ದೇಶದ ಎಲ್ಲ ಪ್ರಾಂತ್ಯಗಳಲ್ಲಿಯೂ ಸ್ವತಃ ನೋಡಿ ತಿಳಿದುಕೊಂಡಿದ್ದೇನೆ. ಎಲ್ಲೆಲ್ಲಿಯೂ ಎಲ್ಲ ಜಾತಿಯವರ ಸಂಗಡವೂ ಓಡಾಡಿದ್ದೇನೆ. ಆದರೂ ಅದರ ರಹಸ್ಯವೇನೆಂದು ತಿಳಿಯಲು ಕಷ್ಟವಾಗಿ ನನಗೆ ದಿಗ್ಭ್ರಾಂತಿಯಾಗಿದೆ. ಅದರ ವಿಷಯವಾಗಿ ನಾನು ವಿಚಾರ ಮಾಡಿದಷ್ಟು ನನಗೆ ದಿಗ್ಭ್ರಮೆಯೂ ಹೆಚ್ಚುತ್ತದೆ. ಆದರೂ ಈಗೀಗ ಸ್ವಲ್ಪ ಬೆಳಕಿನ ಸುಳಿವು ನನ್ನಲ್ಲಿ ಕಾಣುತ್ತಿದೆ. ಈಗೀಗ ಅದರ ಗುಟ್ಟು ನನ್ನ ಅನುಭವಕ್ಕೆ ಬರುತ್ತಿದೆ. ನಾವು ಯೋಚಿಸಬೇಕಾದ ಇನ್ನೊಂದು ದೊಡ್ಡ ವಿಷಯ ಯಾವುದೆಂದರೆ ಊಟ ಉಪಚಾರ. ಸಾಮಾನ್ಯವಾಗಿ ಜನರು ಅದನ್ನು ಅಲ್ಪ ವಿಷಯವೆಂದು ಭಾವಿಸುತ್ತಾರೆ. ಅದು ಅಷ್ಟು ಸಣ್ಣ ವಿಷಯವಲ್ಲ. ಈಗ ನಾವು ಊಟ ಉಪಚಾರಗಳಲ್ಲಿ ಸಾಧಿಸುತ್ತಿರುವ ವಿಧಿ ನಿಷೇಧಗಳು ವಿಚಿತ್ರವೂ ಶಾಸ್ತ್ರ ವಿರುದ್ಧವೂ ಆಗಿರುವುವು. ನಾವು ನಮ್ಮ ಆಹಾರ ಪಾನೀಯಗಳು ಶುದ್ಧವಾಗಿರುವಂತೆ ನೋಡಿಕೊಳ್ಳುತ್ತಿಲ್ಲ. ನಮ್ಮ ಆಚಾರಗಳ ನಿಜಾಂಶವನ್ನು ತಿಳಿದುಕೊಳ್ಳದೆ ಕೇವಲ ಬಾಹ್ಯಾಡಂಬರಗಳಿಗೆ ಕಟ್ಟುಬಿದ್ದು ಕಷ್ಟ ಪರಂಪರೆಗಳಿಗೆ ಗುರಿಯಾಗುತ್ತಿದ್ದೇವೆ.

ಇನ್ನೂ ಕೆಲವು ಮಹತ್ತಾದ ವಿಷಯಗಳನ್ನು ಚರ್ಚಿಸಿ ಇವುಗಳ ವಿಚಾರದಲ್ಲಿರುವ ಸಂದೇಹಗಳನ್ನು ಯಾವ ರೀತಿಯಲ್ಲಿ ಪರಿಹರಿಸಬೇಕು, ಇವುಗಳನ್ನು ಹೇಗೆ ರೂಢಿಗೆ ತರಬೇಕು ಎಂಬುದನ್ನು ತೋರಿಸಿಕೊಡಬೇಕೆಂಬ ಆಶೆ ನನಗಿರುತ್ತದೆ. ಆದರೆ ಇಂದು ಸಭೆ ಬಹಳ ಹೊತ್ತಿನ ಮೇಲೆ ಪ್ರಾರಂಭವಾಯಿತು; ಇನ್ನೂ ಬಹಳ ಹೊತ್ತಿನ ತನಕ ನಿಮ್ಮನ್ನು ಇಲ್ಲಿ ನಿಲ್ಲಿಸಿಕೊಳ್ಳಲು ನನಗೆ ಇಷ್ಟವಿಲ್ಲ. ಆದ್ದರಿಂದ ಜಾತಿಯೇ ಮೊದಲಾದ ವಿಷಯಗಳಲ್ಲಿ ನನಗಿರುವ ಅಭಿಪ್ರಾಯಗಳನ್ನು ಮತ್ತೆ ಯಾವಾಗಲಾದರೂ ನಿಮಗೆ ತಿಳಿಸಲು ಪ್ರಯತ್ನಿಸುತ್ತೇನೆ.

ಈಗ ಇನ್ನೊಂದು ವಿಷಯವನ್ನು ಮಾತ್ರ ನಿಮಗೆ ತಿಳಿಸಿ ಇಂದಿನ ಆಧ್ಯಾತ್ಮಿಕ ಪ್ರಸಂಗವನ್ನು ಮುಗಿಸುತ್ತೇನೆ. ನಮ್ಮ ಸೀಮೆಯಲ್ಲಿ ಬಹಳ

ಕಾಲದಿಂದಲೂ ಧರ್ಮ ಸ್ತಬ್ಧವಾಗಿ ನಿಂತಿದೆ. ಅದು ಮುಂದುವರಿಯುವು ದಕ್ಕೂ, ಚಲಿಸುವುದಕ್ಕೂ ಪ್ರಯತ್ನಿಸಬೇಕು. ಶಕ್ತಿಯಿಂದ ತುಂಬಿ ತುಳು ಕಾಡುವಂತೆ ಮಾಡಬೇಕು. ಅದು ಪ್ರತಿಯೊಬ್ಬನ ಜೀವನದಲ್ಲಿಯೂ ಮೂಡ ಬೇಕು. ಹಿಂದೆ ಇದ್ದಂತೆ ಧರ್ಮ ಈಗಲೂ ಈ ದೇಶದ ರಾಜರ ಅರಮನೆ ಗಳಲ್ಲೂ ಕಡು ಬಡವರಾದ ರೈತರ ಗುಡಿಸಲುಗಳಲ್ಲೂ ನೆಲಸುವಂತೆ ಮಾಡ ಬೇಕು. ಸರ್ವರ ಆಸ್ತಿಯಾದ ಜನಾಂಗದ ಸರ್ವಸಾಮಾನ್ಯ ಹಕ್ಕಾದ ಈ ಧರ್ಮ ಅನಾಯಾಸವಾಗಿ ಸರ್ವರಿಗೂ ದೊರಕುವಂತಾಗಬೇಕು, ಭಗ ವಂತನು ದಯಪಾಲಿಸಿರುವ ಗಾಳಿಯಂತೆ ನಮ್ಮ ದೇಶದಲ್ಲಿ ಧರ್ಮವು ಎಲ್ಲರಿಗೂ ಸುಲಭವಾಗಿಯೂ, ಅನಾಯಾಸವಾಗಿಯೂ ಸಿಕ್ಕುವ ಹಾಗಾಗ ಬೇಕು. ನಮ್ಮ ಸೀಮೆಯಲ್ಲಿ ನಾವು ಮಾಡಬೇಕಾದ ಕರ್ತವ್ಯ ಇದು ; ಬೇರೆ ಬೇರೆ ಪಂಗಡಗಳನ್ನು ಹೊರಡಿಸಿ, ನಮ್ಮ ಭೇದ ಭಾವಗಳ ಸಾಧನೆಗಾಗಿ, ನಮ್ಮ ನಮ್ಮಲ್ಲೇ ಕಾದಾಡುವಂತೆ ಮಾಡುವುದು ನಮ್ಮ ಕೆಲಸವಲ್ಲ. ಸರ್ವ ಸಮ್ಮತವಾದ ವಿಷಯಗಳನ್ನು ಮಾತ್ರ ಎಲ್ಲರಿಗೂ ಸಾರಿ ತಿಳಿಸೋಣ ಹೀಗೆ ಮಾಡುವುದರಿಂದ ಭೇದ ಭಾವಗಳು ತಾವಾಗಿಯೇ ಅಳಿಸಿಹೋಗುವು ದಕ್ಕೆ ಅವಕಾಶ ಕಲ್ಪಿಸಿಕೊಟ್ಟಂತಾಗುವುದು, ನಮ್ಮ ದೇಶ ಬಾಂಧವರಿಗೆ ನಾನು ಬಾರಿ ಬಾರಿಗೂ ಹೇಳುವ ವಿಷಯ ಇದು. ಒಂದು ಚಿಕ್ಕ ಮನೆ ಯಲ್ಲಿ ಅನೇಕ ಶತಮಾನಗಳಿಂದಲೂ ಕತ್ತಲೆ ಕವಿದು ಕೊಂಡಿರುವಂತೆ ಭಾವಿಸಿ. ಆ ಚಿಕ್ಕ ಮನೆಯೊಳಗೆ ನೀವು ಹೋಗಿ, "ಅಯ್ಯೊ, ಕತ್ತಲು, ಕತ್ತಲು" ಎಂದು ಕೂಗಾಡಿದರೆ, ಆ ಕತ್ತಲು ಹರಿದು ಹೋಗುವುದಿಲ್ಲ. ಅಲ್ಲಿಗೆ ನೀವು ಒಂದು ದೀಪವನ್ನು ತಂದೊಡನೆಯೇ ಶತಮಾನಗಳಿಂದ ಅಲ್ಲಿದ್ದ ಕತ್ತಲೆ ತಕ್ಷಣ ಮಾಯವಾಗುವುದು. ಜನರನ್ನು ಉತ್ತಮಗೊಳಿಸ ಬೇಕಾದರೆ ನಾವು ಈ ಹಾದಿಯನ್ನು ಅನುಸರಿಸಬೇಕು. ಅವರಿಗೆ ಉತ್ತಮ ವಾದ ವಿಷಯಗಳನ್ನು ಸೂಚಿಸಿ ಮನುಷ್ಯನ ಸಾಮರ್ಥ್ಯದಲ್ಲಿ ಅವರಿಗೆ ನಂಬಿಕೆ ಹುಟ್ಟಿಸಿ ತಾವು ನೀಚರು ಭ್ರಷ್ಟರು ಎಂಬ ಭಾವನೆಯನ್ನು ಹೋಗ ಲಾಡಿಸಿ. ಒಬ್ಬನು ನೀಚಕೃತ್ಯವನ್ನು ಮಾಡುತ್ತಿರುವಾಗಲೂ ಕೂಡ ನನಗೆ ಅವನ ನೈಜ ಗುಣದಲ್ಲಿ ನಂಬಿಕೆ ತಪ್ಪಿರುವುದಿಲ್ಲ. ನನ್ನ ನಂಬಿಕೆಯು ಮೊದಲು ಮೊದಲು ಅಷ್ಟೇನೂ ಆಶಾಜನಕವಾಗಿಲ್ಲದೆ ಇದ್ದರೂ ಅಂತ್ಯದಲ್ಲಿ ನಿಜ ವಾಗಿಯೇ ಆಗಿರುವುದು. ಮಾನವನ ಸಾಮರ್ಥ್ಯವನ್ನು ನಂಬಿ ಪ್ರಾಜ್ಞ ನಲ್ಲಿಯೂ ಅಜ್ಞನಲ್ಲಿಯೂ ಒಂದೇ ಸಮನಾದ ನಂಬಿಕೆಯನ್ನಿಡಿ. ಅವನು

ದೇವತೆಯಾಗಿ ನಿಮಗೆ ಕಂಡರೂ ಸರಿ, ಸ್ವಯಂ ಪಿಶಾಚವಾಗಿ ಕಂಡರೂ ಸರಿ, ಅವನು ಮನುಷ್ಯನಾದ ಮಾತ್ರಕ್ಕೆ ಅವನ ನೈಜಗುಣವಾದ ಪೂರ್ಣತೆಯಲ್ಲಿ ನಂಬಿಕೆಯನ್ನಿಡಿ. ಮೊದಲು ಅವನಲ್ಲಿ ನಂಬಿಕೆಯನ್ನಿಡಿ. ಮುಂದೆ ನಿಮಗೆ ಅವನಲ್ಲಿ ದೋಷಗಳು ಕಂಡು ಬಂದರೆ, ಅವನು ಹಾದಿ ತಪ್ಪಿ ನಡೆದರೆ, ಅವನು ಅಸಾಧುವೂ, ನೀಚವೂ ಆದ ತತ್ತ್ವಗಳನ್ನು ಅವಲಂಬಿಸಿದರೆ, ಅವೆಲ್ಲಕ್ಕೂ ಕಾರಣ ಅವನ ನೈಜಸ್ವಭಾವವಲ್ಲವೆಂದೂ, ಉತ್ತಮ ಆದರ್ಶಗಳು ಅವನ ಮುಂದಿಲ್ಲದಿರುವುದೇ ಅವೆಲ್ಲಕ್ಕೂ ಕಾರಣವೆಂದೂ ತಿಳಿಯಿರಿ. ಸನ್ಮಾರ್ಗವನ್ನು ಕಾಣಲಾರದುದರಿಂದಲ್ಲವೇ ಅವನು ದುರ್ಮಾರ್ಗವನ್ನು ಅವಲಂಬಿಸುವುದು? ತಪ್ಪನ್ನು ತಿದ್ದುವ ರೀತಿ ಇದೊಂದೇ. ದುರ್ಮಾರ್ಗದಲ್ಲಿ ನಡೆಯುತ್ತಿರುವವನಿಗೆ ಸನ್ಮಾರ್ಗವನ್ನು ತೋರಿ. ಅಲ್ಲಿಗೆ ನಿಮ್ಮ ಕೆಲಸ ಕೊನೆಗಾಣುವುದು. ಅವನು ಎರಡು ಮಾರ್ಗಗಳನ್ನು ಹೋಲಿಸಿ ನೋಡಲಿ. ತನ್ನಲ್ಲಿ ಮೊದಲೇ ಇದ್ದ ಅಸತ್ಯವನ್ನು ನೀವು ಕೊಟ್ಟ ಸತ್ಯವನ್ನೂ ತನ್ನ ಮನದಲ್ಲೇ ಸರಿದೂಗಲಿ. ಆಗ ನೀವು ಅವನಿಗೆ ತಿಳಿಸಿರುವುದು ಸತ್ಯವಾಗಿದ್ದರೆ, ಅಸತ್ಯವು ಮಾಯವಾಗಲೇಬೇಕು. ಬೆಳಕು ಕತ್ತಲನ್ನು ಓಡಿಸಲೇ ಬೇಕು. ಸತ್ಯ ಶ್ರೇಯಸ್ಸನ್ನು ಎಂದಿದ್ದರೂ, ವ್ಯಕ್ತಪಡಿಸಲೇಬೇಕು. ನೀವು ದೇಶವನ್ನು ಆಧ್ಯಾತ್ಮಿಕ ವಿಷಯದಲ್ಲಿ ಸುಧಾರಿಸಲು ಇದು ಸರಿಯಾದ ಮಾರ್ಗ. ಜಗಳವಾಡುವುದರಿಂದಲೂ, ತಾವು ಹಿಡಿದಿರುವ ಮಾರ್ಗ ಸರಿಯಲ್ಲವೆಂದು ಜನರಿಗೆ ತೋರಿಸುವುದರಿಂದಲೂ ಇದು ಸಾಧ್ಯವಾಗುವುದಿಲ್ಲ. ಶ್ರೇಯಸ್ಸನ್ನು ಕೊಡುವುದು ಯಾವುದುಂಟೋ ಅದನ್ನು ಅವರಿಗೆ ತಿಳಿಸಿ, ಅವರು ಎಷ್ಟು ಆತುರದಿಂದ ಅದನ್ನು ಸ್ವೀಕರಿಸುವರೆಂಬುದು ನಿಮಗೇ ಗೋಚರವಾಗುವುದು. ಅಚ್ಯುತನೂ, ಸರ್ವಾಂತರ್ಗತನೂ ಆದ ದೈವವು ಜಾಗ್ರತವಾಗಿ ವ್ಯಕ್ತವಾಗಿ, ಮಂಗಳಕರವಾದ, ಮಹತ್ತಾದ ಸರ್ವಸ್ವವನ್ನೂ ಸಾಧಿಸಲು ಯತ್ನಿಸುವುದು ನಿಮಗೇ ಕಾಣುವುದು.

ನಮ್ಮ ಪೂರ್ವಿಕರಿಂದ ವಿಷ್ಣು, ಶಿವ, ಶಕ್ತಿ ಗಣಪತಿಗಳೆಂಬ ಅನಂತ ನಾಮಗಳಿಂದ ಕರೆಸಿಕೊಂಡು, ಸಗುಣ, ನಿರ್ಗುಣ, ಸಾಕಾರ, ನಿರಾಕಾರನೆಂದು ಪೂಜೆಗೊಂಡ "ಏಕಂಸದ್ವಿಪ್ರಾ ಬಹುದಾ ವದಂತಿ" "ಸತ್ಯ ಒಂದೇ ಜ್ಞಾನಿಗಳು ಅದನ್ನು ಅನಂತ ನಾಮಗಳಿಂದ ಸ್ತುತಿಸುವರು" ಎಂಬ ತಿಳುವಳಿಕೆಯಿಂದ ಕೊಂಡಾಡಿಸಿಕೊಂಡ ಜಗಜ್ಜನ್ಮಾದಿ

ಕಾರಣನು ತನ್ನ ಅನಂತ ಪ್ರೇಮದಿಂದ ನಮ್ಮಲ್ಲಿ ಪ್ರವೇಶಿಸಲಿ, ನಮ್ಮ ಮೇಲೆ ತನ್ನ ಆಶೀರ್ವಾದದ ಮಳೆ ಗರೆಯಲಿ! ನಮ್ಮಲ್ಲಿ ಸೌಹಾರ್ದ ಭಾವ ವನ್ನು ಬೀರಲಿ, ನಮ್ಮನ್ನು ನೈಜಪ್ರೇಮದಿಂದ ಸತ್ಯವ್ರತರಾಗಿ ಒಬ್ಬರಿ ಗೊಬ್ಬರು ನೆರವಾಗುವಂತೆ ಮಾಡಲಿ! ನಮ್ಮ ಭಾರತ ಭೂಮಿಯ ಧಾರ್ಮಿಕ ಜೀವನೋದ್ಧಾರದ ಈ ಮಹತ್ಕಾರ್ಯಕ್ರಮದಲ್ಲಿ, ಸ್ವಂತ ಕೀರ್ತಿಗೂ ಶ್ರೇಯಸ್ಸಿಗೂ, ಅಭಿವೃದ್ಧಿಗೂ, ಕೆಲಸಮಾಡುವ ಆಶೆಯು ಲೇಶಾಂಶವೂ ನಮ್ಮಲ್ಲಿರದಂತೆ ಅನುಗ್ರಹಿಸಲಿ!



# ಭಕ್ತಿ

## ( ಲಾಹೋರ್ ಉಪನ್ಯಾಸ )

ಉಪನಿಷತ್ತಿನ ಗಂಭೀರ ಪ್ರವಾಹದ ನಿನಾದದೊಂದಿಗೆ ಬಹಳ ದೂರ ದಿಂದ ಬರುವ ಧ್ವನಿಯೊಂದು ಕೇಳುವುದು. ಅದು ಕೆಲವು ವೇಳೆ ಮೆಲ್ಲಗೆ ಕೆಲವು ವೇಳೆ ವೇಗವಾಗಿ ಉಪನಿಷತ್ತಿನ ಸಾಹಿತ್ಯದಲ್ಲೆಲ್ಲ ಅದು ಸ್ಪಷ್ಟವಾಗಿ ದ್ದರೂ ಬಲವಾಗಿಲ್ಲ. ಉಪನಿಷತ್ತಿನ ಪ್ರಧಾನ ಉದ್ದೇಶ ಭೂಮದ ಭಾವ ಮತ್ತು ಚಿತ್ರವನ್ನು ನಮಗೆ ಕೊಡುವುದು. ಅನೇಕವೇಳೆ ಈ ಭಾವ ಗಾಂಭೀರ್ಯದಿಂದ ಕವಿತೆ ಅಲ್ಲಿ ಇಲ್ಲಿ ವ್ಯಕ್ತವಾಗುವುದು.

"ನ ತತ್ರ ಸೂರ್ಯೋಭಾತಿ ನ ಚಂದ್ರತಾರಕಂ ।

"ನೇ ಮಾ ವಿದ್ಯುತೊ ಭಾನ್ತಿ ಕುತೋಽಯಮಗ್ನಿಃ ॥"

ಅಲ್ಲಿ ಸೂರ್ಯ ಪ್ರಕಾಶಿಸುವುದಿಲ್ಲ, ಚಂದ್ರ ಪ್ರಕಾಶಿಸುವುದಿಲ್ಲ, ತಾರಾವಳಿ ಗಳು ಪ್ರಕಾಶಿಸುವುದಿಲ್ಲ. ಇನ್ನು ಬೆಂಕಿಯ ಮಾತನ್ನೇನು ಹೇಳುವುದು."

ಈ ಅಪೂರ್ವ ಹೃದಯಸ್ಪರ್ಶಿ ಕವಿತ್ವವನ್ನು ಕೇಳುತ್ತ ಕೇಳುತ್ತ ಇದ್ದರೆ ಇದು ನಮ್ಮನ್ನು ಇಂದ್ರಿಯ ಪ್ರಪಂಚದಿಂದ ಆಚೆ ಒಯ್ಯುವುದು. ಬುದ್ಧಿಯ ಪ್ರಪಂಚವನ್ನೂ ಮೀರುವುದು. ಯಾವುದನ್ನು ನಾವು ತಿಳಿದುಕೊಳ್ಳಲಾರೆವೊ ಆದರೆ ಯಾವುದು ಸದಾ ನಮ್ಮಲ್ಲಿರುವುದೊ ಅಂತಹ ಪ್ರಪಂಚಕ್ಕೆ ಕರೆದೊಯ್ಯುವುದು. ಈ ಮಹಾಭಾವದ ಛಾಯೆ ಯಂತೆ ಮತ್ತೊಂದು ಭಾವನೆ ಅನುಸರಿಸುತ್ತಿದೆ. ಇದು ನಮ್ಮ ನಿತ್ಯ ಜೀವನಕ್ಕೆ ಸಹಕಾರಿ, ಮಾನವ ಜೀವನದ ಎಲ್ಲಾ ಕಾರ್ಯ ಕ್ಷೇತ್ರಕ್ಕೆ ಇದು ಪ್ರವಹಿಸಬೇಕು. ಕ್ರಮೇಣ ಆ ಭಾವನೆ ಸ್ಪಷ್ಟವಾಗುತ್ತ ಮುಂದೆ ಪುರಾಣದಲ್ಲಿ ಬೃಹದಾಕಾರವನ್ನು ತಾಳುವುದು. ಅದೇ ಭಕ್ತಿ.

ಭಕ್ತಿ ಬೀಜ ಅಗಲೆ ಅಲ್ಲಿ ಇದೆ. ಅದು ಸಂಹಿತೆಯಲ್ಲೂ ಇದೆ. ಉಪನಿಷತ್ತಿನಲ್ಲಿ ಈ ಬೀಜ ಸ್ವಲ್ಪ ವಿಕಾಸವಾಗಿದೆ. ಆದರೆ ಪುರಾಣದಲ್ಲಿ ಇದನ್ನು ವಿಸ್ತಾರವಾಗಿ ವಿವರಿಸಿರುವರು. ಭಕ್ತಿಯನ್ನು ನಾವು ತಿಳಿದು ಕೊಳ್ಳಬೇಕಾದರೆ ನಮ್ಮ ಪುರಾಣವನ್ನು ತಿಳಿದುಕೊಳ್ಳಬೇಕು. ಈಚೆಗೆ ಪುರಾಣದ ಪ್ರಮಾಣಿಕತೆಯ ಮೇಲೆ ಬೇಕಾದಷ್ಟು ಚರ್ಚೆ ನಡೆದಿದೆ. ಅಸ್ಪಷ್ಟವಾದ ಹಲವು ಪದಗಳನ್ನು ತೆಗೆದುಕೊಂಡು ಅದನ್ನು ಟೀಕಿಸಿರು ವರು. ಹಲವುವೇಳೆ ಆಧುನಿಕ ವಿಜ್ಞಾನದ ಬೆಳಕಿಗೆ ಅದು ನಿಲ್ಲಲಾರದು

ಎಂದು ತೋರಿರುವರು. ಈ ಚರ್ಚೆ, ಪೌರಾಣಿಕ ವಿಷಯ ವೈಜ್ಞಾನಿಕ ವಾದುದೆ ಎಂಬ ಸಂದೇಹ, ಅವುಗಳಲ್ಲಿ ಬರುವ ಭೂಗೋಳ ಜ್ಯೋತಿಷ್ಯ ಸರಿಯೋ ತಪ್ಪೊ ಆಗಿರಬಹುದು. ಚಿಂತೆಯಿಲ್ಲ. ನಮಗೆ ಪ್ರತಿಯೊಂದು ಪುರಾಣದಲ್ಲಿಯೂ ಮೊದಲಿನಿಂದ ಕೊನೆಯವರೆಗೆ ಭಕ್ತಿ ಸಿದ್ಧಾಂತ ವನ್ನು ಸಾಧುಸಂತರ, ರಾಜರ ಕಥೆಯ ಮೂಲಕ ವಿವರಿಸುವುದು ಕಾಣುವುದು. ಅತಿ ಸುಂದರವಾದ ಭಕ್ತಿಗೆ ನಿದರ್ಶನವನ್ನು ಕೊಡು ವುದಕ್ಕೆ ಪುರಾಣ ಇರುವುದು ಎಂದು ತೋರುವುದು. ಇದು ನಾನು ಹೇಳಿದಂತೆ ಸಾಧಾರಣ ಮನುಷ್ಯನಿಗೆ ಬಹಳ ಹತ್ತಿರವಾಗಿರುವುದು. ವೇದಾಂತದ ಪೂರ್ಣಜ್ಯೋತಿಯನ್ನು ತಾಳಬಲ್ಲವರು, ಅದನ್ನು ತಿಳಿದು ಕೊಳ್ಳಬಲ್ಲವರು ಬಹಳ ಅಪರೂಪ. ವೇದಾಂತಿಗೆ ಮೊದಲು ಬೇಕಾಗಿರು ವುದೇ ಅಭೀಃ ನಿರ್ಭಯ. ವೇದಾಂತಿಯಾಗುವುದಕ್ಕೆ ಮುಂಚೆ ಅವನ ಭಯ ಹೋಗಬೇಕು. ಇದು ಎಷ್ಟು ಕಷ್ಟವೆನ್ನುವುದು ನಮಗೆ ಗೊತ್ತಿದೆ. ಯಾರು ಪ್ರಪಂಚದ ಹವ್ಯಾಸವನ್ನೆಲ್ಲಾ ತೊರೆದಿರುವರೊ ಯಾರಿಗೆ ಹೇಡಿ ಯಾಗುವುದಕ್ಕೆ ಬಹಳ ಕಡಿಮೆ ಬಂಧನಗಳಿವೆಯೊ ಅಂತಹವರು ಕೂಡ ಕೆಲವು ಕ್ಷಣ ಎಷ್ಟು ದುರ್ಬಲರಾಗುತ್ತಾರೆ, ಮೃದುವಾಗುತ್ತಾರೆ, ಅಂಜುತ್ತಾರೆ! ಇಷ್ಟೊಂದು ಬಂಧನಗಳುಳ್ಳವರಿಗೆ ಇದು ಮತ್ತೂ ಹೆಚ್ಚು. ತಮ್ಮ ಒಳಗೆ ಹೊರಗೆ ನೂರಾರು ವಿಷಯಗಳಿಗೆ ದಾಸರಾಗಿರಬೇಕಾಗು ವುದು. ಪ್ರತಿಕ್ಷಣವೂ ದಾಸರಂತೆ ಜೀವನ ಹೊರೆಯಬೇಕಾಗಿದೆ. ಅಂತಹ ವರಿಗೆ ಪುರಾಣ ಅತಿಸುಂದರವಾದ ಸಂದೇಶವನ್ನು ತರುವುದು. ಮೃದು ಮಧುರ ಭಾವನೆ ಕವಿತ್ವದ ಮೂಲಕ ಎಲ್ಲವನ್ನು ಹರಡುವರು. ಅಂತಹ ವರಿಗೆ ಅತಿ ಅದ್ಭುತವಾದ ರೋಮಾಂಚನ ಕಾರಿಯಾದ ಧ್ರುವ, ಪ್ರಹ್ಲಾದ ಮುಂತಾದ ಸಾವಿರಾರು ಕಥೆಯನ್ನು ಹೇಳುವರು. ಪುರಾಣದ ವೈಜ್ಞಾನಿ ಕತೆಯನ್ನು ನೀವು ನಂಬದೆ ಇದ್ದರೂ ಪ್ರಹ್ಲಾದ ಧ್ರುವ ಅಥವಾ ಮತ್ತಾವು ದಾದರೂ ಪುರಾಣದಲ್ಲಿ ಬರುವ ಸಾಧು ಸಂತರ ಜೀವನದಿಂದ ಪರಿಣಾಮ ವಾಗದೆ ಇರುವವರು ನಿಮ್ಮಲ್ಲಿ ಯಾರೂ ಇಲ್ಲ. ನಮ್ಮ ಕಾಲದಲ್ಲೆ ಪುರಾಣದ ಪ್ರಭಾವವನ್ನು ಒಪ್ಪಿಕೊಳ್ಳುವುದಲ್ಲದೆ ಹಿಂದಿನ ಕಾಲದಲ್ಲಿ ಅಧೋ ಗತಿಗೆ ಬಂದ ಬೌದ್ಧ ಧರ್ಮ ನಮಗೆ ಕೊಡುವುದಕ್ಕೆ ಸಾಧ್ಯವಾದುದಕ್ಕಿಂತ ಎಲ್ಲರಿಗೂ ಗ್ರಹಿಸಲು ಯೋಗ್ಯವಾದ ಸಾಧಾರಣ ಧರ್ಮವನ್ನೂ ಅದು ಕೊಟ್ಟಿತು. ಸುಲಭವಾದ ಮೃದುವಾದ ಭಕ್ತಿಭಾವನೆಯನ್ನು ಉಲ್ಲೇಖಿ

ಸಿರುವರು, ಅದನ್ನು ವಿಲಂಬಿಸಿರುವರು, ನಾವು ನಮ್ಮ ನಿತ್ಯ ಜೀವನದಲ್ಲಿ ಅದನ್ನು ಅನುಸರಿಸಬೇಕಾಗುವುದು. ನಾವು ಮುಂದುವರಿದಂತೆ ಭಕ್ತಿ ಹೇಗೆ ಪ್ರೇಮಸಾರವಾಗಿದೆ ಎಂಬುದನ್ನು ನೋಡುವೆವು. ಎಲ್ಲಿಯವರೆವಿಗೂ ವ್ಯಕ್ತಿಗತ ಜಡಪ್ರೀತಿ ಇರುವುದೋ ಅಲ್ಲಿಯವರೆವಿಗೂ ನಾವು ಪುರಾಣ ವನ್ನು ಮೀರಿ ಹೋಗಲಾರೆವು. ಮನುಷ್ಯ ಆಶ್ರಯಕ್ಕೆ ಎಲ್ಲಿಯವರೆವಿಗೂ ಮತ್ತೊಬ್ಬನನ್ನು ಆಶಿಸುತ್ತಾನೆಯೊ ಅಲ್ಲಿಯವರೆವಿಗೂ ಪುರಾಣ ಒಂದಲ್ಲ ಒಂದು ರೂಪಿನಲ್ಲಿ ಇದ್ದೇ ತೀರಬೇಕು. ಅವುಗಳ ಹೆಸರನ್ನು ಬದಲಾಯಿಸ ಬಹುದು. ಆಗಲೇ ಇರುವ ಪುರಾಣವನ್ನು ನೀವು ಅಲ್ಲಗಳೆಯಬಹುದು. ಆದರೆ ತಕ್ಷಣ ನೀವೇ ಮತ್ತೊಂದು ಪುರಾಣವನ್ನು ಬರೆಯಬೇಕಾಗುವುದು. ಹಳೆ ಪುರಾಣ ನಮಗೆ ಬೇಕಾಗಿಲ್ಲ ಎಂದು ಸಾರುವ ಒಬ್ಬ ಮಹಾತ್ಮ ನಮ್ಮಲ್ಲಿ ಹುಟ್ಟಿದರೆ ಆ ಮನುಷ್ಯ ಸತ್ತ ಇಪ್ಪತ್ತು ವರುಷಗಳೊಳಗೆ ಅವನ ಶಿಷ್ಯರು ಗುರುವಿನ ಹೆಸರಿನಲ್ಲಿ ಮತ್ತೊಂದು ಪುರಾಣವನ್ನು ಬರೆದಿರುವರು. ಇವೇ ವ್ಯತ್ಯಾಸ. ಮನಷ್ಯನ ಸ್ವಭಾವಕ್ಕೆ ಇದು ಅತ್ಯಾವಶ್ಯಕ. ಮಾನವ ದುರ್ಬಲತೆಯನ್ನೆಲ್ಲ ಯಾರು ಮೀರಿ ಹೋಗಿರುವರೊ ಪರಮಹಂಸರಂತೆ ಧೀರರಾಗಿ ಮಾಯಾಪಾಶದಿಂದ ಪಾರಾಗಿ ಪ್ರಕೃತಿಯ ಆವಶ್ಯಕತೆ ಕೂಡ ಯಾರಿಗೆ ಇಲ್ಲವೊ ಅಂತಹವರಿಗೆ ಪುರಾಣ ಅನಾವಶ್ಯಕ. ಅವರೇ ಉತ್ಸಾಹ ಪೂರಿತ ದಿಗ್ವಿಜಯಿಗಳು, ಪ್ರಪಂಚದ ದೇವರು.

ಸಾಧಾರಣ ಮನುಷ್ಯನಿಗೆ ಪೂಜಿಸುವುದಕ್ಕೆ ಒಂದು ಸಾಕಾರ ದೇವ ರಿಲ್ಲದೆ ಸಾಧ್ಯವಿಲ್ಲ. ಹೊರಗೆ ಒಬ್ಬ ದೇವರನ್ನು ಪೂಜಿಸದೆ ಇದ್ದರೆ ಹೆಂಡತಿ, ಮಗು, ತಂದೆ, ಸ್ನೇಹಿತ, ಗುರು ಅಥವಾ ಇನ್ನಾರನ್ನಾದರೂ ದೇವರಂತೆ ಪೂಜಿಸುವನು. ಗಂಡಸರಿಗಿಂತ ಹೆಂಗಸರಿಗೆ ಈ ಆವಶ್ಯಕತೆ ಜಾಸ್ತಿ. ಬೆಳಕಿನ ಸ್ಪಂದನ ಎಲ್ಲಾ ಕಡೆಯಲ್ಲಿಯೂ ಇರುವುದು. ಕತ್ತಲೆಯಲ್ಲಿಯೂ ಇರಬಹುದು. ಬೆಕ್ಕು ಮುಂತಾದುವು ಅಲ್ಲಿ ನೋಡುತ್ತವೆ. ಆದರೆ ನಮಗೆ ಕಾಣಬೇಕಾದರೆ ನಮ್ಮ ಕ್ಷೇತ್ರದಲ್ಲಿರಬೇಕು. ನಾವು ನಿರಾಕಾರ ಮುಂತಾ ದುವನ್ನು ಕುರಿತು ಮಾತನಾಡಬಹುದು. ಆದರೆ ಎಲ್ಲಿಯವರೆವಿಗೂ ನಾವು ಸಾಧಾರಣ ಮನುಷ್ಯರಾಗಿರುವೆವೊ ಅಲ್ಲಿಯವರೆಗೆ ದೇವರನ್ನು ಮನುಷ್ಯನಲ್ಲಿ ಮಾತ್ರ ನೋಡುವುದಕ್ಕೆ ಸಾಧ್ಯ. ನಾವು ದೇವರನ್ನು ಭಾವಿಸುವ ರೀತಿ ಪೂಜಿಸುವ ರೀತಿ ಮಾನವ ಸಾಧಾರಣವಾಗಿದೆ. "ಈ ದೇಹವೇ ದೇವರ ಶ್ರೇಷ್ಠ ದೇವಾಲಯ." ಆದಕಾರಣವೆ ಅನೇಕ ಶತಮಾನದಿಂದಲೂ

ಮಾನವರನ್ನು ಪೂಜಿಸುತ್ತಿರುವರು. ಸ್ವಾಭಾವಿಕವಾಗಿ ಇದರಿಂದ ಬರುವ ಕೆಲವು ಮಿತಿಮೀರಿದ ಅಭ್ಯಾಸವನ್ನು ಟೀಕಿಸಿದರೂ ಇದರ ಹೃದಯ ಚೆನ್ನಾಗಿದೆ. ಅತಿ ಇದ್ದರೂ ಉತ್ಪ್ರೇಕ್ಷೆ ಇದ್ದರೂ ಆ ಸಿದ್ಧಾಂತದ ಅಂತ ರಾಳದಲ್ಲಿ ಸತ್ಯವಿದೆ; ಮೂಲಭಿತ್ತಿ ದೃಢವಾಗಿದೆ. ಯಾವ ಕಟ್ಟುಕಥೆಯು ನ್ನಾಗಲಿ, ವಿಜ್ಞಾನಕ್ಕೆ ವಿರೋಧವಾದ ವಿಷಯವನ್ನಾಗಲಿ ವಿಚಾರಮಾಡದೆ ಸ್ವೀಕರಿಸಿ ಎಂದು ಹೇಳುವುದಿಲ್ಲ. ದುರದೃಷ್ಟವಶಾತ್ ಕೆಲವು ಪುರಾಣಕ್ಕೆ ಪ್ರವೇಶಿಸಿದ ವಾಮಾಚಾರ ಅಭ್ಯಾಸವನ್ನೆಲ್ಲ ನಂಬಿ ಎಂದು ಹೇಳುವುದಿಲ್ಲ. ನಾನು ಹೇಳುವುದು ಇದು: ಅದರಲ್ಲಿ ಒಂದು ಸತ್ಯವಿದೆ. ಅದನ್ನು ಮರೆಯಕೂಡದು. ಅದೇ ಪುರಾಣ ಭಕ್ತಿಸಾರುವುದರಿಂದ ಇರುವುದು. ಧರ್ಮವನ್ನು ಅನುಷ್ಠಾನಕ್ಕೆ ತರುವುದಕ್ಕೆ ತಾತ್ತ್ವಿಕ ಗಿರಿಶಿಖರಗಳಿಂದ ಈ ಭಾವನೆ ಜನಸಾಮಾನ್ಯರ ನಿತ್ಯಜೀವನಕ್ಕೆ ಪ್ರವೇಶಿಸಬೇಕು.

ಉಪನ್ಯಾಸಕರು ಭಕ್ತಿಯಲ್ಲಿ ಬಾಹ್ಯಸಲಕರಣೆಯ ಆವಶ್ಯಕತೆ ಯನ್ನು ಸಮರ್ಥಿಸಿದರು. ಮನುಷ್ಯ ದೇವರ ದಯೆಯಿಂದ ನಿಂತಕಡೆಯೇ ನಿಲ್ಲಕೂಡದು. ಆದರೆ ಸ್ವಾಭಾವಿಕ ಸ್ಥಿತಿಯನ್ನು ಅಲ್ಲಗಳೆಯುವುದು ವ್ಯರ್ಥ. ನಾವು ಮಾನವನನ್ನು ಒಬ್ಬ ಆಧ್ಯಾತ್ಮಿಕ ಜೀವಿ ಎಂದು ಎಷ್ಟೇ ಮಾತನಾಡಿದರೂ ಅವನೊಬ್ಬ ಭೌತಿಕ ಜೀವಿ ಈಗ. ಈ ಭೌತಿಕ ಜೀವಿ ಯನ್ನು ಕ್ರಮೇಣ ಆಧ್ಯಾತ್ಮಿಕ ಜೀವಿಯನ್ನಾಗಿ ಮಾಡಬೇಕು. ಈಗಿನ ಕಾಲದಲ್ಲಿ ಶೇಕಡ ೯೯ ಜನಕ್ಕೆ ಆಧ್ಯಾತ್ಮಿಕ ವಿಷಯ ತಿಳಿದುಕೊಳ್ಳುವುದಕ್ಕೆ ಆಗುವುದಿಲ್ಲ. ಅದನ್ನು ಮಾತನಾಡುವುದು ಮತ್ತೂ ಕಷ್ಟ. ನಮ್ಮನ್ನು ಮುಂದೆ ನೂಕುತ್ತಿರುವ ಶಕ್ತಿ, ನಾವು ಇಚ್ಛಿಸುವ ಪ್ರತಿಫಲ ಎಲ್ಲಾ ಭೌತಿಕ. ನಾವು ಹರ್ಬರ್ಟ್ ಸ್ಪೆನ್ಸರ್ ಹೇಳಿದಂತೆ ವಿರೋಧ ಎಲ್ಲಿ ಅತಿ ಕಡಿಮೆಯೊ ಅಲ್ಲಿ ಮಾತ್ರ ಕೆಲಸಮಾಡಲು ಸಾಧ್ಯ. ಈ ಮಾರ್ಗದಲ್ಲೇ ಕೆಲಸಮಾಡುವುದಕ್ಕೆ ಪುರಾಣಕ್ಕೆ ಒಳ್ಳೆಯ ವ್ಯವಹಾರ ಜ್ಞಾನವಿದೆ. ಅದಕ್ಕೆ ಲಭಿಸಿರುವ ಜಯ ಕೂಡ ಅಸಾಧಾರಣವಾಗಿ ಅದ್ಭುತವಾಗಿದೆ. ಭಕ್ತಿಯ ಆದರ್ಶವೇನೊ ಆಧ್ಯಾತ್ಮಿಕ. ಆದರೆ ದಾರಿ ಭೌತಿಕದ ಮೂಲಕ ವಿನಾ ಬೇರೆ ವಿಧಿಯಿಲ್ಲ. ಭೌತಿಕ ಪ್ರಪಂಚದಲ್ಲಿ ಯಾವುದು ಆಧ್ಯಾತ್ಮಿಕ ಜೀವನಕ್ಕೆ ಸಹಕಾರಿಯೊ ಅದೆಲ್ಲವನ್ನೂ ಸ್ವೀಕರಿಸಿ ಪ್ರಯೋಜನ ಪಡೆದುಕೊಳ್ಳಬೇಕು. ಶಾಸ್ತ್ರಾರ್ಥ್ಯಯನಕ್ಕೆ ಎಲ್ಲರಿಗೂ ಅಧಿಕಾರವಿದೆ. ಜಾತಿ ಲಿಂಗ ಭೇದವಿಲ್ಲ. ಬಾಹ್ಯ ದೇವಸ್ಥಾನದಿಂದ ಒಬ್ಬನಿಗೆ ದೇವರನ್ನು ಪೂಜಿಸಲು ಸಹಾಯ

ವಾದರೆ ಅಂತಹ ಗುಡಿ ಇರಲಿ. ವಿಗ್ರಹಾರಾಧನೆಯಿಂದ ಅವನ ಭಕ್ತಿಗೆ ಸಹಾಯವಾಗುವಹಾಗಿದ್ದರೆ ದೇವರು ಅವನನ್ನು ಆಶೀರ್ವದಿಸಲಿ. ಅವನು ಇಚ್ಛೆಪಟ್ಟರೆ ಇಪ್ಪತ್ತು ವಿಗ್ರಹಗಳನ್ನು ಕೊಡಿ. ಯಾವುದು ಅವನ ಆಧ್ಯಾತ್ಮಿಕ ಜೀವನಕ್ಕೆ ಸಹಾಯಮಾಡುವುದೊ ಅದೆಲ್ಲವನ್ನೂ ತೆಗೆದು ಕೊಳ್ಳಲಿ. ಆದರೆ ಅದು ಧಾರ್ಮಿಕವಾಗಿರಬೇಕು. ಅಧರ್ಮ ಸಹಾಯ ಮಾಡುವುದಿಲ್ಲ. ಅವನ ಆತಂಕವಾಗುವುದು. ಭರತಖಂಡದಲ್ಲಿ ವಿಗ್ರ ಹಾರಾಧನೆಯನ್ನು ವಿರೋಧಿಸಿದವರಲ್ಲಿ ಕಬೀರ ಒಬ್ಬನು. ಆದರೆ ಸಾಕಾರ ದೇವರಲ್ಲಿ ನಂಬದೆ ದೊಡ್ಡದೊಡ್ಡ ಧರ್ಮವನ್ನು ಸ್ಥಾಪಿಸಿದವರು ತತ್ತ್ವ ವನ್ನು ಜನರಿಗೆ ನಿರ್ಭೀತಿಯಿಂದ ಬೋಧಿಸಿದವರೂ ಭರತಖಂಡದಲ್ಲಿ ಎಷ್ಟೋ ಜನ ಇದ್ದರು. ಆದರೂ ಅವರು ವಿಗ್ರಹಾರಾಧನೆ ದೂರಲಿಲ್ಲ. ಹೆಚ್ಚು ಎಂದರೆ ಅದು ಅಷ್ಟು ಉತ್ತಮರೀತಿಯ ಪೂಜೆ ಎಂದು ಅವರು ಒಪ್ಪಿ ಕೊಳ್ಳಲಿಲ್ಲ. ಯಾವ ಪುರಾಣವೂ ಇದನ್ನು ಉತ್ತಮ ಪೂಜೆ ಎಂದು ಸಾರ ಲಿಲ್ಲ. ಯಹೂದ್ಯರು ಹಿಂದೆ ವಿಗ್ರಹಾರಾಧಕರಾಗಿದ್ದರೆಂಬುದನ್ನು ಚಾರಿ ತ್ರಿಕ ದೃಷ್ಟಿಯಿಂದ ಉಪನ್ಯಾಸಕರು ತೋರಿದರು. ಅವರಿಗೆ ಜಹೋವ ಪೆಟ್ಟಿಗೆಯಲ್ಲಿದ್ದ. ಇತರರು ವಿಗ್ರಹಾರಾಧನೆ ಕೆಟ್ಟದ್ದು ಎಂದುದರಿಂದ ಅದನ್ನು ದೂರುವುದನ್ನು ಖಂಡಿಸಿದರು. ವಿಗ್ರಹ ಅಥವಾ ಯಾವುದಾದರೂ ಬಾಹ್ಯವಸ್ತು ನಮ್ಮ ಆಧ್ಯಾತ್ಮಿಕ ಜೀವನಕ್ಕೆ ಸಹಾಯ ಮಾಡಿದರೆ ಉಪ ಯೋಗಿಸಿಕೊಳ್ಳಲು ಅಡ್ಡಿ ಇಲ್ಲದೇ ಇದ್ದರೂ ಎಲ್ಲರೂ ಅದನ್ನು ಬಹಳ ಕೆಳಗಿನ ಪೂಜೆ ಎಂದು ಸಾರಿದರು. ಏಕೆಂದರೆ ಇದು ಜಡವಸ್ತುವಿನ ಮೂಲಕ ದೇವರ ಆರಾಧನೆ. ಎಲ್ಲರಮೇಲೂ ಈ ವಿಗ್ರಹಾರಾಧನೆಯನ್ನು ಬಲಾತ್ಕರಿಸಲು ಮಾಡಿದ ಪ್ರಯತ್ನವನ್ನು ಖಂಡಿಸಲು ತಕ್ಕ ಭಾಷೆ ಇಲ್ಲ. ಯಾವುದನ್ನು ಪೂಜಿಸಬೇಕು, ಯಾವುದರ ಮೂಲಕ ಪೂಜಿಸಬೇಕು ಎಂದು ಇತರರಿಗೆ ಬಲಾತ್ಕರಿಸುವುದಕ್ಕೆ ನಮಗೆ ಏನು ಅಧಿಕಾರವಿದೆ? ಇತರರಿಗೆ ಒಬ್ಬ ಹೇಗೆ ಮುಂದುವರಿಯಬಲ್ಲ ಎಂಬುದು ಹೇಗೆ ಗೊತ್ತು. ವಿಗ್ರಹ ಬೆಂಕಿ ಅಥವಾ ಒಂದು ಕಂಬವನ್ನು ಪೂಜಿಸಿಯೂ ಒಬ್ಬ ಆಧ್ಯಾತ್ಮಿಕ ಜೀವನದಲ್ಲಿ ಮುಂದು ವರಿಯುವುದಿಲ್ಲ ಎಂಬುದು ಹೇಗೆ ಗೊತ್ತು? ಅದಕ್ಕೆ ನಮ್ಮ ಗುರುಗಳು ಮಾತ್ರ ಮಾರ್ಗದರ್ಶಕರಾಗಬೇಕು. ಗುರು ಶಿಷ್ಯರ ಸಂಬಂಧ ಇದಕ್ಕೆ ಸಹ ಕಾರಿ. ಇಷ್ಟದೇವತೆಯ ಪ್ರಾಧಾನ್ಯತೆಯನ್ನು ಭಕ್ತಿ ಶಾಸ್ತ್ರಗಳು ಆದ ಕಾರಣವೆ ಒತ್ತಿ ಹೇಳಿದವು. ಪ್ರತಿಯೊಬ್ಬನೂ ತನ್ನ ಭಾವನೆಗೆ ತಕ್ಕ ಪೂಜೆ

ಯನ್ನು ಅನುಸರಿಸಬೇಕು. ಪ್ರತಿಯೊಬ್ಬನೂ ತನ್ನ ಇಷ್ಟದಂತೆ ದೇವರ ಕಡೆಗೆ ಹೋಗಬೇಕು. ಅದೇ ಆತನ ಇಷ್ಟದೇವತೆ. ಇತರರ ಪೂಜೆಯನ್ನು ಅವನು ಸೌಹಾರ್ದದಿಂದ ನೋಡಬೇಕು. ಆದರೆ ತನ್ನ ರೀತಿಯಂತೆಯೇ ತಾನು ಅನುಷ್ಠಾನಮಾಡಬೇಕು. ಅವನು ಗುರಿ ಸೇರಿ ಬಾಹ್ಯವಸ್ತುಗಳ ಆವಶ್ಯಕತೆ ಇಲ್ಲದೆ ಇರುವ ಕೇಂದ್ರದವರೆಗೆ ಬರುವವರೆಗೂ ಅವನು ಹಾಗೆ ಇರಬೇಕು. ಕುಲಗುರು ಎಂಬ ವಂಶಪಾರಂಪರ್ಯವಾಗಿ ಬಂದ ಸ್ಥಾನವನ್ನು ಕುರಿತು ಸ್ವಲ್ಪ ಎಚ್ಚರಿಕೆ ಆವಶ್ಯಕ. ಇದು ಭರತಖಂಡದ ಕೆಲವುಕಡೆ ಜಾರಿಯಲ್ಲಿದೆ. ಗುರು ಯಾರು ಎನ್ನುವುದನ್ನು ಶಾಸ್ತ್ರದಲ್ಲಿ ಹೀಗೆ ಓದುವೆವು: "ಅವನಿಗೆ ಶಾಸ್ತ್ರಸಾರ ಗೊತ್ತಿರಬೇಕು. ಪಾಪದೂರನಾಗಿರಬೇಕು. ದ್ರವ್ಯ ಅಥವಾ ಕೀರ್ತಿಯಾಸೆಗೆ ಮತ್ತೊಬ್ಬನಿಗೆ ಕಲಿಸಕೂಡದು. ವಸಂತಋತು, ಗಿಡ ಮರಗಳಿಂದ ಏನನ್ನೂ ಕೇಳದೆ ಅವಕ್ಕೆ ಪುನರ್ಜನ್ಮ ಕೊಟ್ಟು ತಳಿರು, ಹೂ, ಫಲವನ್ನು ಕೊಡುವನು. ಅದರಂತೆಯೇ ಗುರುವು ಕೂಡ ಏನನ್ನೂ ಆಶಿಸದೆ ಇತರರಿಗೆ ಒಳ್ಳೆಯದನ್ನು ಮಾಡುವನು". ಇಂತಹವನು ಮಾತ್ರ ಗುರುವಾಗಬಲ್ಲನು, ಇತರರಲ್ಲ. ಮತ್ತೊಂದು ಅಪಾಯವಿದೆ. ಗುರು ಕೇವಲ ಉಪಾಧ್ಯಾಯನಲ್ಲ. ಅದು ಬಹಳ ಅಲ್ಪಭಾಗ. ಹಿಂದೂಗಳು ತಿಳಿದಿರುವಂತೆ ಗುರು ಶಿಷ್ಯನಿಗೆ ಆಧ್ಯಾತ್ಮಿಕತೆಯನ್ನು ಧಾರೆ ಎರೆದುಕೊಡುವನು. ಒಂದು ಭೌತಿಕ ಉದಾಹರಣೆಯನ್ನು ತೆಗೆದುಕೊಂಡರೆ, ಒಳ್ಳೆಯ ಔಷಧಿ ಕ್ರಿಮಿ (good virus) ಅಲ್ಲದೆ ಇದ್ದರೆ ಕೆಟ್ಟ ಕ್ರಿಮಿ (bad virus) ಗಳನ್ನು ಅವನು ಪಡೆಯಬೇಕಾಗುವುದು. ಕೆಟ್ಟ ಗುರುವಿನಿಂದ ಕಲಿತರೆ ಕೆಟ್ಟ ವಿಷಯಗಳನ್ನೂ ಕಲಿತುಕೊಳ್ಳುವ ಅಪಾಯವಿದೆ. ಕುಲಗುರು ಎಂಬ ಭಾವನೆ ಭರತಖಂಡದಿಂದ ಸಂಪೂರ್ಣ ಮಾಯವಾಗಬೇಕಾಗಿರುವುದು ಆವಶ್ಯಕವಾಗಿದೆ. ಗುರುತ್ವ ಒಂದು ವ್ಯಾಪಾರವಾಗಬಾರದು. ಅದು ನಿಲ್ಲಬೇಕು. ಅದು ಶಾಸ್ತ್ರಕ್ಕೆ ವಿರೋಧ. ಯಾರೂ ಕುಲಗುರುಗಳೆಂದು ಹೇಳಿಕೊಳ್ಳಕೂಡದು. ಈಗ ಇರುವ ಕುಲಗುರು ಸ್ಥಿತಿಗೆ ಸಹಾಯವನ್ನೂ ನೀಡಬಾರದು.

ಆಹಾರದ ವಿಷಯ ಕುರಿತು ಸ್ವಾಮಿಜಿ ಈಗಿನ ಕಾಲದ ಆಹಾರಕ್ಕೆ ಸಂಬಂಧಪಟ್ಟ ನಿಯಮ ಕೇವಲ ತೋರಿಕೆಯದಾಗಿದೆ ಎಂದರು. ಹಿಂದೆ ಯಾವ ಉದ್ದೇಶದಿಂದ ಅದನ್ನು ಮಾಡಿದ್ದರೊ ಆ ಗುರಿಯನ್ನೇ ಮರೆತು ಬಿಟ್ಟದ್ದೇವೆ. ಯಾರು ಆಹಾರವನ್ನು ಮುಟ್ಟುವರೊ ಅವರು ಅದನ್ನು

ಜೋಪಾನದಿಂದ ನೋಡಿಕೊಂಡಿರಬೇಕು ಎಂಬ ನಿಯಮವನ್ನು ಕಳೆದು ಕೊಂಡು ಇದರ ಹಿಂದೆ ದೊಡ್ಡ ಮಾನಸಿಕ ಶಾಸ್ತ್ರದ ರಹಸ್ಯವಿದೆ ಎಂದರು. ಆದರೆ ಜನರ ನಿತ್ಯ ಜೀವನದಲ್ಲಿ ಇದನ್ನು ನೋಡಿಕೊಳ್ಳುವುದು ಅಸಾಧ್ಯ. ಕೇವಲ ಒಂದು ಪಂಗಡಕ್ಕೆ ಅನ್ವಯಿಸುವ ವಿಧಿಯನ್ನೇ ಎಲ್ಲರಿಗೂ ಅನ್ವಯಿಸು ವಂತೆ ಮಾಡಿಮುದು ತಪ್ಪು. ಯಾರು ತಮ್ಮ ಇಡೀ ಜೀವನವನ್ನು ಆಧ್ಯಾ ತ್ಮಿಕ ಜೀವನಕ್ಕೆ ಧಾರೆ ಎರೆದಿದ್ದರೊ ಅವರಿಗೆ ಮಾತ್ರ ಇದು ಅನ್ವಯಿ ಸುವುದು. ಆದರೆ ಮುಕ್ಕಾಲುಪಾಲು ಜನಕ್ಕೆ ಭೋಗೇಚ್ಛೆ ಇನ್ನೂ ತೃಪ್ತಿ ಯಾಗಿಲ್ಲ. ಅವರ ಮೇಲೆ ಆಧ್ಯಾತ್ಮವನ್ನು ಬಲಾತ್ಕಾರವಾಗಿ ಹೊರಿಸ ಲಾಗುವುದಿಲ್ಲ.

ಭಕ್ತ ಹೇಳುವ ಅತಿ ಶ್ರೇಷ್ಠವಾದ ಪೂಜೆಯೇ ಮಾನವ ಪೂಜೆ. ಯಾವುದಾದರೊಂದು ಬಾಹ್ಯ ಪೂಜೆ ಇರಬೇಕಾದರೆ, ಒಬ್ಬನೊ ಆರು ಜನರೊ ಹನ್ನೆರಡು ಜನರೋ ಬಡವರನ್ನು ತಮ್ಮ ಯೋಗ್ಯತೆಗೆ ತಕ್ಕಂತೆ ಮನೆಗೆ ಕರೆದು ಉಪಚರಿಸುವುದು ಮೇಲು ಎಂಬ ಸಲಹೆ ಕೊಟ್ಟರು. ಅವರಿಗೆ ಸೇವೆಮಾಡುವಾಗ ದರಿದ್ರ ನಾರಾಯಣ ಎಂದು ಭಾವಿಸಬೇಕು. ಹಲವು ದೇಶದಲ್ಲಿ ದಾನಮಾಡುವುದನ್ನು ನೋಡಿರುವೆನು. ಆದರೆ ಅದು ಸಫಲವಾಗದೆ ಇರುವುದಕ್ಕೆ ಕಾರಣ ಅದನ್ನು ಒಳ್ಳೆಯ ಭಾವದಿಂದ ಮಾಡದೆ ಇರುವುದು. "ತಗೊ, ತೊಲಗು" ಎನ್ನುವರು. ಅದು ದಾನ ವಲ್ಲ, ಅವನ ಅಹಂಕಾರದ ಚಿಹ್ನೆ. ಅವರು ದಾನಿ ಎಂಬುದನ್ನು ಪ್ರಪಂಚಕ್ಕೆ ತೋರಿ ಪ್ರಪಂಚದ ಸನ್ಮಾನಕ್ಕೆ ಕಾತರರಾಗಿರುವರು. ಹಿಂದೂಗಳಿಗೆ ಸ್ಮೃತಿಪ್ರಕಾರ ಕೊಡುವವನು ಸ್ವೀಕರಿಸುವವನಿಗಿಂತ ಕೆಳಗೆ ಇರುವನು. ಸ್ವೀಕರಿಸುವವನು ಸದ್ಯಕ್ಕೆ ದೇವರೇ ಆಗಿರುವನು. ಪ್ರತಿ ದಿನ ಮನೆಗೆ ದರಿದ್ರ ಕುರುಡ ಅನಾಥನಾರಾಯಣರನ್ನು ಕರೆದು ಸೇವೆ ಮಾಡುವಂತೆ ಸಲಹೆ ಇತ್ತರು. ವಿಗ್ರಹಕ್ಕೆ ಮಾಡುವ ಪೂಜೆಯನ್ನು ಇವರಿಗೆ ಮಾಡಲಿ. ಊಟ ಕೊಡಲಿ ಬಟ್ಟೆಕೊಡಲಿ. ಮಾರನೆ ದಿನ ಇತರರಿಗೂ ಹಾಗೆಯೇ ಮಾಡಲಿ. ಅವರು ಯಾವ ವಿಧದ ಪೂಜೆಯನ್ನೂ ಧಿಃಕರಿಸಲಿಲ್ಲ. ಆದರೆ ತತ್ಕಾಲಕ್ಕೆ ಭರತಖಂಡಕ್ಕೆ ಬೇಕಾದ ಶ್ರೇಷ್ಠ ಪೂಜೆಯೆ ನಾರಾಯಣ ಸೇವೆ.

ಕೊನೆಯಲ್ಲಿ ಭಕ್ತಿಯನ್ನು ಒಂದು ತ್ರಿಭುಜಕ್ಕೆ ಹೋಲಿಸಿದರು. ಮೊದಲನೆಯದೆ ಪ್ರೇಮಕ್ಕೆ ಯಾವ ಆಸೆಯೂ ಇಲ್ಲ. ಎರಡನೆಯದೆ

ಪ್ರೇಮಕ್ಕೆ ಅಂಜಿಕೆಯಿಲ್ಲ. ಬಹುಮಾನ ಅಥವಾ ಮತ್ತಾವುದಾದರೂ ಸಹಾಯಕ್ಕೆ ಪ್ರೀತಿಸುವುದು ಭಿಕ್ಷುಕನ ಧರ್ಮ, ವರ್ತಕನ ಧರ್ಮ. ಅಲ್ಲಿ ನಿಜವಾದ ಧರ್ಮವಿರುವುದು ಬಹಳ ಕಡಿಮೆ. ಜನ ಭಿಕ್ಷುಕರಾಗದಿರಲಿ. ಭಿಕ್ಷೆ ಬೇಡುವುದು ನಾಸ್ತಿಕನ ಚಿಹ್ನೆ. "ಗಂಗಾನದಿ ತೀರದಲ್ಲಿರುವವನು ಕುಡಿಯುವ ನೀರಿಗಾಗಿ ಭಾವಿಯನ್ನು ತೋಡುವವನು ಮೂರ್ಖ". ಇದರಂತೆಯೇ ದೇವರಿಂದ ಪ್ರಾಪಂಚಿಕ ವಸ್ತುಗಳನ್ನು ಬಯಸುವವನು ಕೂಡ. ಭಕ್ತ ಎದ್ದು ನಿಂತು, "ದೇವರೆ, ನನಗೆ ನಿನ್ನಿಂದ ಏನೂ ಬೇಡ. ನಿನಗೆ ಏನಾದರೂ ನನ್ನಿಂದ ಬೇಕಾದರೆ ಕೊಡಲು ಸಿದ್ಧನಾಗಿರುವೆನು" ಎಂದು ಹೇಳಲು ಧೈರ್ಯವಿರಬೇಕು. ಪ್ರೀತಿಗೆ ಅಂಜಿಕೆ ಅರಿಯದು. ಒಬ್ಬ ದುರ್ಬಲ ನಶಿಸಿಹೋದ ಹೆಂಗಸೊಬ್ಬಳು ದಾರಿಯಲ್ಲಿ ಹೋಗುತ್ತಿರುವಾಗ ನಾಯಿಯೊಂದು ಬೊಗಳಿದರೆ ತಕ್ಷಣ ಇನ್ನೊಂದು ಮನೆಗೆ ನುಗ್ಗುತ್ತಿದ್ದಳು. ಮೂರನೆ ದಿನ ತನ್ನ ಮಗುವನ್ನು ಎತ್ತಿಕೊಂಡು ದಾರಿಯಲ್ಲಿ ಹೋಗುತ್ತಿರುವಳು ಎಂದು ಊಹಿಸಿ. ಒಂದು ಸಿಂಹ ಅವಳನ್ನು ಎದುರಿಸಿದರೆ ಅವಳು ಎಲ್ಲಿರುವಳು ಎಂದು ಊಹಿಸುತ್ತೀರಿ? ಮಗುವಿನ ಪ್ರಾಣರಕ್ಷಣೆಗಾಗಿ ಸಿಂಹದ ಬಾಯಿಯಲ್ಲಿರುವಳು. ಕೊನೆಯದೆ ಪ್ರೀತಿಗಾಗಿ ಪ್ರೀತಿಸುವನು. ಪ್ರೀತಿಯೊಂದೇ ದೇವರು ಎಂದು ಭಕ್ತ ಕೊನೆಗೆ ತಿಳಿಯುವನು. ದೇವರನ್ನು ಸಮರ್ಥಿಸುವುದಕ್ಕೆ ಎಲ್ಲಿಗೆ ಹೋಗಬೇಕು? ಪ್ರೇಮವೇ ಎಲ್ಲಕ್ಕಿಂತ ಸ್ಪಷ್ಟವಾಗಿ ಕಾಣುವ ವಸ್ತು. ಈ ಪ್ರೀತಿಯೊಂದೆ ಸೂರ್ಯ ಚಂದ್ರ, ತಾರಾವಳಿಗಳನ್ನು ಸಂಚರಿಸುವಂತೆ ಮಾಡುತ್ತಿರುವುದು. ಈ ಪ್ರೀತಿಯೊಂದೆ, ಸ್ತ್ರೀಪುರುಷ ಪ್ರಾಣಿಗಳಲ್ಲಿ, ಎಲ್ಲಾ ಕಡೆಗಳಲ್ಲಿಯೂ, ಎಲ್ಲದರಲ್ಲಿಯೂ ವ್ಯಕ್ತವಾಗುತ್ತಿದೆ. ಆಕರ್ಷಣ ಮುಂತಾದ ಬಾಹ್ಯ ಶಕ್ತಿಯಲ್ಲಿ ಅದು ವ್ಯಕ್ತವಾಗುತ್ತಿದೆ. ಈ ಪ್ರಪಂಚದ ಏಕಮಾತ್ರ ಕ್ರಿಯೋತ್ತೇಜಕ ಶಕ್ತಿ ಪ್ರೇಮವೊಂದೇ. ಇದು ಸರ್ವವ್ಯಾಪಿಯಾಗಿರುವುದು. ಇದು ಸ್ವಯಂ ಭಗವಂತನೇ ಆಗಿರುವುದು.



# ವೇದಾಂತ

## ( ಲಾಹೋರ್ ಉಪನ್ಯಾಸ )

ನಾವು ಸಾಧಾರಣವಾಗಿ ಎರಡು ಜಗತ್ತುಗಳಲ್ಲಿ ಜೀವಿಸುತ್ತೇವೆ. ಒಂದು ಹೊರಗಿನದು, ಮತ್ತೊಂದು ಒಳಗಿನದು. ಪುರಾತನಕಾಲದಿಂದಲೂ ಮಾನವ ಪ್ರಗತಿಯು ಈ ಎರಡು ಜಗತ್ತುಗಳಲ್ಲಿಯೂ ಸಮದೂರವಾಗಿ ಸಾಗಿ ಬಂದಿದೆ. ಅನ್ವೇಷಣೆ ಪ್ರಾರಂಭವಾದುದು ಹೊರಗಿನ ಜಗತ್ತಿನಲ್ಲಿ. ಮಾನವನು ತನ್ನ ಅಂತರಂಗದ ಅಗಾಧ ಪ್ರಶ್ನೆಗಳಿಗೆ ಉತ್ತರಗಳನ್ನು ಹುಡುಕಿದುದು ಮೊತ್ತಮೊದಲು ಬಾಹ್ಯಪ್ರಕೃತಿಯಲ್ಲಿ. ತನ್ನ ಹೃದಯದಲ್ಲಿ ಉತ್ಪನ್ನವಾದ ಸೌಂದರ್ಯತೃಷೆಯನ್ನೂ ಭವ್ಯತಾಪಿಪಾಸೆಯನ್ನೂ ತೃಪ್ತಿ ಪಡಿಸಲು ಸುತ್ತಮುತ್ತಣ ಸನ್ನಿವೇಶದ ಸಹಾಯುವನ್ನು ತೋರಿದನು ; ತನ್ನನ್ನೂ ಮತ್ತು ತನ್ನ ಅನುಭವಗಳನ್ನೂ ಸ್ಥೂಲವಾದ ಮತ್ತು ಪಂಚೇಂದ್ರಿಯ ಸುಲಭವಾದ ವಾಸ್ತವಿಕ ರೀತಿಯಲ್ಲಿ ವ್ಯಕ್ತಗೊಳಿಸಲು ಯತ್ನಿಸಿದನು ; ಪ್ರತಿಫಲವಾಗಿ ಭವ್ಯವಾದ ಮಹತ್ತಾದ ಉತ್ತರಗಳು ಮೂಡಿದುವು. ಈಶ್ವರ ಮತ್ತು ಆತನ ಆರಾಧನೆಯ ವಿಚಾರವಾಗಿ ಅದ್ಭುತ ಭಾವನೆಗಳು ಹೊರಹೊಮ್ಮಿದುವು. ನಿಜವಾಗಿಯೂ ಈ ಬಾಹ್ಯ ಪ್ರಕೃತಿಯ ಅನ್ವೇಷಣೆಯಿಂದ ಅತ್ಯಂತ ಸುಂದರವೂ ಭಾವಪೂರ್ಣವೂ ಆದ ಕಲ್ಪನೆಗಳು ಮೈದೋರಿದುವು. ಆದರೆ ಕೆಲವು ಕಾಲಾನಂತರದಲ್ಲಿ ಆ ಬಹಿರನ್ವೇಷಣೆ ಅಂತರ್ಮುಖವಾಗಿ, ಮನುಷ್ಯ ದೃಷ್ಟಿಗೆ ಹಿಂದೆ ತೋರಿದುದಕ್ಕಿಂತಲೂ ಅತಿಶಯವಾಗಿ ಭವ್ಯವೂ ಸುಂದರವೂ ಅನಂತ ವಿಸ್ತೃತವೂ ಆದ ಮತ್ತೊಂದು ಮಹತ್ತರ ಜಗತ್ತು ಗೋಚರವಾಯಿತು. ವೇದಭಾಗವಾದ ಕರ್ಮಕಾಂಡದಲ್ಲಿ ಅದ್ಭುತ ಧರ್ಮ ಭಾವನೆಗಳಿವೆ. ಸೃಷ್ಟಿಸ್ಥಿತಿಲಯ ಕರ್ತನಾದ ಏಕಮಹೇಶ್ವರನ ವಿಚಾರವಾಗಿ ಅದ್ಭುತ ಭಾವನೆಯಿದೆ. ಅಲ್ಲಿ ಕೆಲವು ವೇಳೆ ಹೃದಯಾವೇಶಕಾರಿಯಾದ ಜ್ವಾಲಾಮಯವಾದ ಭಾಷೆಯಲ್ಲಿ ಜಗತ್ತನ್ನು ವರ್ಣಿಸಿದ್ದಾರೆ. ನಿಮ್ಮಲ್ಲನೇಕರಿಗೆ ಋಗ್ವೇದ ಸಂಹಿತೆಯಲ್ಲಿರುವ ಪ್ರಳಯವರ್ಣನೆಯ ಮಹಾಶ್ಲೋಕವು (ನಾಸದೀಯ ಸೂಕ್ತ) ನೆನಪಿನಲ್ಲಿರಬಹುದು. ಬಹುಶಃ ಅದಕ್ಕಿಂತಲೂ ಭವ್ಯತರವಾದ ಮತ್ತೊಂದು ಕವನ ಇದುವರೆಗೆ ನಿರ್ಮಿತವಾಗಿಲ್ಲ ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಆದರೂ ಆ ಕವನದಲ್ಲಿರುವ

ಚಿತ್ರ ಎಷ್ಟೇ ಭವ್ಯವಾದುದಾದರೂ ಬಾಹ್ಯ ದೃಷ್ಟಿಯಿಂದ ಮಾತ್ರ ವರ್ಣಿತ ವಾದುದು. ಅದರಲ್ಲಿ ನಮಗೆ ಸ್ಥೂಲತೆಯು ದರ್ಶನವಾಗುತ್ತದೆ. ಅದರಲ್ಲಿ ಏನೋ ಒಂದು ವಿಧವಾದ ಜಡತೆಯ ಛಾಯೆಯಿದೆ. ಎಷ್ಟೇ ಭವ್ಯ ವಾದರೂ ಅದರಲ್ಲಿ ಅನಂತವನ್ನು ಸಾಂತದ ಭಾಷೆಯಲ್ಲಿ ಹೇಳಲು ಹೋಗಿ ದ್ದಾರೆ. ಅದರಲ್ಲಿರುವುದು ಬಹಿಃ ಪ್ರಪಂಚದ ಅನಂತತೆಯೇ ಹೊರತು ಅಂತರಾತ್ಮನದಲ್ಲ; ದೇಶದ ಅನಂತತೆಯೇ ಹೊರತು ಭಾವದ್ದಲ್ಲ. ಆದ್ದ ರಿಂದಲೇ ವೇದಗಳ ಎರಡನೆಯ ಭಾಗವಾದ ಜ್ಞಾನಕಾಂಡದಲ್ಲಿ ಅನ್ವೇಷಣೆಯ ಅಥವಾ ತತ್ತ್ವವಿಚಾರದ ವಿಧಾನ ನಮಗೆ ಇನ್ನೊಂದು ಪರಿಯಾಗಿ ತೋರುವುದು. ಪ್ರಥಮತಃ ಜಡಪ್ರಪಂಚದಿಂದಲೂ ಬಾಹ್ಯ ಪ್ರಕೃತಿಯಿಂದಲೂ ಜೀವನದ ಸಮಸ್ಯೆಗಳಿಗೆ ಪರಿಹಾರವು ಹುಡುಕ ಲಾಯಿತು (ಯಸ್ಯೈತೇ ಹಿಮವಂತೋ ಮಹಿತ್ವಾ—ಯಾರ ಮಹಿಮೆ ಯನ್ನು ಹಿಮಾಲಯಗಳು ಸಾರುತ್ತಿವೆಯೋ). ಅದೇನೋ ಮಹೋನ್ನತ ಭಾವವೇ ಆಗಿತ್ತು. ಆದರೆ ಭರತಖಂಡ ಅಷ್ಟರಿಂದಲೇ ತೃಪ್ತಿಗೊಳ್ಳುವ ಹಾಗಿರಲಿಲ್ಲ. ಆರ್ಯರ ಮನಸ್ಸು ಬಾಹ್ಯದಿಂದ ಆಂತರ್ಯದ ಕಡೆಗೆ, ಜಡದಿಂದ ಚೇತನದ ಕಡೆಗೆ ತಿರುಗಿತು. "ಮನುಷ್ಯನು ಮೃತನಾದ ಮೇಲೆ ಏನಾಗುತ್ತಾನೆ"? ಎಂಬ ಆರ್ತನಾದ ಮೇಲೆದ್ದಿತು. (ಅಸ್ತೀ ತ್ಯೇಕೇ ನಾಯಮಸ್ತೀತಿ ಚೈಕೇ, ಇತ್ಯಾದಿ "ಅವನು ಇರುತ್ತಾನೆಂದು ಕೆಲವರು ಹೇಳುತ್ತಾರೆ. ನಾಶವಾದನೆಂದು ಉಳಿದವರು ಹೇಳುತ್ತಾರೆ. ಓ ಯಮರಾಯನೆ ಸತ್ಯವೇನು?) ವೇದಗಳ ಭಾಗದಲ್ಲಿ "ಹುಡುಕುವ ರೀತಿಯೇ" ಬೇರೆಯಾಗಿದೆ. ಆರ್ಯಮಹರ್ಷಿಗಳು ಬಾಹ್ಯಪ್ರಕೃತಿಯಿಂದ ಪಡೆಯಬೇಕಾದುದನ್ನೆಲ್ಲಾ ಪಡೆದರು, ಆದರೆ ಅಷ್ಟಕ್ಕೇ ತೃಪ್ತರಾಗಲಿಲ್ಲ. ಇನ್ನೂ ಮುಂದೆ ನುಗ್ಗಿದರು. ಅಂತರ್ಜಗತ್ತಿನ ಹೃದಯವನ್ನು ಪ್ರವೇಶ ಮಾಡಿ ತಮ್ಮಾತ್ಮದ ಸಹಾಯದಿಂದಲೇ ಸಮಸ್ಯೆಗಳನ್ನು ಬಿಡಿಸಲು ಸಾಹಸ ಮಾಡಿದರು. ಈ ಅಂತರ್ಜಗತ್ತಿನಲ್ಲಿ ನಡೆದ ಸಮರಸಾಹಸದ ಕಥೆ ಯಿರುವ ವೇದಗಳ ಭಾಗಕ್ಕೆ ಉಪನಿಷತ್, ವೇದಾಂತ, ಆರಣ್ಯಕ ಅಥವಾ ಮಹಾರಹಸ್ಯವೆಂದು ಹೆಸರು. ಅಲ್ಲಿ ಧರ್ಮವು ಬಾಹ್ಯಾಚಾರ ವೇಷಗಳನ್ನೆಲ್ಲಾ ಸಂಪೂರ್ಣವಾಗಿ ಕಿತ್ತೊಗೆದಿರುವುದನ್ನು ಕಾಣುತ್ತೇವೆ. ಅಲ್ಲಿ ಆತ್ಮದ ವಿಷಯಗಳನ್ನು ಜಡದ ಭಾಷೆಯಲ್ಲಿ ಹೇಳದೆ ಆತ್ಮದ ಭಾಷೆಯಲ್ಲಿಯೇ ಹೇಳಿದೆ. ಅಲ್ಲಿ ಒರಟಾದುದು, ಜಡವಾದುದು

ಯಾವುದೂ ಇಲ್ಲ. ಅಲ್ಲಿ ಸತ್ಯಮಿಥ್ಯೆಗಳಿಗೆ ರಾಜಿಯಾಗಿಲ್ಲ. ಧೀರವಾಗಿ, ಸಾಹಸ ಪೂರ್ಣವಾಗಿ ವರ್ತಮಾನ ಕಾಲದ ಸಂಕುಚಿತ ಭಾವಗಳಿಗೆ ಅತೀತವಾಗಿ ಎಳ್ಳನಿತೂ ಭಯವಿಲ್ಲದೆ ದಾಕ್ಷಿಣ್ಯ ವಿಲ್ಲದೆ, ಆತ್ಮದ ವಿಚಾರ ವಾದ ಪಾವನ ಮಹಾಸತ್ಯಗಳನ್ನು ಮಾನವ ಕುಲಕ್ಕೆ ಉಚ್ಚಕಂಠದಿಂದ ಉದ್ಘೋಷಿಸುತ್ತಾ ಉಪನಿಷತ್ತಿನ ಆ ತ್ರಿವಿಕ್ರಮ ಮಾನಸರಾದ ಮಹರ್ಷಿ ಗಳು ಮಹಿಮಾಮಯರಾಗಿ ನಿಂತಿದ್ದಾರೆ. ಓ ನನ್ನ ದೇಶ ಬಾಂಧವರೇ, ಇಂದು ನಿಮ್ಮೆದುರು ಆ ಸತ್ಯ ಸಾಹಸಗಳನ್ನು ಕುರಿತು ಕೈಲಾದ ಮಟ್ಟಿಗೆ ಪ್ರಸ್ತಾಪಿಸಬೇಕೆಂದು ನಾನಿಲ್ಲಿ ನಿಂತಿದ್ದೇನೆ. ಏಕೆಂದರೆ ವೇದಗಳ ಜ್ಞಾನ ಕಾಂಡ ನಿಜವಾಗಿಯೂ ಒಂದು ಮಹಾ ಸಮುದ್ರ. ಅದನ್ನು ಸಂಪೂರ್ಣ ವಾಗಿ ತಿಳಿಯಲು ಬಹುಜನ್ಮಗಳು ಬೇಕು. ಶ್ರೀರಾಮಾನುಜರು ಹೇಳಿರು ವಂತೆ ಉಪನಿಷತ್ತುಗಳು ನಿಜವಾಗಿಯೂ ವೇದಪುರುಷನ ಭುಜಶಿರಗಳು. ನವೀನ ಭಾರತವರ್ಷಕ್ಕೆ ಅವು ಧರ್ಮಗ್ರಂಥಗಳಾಗಿರುವುದು ನಮ್ಮ ಸೌಭಾಗ್ಯವೇ ಸರಿ. ಕರ್ಮಕಾಂಡದ ಪರವಾಗಿ ಹಿಂದೂಗಳಿಗೆ ಬಹಳ ಗೌರವವಿದೆ. ಆದರೂ ಬಹುಕಾಲದಿಂದಲೂ ಶ್ರುತಿ ಎಂಬ ಪದವನ್ನು ಉಪನಿಷತ್ತುಗಳಿಗೆ ಮಾತ್ರವೇ ಉಪಯೋಗಿಸುತ್ತಿದ್ದಾರೆ. ಅಷ್ಟೇ ಅಲ್ಲದೆ ಶ್ರೇಷ್ಠರಾದ ನಮ್ಮ ದರ್ಶನಕಾರರೆಲ್ಲರೂ, ವ್ಯಾಸ, ಪತಂಜಲಿ, ಗೌತಮ ಮತ್ತು ತತ್ತ್ವ ಶಾಸ್ತ್ರ ಪಿತಾಮಹನಾದ ಕಪಿಲ ಮಹರ್ಷಿಗಳೆಲ್ಲರೂ ತಮ್ಮ ಪ್ರಮಾಣಗಳನ್ನು ಉಪನಿಷತ್ತುಗಳಿಂದಲೇ ಆರಿಸಿಕೊಂಡಿದ್ದಾರೆ. ಏಕೆಂದರೆ ಉಪನಿಷತ್ತು ಸನಾತನ ಸತ್ಯದ ಗಣಿ.

ಕೆಲವು ಸತ್ಯಗಳು ದೇಶಕಾಲ ಬದ್ಧವಾದುವು. ಕೆಲವು ಸನ್ನಿವೇಶ ಗಳಲ್ಲಿ, ಕೆಲವು ಕಾಲಗಳಲ್ಲಿ ಮಾತ್ರ ಅವು ಸರಿಹೋಗುತ್ತವೆ. ಮತ್ತೆ ಕೆಲವು ಸತ್ಯಗಳು ಮಾನವ ಸ್ವಭಾವಕ್ಕೆ ಅಂತರತಮವೂ ಆಧಾರಪ್ರಾಯವೂ ಆದ್ದರಿಂದ ಅವು ಮಾನವನಿರುವ ತನಕ ಬಾಳಲೇಬೇಕು. ಆ ಸತ್ಯಗಳು ಸರ್ವಸಾಮಾನ್ಯವಾದುವು; ಶಾಶ್ವತವಾದುವು; ಸನಾತನವಾದುವು. ಭರತ ಖಂಡದ ಜೀವನದಲ್ಲಿ ಬಹಳ ಬದಲಾವಣೆಗಳಾಗಿದ್ದರೂ ನಮ್ಮ ಸಮಾಜದ ರೀತಿ ನೀತಿಗಳು, ಉಡುಗೆ ತೊಡುಗೆಗಳು, ಭೋಜನ ಮತ್ತು ಪೂಜಾ ವಿಧಾನಗಳು ವ್ಯತ್ಯಾಸವಾಗಿದ್ದರೂ ವೇದಾಂತದ ಮಹೋತ್ತುಂಗ ಭಾವಗಳು ಮಾತ್ರ ಭವ್ಯವಾಗಿ ಅಚಲವಾಗಿ ಅಜೇಯ್ಯವಾಗಿ ಅಮರವಾಗಿ, ಅಚ್ಯುತಾ ನಂತವಾಗಿ ಇನ್ನೂ ನಿಂತಿವೆ. ಆದರೂ ಉಪನಿಷತ್ತಿನಲ್ಲಿ ಪ್ರಸ್ಫುಟವಾಗಿ

ರುವ ಭಾವನೆಗಳಿಗೆಲ್ಲ ಕರ್ಮಕಾಂಡದಲ್ಲಿಯೇ ಅಂಕುರಾರ್ಪಣವಾಗಿದೆ. ಉದಾಹರಣೆಗಾಗಿ ವೇದಾಂತ ದರ್ಶನಗಳೆಲ್ಲವೂ ಬೋಧಿಸುವ ಬ್ರಹ್ಮಾಂಡದ ವಿಚಾರವೂ, ಭರತ ಖಂಡದ ದರ್ಶನಕಾರರೆಲ್ಲರೂ ಸ್ವೀಕರಿಸುವ ಮನಃ ಶಾಸ್ತ್ರೀಯ ವಿಚಾರವೂ ಕರ್ಮಕಾಂಡದಲ್ಲಿಯೇ ಉಕ್ತವಾಗಿವೆ. ಆದ್ದರಿಂದ ನಾವು ವೇದಾಂತದ ವಿಚಾರವಾಗಿಯಾಗಲಿ, ಉಪನಿಷತ್ತಿನ ವಿಚಾರವಾಗಿ ಯಾಗಲಿ ಮಾತನಾಡುವ ಮೊದಲು ಕರ್ಮಕಾಂಡದ ವಿಚಾರವಾಗಿ ಒಂದೆರಡು ಮಾತು ಹೇಳಬೇಕಾಗಿದೆ. ಎಲ್ಲಕ್ಕಿಂತಲೂ ಮೊದಲು 'ವೇದಾಂತ' ಎಂಬ ಪದವನ್ನು ನಾನು ಯಾವ ಅರ್ಥದಲ್ಲಿ ಉಪಯೋಗಿಸು ತ್ತಿದ್ದೇನೆ? ಈಗಿನ ಅನೇಕರು ತಪ್ಪುತಿಳುವಳಿಕೆಯಿಂದ 'ವೇದಾಂತ' ಎಂಬ ಪದವನ್ನು ಅದ್ವೈತ ದರ್ಶನ ಎಂಬ ಏಕಮಾತ್ರ ಅರ್ಥದಲ್ಲಿ ಪದೇ ಪದೇ ಉಪಯೋಗಿಸುತ್ತಾರೆ. ಆಧುನಿಕ ಭಾರತವರ್ಷದಲ್ಲಿ ವೇದಾಂತಾ ಧ್ಯಾಯಿಗೆ ಕಲಿಯಲು ಮೂರು ಪ್ರಸ್ಥಾನಗಳಿವೆ ಎಂಬುದನ್ನು ಯಾರೂ ಮರೆಯಬಾರದು. ಮೊದಲನೆಯದು ಶ್ರುತಿ, ಎಂದರೆ ಉಪನಿಷತ್ತು. ಎರಡನೆಯದಾಗಿ ವ್ಯಾಸಸೂತ್ರಗಳಿವೆ. ಅವುಗಳು ಹಿಂದಿನ ತತ್ತ್ವ ಜಿಜ್ಞಾಸೆಯ ಸಾರಾಂಶವಾಗಿರುವುದರಿಂದಲೂ ವಿವಿಧ ದರ್ಶನಗಳು ಪರಸ್ಪರ ವಿರೋಧಿಗಳಲ್ಲದೆ, ಒಂದಕ್ಕೊಂದು ಪೂರಕವಾಗಿ ಒಂದರ ಮೇಲೊಂದು ನಿಂತಿದೆ ಎಂದೂ, ಒಂದರಿಂದೊಂದು ವಿಕಾಸವಾಗಿವೆ ಎಂದೂ ಸಾಧಿಸಿರು ವುದರಿಂದಲೂ, ಎಲ್ಲ ಆಚಾರ್ಯರಿಂದಲೂ ಸಮಾನ ಮಾನ್ಯವಾಗಿವೆ. ಮೂರ ನೆಯದಾಗಿ ವೇದಾಂತದ ಗಹನ ಸತ್ಯಗಳನ್ನು ಕ್ರಮವಾಗಿ ತಿಳಿಸುವ ಉಪ ನಿಷತ್ತು ಮತ್ತು ಬ್ರಹ್ಮಸೂತ್ರಗಳಿಗೆ ಮಧ್ಯೆ ವೇದಾಂತದ ದಿವ್ಯ ವ್ಯಾಖ್ಯಾನ ವಾದ ಭಗವದ್ಗೀತೆಯು ನಿಂತಿದೆ. ಆದ್ದರಿಂದ ಸಂಪ್ರದಾಯವಂತರೆಂದು ಕರೆಯಿಸಿಕೊಳ್ಳಲು ಆಸೆ ಪಡುವ ಎಲ್ಲ ಪಂಥದವರೂ ಉಪನಿಷತ್ತು ಭಗವ ದ್ಗೀತೆ ಮತ್ತು ವ್ಯಾಸ ಸೂತ್ರಗಳನ್ನು ಪ್ರಮಾಣ ಗ್ರಂಥಗಳೆಂದು ಭಾವಿ ಸಿಯೇ ಭಾವಿಸುತ್ತಾರೆ. ದ್ವೈತಿಯಾಗಲಿ ವಿಶಿಷ್ಟಾದ್ವೈತಿಯಾಗಲಿ, ಅದ್ವೈತಿಯಾಗಲಿ ಪ್ರತಿಯೊಬ್ಬರಿಗೂ ಆ ಮೂರು ಗ್ರಂಥಗಳೂ ಪ್ರಮಾಣ. ಶಂಕರಾಚಾರ್ಯ ರಾಮಾನುಜಾಚಾರ್ಯ ಮಧ್ವಾಚಾರ್ಯ ವಲ್ಲಭಾ ಚಾರ್ಯ ಚೈತನ್ಯ ಅಥವಾ ಇನ್ನಾವ ಆಚಾರ್ಯರೇ ಆಗಲಿ ಹೊಸ ಪಂಥ ವನ್ನು ಸ್ಥಾಪಿಸಬೇಕೆಂದು ಮನಸ್ಸು ಮಾಡಿದಾಗ ಆ ಮೂರು ಪ್ರಸ್ಥಾನ ಗಳನ್ನೂ ತೆಗೆದುಕೊಂಡು ಹೊಸ ವ್ಯಾಖ್ಯಾನಗಳನ್ನು ಬರೆದಿರುತ್ತಾರೆಂಬುದು

ಎಲ್ಲರಿಗೂ ತಿಳಿದ ವಿಷಯವಾಗಿದೆ. ಆದ್ದರಿಂದ ಉಪನಿಷತ್ತಿನಿಂದ ಮೂಡಿದ ಒಂದು ದರ್ಶನಕ್ಕೆ ಮಾತ್ರ ವೇದಾಂತವೆಂದು ಹೆಸರು ಕೊಡುವುದು ತಪ್ಪು, 'ವೇದಾಂತ' ಎಂಬ ಪದ ಎಲ್ಲ ದರ್ಶನಗಳನ್ನೂ ಒಳಕೊಳ್ಳುತ್ತದೆ. ದ್ವೈತಿ ವಿಶಿಷ್ಟಾದ್ವೈತಿಗಳೂ ಅದ್ವೈತಿಗಳಂತೆಯೇ ವೇದಾಂತಿಗಳೆಂಬ ಹೆಸರಿಗೆ ಮಾನ್ಯರಾಗಿದ್ದಾರೆ. ಹೆಚ್ಚೇನು? ನಾವು ಉಪಯೋಗಿಸುವ 'ಹಿಂದೂ' ಎಂಬ ಪದ 'ವೇದಾಂತಿ' ಎಂಬ ಪದಕ್ಕೆ ಪರ್ಯಾಯವೆಂದು ಹೇಳಿದರೆ ಹೆಚ್ಚು ತಪ್ಪಾಗಲಾರದು. ಇನ್ನೊಂದು ವಿಷಯವನ್ನು ನೀವು ನೆನಪಿನಲ್ಲಿಡ ಬೇಕು. ಈ ಮೂರು ದರ್ಶನಗಳೂ ಬಹು ಪುರಾತನ ಕಾಲದಿಂದಲೂ ಭರತಖಂಡದಲ್ಲಿವೆ. ಶಂಕರಾಚಾರ್ಯರು ಅದ್ವೈತ ವೇದಾಂತವನ್ನು ಹೊಸದಾಗಿ ಕಂಡುಹಿಡಿದರೆಂದು ತಿಳಿಯಬೇಡಿ. ಅವರು ಹುಟ್ಟುವುದಕ್ಕೆ ಬಹಳ ಮೊದಲೇ ಅದು ರೂಢಿಯಲ್ಲಿತ್ತು. ಶಂಕರಾಚಾರ್ಯರು ಅದರ ಕಟ್ಟಕಡೆಯ ಪ್ರತಿನಿಧಿ ಮಾತ್ರ. ಅದರಂತೆಯೇ ರಾಮಾನುಜರ ದರ್ಶನವೂ ಅವರು ಲೋಕಕ್ಕೆ ಬರುವ ಶತಮಾನಗಳ ಮೊದಲೇ ಇತ್ತು. ಈ ವಿಷ ಯವು ಅವರು ಬರೆದಿರುವ ವ್ಯಾಖ್ಯಾನಗಳಿಂದಲೇ ತಿಳಿದುಬರುತ್ತದೆ. ಹಾಗೆಯೇ ಇತರ ಎಲ್ಲ ಅದ್ವೈತ ಸಿದ್ಧಾಂತಗಳೂ ಅವುಗಳು ದರ್ಶನ ಬದ್ಧ ವಾಗುವ ಮುನ್ನವೇ ರೂಢಿಯಲ್ಲಿದ್ದುವೆಂದೂ ಈ ಎಲ್ಲ ಸಿದ್ಧಾಂತಗಳೂ ಒಂದಕ್ಕೊಂದು ವಿರೋಧಿಗಳಲ್ಲವೆಂದೂ ನನ್ನ ಅಲ್ಪಮತಿಗೆ ತಿಳಿದು ಬಂದಿದೆ. ಹೇಗೆ ನಮ್ಮ ಷಡ್ದರ್ಶನಗಳು ಒಂದೇ ಮಹಾತತ್ತ್ವದ ಕ್ರಮೇಣ ವಿಕಾಸ ಗಳಂತಿವೆಯೋ, ಮೃದುತಾನದಲ್ಲಿ ಪ್ರಾರಂಭವಾದ ಸಂಗೀತ ಅದ್ವೈತ ಮಹಾಗಾನದಲ್ಲಿ ಹೇಗೆ ಕೊನೆಗೊಂಡಿದೆಯೋ ಹಾಗೆಯೇ ಮಾನವನ ಮನಸ್ಸು ದ್ವೈತ ವಿಶಿಷ್ಟಾದ್ವೈತಗಳೆಂಬ ಸೋಪಾನಗಳನ್ನೇರಿ ಸರ್ವೋ ನ್ನತಾದರ್ಶವಾದ ಅದ್ವೈತ ಶಿಖರವನ್ನು ಸೇರಿದೆ. ಆದ್ದರಿಂದ ಈ ಮೂರು ಸಿದ್ಧಾಂತಗಳೂ ಪರಸ್ಪರ ವಿರೋಧಿಗಳಲ್ಲ. ಅವುಗಳು ಪರಸ್ಪರ ವಿರೋಧಿ ಗಳೆಂದು ಕೆಲವರು ತಪ್ಪಾಗಿ ತಿಳಿದುಕೊಂಡಿದ್ದಾರೆ. ಅದ್ವೈತಿಗಳು ಉಪ ನಿಷತ್ತಿನ ಅದ್ವೈತ ಭಾಗವನ್ನು ಮಾತ್ರವೇ ಸಂಪೂರ್ಣವಾಗಿಟ್ಟುಕೊಂಡು ದ್ವೈತ ವಿಶಿಷ್ಟಾದ್ವೈತಭಾಗಗಳಿಗೆ ಬಹು ಕಷ್ಟದಿಂದ ತಮ್ಮ ಸಿದ್ಧಾಂತದ ಅರ್ಥ ಬರುವಂತೆ ವ್ಯಾಖ್ಯಾನಗಳನ್ನು ಆರೋಪಿಸಿದ್ದಾರೆ. ಹಾಗೆಯೇ ದ್ವೈತಿಗಳು ದ್ವೈತಭಾಗವನ್ನು ಮಾತ್ರ ತೆಗೆದುಕೊಂಡು ಅದ್ವೈತಭಾಗ ಗಳಿಗೆ ಬಹು ಪ್ರಯಾಸದಿಂದ ದ್ವೈತಾರೋಪಣೆ ಮಾಡಿದ್ದಾರೆ. ಅವರೆಲ್ಲರೂ

ಮಹಾಪುರುಷರೇ ಹೌದು; ನಮ್ಮ ಗುರುಗಳೇ ಹೌದು; ಆದರೂ ಗುರುವಿನಲ್ಲಾದರೂ ದೋಷಗಳಿದ್ದರೆ ಹೇಳಲೇಬೇಕು. ನಮ್ಮ ಅಭಿಪ್ರಾಯದಲ್ಲಿ ಅವರೆಲ್ಲರೂ ತಪ್ಪು ಹಾದಿಯನ್ನೇ ಹಿಡಿದಿದ್ದರು. ಆ ಗ್ರಂಥಪೀಡನೆ ನಮಗೇಕೆ? ಆ ಧಾರ್ಮಿಕ ಕೃತ್ರಿಮತೆ ನಮಗೇಕೆ? ಆ ವ್ಯಾಕರಣದ ಕಚ್ಚಾಟವೇಕೆ? ಇಲ್ಲದ ಅರ್ಥವನ್ನು ಗ್ರಂಥಗಳಿಗೆ ನಾವೇಕೆ ಆರೋಪಿಸಬೇಕು? ನಾವೆಂದು ಅಧಿಕಾರವಾದದ ಅದ್ಭುತ ರಹಸ್ಯವನ್ನು ಗ್ರಹಿಸುತ್ತೇವೆಯೋ ಅಂದು ನಮಗೆ ಆ ಗ್ರಂಥಗಳಲ್ಲಿರುವ ಸಮನ್ವಯ ಭಾವವು ಸುಲಭವೂ ಸರಳವೂ ಆಗುತ್ತದೆ. "ಕಸ್ಮಿನ್ನು ಭಗವೋ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತಿ" (ಯಾವುದನ್ನು ತಿಳಿಯುವುದರಿಂದ ಎಲ್ಲವೂ ತಿಳಿಯುತ್ತದೆ?) ಎಂಬುದೇ ಉಪನಿಷತ್ತುಗಳ ಮಹಾ ಪ್ರಶ್ನೆ ಮತ್ತು ಸಮಸ್ಯೆ. ಆಧುನಿಕ ರೀತಿಯಲ್ಲಿ ಹೇಳುವುದಾದರೆ ಇತರ ಎಲ್ಲ ದರ್ಶನಗಳ ಗುರಿಯಂತೆಯೇ ಉಪನಿಷತ್ತುಗಳ ಗುರಿಯೂ ಸೃಷ್ಟಿಯ ವೈವಿಧ್ಯ ವಿರೋಧಗಳ ಹಿಂದೆ ಏಕತೆಯನ್ನು ತಿಳಿಯುವುದಾಗಿದೆ. ಜ್ಞಾನವೆಂದರೇನು? ಅನೇಕತೆಯಲ್ಲಿ ಏಕತೆಯನ್ನು ದರ್ಶಿಸುವುದೇ ಜ್ಞಾನ. ಪ್ರತಿಯೊಂದು ವಿಜ್ಞಾನಶಾಸ್ತ್ರಕ್ಕೂ ಇದೇ ಆಧಾರ ಮತ್ತು ಗಮ್ಯ. 'ಅನೇಕ' ದಲ್ಲಿ 'ಏಕ' ವನ್ನು ಕಂಡು ಹಿಡಿಯುವುದೇ ಮಾನವ ವಿದ್ಯೆಯ ಸರ್ವಸ್ವ. ವಿವಿಧ ವಿಷಯಗಳ ಅಂತರಾಳದಲ್ಲಿ ಏಕತೆಯನ್ನು ತಿಳಿಯುವುದೆ ವಿಜ್ಞಾನಶಾಸ್ತ್ರಗಳ ಕಾರ್ಯ. ಎಂದಮೇಲೆ ಅಸಂಖ್ಯ ಶಾಖೋಪಶಾಖೆಗಳುಳ್ಳ ನಾಮರೂಪಮಯವಾದ ವಿಶ್ವಸಮಸ್ತದ ಅಂತರಾಳದಲ್ಲಿರುವ ಐಕ್ಯಭಾವವನ್ನು ತಿಳಿಯುವುದು ಮತ್ತೂ ಕಷ್ಟತರವಾಗುತ್ತದೆ. ಜಡಚೇತನಗಳೆಂಬ ಭೇದಭಾವದಿಂದಲೂ ಸಂಪೂರ್ಣ ಗುಣ ವ್ಯತ್ಯಾಸವುಳ್ಳ ತರತರದ ಪದಾರ್ಥಗಳಿಂದಲೂ ಒಂದನ್ನೊಂದು ವಿರೋಧಿಸುವ ಮತ್ತು ಒಂದರಿಂದೊಂದು ಬೇರೆಯಾಗಿರುವ ಅನೇಕ ಭಿನ್ನಭಾವಗಳಿಂದಲೂ ಭಿನ್ನರೂಪಗಳಿಂದಲೂ ಅಸಂಖ್ಯ ಲೋಕಗಳಿಂದಲೂ ಕೂಡಿರುವ ಈ ಬ್ರಹ್ಮಾಂಡದಲ್ಲಿ ಏಕಮೇವಾದ್ವಿತೀಯವನ್ನು ಕಂಡು ಹಿಡಿಯುವುದೇ ಉಪನಿಷತ್ತು ಕೈಕೊಂಡಿರುವ ಮಹಾಕಾರ್ಯ. ಆ ಸಿದ್ಧಾಂತವನ್ನು ಉಪನಿಷತ್ತುಗಳು ಅರುಂಧತಿ ನ್ಯಾಯದ ಪ್ರಕಾರ ಸಾಧಿಸಿವೆ. ಬಹಳ ಕಿರಿದಾದಅರುಂಧತಿ ನಕ್ಷತ್ರವನ್ನು ತೋರಿಸಬೇಕಾದರೆ ಅದರ ಬಳಿಯಿರುವ ಹಿರಿದಾದ ಮತ್ತು ಕಾಂತಿಯುಕ್ತವಾದ ತಾರೆಗಳನ್ನು ತೋರಿಸಿ ತರುವಾಯ ದೃಷ್ಟಿಯನ್ನು ಅರುಂಧತಿಯ ಕಡೆಗೆ ಕ್ರಮವಾಗಿ ತಿರುಗಿಸು

ತ್ತಾರೆ. ಉಪನಿಷತ್ತುಗಳೂ ತಮ್ಮ ಕಾರ್ಯವನ್ನು ಹಾಗೆಯೇ ಸಾಧಿಸಿವೆ. ಕೆಲವು ಗ್ರಂಥಭಾಗಗಳನ್ನು ತೆಗೆದುಕೊಂಡರೆ ಸಾಕು, ನಾನು ಹೇಳುವ ಮಾತಿನ ಅರ್ಥ ವಿಶದವಾಗುತ್ತದೆ. ಆ ಗ್ರಂಥಗಳಲ್ಲಿ ಪ್ರತಿಯೊಂದು ಅಧ್ಯಾಯವೂ ದ್ವೈತಬೋಧೆಯಿಂದ–ಉಪಾಸನೆಯಿಂದ–ಪ್ರಾರಂಭವಾಗುತ್ತದೆ. ಸ್ವಲ್ಪ ಮುಂದುವರಿದಮೇಲೆ ಸೃಷ್ಟಿ ಸ್ಥಿತಿ ಲಯ ಕರ್ತನಾದ ಈಶ್ವರ ವಿಚಾರವು ಗೋಚರವಾಗುತ್ತದೆ. ಆತನು ಆರಾಧ್ಯನು, ರಕ್ಷಕನು, ಸ್ವಾಮಿಯು, ಒಳಗಿನ ಮತ್ತು ಹೊರಗಿನ ಎರಡು ಜಗತ್ತುಗಳನ್ನೂ ನಡೆಸುವವನು. ಆದರೂ ಪ್ರಕೃತಿದೂರನು ಮತ್ತು ಅತೀತನು. ಇನ್ನೂ ಸ್ವಲ್ಪ ಮುಂದುವರಿದರೆ ಅದೇ ಉಪನಿಷತ್ತು ಈಶ್ವರನು ಜಗತ್ತಿನ ಹೊರಗಿಲ್ಲ, ಎಲ್ಲೆಲ್ಲಿಯೂ ಅಂತರ್ಯಾಮಿಯಾಗಿದ್ದಾನೆ ಎಂದು ಬೋಧಿಸುತ್ತದೆ. ತುದಿಯಲ್ಲಿ ಉಪನಿಷತ್ತು ಮೇಲೆ ಹೇಳಿದ ಎಲ್ಲಾ ಭಾವಗಳನ್ನೂ ಪರಿತ್ಯಜಿಸಿ ಇರುವುದೆಲ್ಲಾ ಬ್ರಹ್ಮ ಎಂಬ ತತ್ತ್ವವನ್ನು ಬೋಧಿಸುತ್ತದೆ. ಕಡೆಯಲ್ಲಿ ಬ್ರಹ್ಮವೂ ಮನುಷ್ಯನ ಆತ್ಮವೂ ಒಂದೇ ಎಂದು ಉಕ್ತವಾಗುತ್ತದೆ. "ತತ್ತ್ವಮಸಿ ಶ್ವೇತಕೇತು" (ಶ್ವೇತಕೇತುವೇ ನೀನೇ ಅದು). ಈ ತತ್ತ್ವಬೋಧೆಯಲ್ಲಿ ಒಂದಿನಿತೂ ಅಳುಕಿಲ್ಲ. ಒಂದಿನಿತೂ ಭಿನ್ನಾಭಿಪ್ರಾಯದ ಭೀತಿಯಿಲ್ಲ. ಸತ್ಯವನ್ನು, ಧೀರ ಸತ್ಯವನ್ನು ಧೀರಭಾಷೆಯಲ್ಲಿ ಹೇಳಿದ್ದಾರೆ. ಆ ಸತ್ಯವನ್ನು ಅವರಂತೆಯೇ ಧೀರವಾಗಿ ಬೋಧಿಸಲು ನಾವು ಹಿಂಜರಿಯಬಾರದು. ಈಶ್ವರ ಪ್ರಸಾದದಿಂದ ನಾನು ಆ ಸತ್ಯವನ್ನು ಧೀರವಾಗಿ ಬೋಧಿಸುವ ಧೀರ ಬೋಧಕನಾಗುತ್ತೇನೆ ಎಂದು ನಂಬಿದ್ದೇನೆ.

ಮೊದಲು ನಾವು ತಿಳಿಯಬೇಕಾಗಿರುವ ಎರಡು ವಿಷಯಗಳಿವೆ. ಒಂದು ಎಲ್ಲ ವೇದಾಂತ ಸಿದ್ಧಾಂತಗಳಿಗೂ ಸಮಾನವಾಗಿ ಮಾನಸಿಕವಾದುದು. ಮತ್ತೊಂದು ಭೌತಿಕವಾದುದು. ಇಂದು ವಿಜ್ಞಾನಶಾಸ್ತ್ರವು ಕಂಡುಹಿಡಿಯುತ್ತಿರುವ ಹೊಸ ಸಂಗತಿಗಳು ನಮಗೆ ದಿಗ್ಭ್ರಮೆ ಹಿಡಿಸುತ್ತಿವೆ. ನಮ್ಮ ಕಣ್ತೆರೆದು, ನಾವೆಂದೂ ಕಾಣದ ಕನಸು ನಮಗೆ ಕಾಣುವಂತೆ ಮಾಡುತ್ತಿದೆ. ಉಷ್ಣ, ಅಯಸ್ಕಾಂತಶಕ್ತಿ, ವಿದ್ಯುಚ್ಛಕ್ತಿ ಇವುಗಳು ಬೇರೆಬೇರೆಯಾಗಿ ತೋರಿದರೂ ಒಂದನ್ನು ಮತ್ತೊಂದನ್ನಾಗಿ ಪರಿವರ್ತಿಸಬಹುದೆಂದೂ, ಎಲ್ಲವೂ ಒಂದೇ ಶಕ್ತಿಯ ಅಂಶಗಳೆಂದೂ ಮನುಷ್ಯನಿಗೆ ಗೊತ್ತಾಗಿದೆ. ಈ ವಿಷಯ ಸಂಹಿತೆಯಲ್ಲಿಯೂ ಉಕ್ತವಾಗಿದೆ. ಅತಿ ಪುರಾತನವಾದುದಾದರೂ ಸಂಹಿತೆಯಲ್ಲಿ ನಾನು ಮೇಲೆ ಹೇಳಿದ ಶಕ್ತಿ

ಭಾವವು ಮೂರ್ತಿಮತ್ತಾಗಿದೆ. ಆಕರ್ಷಣಶಕ್ತಿ, ವಿಕರ್ಷಣಶಕ್ತಿ, ಉಷ್ಣ ಅಯಸ್ಕಾಂತ ಶಕ್ತಿ, ವಿದ್ಯುಚ್ಛಕ್ತಿ, ಎಂಬ ಯಾವ ಹೆಸರಿನಿಂದ ತೋರಿದರೂ ಎಲ್ಲ ಶಕ್ತಿಗಳೂ ಅಂತಃಕರಣದಲ್ಲಿ ಪ್ರತಿಬಿಂಬಿತವಾದ ಚಿತ್ತವೃತ್ತಿಗಳಾಗಿ ತೋರಬೇಕು. ಯಾವ ಆಧಾರದಿಂದ ಅವು ಹೊರಹೊಮ್ಮುತ್ತವೆಯೋ ಅದನ್ನು ಪ್ರಾಣ ಎಂದು ಕರೆಯುತ್ತಾರೆ. ಹಾಗಾದರೆ ಪ್ರಾಣ ಎಂದರೇನು? ಪ್ರಾಣ ಎಂದರೆ ಸ್ಪಂದನ. ಜಗತ್ತೆಲ್ಲಾ ತನ್ನ ಆದಿ ಸ್ಥಿತಿಗೆ ಮರುಕೊಳಿಸಿದಾಗ ಈ ಅಪಾರ ಶಕ್ತಿಯಾದ ಪ್ರಾಣವು ಏನಾಗುತ್ತದೆ! ಅದು ಸಂಪೂರ್ಣವಾಗಿ ವಿನಾಶವಾಗುತ್ತದೆಯೇ? ಎಂದಿಗೂ ಇಲ್ಲ. ಅದು ನಾಶವಾದರೆ ಮುಂದಣ ಸೃಷ್ಟಿಯ ಗತಿಯೇನು? ನಮ್ಮ ಶಾಸ್ತ್ರಗಳ ಪ್ರಕಾರ ಸೃಷ್ಟಿ ತರಂಗಗಾಮಿ. ಸೃಷ್ಟಿ ಎಂಬ ಪದವನ್ನು Creation ಎಂದು ಭಾಷಾಂತರಿಸುವುದು ತಪ್ಪು. ಸೃಷ್ಟಿ ಎಂದರೆ ಅನಂತ ಸತ್ತಿನ ಒಂದು ಪ್ರಕಾಶನ ಅಥವಾ ವಿಕಾಶನವೇ ಹೊರತು ನೂತನ ನಿರ್ಮಾಣವಲ್ಲ. ಪ್ರಲಯ ಸ್ಥಿತಿಯಲ್ಲಿ ಸೃಷ್ಟಿಯು ಕಾಣದೆ ಹೋದಾಗ ಎಲ್ಲ ವಸ್ತುಗಳೂ ಸೂಕ್ಷ್ಮಾತಿಸೂಕ್ಷ್ಮಗಳಾಗಿ ತಮ್ಮ ಆದಿ ಸ್ಥಿತಿಯಲ್ಲಿ ಕೆಲಕಾಲವಿದ್ದು ಹೊರಗೆ ತೋರಲು ಸಿದ್ಧವಾಗಿ ಸಮತೆಯಲ್ಲಿರುತ್ತವೆ. ಆಗ ಈ ಪ್ರಾಣದ ಅಸಂಖ್ಯ ಶಕ್ತಿರೂಪಗಳೆಲ್ಲ ಏನಾಗುತ್ತವೆ? ಆದಿಪ್ರಾಣದೊಂದಿಗೆ ಐಕ್ಯವಾಗುತ್ತವೆ. ಆಗ ಪ್ರಾಣವು ನಿಶ್ಚಲವಾಗುತ್ತದೆ. ಸಂಪೂರ್ಣ ನಿಶ್ಚಲವಲ್ಲ! ಸ್ವಲ್ಪ ಹೆಚ್ಚು ಕಡಿಮೆ ನಿಶ್ಚಲವೆಂದು ಹೇಳಬಹುದು. ಪ್ರಾಣದ ಆ ಸ್ಥಿತಿಯನ್ನೇ ನಾಸದೀಯ ಸೂಕ್ತವು "ಆನೀದವಾತಂ" ಸ್ಪಂದನಗಳಿಲ್ಲದೆ ಸ್ಪಂದಿಸುತ್ತಿತ್ತು! ಎಂದು ವರ್ಣಿಸುತ್ತದೆ. ಉಪನಿಷತ್ತುಗಳಲ್ಲಿ ಅನೇಕ ಪಾಠಗಳ, ಅದರಲ್ಲಿಯೂ ಪಾರಿಭಾಷಿಕ ಪದಸಮುದಾಯಗಳಿರುವ ಭಾಗಗಳ ಅರ್ಥವು ಬಹು ಸಂದಿಗ್ಧವೂ ಕಷ್ಟಸಾಧ್ಯವೂ ಆಗಿದೆ. ಉದಾಹರಣೆಗಾಗಿ ಪೂರ್ವೋಕ್ತ ಪಾಠದಲ್ಲಿರುವ 'ವಾತಂ' ಎಂಬ ಪದ ಕೆಲವು ಸಾರಿ 'ಗಾಳಿ' ಎಂಬರ್ಥದಲ್ಲಿಯೂ, ಕೆಲವು ಸಾರಿ 'ಚಲನೆ' ಎಂಬರ್ಥದಲ್ಲಿಯೂ ಉಪಯುಕ್ತವಾಗಿದೆ. ಅನೇಕರು ಒಂದನ್ನು ಇನ್ನೊಂದರ್ಥದಲ್ಲಿ ಭಾವಿಸಿ ಮೋಸಹೋಗುತ್ತಾರೆ. ಅಂತಹ ಪ್ರಸಂಗದಲ್ಲಿ ನಾವು ಬಹಳ ಎಚ್ಚರಿಕೆಯಿಂದ ಇರಬೇಕಾಗುತ್ತದೆ. ಪ್ರಳಯಕಾಲದಲ್ಲಿ ಪ್ರಾಣ ಆ ಸ್ಥಿತಿಯಲ್ಲಿರುತ್ತದೆ. ಆಗ ಆಕಾಶವೆಂದು ಕರೆಯಲ್ಪಡುವ ಜಡಪ್ರಕೃತಿಯು ಏನಾಗುತ್ತದೆ? ಶಕ್ತಿಗಳು ಜಡಪ್ರಕೃತಿಯನ್ನೆಲ್ಲಾ ವ್ಯಾಪಿಸಿರುವುದರಿಂದ ಅದರ

ಜೊತೆಯಲ್ಲಿ ಅವೂ ಆಕಾಶಲೀನವಾಗುತ್ತವೆ. ಮತ್ತೊಮ್ಮೆ ಸೃಷ್ಟಿತರಂಗವು ಮೇಲೇಳುವಾಗ ಅದರೊಡನೆ ಅವೂ ಹೊರಗೆ ತೋರುತ್ತವೆ. ಆಗ ಮೊದಲು ವ್ಯೈದೋರುವುದು ಆಕಾಶ. ಈ ಆಕಾಶವೇ ಜಡಪ್ರಕೃತಿಯ ಆದಿರೂಪ. ಸೃಷ್ಟಿ ಸಮಯದಲ್ಲಿ ಈ ಆಕಾಶ ಪ್ರಾಣದ ಕರ್ಮದಿಂದ ಸ್ಪಂದಿಸುತ್ತದೆ. ಸ್ಪಂದನ ಅತಿಶಯವಾಗಲು ಆಕಾಶವು ಸೂರ್ಯ, ಚಂದ್ರ, ನಕ್ಷತ್ರ ಮತ್ತು ಗ್ರಹವ್ಯೂಹಗಳೆಂದು ಕರೆಯುವ ನಾನಾ ಜಡರೂಪಗಳಾಗಿ ಗ್ರಥಿತವಾಗುತ್ತದೆ.

"ಯದಿದಂ ಕಿಂಚ ಜಗತ್ ಸರ್ವಂ ಪ್ರಾಣ ಏಜತಿ ನಿಃಸೃತಂ" "ಪ್ರಾಣ ಸ್ಪಂದನದಿಂದ ಜಗತ್ಸರ್ವವೂ ಸೃಷ್ಟಿಯಾಗುತ್ತದೆ" ಎಂಬುದು ಉಪನಿಷತ್ತಿನ ವಾಣಿ. ಮೇಲೆ ಹೇಳಿದ ಮಂತ್ರ ಭಾಗವನ್ನು ಚೆನ್ನಾಗಿ ಲಕ್ಷ್ಯಿಸಿ! 'ಏಜ = ಕಂಪಿಸುವುದು' ಎಂಬುದರಿಂದ 'ಏಜತಿ' ಬಂದಿದೆ. 'ನಿಃಸೃತಂ' ಎಂದರೆ 'ಹೊರಗೆ ತೋರಿದುದು' 'ಯದಿದಂ ಕಿಂಚ' ಏನಿದೆಯೋ ಅದೆಲ್ಲ ಜಗತ್ತು' ಇದು ವಿಶ್ವರಚನೆಯ ವಿಚಾರದ ಒಂದು ಪಕ್ಷ ಮಾತ್ರ. ಇದಲ್ಲದೆ ಇನ್ನೂ ಅನೇಕ ವಿವರಣೆಗಳಿವೆ. ಉದಾಹರಣೆಗೆ ಸೃಷ್ಟಿಯಾಗುವ ಕ್ರಮವೆಂತು? ಮೊದಲು ಆಕಾಶವೂ ಅದರಿಂದ ಇತರ ವಸ್ತುಗಳೂ ಹೇಗೆ ಉತ್ಪತ್ತಿಯಾಗುತ್ತವೆ? ಆಕಾಶವು ಹೇಗೆ ಸ್ಪಂದಿಸುತ್ತದೆ? ಅದರಿಂದ ವಾಯುವು ಹೇಗೆ ವ್ಯೈದೋರುತ್ತದೆ? ಎಂಬ ವಿಷಯಗಳೆಲ್ಲವೂ ವಿವರವಾಗಿವೆ. ಮೇಲಿನ ವಿಷಯಗಳಲ್ಲಿರುವ ತತ್ತ್ವದ ಸಾರಾಂಶವೇನೆಂದರೆ ಸೂಕ್ಷ್ಮದಿಂದ ಸ್ಥೂಲವು ಹೊರಹೊಮ್ಮುತ್ತದೆ. ಆದರೂ ವಿಶ್ವರಚನೆಯನ್ನು ಕುರಿತ ಮೇಲಿನ ಜಿಜ್ಞಾಸೆಯಲ್ಲಿ ದ್ವೈತಭಾವವಿದೆ. ಐಕ್ಯಭಾವವಿನ್ನೂ ಸಂಭವಿಸಿಲ್ಲ. ಆಕಾಶದ, ಎಂದರೆ ಜಡಪ್ರಕೃತಿಯ ಐಕ್ಯಭಾವವಿದೆ. ಪ್ರಾಣದ ಎಂದರೆ ಶಕ್ತಿಗಳ ಐಕ್ಯಭಾವವಿದೆ. ಮುಂದುವರಿದರೆ ಪ್ರಾಣ ಆಕಾಶಗಳಲ್ಲಿ ಐಕ್ಯಭಾವವು ಲಭಿಸುವುದೆ? ಇವೆರಡನ್ನೂ ಕರಗಿಸಿ ಒಂದು ಮಾಡಲು ಸಾಧ್ಯವೆ? ಈ ವಿಷಯದಲ್ಲಿ ನಮ್ಮ ಆಧುನಿಕ ವಿಜ್ಞಾನವು ಮೂಕವಾಗಿದೆ. ಹೇಳುವಂತಹ ವಿಷಯವನ್ನೇನೂ ಅದು ಇನ್ನೂ ಕಂಡುಹಿಡಿದಿಲ್ಲ. ಒಂದು ವೇಳೆ ಅದು ಎಂದಾದರೂ ಕಂಡುಹಿಡಿಯುವಪಕ್ಷದಲ್ಲಿ (ಉಪನಿಷತ್ತಿನಲ್ಲಿ ಹೇಳಿರುವ ಪ್ರಾಣ ಆಕಾಶಗಳನ್ನು ಅದು ನಿಧಾನವಾಗಿ ಕಂಡುಹಿಡಿಯುತ್ತಿರುವಂತೆ) ಅದೂ ಉಪನಿಷತ್ತುಗಳ ಸಿದ್ಧಾಂತಕ್ಕೇ ಬರಬೇಕು. ಏಕೆಂದರೆ ಉಪನಿಷತ್ತು ಪ್ರಾಣ ಆಕಾಶಗಳ

ಹಿಂದುಗಡೆ ನಿರ್ಗುಣ ನಿರಾಕಾರ ಸರ್ವವ್ಯಾಪಿಯಾದ ಬ್ರಹ್ಮವಿದೆ ಎಂದು ಹೇಳುತ್ತದೆ. ಬ್ರಹ್ಮ ಎಂಬುದು ಪೌರಾಣಿಕ ನಾಮಧೇಯ, ಅದನ್ನೇ ಮಾಸಿಕ ಶಾಸ್ತ್ರದೃಷ್ಟಿಯಿಂದ 'ಮಹತ್' ಎಂದು ಕರೆದಿದ್ದಾರೆ. 'ಮಹತ್' ನಲ್ಲಿ ಪ್ರಾಣ ಆಕಾಶಗಳೆರಡೂ ಲೀನವಾಗುತ್ತವೆ, ಐಕ್ಯವಾಗುತ್ತವೆ. ವ್ಯಕ್ತಿಯ ಅಹಂಕಾರಭಾವವು ಮನಸ್ಸೆಂಬ ಪಂಜರದಲ್ಲಿ ಸೆರೆಸಿಕ್ಕಿರುವ ಈ ಮಹತ್ತಿನ ಒಂದು ಅಲ್ಪಭಾಗ ಮಾತ್ರ. ಎಲ್ಲ ವ್ಯಕ್ತಿಗಳಲ್ಲಿಯೂ ವ್ಯೆದೋರಿರುವ ಈ ಅಹಂಕಾರಗಳ ಸಮುದಾಯಕ್ಕೆ ಸಮಷ್ಟಿ ಮನಸ್ಸು ಅಥವಾ ವಿಶ್ವಮನಸ್ಸು ಎಂದು ಹೆಸರು. ಇಲ್ಲಿಗೆ ಜಿಜ್ಞಾಸೆಯು ಮುಗಿಯಲಿಲ್ಲ; ಆದ್ದರಿಂದ ಮುಂದುವರಿಯಿತು. ನಮ್ಮಲ್ಲಿ ಒಬ್ಬೊಬ್ಬರನ್ನೂ ಒಂದೊಂದು ಪಿಂಡಾಂಡವೆಂದು ಕರೆಯಬಹುದು. ಎಲ್ಲರನ್ನೂ ಒಳಗೊಂಡಿರುವ ಜಗತ್ತನ್ನು ಬ್ರಹ್ಮಾಂಡವೆಂದು ಕರೆಯಬಹುದು. ಆದರೆ ವ್ಯಷ್ಟಿಯಲ್ಲಿ ಏನೇನಿದೆಯೋ ಅದೆಲ್ಲವೂ ಸಮಷ್ಟಿಯಲ್ಲಿಯೂ ಇದೆ ಎಂದು ನಾವು ಸ್ವಲ್ಪ ಹೆಚ್ಚು ಕಡಿಮೆ ಊಹಿಸಬಹುದು. ಆದ್ದರಿಂದ ನಮ್ಮ ಮನಸ್ಸಿನ ಪರೀಕ್ಷೆ ನಮಗೆ ಸಾಧ್ಯವಾದರೆ ವಿಶ್ವ ಮನಸ್ಸೂ ಅಂತೆಯೇ ಇದೆ ಎಂದು ಊಹಿಸಬಹುದು. ಹಾಗಾದರೆ ಈ ಮನಸ್ಸು ಏನು ? ಎಂಬುದು ಮುಂದಿನ ಪ್ರಶ್ನೆ. ಪಾಶ್ಚಾತ್ಯ ದೇಶಗಳಲ್ಲಿ ಈಗೀಗ ವಿಜ್ಞಾನವು ಮುಂದುವರಿದಂತೆಲ್ಲಾ ಶರೀರ ಶಾಸ್ತ್ರವು ಪೂರ್ವಕಾಲದ ಧರ್ಮ ದುರ್ಗಗಳನ್ನೆಲ್ಲ ಆಕ್ರಮಿಸಿಬಿಟ್ಟಿದೆ. ಅಲ್ಲಿಯ ಜನರಿಗೆ ನಿಲ್ಲಲು ತಾವಿಲ್ಲದಂತಾಗಿದೆ. ನಿರಾಶರಾಗಿದ್ದಾರೆ. ಏಕೆಂದರೆ ಆಧುನಿಕ ಶರೀರ ಶಾಸ್ತ್ರವು ಮಿದುಳನ್ನೇ ಮನಸ್ಸೆಂದು ಹೇಳುತ್ತಿದೆ. ಆದರೆ ಭರತ ವರ್ಷದ ನಮಗೆ ಅದೇನೂ ಹೊಸ ವಿಷಯವಲ್ಲ. ಪ್ರತಿಯೊಬ್ಬ ಹಿಂದೂ ಬಾಲಕನಿಗೂ ಗೊತ್ತು, ಮನಸ್ಸು ಜಡ, ಸೂಕ್ಷ್ಮತರವಾದ ಜಡ ಎಂದು. ಶರೀರವು ಸ್ಥೂಲವಾದುದು. ಅದರ ಹಿಂದೆ ಸೂಕ್ಷ್ಮ ಶರೀರವಿದೆ. ಅದೂ ಕೂಡ ಜಡವೇ; ಆದರೆ ಸೂಕ್ಷ್ಮತರವಾದುದು. ಆದರೆ ಅದು ಆತ್ಮವಲ್ಲ. ಈ ಪದವನ್ನು ಇಂಗ್ಲಿಷಿಗೆ ನಾನು ಭಾಷಾಂತರಿಸುವುದಿಲ್ಲ; ಏಕೆಂದರೆ ಅದಕ್ಕೆ ಸರಿಯಾದ ಪದ ಯೂರೋಪಿನಲ್ಲಿಲ್ಲ. ಆದ್ದರಿಂದ ಅದನ್ನು ಭಾಷಾಂತರಿಸಲು ಅಸಾಧ್ಯ. ಕೆಲವು ಜರ್ಮನ್ ತತ್ತ್ವ ಶಾಸ್ತ್ರಜ್ಞರು ಆತ್ಮನ್ ಎಂಬ ಪದವನ್ನು 'Self' ಎಂದು ತರ್ಜುಮೆ ಮಾಡಿದ್ದಾರೆ. ಆದರೆ ಎಲ್ಲರೂ ಅದನ್ನು ಒಪ್ಪಿ ಪ್ರಯೋಗೀಸುವ ತನಕ ಅದನ್ನು ಉಪಯೋಗಿಸುವುದು ಸಾಧ್ಯವಲ್ಲ. ಅವರೇನಾದರೂ ಕರೆದು

ಕೊಳ್ಳಲಿ. ಅದೇನೇ ನಮ್ಮ ಆತ್ಮನ್. ಎಲ್ಲದರ ಹಿಂದಿರುವ ನಿಜವಾದ ಪುರುಷ. ಆತ್ಮವೇ ಜಡ ಮನಸ್ಸನ್ನು ಅಥವಾ ನಮ್ಮ ಮನಃ ಶಾಸ್ತ್ರಗಳಲ್ಲಿ ಕರೆಯುವಂತೆ ಅಂತಃಕರಣವನ್ನು ತನ್ನ ಆಯುಧವನ್ನಾಗಿ ಉಪಯೋಗಿಸುತ್ತದೆ. ಮನಸ್ಸು ಹಲಕೆಲವು ಸೂಕ್ಷ್ಮೇಂದ್ರಿಯಗಳ ಸಹಾಯದಿಂದ ಶರೀರದ ಸ್ಥೂಲಾಂಗಗಳನ್ನು ನಡೆಸುತ್ತದೆ. ಈ ಮನಸ್ಸು ಏನು? ನಿಜವಾಗಿ ನೋಡುವುದು ಕಣ್ಣಲ್ಲ, ನಿಜವಾಗಿ ಕೇಳುವುದು ಕಿವಿಯಲ್ಲ. ಆದರೆ ಇವುಗಳ ಹಿಂದೆ ಇಂದ್ರಿಯಗಳಿವೆ; ಈ ಇಂದ್ರಿಯಗಳು ಹಾಳಾದರೆ ಇಂದ್ರನಿಗಿರುವಂತೆ ಸಹಸ್ರಾಕ್ಷಗಳಿದ್ದರೂ ಏನೂ ಕಾಣಿಸುವುದಿಲ್ಲ; ಎಂಬ ವಿಚಾರಗಳು ಯೂರೋಪಿನ ಶಾಸ್ತ್ರಜ್ಞರಿಗೆ ಮೊನ್ನೆ ಮೊನ್ನೆ ಗೊತ್ತಾಗಿದೆ. ದೃಷ್ಟಿ ಎಂದರೆ ಬಾಹ್ಯ ಕ್ರಿಯೆಯಲ್ಲ, ಎಂಬ ಆಧಾರದಿಂದಲೇ ನಮ್ಮ ತತ್ತ್ವ ಶಾಸ್ತ್ರ ಪ್ರಾರಂಭವಾಗುತ್ತದೆ. ನಿಜವಾದ ದೃಷ್ಟಿಯು ಮೆದುಳಿನ ಸೂಕ್ಷ್ಮೇಂದ್ರಿಯಗಳಿಗೆ ಸೇರಿದುದು. ನೀವು ಅವುಗಳನ್ನು ಏನೆಂದು ಬೇಕಾದರೂ ಕರೆಯಿರಿ. ಅಂತೂ ಕಣ್ಣು ಕಿವಿ ಮೂಗುಗಳೇ ಇಂದ್ರಿಯಗಳಲ್ಲ. ಈ ಇಂದ್ರಿಯ ಸಮುದಾಯ, ಮನಸ್ಸು, ಬುದ್ಧಿ, ಚಿತ್ತ, ಅಹಂಕಾರ ಇವೆಲ್ಲವೂ ಸೇರಿ ಮನಸ್ಸು ಎಂದು ಕರೆಯಲ್ಪಡುತ್ತದೆ. ಆಧುನಿಕ ಶರೀರ ಶಾಸ್ತ್ರಜ್ಞರು ಮಿದುಳೇ ಮನಸ್ಸು ಎಂದು ಹೇಳಿದರೆ ನೀವೇನೂ ಭಯಪಡಬೇಕಾದುದಿಲ್ಲ. ನಮ್ಮ ಶಾಸ್ತ್ರಜ್ಞರಿಗೆ ಅದು ಯಾವಾಗಲೂ ತಿಳಿದಿತ್ತು. ಅದು ನಮ್ಮ ಧರ್ಮದ ಮೂಲ ಎಂದು ಅವರಿಗೆ ಉತ್ತರ ಹೇಳಿ.

ಅದಂತಿರಲಿ ನಾವೀಗ ಮನಸ್ಸು, ಬುದ್ಧಿ, ಚಿತ್ತ, ಅಹಂಕಾರಗಳೆಂದರೇನು? ಎಂಬುದನ್ನು ತಿಳಿಯಬೇಕು. ಮೊದಲು ಚಿತ್ತವನ್ನು ತೆಗೆದುಕೊಳ್ಳೋಣ. ಅದು ಮಹತ್ತಿನ ಒಂದು ಅಂಶ. ವಿವಿಧ ಅವಸ್ಥೆಗಳನ್ನೊಳಗೊಂಡ ಮನಸ್ಸಿಗಿರುವ ಒಂದು ಮೂಲ ನಾಮ. ಇಲ್ಲಿ ಒಂದು ಸರೋವರವಿದೆ ಎಂದು ಭಾವಿಸಿ. ಬೇಸಗೆಯ ಸಂಜೆಯಲ್ಲಿ ಅದು ನಿಷ್ಪಂದ ನಿಸ್ತರಂಗ ಶಾಂತವಾಗಿರುತ್ತದೆ. ಅದನ್ನೇ 'ಚಿತ್ತ' ಎಂದು ಕರೆಯೋಣ. ಅಂತಹ ಸರಸ್ಸಿಗೆ ಯಾರೋ ಒಂದು ಕಲ್ಲು ಎಸೆದರೆಂದು ಭಾವಿಸಿ. ಏನಾಗುತ್ತದೆ? ಮೊದಲು ಕಲ್ಲು ನೀರನ್ನು ತಳ್ಳುವಕ್ರಿಯೆ; ಆಮೇಲೆ ನೀರು ಕಲ್ಲನ್ನು ತಳ್ಳುವ ಪ್ರತಿಕ್ರಿಯೆ. ಅದರಿಂದ ಅಲೆಯುಂಟಾಗುತ್ತದೆ. ಅಂದರೆ ಆ ಪ್ರತಿಕ್ರಿಯೆಯೇ ಅಲೆಯ ರೂಪದಲ್ಲಿ ತೋರುತ್ತದೆ. ಮೊದಲು ನೀರು

ಸ್ವಲ್ಪಸ್ಪಂದಿಸುತ್ತದೆ; ತತ್‍ಕ್ಷಣವೇ ತರಂಗ ರೂಪದ ಪ್ರತಿಕ್ರಿಯೆಯನ್ನು ಕಳುಹಿಸುತ್ತದೆ. ಚಿತ್ತವು ಸರೋವರಕ್ಕೆ ಸಾಮ್ಯ; ಹೊರಗಿನ ವಸ್ತುಗಳು ಎಸೆದ ಕಲ್ಲಿಗೆ ಸಾಮ್ಯ. ಇಂದ್ರಿಯಗಳ ಮೂಲಕ ಚಿತ್ತಕ್ಕೆ ವಿಷಯ ಸನ್ನಿಕರ್ಷವಾಗುತ್ತದೆ. ಇಂದ್ರಿಯಗಳು ವಿಷಯಮುದ್ರೆಗಳನ್ನು ಒಳಗೆ ಕಳುಹಿಸುತ್ತವೆ. ತರಂಗಿತ ಚಿತ್ತವೇ ಮನಸ್ಸಾಗುತ್ತದೆ. ಅಂದರೆ ಚಲನೆಯೇ ಮನಸ್ಸಿನ ಮುಖ್ಯ ಲಕ್ಷಣ. ತರುವಾಯ ಪ್ರತಿಕ್ರಿಯೆ ಉಂಟಾಗುತ್ತದೆ. ಚಿತ್ತದ ಪ್ರತಿಕ್ರಿಯಾವಸ್ಥೆಯೇ ಬುದ್ಧಿ, ಅಥವಾ ಚಿತ್ತದ ನಿಶ್ಚಯಾತ್ಮಕ ಶಕ್ತಿ. ಈ ಬುದ್ಧಿಯೊಡನೆ 'ಅಹಂ' 'ನಾನು' ಎಂಬ ಮತ್ತೊಂದು ಅವಸ್ಥೆಯು ಚಿತ್ತದಲ್ಲಿ ಉತ್ಪನ್ನವಾಗುತ್ತದೆ. ನನ್ನ ಕೈ ಮೇಲೆ ಸೊಳ್ಳೆಯೊಂದು ಮಂಡಿಸಿತೆಂದು ತಿಳಿದುಕೊಳ್ಳಿ, ಆ ಅನುಭವ ಚಿತ್ತಕ್ಕೆ ಹೋಗುತ್ತದೆ. ಚಿತ್ತ ಸ್ಪಂದಿಸುತ್ತದೆ. ಅದೇ ಮನಸ್ಸು. ಕೂಡಲೇ ಪ್ರತಿಕ್ರಿಯೆಯಾಗುತ್ತದೆ; ಒಡನೆಯೇ ನನ್ನ ಕೈ ಮೇಲೊಂದು ಸೊಳ್ಳೆ ಕೂತಿದೆಯೆಂದೂ ಅದನ್ನು ನಾನು ಓಡಿಸಬೇಕೆಂದೂ ಭಾಸವಾಗುತ್ತದೆ. ಮೇಲಿನ ಉಪಮೆಯಲ್ಲಿರುವ ಸರೋವರಕ್ಕೂ ಚಿತ್ತಕ್ಕೂ ಒಂದು ವ್ಯತ್ಯಾಸ ವಿದೆ. ಸರೋವರಕ್ಕೆ ಕಲ್ಲು ಹೊರಗಿಂದ ಬಂದು ಬೀಳುತ್ತದೆ. ಚಿತ್ತಕ್ಕೆ ಹೊರಗಿನಿಂದಲೂ, ಒಳಗಿನಿಂದಲೂ ಬೀಳುತ್ತದೆ. ಈ ಎಲ್ಲದರ ಸಮುದಾಯವೇ ಅಂತಃಕರಣ ಎನ್ನಿಸಿಕೊಳ್ಳುತ್ತದೆ. ಇದರ ಜೊತೆಗೆ ನೀವು ಇನ್ನೊಂದು ವಿಚಾರವನ್ನು ತಿಳಿದುಕೊಂಡರೆ ನಿಮಗೆ ಅದ್ವೈತ ದರ್ಶನವು ಹೆಚ್ಚು ಸುಲಭವಾಗಿ ತಿಳಿಯುತ್ತದೆ. ಅದೇನೆಂದರೆ: ನೀವೆಲ್ಲ ಮುತ್ತುಗಳನ್ನು ನೋಡಿದ್ದೀರಿ. ಅವುಗಳಾಗುವ ರೀತಿಯನ್ನೂ ತಿಳಿದಿರುತ್ತೀರಿ. ಕೆಲವು ಧೂಳಿಯ ಕಣಗಳು ಶುಕ್ತಿಕೆ ಎಂಬ ಸಮುದ್ರ ಪ್ರಾಣಿಯ ಚಿಪ್ಪಿನೊಳಗೆ ಪ್ರವೇಶಿಸುತ್ತವೆ. ಆ ಪ್ರಾಣಿಗೆ ತುರಿಕೆಯಾಗಲು ಅದು ತನ್ನ ದೇಹದಿಂದ ಒಂದು ತೆರನಾದ ದ್ರವವನ್ನು ಸ್ರವಿಸಿ ಅದರಿಂದ ಧೂಳಿನ ಕಣವನ್ನು ಆವರಿಸುತ್ತದೆ. ಹೀಗೆ ಶುಕ್ತಿಕೆಯ ದ್ರವದಿಂದ ಸುತ್ತಲ್ಪಟ್ಟ ಧೂಳಿಯ ಕಣವೇ ಕಾಲಕ್ರಮೇಣ ಮುತ್ತಿನ ರೂಪವನ್ನು ತಾಳುತ್ತದೆ. ಹಾಗೆಯೇ ಈ ಮಹಾವಿಶ್ವವೆಲ್ಲವೂ ನಮ್ಮಿಂದ ತಯಾರಾಗುತ್ತಿರುವ ಒಂದು ಮುತ್ತು. ಬಹಿಃ ಪ್ರಪಂಚದಿಂದ ನಮಗೆ ಲಭಿಸುವುದೆಂದರೆ ಒಂದು ಅಘಾತ ಮಾತ್ರ. ಆ ಅಘಾತದ ಅರಿವುಕೂಡ ನಮ್ಮ ಪ್ರತಿಕ್ರಿಯೆಯಿಂದಲೇ ಲಭಿಸುತ್ತದೆ. ಪ್ರತಿಕ್ರಿಯೆಯಿಂದ ನಮ್ಮ ಮನಸ್ಸಿನ

ಸ್ವಲ್ಪ ಭಾಗವನ್ನೇ ಆಘಾತದ ಮೇಲೆ ಅಧ್ಯಾರೋಪ ಮಾಡುತ್ತೇವೆ. ಇನ್ನೂ ಸ್ವಲ್ಪ ಜ್ಞಾನವುಂಟಾದರೆ ಅದು ಆಘಾತವನ್ನು ನಿಮಿತ್ತ ಮಾತ್ರವನ್ನಾಗಿ ಇಟ್ಟುಕೊಂಡ ನಮ್ಮ ಚಿತ್ತದ ರೂಪವೇ ಎಂದು ಗೊತ್ತಾಗುತ್ತದೆ. ಹೊರಗಿನ ವಾಸ್ತವ ಜಗತ್ತಿನಲ್ಲಿ ನಂಬಿಕೆ ಇರುವವರಿಗೂ ಕೂಡ ಈ ವಿಷಯವು ಸ್ಪಷ್ಟವಾಗುತ್ತದೆ. ಮನಃಶಾಸ್ತ್ರವು ಪ್ರಬಲವಾಗಿರುವ ಈ ಕಾಲದಲ್ಲಿ ಅವರು ಅದನ್ನು ಒಪ್ಪಲೇ ಬೇಕಾಗುತ್ತದೆ. ಹೊರಗಿನ ಜಗತ್ತಿಗೆ 'ಅ' ಎಂಬ ಸಂಕೇತವಿಟ್ಟರೆ ನಮಗೆ ನಿಜವಾಗಿಯೂ ತಿಳಿಯುವುದು ಮನಸ್ ಸಮೇತ 'ಅ'. ಮನಸ್ಸಿನ ಅಂಶವು ಎಷ್ಟಿದೆ ಎಂದರೆ 'ಅ' ಅದರಲ್ಲಿ ಮುಳುಗಿ ಹೋದಂತಿದೆ. 'ಅ' ಮಾತ್ರ ಅಜ್ಞಾತವಾಗಿಯೂ ಅಜ್ಞೇಯವಾಗಿಯೂ ಉಳಿದುಬಿಟ್ಟಿದೆ. ಆದ್ದರಿಂದ ಒಂದು ವೇಳೆ ಹೊರಗಿನ ಜಗತ್ತೊಂದು ಇರುವ ಪಕ್ಷದಲ್ಲಿ ಅದು ಎಂದೆಂದಿಗೂ ಅಜ್ಞಾತ ಅಜ್ಞೇಯವಾದುದು. ನಮ್ಮ ಮನಸ್ಸು ಎರಕಹೊಯ್ದಂತೆ, ರೂಪು ಕೊಟ್ಟಂತೆ, ಅದು ನಮಗೆ ಗೋಚರವಾಗುತ್ತಿದೆ. ಹೀಗೆಯೇ ಒಳಗಿನ ಪ್ರಪಂಚಕ್ಕೂ ಇದೇ ವಾದವು ಅನ್ವಯಿಸುತ್ತದೆ. ನಮ್ಮ ಆತ್ಮಕ್ಕೂ ಇದು ಅನ್ವಯವಾಗುತ್ತದೆ. ಆತ್ಮನನ್ನೂ ಕೂಡ ಮನಸ್ಸಿನ ಮುಖಾಂತರ ತಿಳಿಯಬೇಕು. ಆದ್ದರಿಂದ ನಮಗೆ ಗೊತ್ತಾಗುವುದು ಮನಸ್‌ಸಮೇತವಾದ ಆತ್ಮವೇ ಹೊರತು, ಶುದ್ಧ ಆತ್ಮನಲ್ಲ. ಎಂದರೆ ನಮಗೆ ತಿಳಿಯುವುದು ಮನಸ್ಸಿನ ಉಪಾಧಿಯಿಂದ ಬದ್ಧವಾಗಿರುವ, ಮನಸ್ಸಿನ ಬಣ್ಣಗಳನ್ನು ತಾಳಿರುವ ಮನೋ ಮುದ್ರಿತವಾಗಿರುವ ಆತ್ಮವೇ ಹೊರತು ಬೇರೆಯಲ್ಲ. ಈ ವಿಷಯ ಪ್ರಸ್ತಾಪವು ಮುಂದೆ ಬರುವುದರಿಂದ ಇದನ್ನು ಮರೆಯಬೇಡಿ.

ಇದಾದ ತರುವಾಯ ನಾವರಿಯಬೇಕಾದ ವಿಷಯವೊಂದಿದೆ. ಈ ಶರೀರವು ಜಡತೆಯ ಒಂದು ನಿರಂತರ ಪ್ರವಾಹಕ್ಕೆ ನಾವು ಕೊಟ್ಟಿರುವ ಹೆಸರು. ಪ್ರತಿಯೊಂದು ಕ್ಷಣದಲ್ಲಿಯೂ ಅದಕ್ಕೆ ಜಡಕಣಗಳು ಬಂದು ಸೇರುತ್ತವೆ; ಮತ್ತು ಅದರಿಂದ ಹೊರಟುಹೋಗುತ್ತವೆ. ಅದೊಂದು ಹರಿಯುವ ನದಿಯಂತೆ; ಹೊಸ ನೀರು ಬರುತ್ತಿರುತ್ತದೆ; ಹಳೆಯ ನೀರು ಹೊರಟುಹೋಗುತ್ತಿರುತ್ತದೆ. ನಾವು ಮಾತ್ರ ನಮ್ಮ ಕಲ್ಪನೆಯ ಸಹಾಯದಿಂದ ಅವನ್ನು ನಿರಂತರವೆಂದೂ ಯಾವಾಗಲೂ ಒಂದೇ ನದಿಯೆಂದೂ ಭಾವಿಸುತ್ತೇವೆ. ನಿಜವಾಗಿ ನೋಡಿದರೆ 'ನದಿ' ಎಂಬುದು ಯಾವುದು? ನದಿಯ ನೀರು ಬದಲಾಯಿಸುತ್ತದೆ; ಕ್ಷಣಕ್ಷಣವೂ ನದಿಯ

ದಡವು ಬದಲಾಯಿಸುತ್ತದೆ. ಹಾಗಾದರೆ ನಿಜವಾದ ನದಿ ಯಾವುದು? ನಿಜವಾದ ನದಿ ಎಂದರೆ ಈ ಬದಲಾವಣೆಗಳ ಸಮೂಹ. ಬೌದ್ಧರ ಸಿದ್ಧಾಂತವಾಗಿರುವ 'ಕ್ಷಣಿಕ ವಿಜ್ಞಾನವಾದ' ವೂ ಇದನ್ನೇ ಸಮರ್ಥಿಸುತ್ತದೆ. ಅರಿಯಲು ಕಷ್ಟವಾದರೂ, ವೇದಾಂತದ ಒಂದು ಭಾಗಕ್ಕೆ ವಿರೋಧವಾಗಿ ನಿಂತ ಆ ವಾದವು ಸಂಪೂರ್ಣವಾಗಿ ತರ್ಕ ಬದ್ಧವಾದುದಾಗಿದೆ. ಆಗ ಆ ವಾದವನ್ನು ಖಂಡಿಸಬೇಕಾಯಿತು. ಅದು ಅದ್ವೈತ ವೇದಾಂತದಿಂದ ಮಾತ್ರ ಹೇಗೆ ಖಂಡನ ಸಾಧ್ಯವಾಯಿತು ಎಂಬ ವಿಚಾರವಾಗಿ ವಿಲಕ್ಷಣ ಭಾವಗಳಿವೆ. ಕೆಲವರಿಗಂತೂ ಅದ್ವೈತವೆಂದರೆ ಭೀತಿ. ಆದರೆ ಜಗತ್ಕಲ್ಯಾಣಕ್ಕೆ ಅದ್ವೈತವೇ ಕಾರಣವಾಗುತ್ತದೆ. ಏಕೆಂದರೆ ಸೃಷ್ಟಿ ಸಮಸ್ಯೆಗಳನ್ನು ಅದು ವಿವರಿಸಿದಂತೆ ಇತರ ಯಾವ ಸಿದ್ಧಾಂತವೂ ವಿವರಿಸಲು ಸಮರ್ಥವಾಗದು. ದ್ವೈತವೂ ಮತ್ತು ಅದರ ವಿವಿಧವಾದ ಶಾಖೆಗಳೂ ಭಕ್ತರ ಉಪಾಸನೆಗೆ ಬಹಳ ಸಹಾಯಮಾಡುತ್ತವೆ; ಮನಸ್ಸನ್ನು ಮೇಲೆ ಮೇಲೆ ಕೊಂಡೊಯ್ಯುವುದರಿಂದ ಅದಕ್ಕೆ ತೃಪ್ತಿಕೊಡುತ್ತವೆ. ಆದರೆ ಯಾವನಿಗಾದರೂ ಉಪಾಸನೆಯ ಜೊತೆಗೆ ತತ್ತ್ವವೂ ಬೇಕಾದರೆ ಅಂತಹವನಿಗೆ ಅದ್ವೈತವನ್ನು ಬಿಟ್ಟರೆ ಬೇರೆ ಇಲ್ಲ. ಸದ್ಯಕ್ಕೆ ಈ ವಿಷಯ ಹಾಗಿರಲಿ. ಈಗ ನಾವು ಮನಸ್ಸನ್ನು 'ನೀರು ಬಂದು ಹೋಗುತ್ತಿರುವ ನದಿ' ಎಂದು ತಿಳಿದಿದ್ದೇವೆ. ಹಾಗಾದರೆ ಆತ್ಮವೆಂದು ಕರೆಯಲ್ಪಡುವ ಮೂಲಾಧಾರವಾದ ಐಕ್ಯತತ್ತ್ವವೆಲ್ಲಿದೆ? ವಿಚಾರವೇನೆಂದರೆ, ನಮ್ಮ ದೇಹವು ನಿರಂತರವಾಗಿ ವ್ಯತ್ಯಸ್ತವಾದರೂ, ಮನಸ್ಸೂ ಹಾಗೆಯೇ ಪ್ರತಿಕ್ಷಣವೂ ಬದಲಾಯಿಸಿದರೂ ನಮ್ಮಲ್ಲಿ ಬದಲಾಯಿಸದೇ ಇರುವ ಯಾವುದೋ ಒಂದು ತತ್ತ್ವವಿದೆ. ಬೇರೆ ಬೇರೆ ದಿಕ್ಕುಗಳಿಂದ ಬರುವ ಕಿರಣಗಳು ಯಾವುದಾದರೂ ಒಂದು ಸ್ಥಿರವಾದ ಆಧಾರದಮೇಲೆ–ಪರದೆ, ಗೋಡೆ ಇತ್ಯಾದಿ–ಬಿದ್ದರೆ ತಾನೇ ಬೆಳಕೆಂಬ ಐಕ್ಯಭಾವವು ತೋರುವುದು. ಹಾಗೆಯೇ ನಮ್ಮಲ್ಲಿ ಬಂದು ಹೋಗುವ ವಿವಿಧ ಭಾವಗಳಿಗೆ ಐಕ್ಯತೆಯನ್ನು ಕಲ್ಪಿಸುವ ವಸ್ತುವೆಲ್ಲಿದೆ? ಮನಸ್ಸು ಆ ವಸ್ತುವಾಗಲಾರದು. ಏಕೆಂದರೆ ಮನಸ್ಸೇ ಚಂಚಲವಾದುದು. ಆದ್ದರಿಂದ ದೇಹ ಮನಸ್ಸುಗಳಲ್ಲದ, ಚಂಚಲವಲ್ಲದ, ಅಚಂಚಲವಾದ, ನಮ್ಮ ಭಾವ ಆಲೋಚನೆ, ಅನುಭವಗಳಿಗೆ ಮೂಲ ಪೀಠ ಸ್ವರೂಪವಾಗಿ ಐಕ್ಯಭಾವವನ್ನು ಕೊಡುವ ಒಂದು ತತ್ತ್ವವಿರಬೇಕು. ಅದನ್ನೇ ಆತ್ಮ ಎಂದು ಕರೆಯುತ್ತಾರೆ. ಜಡಪ್ರಕೃ

ತಿಯು ಸ್ಥೂಲವಾಗಿರಲಿ ಸೂಕ್ಷ್ಮವಾಗಿರಲಿ ಬದಲಾವಣೆ ಹೊಂದತಕ್ಕದ್ದು ಎಂದು ನಮಗೆ ಗೊತ್ತಾಗಿದೆ. ಆದಕಾರಣ ಬದಲಾವಣೆ ಹೊಂದದಿರುವ ಆತ್ಮವಸ್ತುವು ಜಡಪ್ರಕೃತಿಯಾಗಿರಲಾರದು; ಅದು ಚೇತನ ಸ್ವರೂಪವಾಗಿರಬೇಕು. ಅದು ಅಚ್ಯುತವಾದುದು; ಅಚಂಚಲವಾದುದು.

ಇದಾದಮೇಲೆ ತಿಳಿಯಬೇಕಾದುದು ಪರಮಾತ್ಮದ ವಿಚಾರವಾದ ಸಿದ್ಧಾಂತ. ಆ ಸಿದ್ಧಾಂತ ಹಳೆಯ ವಾದಗಳಂತೆ ಬಾಹ್ಯಪ್ರಪಂಚದ ರಚನಾ ಚಾತುರ್ಯದ ಮೇಲೆ ನಿಂತಿಲ್ಲ. ನಮ್ಮ ತತ್ತ್ವಾನ್ವೇಷಕರು ಅದನ್ನು ಮನುಷ್ಯನ ಅಂತಃ ಸ್ವಭಾವದ ಆಧಾರದಿಂದ ತಿಳಿಯಲೆಳಸಿದ್ದಾರೆ. ಆತ್ಮ ಜಿಜ್ಞಾಸೆಯು ಹೇಗೆ ಮೂಡಿತೋ ಪರಮಾತ್ಮ ಜಿಜ್ಞಾಸೆಯೂ ಹಾಗೆಯೇ ಮೂಡಿತು. ಪ್ರತಿಯೊಬ್ಬನಲ್ಲಿಯೂ ದೇಹ ಮನಸ್ಸುಗಳಿಂದ ಬೇರೆಯಾಗಿ ಅಚಂಚಲವಾಗಿರುವ ಒಂದೊಂದು ಆತ್ಮವಿದೆ ಎಂದು ಭಾವಿಸಿದರೂ ಆ ಅನೇಕ ಆತ್ಮಗಳಲ್ಲಿ ಪರಸ್ಪರವಾಗಿರುವ ಏಕದೃಷ್ಟಿ ಏಕಭಾವ ಸಹಾನುಭೂತಿಗಳಿಗೆ ಕಾರಣವಾದ ಒಂದು ಐಕತೆಯು ಬೇಕಷ್ಟೆ? ನನ್ನ ಆತ್ಮವು ನಿಮ್ಮ ಆತ್ಮಗಳೊಡನೆ ಸಂಬಂಧ ಬೆಳೆಸುವುದಾದರೂ ಹೇಗೆ? ಬೇರೆ ಬೇರೆಯಾಗಿರುವ ನಮ್ಮ ಕ್ರಿಯಾಕರ್ಮಗಳಿಗೆ ಸಮಾನ ಅಧಿಕರಣವೆಲ್ಲಿದೆ? ನಿಮ್ಮ ಆತ್ಮದ ವಿಚಾರವಾಗಿ ನಾನು ಏನನ್ನೇ ಆಗಲಿ ಹೇಗೆ ತಿಳಿಯಬಲ್ಲೆ? ನಿಮ್ಮ ನನ್ನ ಆತ್ಮಗಳಿಗೆ ಮಧ್ಯಸ್ಥವಾಗಿ ಸಂಬಂಧ ಕಲ್ಪಿಸಿರುವ ವಸ್ತು ವಾವುದು? ಈ ಪ್ರಶ್ನೆಗಳಿಗೆ ಉತ್ತರವಾಗಿ ಮತ್ತೊಂದು ಆತ್ಮವನ್ನು ನಾವು ಒಪ್ಪಲೇಬೇಕು. ಹಾಗೆ ಒಪ್ಪುವುದರಲ್ಲಿ ಆಧ್ಯಾತ್ಮಿಕ ಆವಶ್ಯಕತೆ ಇದೆ. ಆ ಆತ್ಮವು ಬೇರೆ ಎಲ್ಲ ಆತ್ಮಗಳನ್ನೂ ಸಂಬಂಧಿಸುವ ಆತ್ಮವಾಗಿರಬೇಕು. ಇತರ ಎಲ್ಲ ಆತ್ಮಗಳಲ್ಲಿಯೂ ಅಂತರ್ಯಾಮಿಯಾಗಿರಬೇಕು. ಅದು ಎಲ್ಲ ಆತ್ಮಗಳ ಜೀವನ ಸ್ವರೂಪವಾಗಿರಬೇಕು. ಅದರ ಸಹಾಯದಿಂದಲೇ ಇತರ ಎಲ್ಲ ಆತ್ಮಗಳೂ ಪರಸ್ಪರ ಸಹಾನುಭೂತಿಯಿಂದ ಬದುಕಿ ಬಾಳಿ ಕೆಲಸ ಮಾಡಬೇಕು. ಈ ಆತ್ಮಗಳ ಆತ್ಮವೇ, ಈ ವಿಶ್ವಾತ್ಮವೇ, ಜಗದೀಶ್ವರನಾದ ಪರಮಾತ . ಇತರ ಆತ್ಮಗಳಂತೆ ಇದೂ ಜಡವಾಗಿರದೆ ಚಿನ್ಮಯವಾಗಿರಬೇಕು. ಅದು ಜಡಪ್ರಕೃತಿ ನಿಯಮಗಳಿಗೆ ವಿಧೇಯವಾಗಿರಲಾರದು. ಪ್ರಕೃತಿ ನಿಯಮಗಳ ತೀರ್ಪಿಗೆ ಅದು ಒಳಗಾಗಲೂ ಆಗದು. ಆದುದರಿಂದ ಅದು ಅಮೃತವೂ ಅಚಲವೂ ಆಗಿರುತ್ತದೆ. "ನೈನಂ ಛಿಂದಂತಿ ಶಸ್ತ್ರಾಣಿ" ( ಅದನ್ನು ಬೆಂಕಿ ದಹಿಸದು, ಕೈದು ಚುಚ್ಚದು, ಕತ್ತಿ ಕತ್ತರಿ

ಸದು, ಗಾಳಿ ಒಣಗಿಸದು, ನೀರು ತೋಯಿಸದು, ಸ್ಥಾಣವೂ ಅಮರವೂ ಆದ ಆತ್ಮವದು). ಗೀತೆಯೂ ವೇದಾಂತವೂ ಈ ಜೀವಾತ್ಮವನ್ನು ವಿಭು ಅಥವಾ ಸರ್ವವ್ಯಾಪಿ ಎಂದು ಹೇಳುತ್ತಿವೆ. ಭರತಖಂಡದಲ್ಲಿ ಆತ್ಮವನ್ನು ಅಣು ಎಂದು ಹೇಳುವ ಪಂಥಗಳೂ ಇವೆ. ಆದರೆ ಅವುಗಳ ಹೇಳಿಕೆಯ ನಿಜವಾದ ಅರ್ಥ, ಆತ್ಮ ತೋರಿಕೆಗೆ ಅಣು ತತ್ತ್ವತಃ ವಿಭು; ಎಂದು.

ಮತ್ತೊಂದು ವಿಷಯ; ಅದು ಆಶ್ಚರ್ಯಕರವಾಗಿ ಕಂಡು ಬಂದರೂ ಸಂಪೂರ್ಣವಾಗಿ ಭಾರತೀಯವಾಗಿದೆ. ಅದು ಎಲ್ಲ ಪಂಗಡಗಳಿಗೂ ಸಮಾನವಾದ ಭಾವ. ಆದ್ದರಿಂದ ದಯವಿಟ್ಟು ನೀವೆಲ್ಲರೂ ಈ ವಿಷಯ ವನ್ನು ಗಮನವಿಟ್ಟು ಕೇಳಿ ಮನಸ್ಸಿನಲ್ಲಿಡಬೇಕೆಂದು ಪ್ರಾರ್ಥಿಸುತ್ತೇನೆ. ಏಕೆಂದರೆ ನಮ್ಮ ತತ್ತ್ವ ಮಂದಿರಗಳಿಗೆಲ್ಲ ಅದು ತಳಪಾಯವಾಗಿದೆ. ಅದೇನೆಂದರೆ:— ಪ್ರಕೃತಿ ಪ್ರಪಂಚದಲ್ಲಿ ಪಾಶ್ಚಾತ್ಯರು ಕಂಡುಹಿಡಿದಿರುವ 'ವಿಕಾಸವಾದ' ದ ವಿಚಾರವನ್ನು ನೀವೆಲ್ಲ ಕೇಳಿದ್ದೀರಿ. ಅದು ಬೇರೆ ಬೇರೆ ಪ್ರಾಣಿಗಳ ದೇಹಗಳೆಲ್ಲವೂ ಮೂಲತಃ ಒಂದೇ ಸ್ವಭಾವದವು ಎಂದು ಹೇಳುತ್ತದೆ. ನಮಗೆ ಕಂಡು ಬರುವ ವ್ಯತ್ಯಾಸಗಳು ಒಂದೇ ಮೂಲ ದೇಹ ಅಥವಾ ಪಿಂಡಾಣು (protoplasm) ಬೇರೆ ಬೇರೆ ಅವಕಾಶ ಸನ್ನಿವೇಶಗಳಲ್ಲಿ ಧರಿಸುವ ವೇಷಮಾತ್ರಗಳಾಗಿವೆ. ಅತಿ ಕ್ಷುದ್ರವಾದ ಕ್ರಿಮಿಯಿಂದ ಪ್ರಾರಂಭವಾಗಿ ಮಹಾಮಹಿಮನಾದ ಮಹರ್ಷಿಯವರೆ ವಿಗೂ ಒಂದೇ ದೇಹ ಒಂದು ಸ್ಥಿತಿಯಿಂದ ಮತ್ತೊಂದು ಸ್ಥಿತಿಗೇರಿ, ಕೀಳ್ಮೆಯಿಂದ ಮೇಲ್ಮೆಗೇರಿ, ಕಟ್ಟಕಡೆಗೆ ಅಂತ್ಯದ ಮಹೋನ್ನತಾವಸ್ಥೆಗೆ ಹೋಗುತ್ತದೆ. ನಮ್ಮ ತತ್ತ್ವಶಾಸ್ತ್ರಗಳಲ್ಲಿಯೂ ಅದೇ 'ವಿಕಾಸ' ಸಿದ್ಧಾಂತವಿದೆ. ಪತಂಜಲಿ ಯೋಗಿಗಳು ಹೀಗೆ ಹೇಳುತ್ತಾರೆ:— "ಜಾತ್ಯಾಂತರ ಪರಿಣಾಮಃ ಪ್ರಕೃತ್ಯಾ ಪೂರಾತ್." ಒಂದು ಜಾತಿಯೆ ಮತ್ತೊಂದು ಜಾತಿಯಾಗುತ್ತದೆ. ಆದರೆ ಅದು ಆಗುವುದು ಹೇಗೆ? ಈ ವಿಷಯದಲ್ಲಿ ನಮಗೂ ಪಾಶ್ಚಾತ್ಯರಿಗೂ ಭಿನ್ನಾಭಿಪ್ರಾಯವಿರುತ್ತದೆ. ನಾವು 'ಪ್ರಕೃತ್ಯಾಪೂರಾತ್' ಪ್ರಕೃತಿಯ ಆಪೂರಣದಿಂದ ಆಗುತ್ತದೆ ಎಂದು ಹೇಳುತ್ತೇವೆ. ಎಂದರೆ ಪ್ರಕೃತಿಯ 'ಒಳತುಂಬುವಿಕೆ' ಯಿಂದ ಎಂದು ಅರ್ಥ ವಾಗುತ್ತದೆ. ಪಾಶ್ಚಾತ್ಯ ವಿದ್ವಾಂಸರ ಪ್ರಕಾರ ಒಂದು ರೂಪ ಮತ್ತೊಂದಾ ಗುವುದಕ್ಕೆ ಸ್ಪರ್ಧೆ, ನೈಸರ್ಗಿಕ ಮತ್ತು ಯೌನ ನಿರ್ವಾಚನ ಇತ್ಯಾದಿಗಳು (Natural and sexual selection) ಕಾರಣವಾಗುತ್ತವೆ. ಆದರೆ

“ಒಂದು ರೂಪು ಮತ್ತೊಂದು ರೂಪಧಾರಣೆ ಮಾಡುವುದಕ್ಕೆ ಪ್ರಕೃತಿಯ ಆಪೂರಣವೇ ಕಾರಣವಾಗುತ್ತದೆ” ಎಂಬ ಸಿದ್ಧಾಂತವು ಇನ್ನೂ ಹೆಚ್ಚು ವಿಚಾರಪೂರ್ವಕವಾಗಿವೆ. ‘ಪ್ರಕೃತಿಯ ಆಪೂರಣ’ ಎಂದರೆ ಅರ್ಥವೇನು? ‘ಅಮೀಬ’ವೇ (amoeba) ಕ್ರಮೇಣ ಉತ್ತಮ ಸ್ಥಿತಿಗೇರಿ, ಕಡೆಗೆ ಬುದ್ಧನ ಸ್ಥಿತಿಗೂ ಬರುತ್ತದೆ ಎಂಬುದನ್ನು ನಾವು ಒಪ್ಪುತ್ತೇವೆ. ಆದರೆ ಒಂದು ಯಂತ್ರದಿಂದ ನಮಗೆ ಎಷ್ಟು ಕೆಲಸಬೇಕೋ ಅಷ್ಟು ಶಕ್ತಿಯನ್ನು ಇನ್ನೊಂದು ರೂಪದಿಂದ ಆ ಯಂತ್ರಕ್ಕೆ ನಾವು ಕೊಡಲೇಬೇಕು ಎಂಬುದನ್ನು ಒಪ್ಪಲೇ ಬೇಕು. ಶಕ್ತಿ ಯಾವ ರೂಪ ಧಾರಣೆ ಮಾಡಿದರೂ ಒಟ್ಟಿನಲ್ಲಿ ಅದು ಹೆಚ್ಚು ಕಡಿಮೆ ಆಗುವುದಿಲ್ಲ. ಒಂದು ರೂಪದಲ್ಲಿ ಶಕ್ತಿ ಬೇಕಾದರೆ ಮತ್ತೊಂದು ರೂಪದಿಂದ ಅದನ್ನು ತುಂಬಲೇಬೇಕು. ರೂಪ ಬದಲಾವಣೆ ಆಗುತ್ತದೆಯೇ ಹೊರತೂ ಪ್ರಮಾಣ ಬದಲಾವಣೆಯಾಗುವುದಿಲ್ಲ. ‘ಬುದ್ಧ’ನು ‘ವಿಕಸನ’ದ ಸರಪಣಿಯ ಒಂದು ಕೊಂಡಿಯಾದರೆ ‘ಅಮೀಬ’ವು ಕೂಡ ಬುದ್ಧನಾಗಿರಲೇಬೇಕು. (ಅವ್ಯಕ್ತರೀತ್ಯಾ) ‘ಬುದ್ಧ’ನು ವ್ಯಕ್ತವಾದ ‘ಅಮೀಬ’ವಾದರೆ ‘ಅಮೀಬ’ವು ಅವ್ಯಕ್ತವಾದ ‘ಬುದ್ಧನಾಗಿರಬೇಕು. ಈ ಜಗತ್ತು ಅನಂತ ಶಕ್ತಿಯ ವ್ಯಕ್ತರೂಪವಾದ ಪಕ್ಷದಲ್ಲಿ ಪ್ರಲಯ ಸ್ಥಿತಿಯಲ್ಲಿಯೂ ಆ ಶಕ್ತಿಯು ಅವ್ಯಕ್ತವಾಗಿರಲೇಬೇಕು. ಹಾಗೆಂದಮೇಲೆ ಪ್ರತಿಯೊಂದು ಆತ್ಮವೂ ಅನಂತವಾದುದು ಎಂದು ಸಿದ್ಧಾಂತವಾಗುತ್ತದೆ. ನಮ್ಮ ಪದತಲದಲ್ಲಿ ಹೋರಾಡುವ ಕ್ಷುದ್ರತಮ ಕ್ರಿಮಿಯಿಂದ ಹಿಡಿದು ಪವಿತ್ರತಮನಾದ ಮಹರ್ಷಿಯವರೆಗೂ ಎಲ್ಲರ ಆತ್ಮಗಳಲ್ಲಿಯೂ ಅನಂತ ಶಕ್ತಿಯೂ ಅನಂತ ಶುದ್ಧಿಯೂ ಅಡಗಿವೆ. ಅವುಗಳಲ್ಲಿರುವ ಭೇದವು ತರತಮವಲ್ಲದೆ ಕೇವಲವಲ್ಲ. ಕ್ರಿಮಿಯು ಅನಂತ ಶಕ್ತಿಯಲ್ಲಿ ಕೆಲಮಾತ್ರವನ್ನು ವ್ಯಕ್ತಗೊಳಿಸಿದೆ. ಮನುಷ್ಯನು ಸ್ವಲ್ಪ ಹೆಚ್ಚಾಗಿ ವ್ಯಕ್ತಗೊಳಿಸಿದ್ದಾನೆ; ಮಹರ್ಷಿಗಳೂ ಅವತಾರಪುರುಷರೂ ಇನ್ನಷ್ಟು ಹೆಚ್ಚಾಗಿ ವ್ಯಕ್ತಗೊಳಿಸುತ್ತಾರೆ. ಇಷ್ಟೇ ವ್ಯತ್ಯಾಸ. ಆದರೆ ಶಕ್ತಿಯೆಲ್ಲಾ ಒಂದೇ. “ತತಃ ಕ್ಷೇತ್ರಿಕವತ್ “ಒಕ್ಕಲಿಗನು ಗದ್ದೆ ಬೇಸಾಯ ಮಾಡಿದಂತೆ”. ತನ್ನ ಗದ್ದೆಗೆ ಕೆರೆಯ ಸಂಬಂಧವಿರುವ ಒಕ್ಕಲಿಗನು ಕೆರೆಯ ತೂಬನ್ನು ತೆರೆದರಾಯಿತು. ನೀರು ಬೇಕಾದಹಾಗೆ ಬರುತ್ತದೆ. ಅವನು ತೂಬು ತೆರೆದನೆಂದರೆ ನೀರು ತನ್ನಷ್ಟಕ್ಕೆ ತಾನೆ ತನ್ನ ಶಕ್ತಿಯಿಂದಲೇ ನುಗ್ಗಿ

ಬರುತ್ತದೆ. ನೀರಿಗೆ ಹರಿಯುವ ಶಕ್ತಿಯನ್ನು ಒಕ್ಕಲಿಗ ಕೊಡುವುದು ಬೇಡ; ಕೆರೆಯಲ್ಲಿ ನಿಂತ ನೀರಿಗೆ ಆ ಶಕ್ತಿಯಿದೆ. ಅಂತೆಯೇ ನಮ್ಮಲ್ಲಿ ಪ್ರತಿಯೊಬ್ಬರ ಹಿನ್ನೆಲೆಯಲ್ಲಿಯೂ ಅನಂತ ಶಕ್ತಿ ಸೌಂದರ್ಯ ಶುದ್ಧಿ ಆನಂದ ಗಳ ಮಹಾಗಾರವಿದೆ. ಆದರೆ ಇಂದ್ರಿಯ ಶರೀರಗಳೆಂಬ ಬೀಗ ಬಾಗಿಲು ಗಳು ಆ ಪ್ರವಾಹವನ್ನು ಸಂಪೂರ್ಣವಾಗಿ ಬರದಂತೆ ತಡೆಗಟ್ಟಿವೆ. ನಮ್ಮ ನೈಜಸ್ವರೂಪವನ್ನು ವ್ಯಕ್ತಗೊಳಿಸದಂತೆ ಮಾಡಿರುವುವು ಈ ದೇಹಗಳು. ಆದ್ದರಿಂದ ಈ ದೇಹಗಳು ಸೂಕ್ಷ್ಮತರವಾದಂತೆಲ್ಲಾ ತಮೋಗುಣವು ರಜೋಗುಣವಾಗಿ, ರಜೋಗುಣವು ಸತ್ತ್ವಗುಣವಾದಂತೆಲ್ಲಾ ಆ ಶಕ್ತಿ ಸೌಂದರ್ಯಗಳು ಹೆಚ್ಚು ಹೆಚ್ಚಾಗಿ ವ್ಯಕ್ತವಾಗುತ್ತವೆ.

ನಮ್ಮಲ್ಲಿರುವ ಕೀಳುವಾಸನೆಗಳನ್ನು ಮೇಲುವಾಸನೆಗಳನ್ನಾಗಿ ಮಾರ್ಪಡಿಸಬಹುದೆಂಬ ತತ್ತ್ವಾನುಸಾರವಾಗಿಯೇ ನಮ್ಮವರು ಆಹಾರ ವಿಷಯದಲ್ಲಿ ಹೆಚ್ಚು ಕಟ್ಟುಪಾಡುಗಳನ್ನು ಮಾಡಿದರು. ಆ ಮೂಲಾಭಿ ಪ್ರಾಯಗಳಿಂದು ಮರೆತುಹೋಗಿರಬಹುದು. ವಿವಾಹದ ವಿಚಾರದಲ್ಲಿಯೂ ಹಾಗೆಯೇ ಆಗಿದೆ. ಹಿಂದೂ ಜನಾಂಗದ ಬಾಲ್ಯವಿವಾಹ ಪದ್ಧತಿಯ ಹಿಂದಿರುವ ತತ್ತ್ವಗಳ ಆಧಾರದ ಮೇಲೆಯೇ ನಿಜವಾದ ನಾಗರಿಕತೆಯು ನಿಲ್ಲಬಹುದು. ಒಬ್ಬ ಸ್ತ್ರೀಯನ್ನಾಗಲೀ ಪುರುಷನನ್ನಾಗಲೀ ಅವರವರ ಮನಸ್ಸಿಗೆ ಬಂದ ಸ್ತ್ರೀಯನ್ನಾಗಲೀ ಪುರುಷನನ್ನಾಗಲೀ ವರಿಸಲು ಬಿಟ್ಟರೆ ವೈಯಕ್ತಿಕ ಸುಖವೇ, ಮೃಗೀಯ ತೃಷ್ಣೆಗಳ ತೃಪ್ತಿಯೇ ವಿವಾಹದ ಗುರಿ ಯಾದರೆ, ಸಮಾಜಕ್ಕೆ ಕೇಡು ತಪ್ಪದು. ಅಂತಹ ವಿವಾಹದಿಂದ ದುಷ್ಟರೂ ನೀಚರೂ ಆದ ಮಕ್ಕಳೇ ಹುಟ್ಟುತ್ತಾರೆ. ಹೌದು, ಪ್ರತಿ ಯೊಂದು ದೇಶದಲ್ಲಿಯೂ ಮನುಷ್ಯರು ಒಂದುಕಡೆ ದುಷ್ಟಮಕ್ಕಳನ್ನು ಹುಟ್ಟಿಸುತ್ತಿದ್ದಾರೆ; ಇನ್ನೊಂದುಕಡೆ ಆ ಮೃಗಸದೃಶರಾದ ಸಂತಾನರನ್ನು ಹತೋಟಿಯಲ್ಲಿಡುವುದಕ್ಕೆ ಪೋಲೀಸು ಪಡೆಯನ್ನು ಹೆಚ್ಚಿಸುತ್ತಿದ್ದಾರೆ. ಸಂಭವಿಸಿದ ಕೇಡನ್ನು ಪರಿಹರಿಸಿಕೊಳ್ಳುವುದು ಮಾತ್ರವೇ ನಮ್ಮ ಕೆಲಸ ವಲ್ಲ. ಕೇಡು ಸಂಭವಿಸಿದಂತೆ ನೋಡಿಕೊಳ್ಳುವುದೂ ನಮ್ಮ ಕರ್ತವ್ಯ. ಒಬ್ಬನು ಸಮಾಜದಲ್ಲಿರುವ ತನಕ ಆತನ ವಿವಾಹದಿಂದ ಇತರರಿಗೆ ಕೇಡಾ ಗಲಿ ಲೇಸಾಗಲಿ ಸಂಭವಿಸಿಯೇ ತೀರುತ್ತದೆ. ಆದ್ದರಿಂದ ಆ ವ್ಯಕ್ತಿಯು ಯಾರನ್ನು ವಿವಾಹವಾಗಬೇಕು? ಯಾರನ್ನು ಬಿಡಬೇಕು? ಎಂದು ನಿರ್ಣಯಿಸುವ ಹಕ್ಕು ಸಮಾಜಕ್ಕೆ ಇರುತ್ತದೆ. ಇದಕ್ಕಾಗಿಯೇ ಅವರು

ವಧೂವರರ ಜಾತಿ ಜಾತಕಗಳನ್ನು ನೋಡುತ್ತಾರೆ. ಇನ್ನೊಂದು ವಿಷಯ ವನ್ನು ನಿಮಗೆ ತಿಳಿಸುತ್ತೇನೆ. ಕಾಮಮಾತ್ರದಿಂದ ಸಂಭವಿಸಿದ ಶಿಶು ಎಂದಿಗೂ ಆರ್ಯನಲ್ಲ ಎಂಬುದು ಮನುವಿನ ವಚನ. ಯಾವ ಶಿಶುವಿನ ಜನನವೂ ಮರಣವೂ ಕೂಡ ಆಗಮರೀತಿಯಲ್ಲಿ ನಡೆದಿರುತ್ತದೆಯೋ ಆ ಶಿಶುವು ಮಾತ್ರ ಆರ್ಯನು ಎಂದೆನಿಸಿಕೊಳ್ಳಲು ಅರ್ಹವಾಗುತ್ತದೆ. ಹೌದು; ಈಗಲಾದರೋ ಎಲ್ಲೆಲ್ಲಿಯೂ ಅನಾರ್ಯ ಶಿಶುಗಳೇ ಹುಟ್ಟುತ್ತಿರು ವುದರಿಂದ ಕಲಿಯುಗವೆಂದು ಕರೆಯಿಸಿಕೊಳ್ಳುವ ಕೇಡುಗಾಲ ಪ್ರಾರಂಭ ವಾಗಿದೆ. ನಮ್ಮ ಸಾಮಾಜಿಕ ಸಂಸ್ಥೆಗಳಿಗೆ ಆಧಾರವಾಗಿದ್ದ ಆ ಉನ್ನತ ಭಾವಗಳು ಇಂದು ನಶಿಸಿಹೋಗಿವೆ. ನಿಜ; ಆ ಮಹಾತತ್ತ್ವಗಳೆಲ್ಲ ವನ್ನೂ ನಾವಿಂದು ಆಚರಿಸಲು ಅಶಕ್ತರಾಗಿದ್ದೇವೆ. ಆಚರಿಸುವವುಗಳನ್ನೂ ನಾವು ವಿಕಾರವಮಾಡಿರುತ್ತೇವೆ. ನಿಶ್ಚಯ; ಈಗಿನ ಮಾತಾಪಿತೃಗಳು ಆಗಿನವರಂತಲ್ಲ. ಈಗಿನ ಸಮಾಜ ಆಗಿನ ವಿದ್ಯಾಭ್ಯಾಸ ಪದ್ಧತಿಯನ್ನು ಅನುಸರಿಸುತ್ತಿಲ್ಲ. ಈಗಿನ ಸಮಾಜಕ್ಕೆ ಆಗಿನದಕ್ಕಿದ್ದಂತೆ ಕೆಲವು ವಿಚಾರ ಗಳಲ್ಲಿ ಎಚ್ಚರಿಕೆಯೂ ಇಲ್ಲ, ಆದರವೂ ಇಲ್ಲ. ಆದರೂ ಅವುಗಳನ್ನು ಕಾರ್ಯತಃ ಉಪಯೋಗಿಸುವುದರಲ್ಲಿ ನಾವೆಷ್ಟು ತಪ್ಪಿದರೂ ಆಗಿನ ಸಮಾಜತತ್ತ್ವಗಳು ಮಹತ್ತಾದುವು. ಅವುಗಳ ಉಪಯೋಗದಲ್ಲಿ ನಾವು ತಪ್ಪುಹಾದಿ ಹಿಡಿದಿದ್ದರೆ ತಿದ್ದಿಕೊಳ್ಳುವುದು ನಮ್ಮ ಕೆಲಸವೇ ಹೊರತು ತತ್ತ್ವವನ್ನೇ ಮೂಲೆಗೆಸೆಯುವುದು ಶ್ರೇಯಸ್ಕರವಲ್ಲ. ವಿವಾಹದ ವಿಚಾರ ವಾಗಿ ನಾನಾಡಿದ ಮಾತುಗಳೆಲ್ಲವೂ ಆಹಾರಕ್ಕೂ ಸಲ್ಲುತ್ತದೆ. ನಿಯಮ ಗಳನ್ನು ಪ್ರಯೋಗಿಸುವಾಗ ಅಲ್ಲಲ್ಲಿ ಸಣ್ಣ ಸಣ್ಣ ವಿಷಯಗಳಲ್ಲಿ ತಪ್ಪಿ ಹೋಗಿದ್ದೇವೆ: ನಿಜವಾಗಿಯೂ ಬಹಳ ತಪ್ಪಿಹೋಗಿದ್ದೇವೆ. ಆದರೆ ಅದಕ್ಕೆ ತತ್ತ್ವವು ದೋಷಿಯಲ್ಲ. ಅದು ನಿತ್ಯವಾದುದು. ಅದನ್ನು ಹೊಸತು ಮಾಡಿ ಮತ್ತೆ ಉಪಯೋಗಿಸಬೇಕಾದುದು ನಮ್ಮ ಕರ್ತವ್ಯ.

'ಆತ್ಮ' ಎಂಬುವ ಈ ಮಹಾ ಭಾವನೆಯನ್ನು ನಮ್ಮ ದೇಶದ ಎಲ್ಲಾ ಪಂಗಡದವರೂ ನಂಬಲೇಬೇಕು. ದ್ವೈತಿಗಳು ಮಾತ್ರವೇ, "ಈ 'ಆತ್ಮ'ವು ಪಾಪಕಾರ್ಯಗಳಿಂದ ಸಂಕುಚಿತವಾಗುತ್ತದೆ, ಎಂದರೆ, ಅದರ ಶಕ್ತಿ ಸ್ವಭಾವಗಳು ಹೀನವಾಗುತ್ತವೆ; ಅದರೆ ಪುಣ್ಯಕಾರ್ಯದಿಂದ ಮತ್ತೆ 'ಆತ್ಮ'ಕ್ಕೆ ಮೊದಲಿನ ಸ್ಥಿತಿಯು ಲಭಿಸುತ್ತದೆ" ಎಂದು ಹೇಳುತ್ತಾರೆ. ಆದ್ವೈತಿಗಳಾದರೋ, "ಆತ್ಮಕ್ಕೆ ಸಂಕೋಚ ವಿಕಾಸಗಳಿಲ್ಲ. ಆದರೆ

ಹಾಗಾಗುವಂತೆ ತೋರುತ್ತದೆ" ಎಂದು ಹೇಳುತ್ತಾರೆ. ಅಷ್ಟೇ ವ್ಯತ್ಯಾಸ. ಅಂತೂ ಆತ್ಮವು ಸಕಲ ಶಕ್ತಿಗಳನ್ನೂ ತನ್ನಲ್ಲಿಯೇ ಒಳಗೊಂಡಿದೆ; ಆಕಾಶದಿಂದೇನೂ ಅದಕ್ಕೆ ಇಳಿದು ಬರುವುದಿಲ್ಲ ಎಂಬುವನ್ನು ಎಲ್ಲರೂ ಒಪ್ಪುತ್ತಾರೆ. ಹೆಚ್ಚೇನು? ವೇದಗಳು ಕೂಡ ಹೊರಗಿನಿಂದ ಬರುವುದಿಲ್ಲ. ಆತ್ಮದಿಂದಲೇ ಪ್ರಕಾಶವಾದುವು. ಅವು ಆತ್ಮದ ನಿತ್ಯ ನಿಯಮಗಳು. ಇರುವೆಯ ಆತ್ಮದಲ್ಲಿ ಹೇಗೋ ಹಾಗೆಯೇ ದೇವತೆಯ ಆತ್ಮದಲ್ಲಿಯೂ ವೇದದ ತತ್ತ್ವಗಳ ಪ್ರಕಾರವೇ ಕೆಲಸ ನಡೆಯುತ್ತದೆ. ಇರುವೆಯು ವಿಕಾಸವಾಗಿ ಋಷಿಯದೇಹವನ್ನು ಪಡೆಯುವುದೇ ತಡ, ಸನಾತನ ಧರ್ಮಗಳ ಪ್ರಕಾರ ಅನಂತ ಶಕ್ತಿ ಶುದ್ಧಿ ಸೌಂದರ್ಯಗಳು ಅದರಿಂದ ಅಭಿವ್ಯಕ್ತವಾಗುತ್ತದೆ. ಅದು ನಾವು ತಿಳಿದುಕೊಳ್ಳಲೇ ಬೇಕಾಗಿರುವ ಒಂದು ಮಹತ್ತಾದ ವಿಷಯ. ಅನಂತ ಶಕ್ತಿ ನಮ್ಮಲ್ಲಿ ಈಗಾಗಲೇ ಇದೆ; ಮುಕ್ತಿ ನಮ್ಮೊಳಗೇ ಪವಡಿಸಿದೆ. ನೀವು, ಆತ್ಮ ಪಾಪದಿಂದ ಸಂಕುಚಿತವಾಗುತ್ತದೆ ಎಂದು ಹೇಳಿ ಅಥವಾ ಆತ್ಮ ಮಾಯೆಯಿಂದ ಸಂಕುಚಿತವಾದಂತೆ ತೋರುತ್ತದೆ ಎಂದು ಹೇಳಿ—ಅದರಿಂದ ಯಾವ ಭಾದೆಯೂ ಇಲ್ಲ. ಆತ್ಮ ಸಂಪೂರ್ಣವಾದುದು ಸಿದ್ಧವಾದುದು ಎಂಬ ತತ್ತ್ವವೇನೋ ಅಲ್ಲಿದೆ. ಆತ್ಮದ ಪೂರ್ಣತೆಯಲ್ಲಿ ನಿಮಗೆ ಶ್ರದ್ಧೆಯಿರಲೇ ಬೇಕು. ಪ್ರತಿಯೊಬ್ಬನೂ ಪೂರ್ಣನಾಗುತ್ತಾನೆ, ಮುಕ್ತನಾಗುತ್ತಾನೆ, ಎಂದು ನೀವು ನಂಬಲೇಬೇಕು. ಅತ್ಯಂತ ಹೀನ ಮನುಷ್ಯನಿಗೂ ಬುದ್ಧನಾಗಲು ಅವಕಾಶವಿದೆ. ಇದೇ ಆತ್ಮದ ಸಿದ್ಧಾಂತ.

ಈ ಆತ್ಮ ಸಿದ್ಧಾಂತಕ್ಕೆ ಮಹಾ ವಿರೋಧವಾದ ಒಂದು ವಾದವು ನಮ್ಮ ಮುಂದಿದೆ. ಬೌದ್ಧಕ್ಷಣಿಕವಾದಿಗಳು ಹೀಗೆ ಹೇಳುತ್ತಾರೆ: ದೇಹದಂತೆಯೇ ಮನಸ್ಸೂ ಒಂದು ಜಡತೆಯ ತರಂಗಿಣಿ. ಆತ್ಮವಿದೆ ಎಂಬ ನಂಬುಗೆಯು ಅನಾವಶ್ಯಕ. ಆತ್ಮ ಸಿದ್ದಾಂತ ನಮಗೆ ಬೇಡವೇ ಬೇಡ. ಗುಣಗಳೇ ನಮ್ಮ ಕೆಲಸಕ್ಕೆ ಸಾಕಾಗಿರುವಾಗ ಗುಣಗಳಿರುವ ನಿತ್ಯ ವಸ್ತುವೊಂದನ್ನು (ಗುಣಿಯನ್ನು) ನಾವೇಕೆ ನಿರ್ಮಿಸಬೇಕು? ಒಂದೇ ಕಾರಣವು ಸಮಗ್ರ ವಿವರಣೆಗೂ ಸಾಕಾಗುವ ಪಕ್ಷದಲ್ಲಿ ಎರಡು ಕಾರಣಗಳನ್ನು ಊಹಿಸುವುದು ತರ್ಕದೋಷ. ಈ ಬೌದ್ಧರ ವಾದದಿಂದ ಆತ್ಮವನ್ನು ಒಪ್ಪಿದ್ದ ಸಿದ್ಧಾಂತಗಳೆಲ್ಲವೂ ನೆಲಕ್ಕುರುಳಿದುವು. ಯಾವ ಯಾವ ದರ್ಶನಗಳು 'ಗುಣ' 'ಗುಣಿ'ಗಳನ್ನು ಒಪ್ಪಿದ್ದುವೋ ಪ್ರತಿಯೊಬ್ಬನಲ್ಲಿಯೂ

ಮನಸ್ಸು ದೇಹಗಳಿಂದ ಪ್ರತ್ಯೇಕವಾದ ಆತ್ಮವಿದೆ ಎಂದೂ, ಆ ಒಂದೊಂದು ಆತ್ಮವೂ ಸಂಪೂರ್ಣವಾಗಿ ವಿಶಿಷ್ಟವಾದುದೆಂದೂ ನಂಬಿದ್ದುವೋ ಆ ದರ್ಶನಗಳೆಲ್ಲ ಬಿರುಕು ಬಿಟ್ಟುವು. ಶರೀರ, ಅದರ ಹಿಂದೆ ಸೂಕ್ಷ್ಮಶರೀರ ಅದರ ಹಿಂದೆ ಆತ್ಮ ಅದರ ಹಿಂದೆ ಪರಮಾತ್ಮನಿದ್ದಾನೆ ಎಂಬ ವಿಶಿಷ್ಟಾದ್ವೈತ ಸಿದ್ಧಾಂತವು ಅದುವರೆಗೆ ವಾಡಿಕೆಯಲ್ಲಿತ್ತು. ಆತ್ಮ ಪರಮಾತ್ಮರು ಗುಣಿಗಳು; ಮನಸ್ಸು ಶರೀರ ಇತ್ಯಾದಿಗಳೆಲ್ಲ ಅವುಗಳನ್ನು ಅವಲಂಬಿಸಿರುವ ಗುಣಗಳು. ಬೌದ್ಧರ ಪ್ರತಿವಾದವಿದು : ಆ 'ಗುಣಿ'ಗಳನ್ನು ಯಾರೂ ಕಂಡಿಲ್ಲ. ಅವುಗಳು ಎಂತಿವೆ ಎಂಬುದೂ ಚಿಂತೆಗೆ ಅತೀಕವಾಗಿದೆ. ಹೀಗಿರುವಾಗ ಅಂತಹ ಆತ್ಮ ವಸ್ತುವಿದೆ ಎಂದು ಊಹಿಸುವುದರಿಂದ ಪ್ರಯೋಜನವೇನು? ಆದ್ದರಿಂದ ಏಕೆ ಕ್ಷಣಿಕವಾದಿಗಳಾಗಿ ಇರುವುದೆಲ್ಲ ಚಿತ್ತವೃತ್ತಿಗಳ ಪ್ರವಾಹ, ಅದಲ್ಲದೆ ಮತ್ತೊಂದಿಲ್ಲ ಅವುಗಳಿಗೆ ಏಕತೆಯಿಲ್ಲ; ಕಡಲ ತೆರೆಗಳಂತೆ ಆವುಗಳು ಒಂದನ್ನೊಂದು ಹಿಂಬಾಲಿಸುತ್ತವೆ; ಅವುಗಳಿಗೆ ಪೂರ್ಣತೆಯಿಲ್ಲ ಏಕಭಾವವಿಲ್ಲ. ಅಹಂಕಾರ ಎಂಬುದು ವೃತ್ತಿಗಳ ಪ್ರವಾಹವಲ್ಲದೆ ಬೇರೆಯಲ್ಲ. ಒಂದು ಅಲೆಯು ಮತ್ತೊಂದು ಅಲೆಗೆ ಕಾರಣವಾಗುತ್ತದೆ ಈ ವೃತ್ತಿಗಳ ಸಂಪೂರ್ಣ ವಿನಾಶವೇ ನಿರ್ವಾಣ" ಎಂದೇಕೆ ಹೇಳ ಬಾರದು? ದ್ವೈತವು ಇಲ್ಲಿ ಮೂಕವಾಗಿದೆ. ಈ ವಾದವನ್ನು ಖಂಡಿಸಲು ಅದರಿಂದ ಅಸಾಧ್ಯ. ಆದ್ದರಿಂದ ದ್ವೈತದ ಪರಮಾತ್ಮನಿಗೆ ಇಲ್ಲಿ ಸ್ಥಳವೇ ಇಲ್ಲ. ಸರ್ವವ್ಯಾಪಿಯಾದರೂ ಕೈಯಿಲ್ಲದೆ ಸೃಷ್ಟಿಸುವ ವ್ಯಕ್ತಿಯೂ, ಕಾಲಿಲ್ಲದೇ ಚಲಿಸುವವನೂ, ಕುಂಭಕಾರನು ಘಟವನ್ನು ತಯಾರು ಮಾಡುವಂತೆ ವಿಶ್ವವನ್ನು ರಚಿಸುವವನೂ ಆದ ಆ ದೇವರನ್ನು ನಾವು ಖಂಡಿಸಿಯೇ ಖಂಡಿಸುತ್ತೇವೆ ಎಂದು ಬೌದ್ಧರು ಹೇಳುತ್ತಾರೆ. ಅಂತಹ ದೇವರು ಆರಾಧನೆಗೆ ಅರ್ಹನಲ್ಲ ಎಂದು ಅವರ ಭಾವನೆ. ಏಕೆಂದರೆ ಈ ಪಾಪ ದುಃಖ ಮಯವಾದ ಜಗತ್ತನ್ನು ಸೃಷ್ಟಿಸಿದ ದೇವರು ವಂದನೆಗಲ್ಲ ನಿಂದನೆಗೆ ಯೋಗ್ಯವಾಗಿದ್ದಾನೆ. ಅದೂ ಅಲ್ಲದೆ ಅಂತಹ ಪರಮಾತ್ಮನು ತರ್ಕಸಾಧ್ಯನೂ ಅಲ್ಲ, ಸಾಧ್ಯನೂ ಅಲ್ಲ. 'ರಚನಾವಾದ' (Design Theory) ವನ್ನು ಕ್ಷಣಿಕ ವಾದಿಗಳು ಹೇಗೆ ಖಂಡಿಸಿದರೆಂಬ ವಿಚಾರ ನಮಗೀಗ ಬೇಡ. ಇಷ್ಟು ಹೇಳಿದರೆ ಸಾಕು : ಕ್ಷಣಿಕವಾದಿಗಳ ಮುಂದೆ ಸಗುಣ ಸಾಕಾರ ಈಶ್ವರನು ಚೂರು ಚೂರಾಗಿ ಕೆಳಗುರುಳಿದನು.

ಆದರೆ ಭಯವಿಲ್ಲ, ಸತ್ಯವೊಂದೇ ನಮ್ಮ ಗುರಿಯಾಗಬೇಕು ಎಂದು

ವೇದಗಳು ಹೇಳುತ್ತವೆ. "ಸತ್ಯಮೇವ ಜಯತೇ ನಾನೃತಂ, ಸತ್ಯ ಮೇವ ಪಂಥಾ ವಿತತೋ ದೇವಯಾನಃ" (ಸತ್ಯವೇ ಜಯಿಸುತ್ತದೆ; ಅನೃತವಲ್ಲ. ಸತ್ಯದ ದಾರಿಯೊಂದೇ ನಮ್ಮನ್ನು ದೇವಯಾನಕ್ಕೆ ಕೊಂಡೊಯ್ಯುತ್ತದೆ). ಆದರೆ ಎಲ್ಲರೂ ಅದೇ ಮಂತ್ರವನ್ನು ಉಚ್ಚರಿಸುತ್ತ ಪರವಾದಿಗಳನ್ನು ಖಂಡಿಸಲು ಹೊರಡುತ್ತಾರೆ. ಒಬ್ಬನು ದೇವರ ವಿಚಾರದಲ್ಲಿ ಯಾವುದೋ ಒಂದು ಭಾವನೆಯನ್ನು ಸರಿಯೆಂದು ಒಪ್ಪಿ ವಿಗ್ರಹ ಪೂಜೆ ಮಾಡುವ ಇನ್ನೊಬ್ಬನೊಡನೆ ಕಾದಾಡುತ್ತಾನೆ. ತಾನು ಮಾತ್ರ ತೀಕ್ಷ್ಣ ಮತಿಯೆಂದೂ ವಿಚಾರ ಪರನೆಂದೂ ವಿಗ್ರಹ ಪೂಜೆಯನ್ನು ಖಂಡಿಸಿ ಬಿಡುತ್ತೇನೆಂದೂ ಭ್ರಮಿಸುತ್ತಾನೆ. ಆದರೆ ಮೂರ್ತಿ ಪೂಜಕನು ಹಿಂದಕ್ಕೆ ತಿರುಗಿ 'ನಿನ್ನ ನಿರಾಕಾರ ನಿರ್ಗುಣ ಭಾವನೆಗಳೆಲ್ಲ ಬರಿಯ ಗಾಳಿಗೋಪುರ ಮೊಲದ ಕೊಂಬು' ಎಂದರೆ ಯುಕ್ತವಾದಿಯು ಏನು ಹೇಳುತ್ತಾನೆ? ಬಹುಶಃ "ಮೂರ್ತಿ ಪೂಜಕನು ನಾಸ್ತಿಕ"ನೆಂದೂ ಕೂಗೆಬ್ಬಿಸುತ್ತಾನೆ. ಕೈಲಾಗದವರಿಗೆ ಕೂಗೇ ದೊಡ್ಡ ಕೈದು. ನಮ್ಮ ವಾದವನ್ನು ಖಂಡಿಸುವವರೆಲ್ಲರೂ ನಾಸ್ತಿಕರು ಎಂದು ಹೇಳುವುದು ಪೂರ್ವದಿಂದಲೂ ನಡೆದು ಬಂದ ಪದ್ಧತಿ. ಆದರೆ ಹಾಗೆ ಆಚರಿಸಬಾರದು. ಯುಕ್ತಿವಾದಿಯಾಗುವ ಪಕ್ಷದಲ್ಲಿ ಯಾವಾಗಲೂ ವಿಚಾರ ಪರನಾಗಿಯೇ ಇರಬೇಕು. ಇಲ್ಲದೆ ಇದ್ದರೆ ತಾನು ಕೇಳುವ ಸೌಕರ್ಯಗಳನ್ನು ಇತರರಿಗೂ ಕೊಡಬೇಕು. ದೇವರಿದ್ದಾನೆ ಎಂಬುದನ್ನು ವಾದದಿಂದ ಇತ್ಯರ್ಥಮಾಡಲಾಗುತ್ತದೆಯೆ? ಅದಕ್ಕೆ ಬದಲಾಗಿ 'ದೇವರಿಲ್ಲ' ಎಂಬುದಕ್ಕೆ ಬೇಕಾದಷ್ಟು ವಾದಗಳಿವೆ. "ದೇವರಿದ್ದಾನೆ; ಆತನಿಗೆ ಗುಣಗಳಿವೆ; ಆತ್ಮಗಳ ಸಂಖ್ಯೆ ಅನಂತವಾಗಿದೆ; ಪ್ರತಿಯೊಂದು ಆತ್ಮವೂ ವಿಶಿಷ್ಟವಾಗಿದೆ" ಇದನ್ನೆಲ್ಲ ಸತರ್ಕವಾಗಿ ಸಿದ್ಧಾಂತಮಾಡುವುದು ಹೇಗೆ? ದೇಹದೃಷ್ಟಿಯಿಂದ ನಿಮಗೆ ವೈಶಿಷ್ಟ್ಯವಿಲ್ಲ, ಏಕೆಂದರೆ ಈ ವಿಷಯದಲ್ಲಿ ಆಗಿನ ಬೌದ್ಧರಿಗಿಂತಲೂ ನಮಗೆ ಹೆಚ್ಚು ಗೊತ್ತಾಗಿದೆ. ಈ ಹಿಂದಿನ ಕ್ಷಣವೊಂದರಲ್ಲಿ ಸೂರ್ಯನಲ್ಲಿದ್ದ ಪದಾರ್ಥ ಈಗ ನಿಮ್ಮ ದೇಹದಲ್ಲಿ ಇರಬಹುದು. ಮರುಕ್ಷಣದಲ್ಲಿ ಅದು ಒಂದು ಮರದಲ್ಲಿರಬಹುದು. ಹಾಗಾದರೆ ನಿಮ್ಮ ದೇಹದ ಪೃಥಕ್ತ್ವವೆಲ್ಲಿ? ವೈಶಿಷ್ಟ್ಯವೆಲ್ಲಿ? ಇದೇ ವಾದ ಮನಸ್ಸಿಗೂ ಅನ್ವಯಿಸುತ್ತದೆ. ನಿಮ್ಮ ಮನಸ್ಸಿನ 'ಪ್ರತ್ಯೇಕತೆ' ಎಲ್ಲಿದೆ? ಈ ಹೊತ್ತು ಮನಸ್ಸಿನಲ್ಲಿ ಒಂದಾಲೋಚನೆ ಇದ್ದರೆ ನಾಳೆ ಮತ್ತೊಂದಿರುತ್ತದೆ. ಶಿಶು

ಗಳಾಗಿದ್ದಾಗ ನಿಮ್ಮ ಮನಸ್ಸಿದ್ದಂತೆ ಈಗಿಲ್ಲ. ಮುದಿತನದ ಮನಸ್ಸು ತಾರುಣ್ಯದ ಮನಸ್ಸಲ್ಲ. ಹೀಗಿದ್ದಮೇಲೆ ನಿಮ್ಮ ಮನಸ್ಸಿನ ವೈಶಿಷ್ಟ್ಯ ವೆಲ್ಲಿ? ಅದು ನಮ್ಮ ಚಿತ್ತದಲ್ಲಿದೆ ಅಥವಾ ಅಹಂಕಾರದಲ್ಲಿದೆ ಎನ್ನಬೇಡಿ. ಏಕೆಂದರೆ ಅದೂ ನಿಮ್ಮ ಅಸ್ತಿತ್ವದ ಒಂದು ಅಂಶ ಮಾತ್ರವಾಗಿದೆ. ಈಗ ನಾನು ನಿಮ್ಮೊಡನೆ ಮಾತನಾಡುತ್ತಿದ್ದೇನೆ. ನನ್ನ ಇಂದ್ರಿಯಗಳೂ ಕರಣ ಗಳೂ ಕೆಲಸಮಾಡುತ್ತಿವೆ, ಆದರೆ ನನಗದರ ಪ್ರಜ್ಞೆಯಿಲ್ಲ (ತಿಳಿವಿಲ್ಲ). ಪ್ರಜ್ಞೆಯಲ್ಲಿರುವುದು ಮಾತ್ರ ಇರುವುದಾದ ಪಕ್ಷದಲ್ಲಿ ಅವುಗಳಿಲ್ಲವೆಂದೇ ಹೇಳಬೇಕು. ಏಕೆಂದರೆ ನನಗೀಗ ಅವುಗಳ ತಿಳಿವಿಲ್ಲ. ಹಾಗಾದರೆ ನಿಮ್ಮ ನೆಚ್ಚಿನ ಸಿದ್ಧಾಂತಿಗಳೆಲ್ಲಿ? ಅವುಗಳನ್ನು ಸಾಧಿಸುವಿರೆಂತು.

ಬೌದ್ಧರ ಪ್ರಕಾರ ಈಶ್ವರ ಭಾವವು ತರ್ಕವಿರುದ್ಧವಾದುದು; ನೀತಿ ನಾಶಕವಾದುದು; ಏಕೆಂದರೆ ಅದು ಮನುಷ್ಯನನ್ನು ಹೇಡಿಯನ್ನಾಗಿ ಮಾಡುತ್ತದೆ. ಮನುಷ್ಯನು ತಾನೇ ಪ್ರಯತ್ನಿಸದೆ ಯಾವಾಗಲೂ ಇಲ್ಲದ ದೇವರ ಮೇಲೆ ಭಾರ ಹಾಕುತ್ತಾನೆ; ಆತನನ್ನೇ ಸದಾ ಸಹಾಯಕ್ಕೆ ಕರೆ ಯುತ್ತಾನೆ, ಆ ಸಹಾಯವೂ ಬರಿಯ ಮಿಥ್ಯೆ. ಹಾಗೆ ಸಹಾಯ ಮಾಡಲು ಯಾರಿಂದಲೂ ಸಾಧ್ಯವಿಲ್ಲ. ಈ ಜಗತ್ತು ಮನುಷ್ಯ ನಿರ್ಮಿತ ವಾದುದು; ಸುಮ್ಮನೆ ಒಬ್ಬ ಊಹೆಯ ಸೃಷ್ಟಿಕರ್ತನನ್ನು ನಿರ್ಮಿಸುವುದೇಕೆ? ಆತನನ್ನು ಕಂಡವರಿಲ್ಲ; ಕೇಳಿದವರಿಲ್ಲ. ಸಹಾಯಪಡೆದರೂ ಇಲ್ಲ. ಹೀಗಿ ರಲು ನಿಮ್ಮನ್ನು ನೀವೇ ಹೇಡಿಗಳನ್ನಾಗಿ ಮಾಡಿಕೊಳ್ಳುವುದೇಕೆ? ಈ ಹಾಸ್ಯ ಭಾವವನ್ನು—ನಾನು ಕೈಲಾಗದವನು, ನಾನು ಪಾಪಿ ಇತ್ಯಾದಿಯಾಗಿ ಹೇಳಿ ಕೊಳ್ಳುತ್ತ, ಆ ಊಹನೆಯ ಸೃಷ್ಟಿಕರ್ತನ ಮುಂದೆ ಹಲ್ಲು ಕಿರಿದು ಅಂಗ ಲಾಚಿ ಬೇಡಿಕೊಂಡು ಹೊರಳಾಡುವುದೇ ಜೀವನದ ಪರಮ ಪುರುಷಾರ್ಥ ವೆಂದು ನಿಮ್ಮ ಮಕ್ಕಳಿಗೇಕೆ ಕಲಿಸುತ್ತೀರಿ? ನೀವು ಮಾಡುವುದು ಮಿಥ್ಯಾ ಬೋಧೆ ಮಾತ್ರವಲ್ಲ; ನಿಮ್ಮ ಬೋಧೆಯಿಂದ ನಿಮ್ಮ ಮಕ್ಕಳಿಗೆ ಬಹಳ ಕೇಡು ಸಂಭವಿಸುತ್ತದೆ. ಏಕೆಂದರೆ, ಚೆನ್ನಾಗಿ ಕೇಳಿ, ಈ ಜಗತ್ತು ಸಮ್ಮೋಹಿನೀ ವಿದ್ಯೆಯಿಂದ ಕಚಿತವಾಗಿದೆ. ನೀವೆಂತು ಭಾವಿಸಿದರೆ ಅಂತಾ ಗುತ್ತೀರಿ. ಮನಸ್ಸಿನಂತೆ ಮನುಷ್ಯನಾಗುತ್ತಾನೆ "ನಿನ್ನ ಮನಸ್ಸಿನಂತೆ ನೀನಿದ್ದೀಯೇ; ನಿನ್ನ ಮನಸ್ಸಾಗುವಂತೆ ನೀನಾಗುತ್ತೀಯೇ" ಎಂಬುದು ಬುದ್ಧದೇವನ ಮಾತುಗಳಾಗಿವೆ. ಇದು ಸತ್ಯವಾದರೆ ನಿಮಗೆ ನೀವು ದುರ್ಬಲಕಾರಿಗಳಾದ ಸೂಚನೆಗಳನ್ನು ಕೊಟ್ಟುಕೊಳ್ಳಬೇಡಿ. ನನ್ನಿಂದ

ಏನೂ ಆಗುವುದಿಲ್ಲ. ನಾನೊಂದು ಕ್ರಿಮಿ; ಮುಗಿಲಿನಾಚೆಯ ಮಹೇಶ್ವರನು ನೆರವಾದ ಹೊರತು ನನ್ನ ಕೈಯಲ್ಲಿ ಏನೂ ಸಾಗುವುದಿಲ್ಲ—ಎಂದು ಹೇಳಿ ಕೊಳ್ಳಬೇಡಿ. ಹಾಗೆ ಪ್ರಾರ್ಥಿಸಿದರೆ ನೀವು ದಿನದಿನವೂ ಹೆಚ್ಚು ಹೆಚ್ಚು ದುರ್ಬಲರಾಗುತ್ತೀರಿ "ನಾನು ಪಾಪಿ ನನ್ನನ್ನು ಶುದ್ಧಮಾಡು" ಎಂದು ಪದೇಪದೇ ಹೇಳಿಕೊಳ್ಳುವುದರಿಂದ 'ನಾನು ಪಾಪಿ' ಎಂಬ ಸೂಚನೆ ಯನ್ನು ಸ್ವೀಕರಿಸಿದ ಸುಪ್ತಚಿತ್ತವು ನಮ್ಮನ್ನು ಮತ್ತೂ ಹೆಚ್ಚಾದ ದುರಾ ಚಾರಗಳಿಗೇ ಕೊಂಡೊಯ್ಯುತ್ತಿದೆ. ಅಷ್ಟೇ ಅಲ್ಲ; ಈ ಸಗುಣಸಾಕಾರ ಈಶ್ವರನ ಆರಾಧನೆ ಪ್ರಾರ್ಥನೆಗಳೇ ಮಾನವನ ಅನೇಕ ದುರ್ಬಲತೆಗಳಿಗೂ ಪಾಪಗಳಿಗೂ ಕಾರಣವಾಗುತ್ತದೆ— ಎಂದು ಬೌದ್ಧರ ಅಭಿಪ್ರಾಯ. ಬೌದ್ಧನು ಹೇಳುತ್ತಾನೆ "ಓ ವೈಷ್ಣವನೇ, ನಿನ್ನ ಗುರಿ ಉದ್ದೇಶ ಆದರ್ಶ ಎಲ್ಲವೂ ವಿಷ್ಣುವಿರುವ ವೈಕುಂಠಕ್ಕೆ ಹೋಗಿ, ಅಲ್ಲಿ ಕೈಕಟ್ಟಿಕೊಂಡು ಅನಂತ ಕಾಲದವರೆಗೆ ನಿಂತಿರುವುದಾದಪಕ್ಷದಲ್ಲಿ ಅದಕ್ಕಿಂತಲೂ ಆತ್ಮಹತ್ಯೆ ಮಾಡಿಕೊಳ್ಳುವುದೇ ಲೇಸು." ಅಂತಹ ಗುಲಾಮಗಿರಿಯನ್ನು ತಪ್ಪಿಸಿಕೊಳ್ಳಲೋಸುಗವೇ ಬೌದ್ಧನು ನಿರ್ವಾಣವನ್ನು ಬಯಸು ತ್ತಾನೆ. ನಾನು ತಾತ್ಕಾಲಿಕವಾಗಿ ಬೌದ್ಧನಾಗಿ ಈ ವಿಷಯಗಳನ್ನು ಪ್ರತಿಪಾದಿಸುತ್ತಿದ್ದೇನೆ. ಏಕೆಂದರೆ, ಅನೇಕರು ನಿರ್ಗುಣ ನಿರಾಕಾರ ಬ್ರಹ್ಮೋಪಾಸನೆ ದುರ್ನೀತಿಗೆ ಕಾರಣವಾಗುತ್ತದೆ ಎಂದು ಹೇಳುತ್ತಿರು ವುದರಿಂದ ಅಂಥವರಿಗೆ ತಮ್ಮ ಪ್ರತಿಪಕ್ಷದವರ ಮತವೂ ತಿಳಿಯಲಿ ಎಂಬುದು ನನ್ನ ನಂಬಿಕೆ. ಎರಡು ಪಕ್ಷಗಳನ್ನೂ ಧೈರ್ಯವಾಗಿ ದೃಷ್ಟಿ ಸೋಣ. ನಾವು ಮೊದಲೇ ಕಂಡಿದ್ದೇವೆ, ಸಗುಣ ಸಾಕಾರನಾದ ಉಪಾ ಸನೆಯ ದೇವರು ಈ ಸೃಷ್ಟಿಗೆ ಕಾರಣನಾಗಲಾರನೆಂದು. ಕುಂಬಾರನು ಮಡಕೆ ಮಾಡುವಂತೆ ದೇವರು ಸೃಷ್ಟಿಮಾಡುತ್ತಾನಂತೆ. ಆದರೆ 'ಕೈಗಳೂ ತಲೆಯೂ ಇಲ್ಲದೆ ಕುಂಬಾರನು ಮಡಕೆ ಮಾಡುತ್ತಾನೆ' ಎಂದು ಯಾರಾ ದರೂ ನಿಮಗೆ ಹೇಳಿದರೆ 'ಅವನನ್ನು ಹುಚ್ಚರ ಆಸ್ಪತ್ರೆಗೆ ಕಳುಹಿಸಿ' ಎನ್ನುತ್ತೀರಿ. ಹಾಗಾದರೆ ದೇವರು ಹಸ್ತ ಮಸ್ತಕಗಳಿಲ್ಲದೆ ಸೃಷ್ಟಿಮಾಡು ತ್ತಾನೆ, ಎಂದಾಗ ನೀವೇಕೆ ಹಾಗೆ ಹೇಳುವುದಿಲ್ಲ. ಆ ಹಳೆಯ ಬೌದ್ಧರ ಜೊತೆಗೆ ಈಗ ಹೊಸ ವೈಜ್ಞಾನಿಕರೂ "ಯಾರನ್ನು ಕುರಿತು ಜೀವ ಮಾನವೆಲ್ಲಾ ಮೊರೆಯಿಡುತ್ತೀರೋ ಆ ನಿಮ್ಮ ಉಪಾಸನೆಯ ದೇವರು, ಆ ನಿಮ್ಮ ಸೃಷ್ಟಿಕರ್ತನು ನಿಮಗೆ ಎಂದಾರೂ ಏನಾದರೂ ಸಹಾಯ

ಮಾಡಿದ್ದಾನೆಯೇ ? ” ಎಂಬ ಪ್ರಶ್ನೆಯ ಸಲಾಕೆಯಿಂದ ಮೋರೆ ತಿವಿಯು ತ್ತಿದ್ದಾರೆ. ನೀವು ಒಂದು ವೇಳೆ ‘ ಹೌದು ಸಹಾಯ ದೊರೆತಿದೆ ’ ಎಂದು ಹೇಳಿದರೆ ಮನಃ ಶಾಸ್ತ್ರಜ್ಞನು ಅದನ್ನು ವಿಭಜನೆ ಮಾಡಿ ಸಾರುತ್ತಾನೆ: ಆ ಸಹಾಯವೆಲ್ಲ ನಿಮ್ಮ ಆತ್ಮದಿಂದ ಬಂದುದೇ ಹೊರತು ಹೊರಗಿನ ಭಗ ವಂತನಿಂದಲ್ಲ. ಸುಮ್ಮನೆ ಭ್ರಮೆಯಿಂದ ವೃಥಾ ಕ್ಲೇಶ ಪಟ್ಟಿದೇ. ಅತ್ತು ಕರೆಯದೆ ಇದ್ದಿದ್ದರೆ ಈಗಾಗಿರುವುದಕ್ಕಿಂತಲೂ ಉತ್ತಮತರವಾದ ಪರಿ ಣಾಮವಾಗುತ್ತಿತ್ತು. ಬೌದ್ಧರು ಹೇಳುತ್ತಾರೆ:— ಈ ನಿಮ್ಮ ‘ ವ್ಯಕ್ತಿ ಭಗವಂತ ’ ನ ಉಪಾಸನೆಯ ದೆಸೆಯಿಂದಲೇ ರಾಜರ ನಿರಂಕುಶ ವರ್ತ ನೆಯೂ ಅರ್ಚಕರ ಅಧಮ ಕೃತ್ರಿಮತೆಯೂ ಹಬ್ಬಿಹೋಗಿವೆ. ಅರ್ಚ ಕರೂ ನಿರಂಕುಶ ಪ್ರಭುಗಳೂ ಯಾವಾಗಲೂ ಜೊತೆಯಾಗಿಯೇ ಇರು ತ್ತಾರೆ. ಈ ಮಹಾ ಮಿಥ್ಯೆಯ ಶಿರೋಘಾತವಾದ ಹೊರತೂ ಲೋಕಕ್ಕೆ ಸುಖವಿಲ್ಲ. ಶಾಂತಿಯಿಲ್ಲ. ಎಲ್ಲಿಯವರೆಗೆ ಮನುಷ್ಯನು ತನಗಿಂತಲೂ ಹೆಚ್ಚು ಶಕ್ತನಾದವನೊಬ್ಬನಿಗೆ ಮಣಿಯುತ್ತಾನೋ— ಅವನು ದೇವ ನಾಗಲಿ ಮನುಜನಾಗಲಿ— ಅಲ್ಲಿಯವರೆಗೆ ಅರ್ಚಕರಿಗೆ ಭಕ್ತರನ್ನು ಶರಣು ಮಾಡಿಕೊಳ್ಳುವ ಹಕ್ಕುಬಾಧ್ಯತೆಗಳು ಇದ್ದೇ ಇರುತ್ತವೆ. ಏಕೆ ? ಬಡ ಮಾನವನು ತನಗೂ ತನ್ನ ಆರಾಧನೆಯ ದೇವತೆಗೂ ಮಧ್ಯಸ್ಥಗಾರನೊಬ್ಬ ನನ್ನು ಕಲ್ಪಿಸಿಯೇ ಕಲ್ಪಿಸುತ್ತಾನೆ. ಆದರೆ ಬ್ರಾಹ್ಮಣ ಪೂಜಾರಿಗಳನ್ನು ವರ್ಜಿಸಿದ ಮಾತ್ರದಿಂದಲೇ ಈ ದೋಷ ಪರಿಹಾರವಾಗುವುದಿಲ್ಲ. ಈಗಿರು ವವರು ಹೋದರೆ ಅವರ ಪಟ್ಟಕ್ಕೆ ಹೊಸಬರು ಬರುತ್ತಾರೆ. ಹೊಸಬರು ಹಳಬರಿಗಿಂತಲೂ ಹೆಚ್ಚು ನಿರಂಕುಶ ಕ್ರೂರಿಗಳಾಗುತ್ತಾರೆ. ಅಂತೂ ವ್ಯಕ್ತಿ– ‘ ಭಗವಂತ ’ ಭಾವವು ಇರುವತನಕ ಪುರೋಹಿತರು ಇದ್ದೇ ಇರುತ್ತಾರೆ. ನಿರಂಕುಶ ಪ್ರಭುತ್ವವೂ ಪುರೋಹಿತ್ಯವೂ ಕೈ ಕೈ ಕುಲುಕಿಸಿಕೊಂಡು ನಡೆಯುವವರೆಗೆ ಸಮಾಜಕ್ಕೆ ಕ್ಷೇಮವಿಲ್ಲ. ಇದು ಹೀಗಾದುದು ಹೇಗೆ ? ಬಹು ಪ್ರಾಚೀನಕಾಲದಲ್ಲಿ ಕೆಲವು ಜನ ಬಲಿಷ್ಠರು ಕೆಲವು ಅಬಲರನ್ನು ಹಿಡಿದುಕೊಂಡು ಆರ್ಭಟಿಸಿದರು “ ನಮ್ಮ ಮಾತು ಕೇಳದಿದ್ದರೆ ನಿಮ್ಮನ್ನು ಬಲಿಹಾಕುತ್ತೇವೆ ” ಎಂದು. ಅಂದಿನಿಂದ ಈ ಪ್ರಸಂಗ ಪ್ರಾರಂಭ ವಾಯಿತು. ಮತ್ತೆ ಬೌದ್ಧರು ಹೇಳುತ್ತಾರೆ: ಪ್ರತಿಯೊಂದು ಫಲವೂ ಕರ್ಮ ನಿಯಮಾನುಸಾರವಾಗಿರುತ್ತದೆ. ಅಸಂಖ್ಯ ಆತ್ಮಗಳಿವೆ. ಆ ಆತ್ಮಗಳಿಗೆ ಜನನ ಮರಣಗಳಿಲ್ಲ. ಪ್ರತಿಯೊಂದು ಕಾರ್ಯಕ್ಕೂ ಒಂದೊಂದು

ಕಾರಣವಿದ್ದೇ ಇರುತ್ತದೆ. ಭೂತಕಾಲ ವರ್ತಮಾನ ಕಾಲಕ್ಕೆ ಕಾರಣ: ವರ್ತಮಾನ ಭವಿಷ್ಯತ್ತಿಗೆ ಕಾರಣ. ಆದ್ದರಿಂದ ಕರ್ಮಕ್ಕೆ ತಕ್ಕ ಫಲ ತಪ್ಪದು — ಎಂಬ ತರ್ಕ ಬದ್ಧವಾದವನ್ನು ನೀವೆಲ್ಲ ನಂಬುತ್ತೀರಿ. ಹಿಂದೂ ಗಳಾದ ನೀವು 'ಕರ್ಮವು ಜಡ ಚೈತನ್ಯವಿಲ್ಲ. ಆದ್ದರಿಂದ ಕಾರಣವನ್ನು ಕಾರ್‍ಯಗೊಳಿಸಲು ಒಂದು ಚೈತನ್ಯಬೇಕು' ಎಂದು ಹೇಳುತ್ತೀರಿ. ಒಂದು ಗಿಡವು ಹಣ್ಣು ಬಿಡುವಂತೆ ಮಾಡಲು ಚೈತನ್ಯ ಬೇಕು ಎಂದರ್ಥವೇ? ಬೀಜವನ್ನು ನೆಟ್ಟು ನೀರು ಹಾಕಿದೆನೆಂದರೆ ಯಾವ ಚೈತನ್ಯದ ಸಹಾಯವೂ ಬೇಡ, ಗಿಡವಾಗುತ್ತದೆ. ನೀವು "ಚೈತನ್ಯ ವೊದಲೇ ಅದರಲ್ಲಿತ್ತು" ಎಂದು ಹೇಳಬಹುದು ಆದರೆ ಆತ್ಮಗಳು ತಾವೇ ಚೈತನ್ಯವಾದುದರಿಂದ ಅವುಗಳಿಗೆ ಇತರ ಚೈತನ್ಯದ ಸಹಾಯ ಆವಶ್ಯಕವಿಲ್ಲ. ಆತ್ಮಗಳಲ್ಲಿ ನಂಬಿಕೆ ಯಿಟ್ಟರೂ ಈಶ್ವರನನ್ನು ನಂಬದ ಜೈನರು ಹೇಳುವಂತೆ ಮನುಷ್ಯರ ಆತ್ಮ ಗಳಿಗೇ ಚೈತನ್ಯವಿರಲಾಗಿ ಅವುಗಳಿಗೆ ಈಶ್ವರನ ಆವಶ್ಯಕತೆಯೇನು? ಅಂತೂ ಆತ್ಮಗಳನ್ನೂ ಮತ್ತು ಈಶ್ವರನನ್ನೂ ವೊದಲು ಕಂಡು ಹಿಡಿದವರು ನೀವು ಮಾತ್ರವೇ ಅಲ್ಲ; ಬೌದ್ಧ ಸಿದ್ಧಾಂತವೂ ಅದ್ವೈತ ದರ್ಶನವೂ ದುರ್ನೀತಿಗಳಿಗೆ ಕಾರಣಗಳಾಗುತ್ತವೆಂದು ಅವುಗಳನ್ನು ಖಂಡಿಸುವ ಮಹನೀಯರು 'ವ್ಯಕ್ತಿ ಭಗವಂತ' ಅಥವಾ ಈಶ್ವರ ಭಾವವುಳ್ಳ ಇತರ ವೈಷ್ಣವಾದಿ ಮತಗಳು ಏನು ಮಾಡಿರುತ್ತವೆ ಎಂಬುದರ ಕಡೆಗೆ ಸ್ವಲ್ಪ ಕಣ್ಣಿಟ್ಟು ನೋಡಲಿ. ಸಾಧಾರಣ ವಾಗಿ ನೋಡಿದರೆ ನಿರಾಕಾರೋಪಾಸಕರಲ್ಲಿ ಸಾಕಾರ ಉಪಾಸಕರಲ್ಲಿ ಇರು ವುದಕ್ಕಿಂತಲೂ ಹೆಚ್ಚು ನೀತಿ ನಿಷ್ಠೆ ಇರುತ್ತದೆ. ಏಕೆಂದರೆ ನಿರಾಕಾರೋ ಪಾಸಕನೆಗೆ ಉತ್ತಮ ತರದ ಮನಸ್ಸು ಬೇಕಾಗುತ್ತದೆ. ಇಂತಿರಲು ನಿಮ್ಮ ವಾದದ ಗತಿಯೇನು? ಬೌದ್ಧರ ಮುಷ್ಟಿಯಿಂದ ನಿಮಗಂತೂ ಉಳಿಗಾಲ ವಿಲ್ಲ. ಮಹೇಶ್ವರ ನಿದ್ಧಾನೆ ಎಂಬುದಕ್ಕೆ ನೀವು ವೇದ ಪ್ರಮಾಣಗಳನ್ನು ಕೊಡಬಹುದು ಆದರೆ ಅವರು ವೇದಗಳನ್ನು ನಂಬುವುದಿಲ್ಲ. ಅವರು ಹೇಳುತ್ತಾರೆ, "ನಮ್ಮ ತ್ರಿಪಿಟಕಗಳು ಈಶ್ವರನಿಲ್ಲ ಎಂದು ಹೇಳುತ್ತವೆ. ನಮ್ಮ ತ್ರಿಪಿಟಕೆಗಳಿಗೂ ಆದ್ಯಂತವಿಲ್ಲ. ಅವು ಗಳನ್ನು ಬರೆದವನು ಬುದ್ಧನಲ್ಲ. ಏಕೆಂದರೆ ಬುದ್ಧನೇ ತಾನು ಅವುಗಳನ್ನು ಉಚ್ಚರಿಸುತ್ತೇನೆ ಎಂದು ಮಾತ್ರ ಹೇಳುತ್ತಾನೆ. ಆದ್ದರಿಂದ ಅವುಗಳೂ ಸನಾತನವಾದುವು; ನಿತ್ಯ ಸತ್ಯ ಶಾಶ್ವತವಾದುವು." ಇಷ್ಟು ಹೇಳುವುದರ ಜೊತೆಗೆ ಅವರು, "ನಿಮ್ಮ ವೇದಗಳು ಮಿಥ್ಯೆ ನಮ್ಮ ವೇದಗಳೇ ಸತ್ಯ-

ಏಕೆಂದರೆ ನಿಮ್ಮ ವೇದಗಳು ಬ್ರಾಹ್ಮಣ ಪುರೋಹಿತರಿಂದ ನಿರ್ಮಿತವಾಗಿವೆ'' ಎಂಬುದನ್ನೂ ಸೇರಿಸಿದರೆ ನೀವೇನು ಮಾಡುವಿರಿ? ತಪ್ಪಿಸಿಕೊಳ್ಳುವುದು ಹೇಗೆ?

ಇಲ್ಲಿದೆ ಪಾರಾಗಲು ಒಂದು ಹಾದಿ. ಗುಣ ಮತ್ತು ಗುಣಿಗಳು ಬೇರೆ ಬೇರೆ ಎಂಬ ಮೊದಲನೆಯ ಆಧ್ಯಾತ್ಮಿಕ ಪೂರ್ವ ಪಕ್ಷವನ್ನು ಸಮಾಲೋಚಿಸುವ ಅದ್ವೈತಿಯು ಅವುಗಳು ಬೇರೆ ಬೇರೆ ಅಲ್ಲ ಎಂದು ಹೇಳುತ್ತಾನೆ. ಗುಣ ಗುಣಿಗಳಿಗೆ ಭಿನ್ನಭಾವವಿಲ್ಲ. ಸರ್ಪರಜ್ಜುಭ್ರಮೆ ಎಂಬ ಸಂಪ್ರದಾಯದ ದೃಷ್ಟಾಂತವು ನಿಮಗೆಲ್ಲ ತಿಳಿದಿದೆ. ಹಾವು ಕಾಣುವಾಗ ಹಗ್ಗ ಕಾಣುವುದೇ ಇಲ್ಲ. ಹಗ್ಗವಮಾಯವಾಗುತ್ತದೆ. ಒಂದು ಪದಾರ್ಥವನ್ನು ಗುಣ ಗುಣಿ ಎಂದು ಮಾಡುವ ವಿಭಜನೆಯು ಶಾಸ್ತ್ರಕಾರರ ತಲೆಯಲ್ಲಿ ಅಲ್ಲದೆ ವಾಸ್ತವಿಕವಾದ ಅನುಭವದಲ್ಲಿ ಇಲ್ಲ. ಸಾಧಾರಣ ಮನುಷ್ಯನು ಸ್ಥೂಲ ವಸ್ತುವನ್ನೇ ನೋಡುತ್ತಾನೆ; ಮಹಾಯೋಗಿಯಾದವನು ಸೂಕ್ಷ್ಮಗುಣವನ್ನೇ ಕಾಣುತ್ತಾನೆ. ಆದರೆ ಎರಡನ್ನೂ ಒಟ್ಟಿಗೆ ಕಾಣುವುದು ಸರ್ವದಾ ಅಸಾಧ್ಯ. ಆದ್ದರಿಂದ ಬೌದ್ಧರ ಗುಣ ಗುಣಿಗಳ ಭೇದ ಜ್ಞಾನವು ಭ್ರಾಂತಿ ಮೂಲಕವಾದುದು. ಅನುಭವವು ಅದನ್ನು ಒಪ್ಪಲಾರದು. ಆದ್ದರಿಂದ ಗುಣ ಮತ್ತು ವಸ್ತುಗಳು ಬೇರೆ ಬೇರೆಯಾಗಿರದಿದ್ದರೆ ಒಂದೇ ಆಗಿರಬೇಕು. ಆತ್ಮದಿಂದ ಗುಣಗಳನ್ನೆಲ್ಲ ತೆಗೆದು ಹಾಕಿ ಮನಸ್ಸಿನಲ್ಲಿ ಮಾತ್ರ ಇರುವ ಗುಣಗಳು ಆತ್ಮದಲ್ಲಿ ಅಧ್ಯಾರೋಪವಾಗಿವೆ ಎಂದು ತೋರಿಸಿದರೆ ಇರುವುದೊಂದೇ ಆತ್ಮ ಎಂದು ಸಿದ್ಧಾಂತ ಪಡಿಸಿದಂತಾಗುತ್ತದೆ. ಏಕೆಂದರೆ ಒಂದು ಆತ್ಮಕ್ಕೂ ಮತ್ತೊಂದು ಆತ್ಮಕ್ಕೂ ಭೇದ ಭಾವವಿರುವುದು ಗುಣಗಳಿಂದಲೇ. ಒಂದು ಆತ್ಮದಿಂದ ಮತ್ತೊಂದು ಆತ್ಮವು ಬೇರೆ ಯಾಗಿದೆ ಎಂದು ನಿಮಗೆ ಗೊತ್ತಾಗುವುದು ಹೇಗೆ? ಗುಣ ಭೇದದಿಂದ. ಗುಣಗಳಿಲ್ಲದಿದ್ದರೆ ಭೇದವೆಲ್ಲಿರುತ್ತದೆ? ಆದ್ದರಿಂದ ಅನೇಕಾತ್ಮಗಳ ಮಾತಂತಿರಲಿ, ಎರಡು ಆತ್ಮಗಳೂ ಅಲ್ಲ, ಇರುವುದೊಂದೇ ಆತ್ಮ. ಪರಮಾತ್ಮನೊಬ್ಬನಿದ್ದಾನೆಂದು ನಂಬುವುದೂ ಅನಾವಶ್ಯಕ. ಏಕೆಂದರೆ ಈ ಆತ್ಮವೇ ಆ ಪರಮಾತ್ಮ. ಯಾವ ವಸ್ತುವನ್ನು ಪರಮಾತ್ಮನೆಂದು ಕರೆಯುತ್ತಾರೋ ಅದೇ ಜೀವಾತ್ಮನೆಂದೂ ಕರೆಯಲ್ಪಡುತ್ತಿದೆ. ಆತ್ಮವನ್ನು ಸರ್ವವ್ಯಾಪಿ, ವಿಭು ಎಂದು ಕರೆಯುವ ಸಾಂಖ್ಯರೇ ಮೊದಲಾದ ದ್ವೈತಿಗಳು ಅನೇಕಾತ್ಮಗಳಿವೆ ಎಂದು ಹೇಳು

ವುದರಿಂದ ಅನೇಕ ವಿಭುಗಳಿವೆ ಎಂದಂತಾಗುತ್ತದೆ. ಹಾಗೆನ್ನುವುದು ತಮ್ಮನ್ನು ತಾನೇ ಖಂಡಿಸಿಕೊಂಡಂತೆ. ಅನಂತವಾದುದು ಅಥವಾ ವಿಭು ವಾದುದು ಒಂದೇ ಇರಲು ಸಾಧ್ಯ. ಹಾಗಾದರೆ ಈ ಅದ್ವಿತೀಯ ವಿಭುವೇ ಆತ್ಮ, ಉಳಿದುದೆಲ್ಲ ಅದರ ಪ್ರಕಾಶ ಮಾತ್ರ. ಇದೇ ಬೌದ್ಧರಿಗೆ ತಕ್ಕ ಪ್ರತಿವಾದ. ಆದರೆ ಇಷ್ಟಕ್ಕೇ ಮುಗಿಯಲಿಲ್ಲ. ಅದ್ವೈತವು ಬರಿಯ ಖಂಡನಾತ್ಮಕವಾದುದಲ್ಲ. ಇತರ ವಾದಗಳು ಕದನಕ್ಕಾಗಿ ತನಗೆ ಬಹಳ ಸಮೀಪವರ್ತಿಗಳಾದಾಗ ಮಾತ್ರ ಅದ್ವೈತಿಯು ಖಂಡನೆಯ ಖಡ್ಗವನ್ನು ಬೀಸುತ್ತಾನೆ,–ಶತ್ರುನಾಶನಕ್ಕೆ. ಆದರೆ ಅವನದೇ ಒಂದು ಸಿದ್ಧಾಂತವಿದೆ. ಒಂದು ಸ್ಥಾನವಿದೆ. ಇತರರು ಮಾಡುವ ಖಂಡನೆಯನ್ನು ನಿಲ್ಲಿಸಿ, ತನ್ನ ಪರವಾಗಿ ಪ್ರಮಾಣ ಗ್ರಂಥಗಳನ್ನು ಪ್ರದರ್ಶಿಸಿದ ಮಾತ್ರದಿಂದಲೇ ಆತನು ತೃಪ್ತನಾಗನು. ಇತರರ ಮತಖಂಡನೆ ಮಾಡಿ ತನ್ನ ಮತದ ಪರವಾಗಿ ಪ್ರಮಾಣ ಗ್ರಂಥಗಳನ್ನು ತಂದೊಡ್ಡುವುದರಿಂದ ಮಾತ್ರವೇ ತೃಪ್ತನಾಗ ದವನು ಆತನೊಬ್ಬನೇ. ವಿಶ್ವವು ನಿರಂತರ ಚಲನಶೀಲವಾದುದೆಂದು ನೀವು ಹೇಳುತ್ತೀರಿ. ವ್ಯಷ್ಟಿಯಲ್ಲಿ ಎಲ್ಲವೂ ಚಲಿಸುತ್ತಿದೆ: ನೀವು ಚಲಿ ಸುತ್ತಿದ್ದೀರಿ; ಮೇಜು ಚಲಿಸುತ್ತಿದೆ; ಎಲ್ಲೆಲ್ಲಿಯೂ ಚಲನೆ; ಸಂಸಾರ ಅಥವಾ ಜಗತ್ತಿನ ಸ್ವಭಾವವೇ ಅದು. ನಿರಂತರ ಚಲನೆಯೇ ಜಗತ್ತು. ಈ ಜಗತ್ತಿನಲ್ಲಿ ವ್ಯಕ್ತಿತೆ (Individuality) ಗೆ ಅವಕಾಶವಿಲ್ಲ. ಏಕೆಂದರೆ ವ್ಯಕ್ತಿತೆ ಎಂದರೆ ವ್ಯತ್ಯಾಸವಾಗದದು ಎಂದು ಅರ್ಥವಾಗುತ್ತದೆ. ವ್ಯತ್ಯಾಸ ಹೊಂದುವ ವ್ಯಕ್ತಿತೆ ಇರಲಾರದು. ಏಕೆಂದರೆ ವ್ಯತ್ಯಾಸ ಹೊಂದುವಿಕೆಯೂ ವ್ಯಕ್ತಿತೆಯೂ ಪರಸ್ಪರ ವಿರುದ್ಧಭಾವಗಳಾಗಿವೆ. ನಮ್ಮ ಈ ಕಿರುಜಗತ್ತಿನಲ್ಲಿ ವ್ಯಕ್ತಿತೆ ಎಂಬ ಪದಾರ್ಥವಿಲ್ಲ. ಬುದ್ಧಿ, ಭಾವ, ಮನಸ್ಸು, ದೇಹ, ಮೃಗ, ಪ್ರಾಣಿ ಎಲ್ಲವೂ ನಿರಂತರ ವ್ಯತ್ಯಸ್ತ ವಾಗುತ್ತಿವೆ. ಆದರೆ ಈ ವಿಶ್ವವನ್ನೆಲ್ಲಾ ಒಟ್ಟಾಗಿ ತೆಗೆದುಕೊಂಡಿರಿ ಎಂದು ಭಾವಿಸೋಣ. ಎಂದರೆ ಸಮಷ್ಟಿ ದೃಷ್ಟಿಯಿಂದ ನೋಡಿದರೆ ಆಗ ಜಗತ್ತು ವ್ಯತ್ಯಸ್ತವಾಗಬಲ್ಲದೆ? ಚಲಿಸಬಲ್ಲುದೆ? ಎಂದಿಗೂ ಇಲ್ಲ. ಒಂದು ಪದಾರ್ಥದ ಚಲನೆಯು ನಮಗೆ ಗೊತ್ತಾಗಬೇಕಾದರೆ ಇನ್ನೊಂದು ಪದಾ ರ್ಥದ ಕಡಿಮೆ ಚಲನೆ ಅಥವಾ ನಿಶ್ಚಲನೆಯ ದೃಷ್ಟಿಯಿಂದಲೇ ಹೊರತು ಬೇರೆ ಸಾಧ್ಯವಿಲ್ಲ. ಆದುದರಿಂದ ಒಟ್ಟಿನಲ್ಲಿ ಈ ಜಗತ್ತು ನಿಶ್ಚಲವಾಗಿದೆ; ನಿರ್ವಿಕಾರವಾಗಿದೆ. ಯಾವಾಗ ನೀವು ಸಮಸ್ತ ವಿಶ್ವದೊಡನೆ ಐಕ್ಯವಾಗು

ತ್ತೀರೋ ಆಗ ಮಾತ್ರ ನಿಮಗೆ ವ್ಯಕ್ತಿತೆ ದೊರೆಯುತ್ತದೆ. ಆದುದರಿಂದಲೇ ವೇದಾಂತಿಯು ದ್ವೈತ ಭಾವವಿರುವ ತನಕ ಭಯ ತಪ್ಪದು ಎಂದು ಹೇಳುತ್ತಾನೆ. ಯಾವಾಗ ತನಗಿಂತಲೂ ಬೇರೆಯಾದುದು ಕಾಣುವುದಿಲ್ಲವೋ ಯಾವಾಗ ಬೇರೆ ಇದೆ ಎಂಬ ಭಾವವಿರುವುದಿಲ್ಲವೋ ಯಾವಾಗ ಎಲ್ಲ ಒಂದಾಗುವುದೋ ಆಗ ಮಾತ್ರ ಮರಣ ಕೊನೆಗಾಣುತ್ತದೆ. ಆಗ ಮಾತ್ರವೇ ಸಂಸಾರ ಮಾಯವಾಗುತ್ತದೆ. ಆದುದರಿಂದ ಅದ್ವೈತವು ನಮಗೆ ಈ ರೀತಿ ಬೋಧಿಸುತ್ತದೆ: ವಿಶ್ವಲೀನವಾಗುವುದರಿಂದಲೇ ಮನುಷ್ಯನಿಗೆ ನಿಜವಾದ ವ್ಯಕ್ತಿತೆ ದೊರೆಯುತ್ತದೆ. ಭೇದಭಾವದಿಂದ ಅದು ದೊರೆಯಲಾರದು. ನೀನು ಸಮಷ್ಟಿಯಾದಾಗಲೇ ಅಮೃತನಾಗುತ್ತೀಯೆ. ನೀನೂ ವಿಶ್ವವೂ ಒಂದಾದಾಗಲೇ ನಿಮಗೆ ಭಯವಿಲ್ಲ, ಮರಣವಿಲ್ಲ. ಆಗ ಮಾತ್ರವೇ ನಿನಗೆ ಗೋಚರವಾಗುತ್ತದೆ. ವಿಶ್ವ ದೇವರು ನಾನು ಎಂಬುವೆಲ್ಲವೂ ಏಕವೂ ಅದ್ವಿತೀಯವೂ ಆದುದು ಎಂದು. ಏಕವೂ ಅಖಂಡವೂ ಆಗಿರುವ ಸತ್ತು ನಮಗೂ, ನಮ್ಮಂತೆಯೇ ಮನಸ್ಸುಳ್ಳವರಿಗೂ ಅನೇಕಖಂಡವೂ ಆದಂತಾಗಿ ಸೂರ್ಯ ಚಂದ್ರತಾರಾಮಯ ಜಗತ್ತಾಗಿ ಕಾಣಿಸಿಕೊಳ್ಳುತ್ತಿದೆ. ಸ್ವಲ್ಪ ಪುಣ್ಯಕರ್ಮಗಳನ್ನು ಮಾಡಿದವರಿಗೆ ಸ್ವಲ್ಪ ಉತ್ತಮವಾದ ಮನಸ್ಸು ಲಭಿಸುವುದರಿಂದ ಸತ್ತುಮೇಲೆ ಅವರಿಗೆ ದೇವಾಪ್ಸರಿಯರಿಂದ ಕೂಡಿದ ಸ್ವರ್ಗ ಗೋಚರಿಸಿದಂತಾಗುತ್ತದೆ. ಅದಕ್ಕಿಂತಲೂ ಉತ್ತಮ ಮನಸ್ಕರು ಅದೇ ಸತ್ತನ್ನೇ ಬ್ರಹ್ಮಲೋಕವಾಗಿ ಕಾಣುತ್ತಾರೆ. ಮುಕ್ತರಾದವರು ಅದರಲ್ಲಿ ಮರ್ತ್ಯ ಸ್ವರ್ಗ ಯಾವ ಲೋಕವನ್ನೂ ಕಾಣುವುದಿಲ್ಲ. ಅವರ ದೃಷ್ಟಿಗೆ ವಿಶ್ವ ಮಾಯವಾಗಿ ಬ್ರಹ್ಮಮಾತ್ರ ನಿಲ್ಲುತ್ತದೆ.

ನಾವು ಈ ಬ್ರಹ್ಮವನ್ನು ತಿಳಿಯಲು ಸಾಧ್ಯವೇ? ಬ್ರಹ್ಮ ಮತ್ತು ಜಗತ್ತುಗಳ ವಿಚಾರವಾಗಿ ಸಂಹಿತೆಗಳ ಬಾಹ್ಯದೃಷ್ಟಿಯ ಮನೋಹರ ವ್ಯಾಖ್ಯಾನವನ್ನು ನಿಮಗಾಗಲೇ ತಿಳಿಸಿದ್ದೇನೆ. ಇಲ್ಲಿ ಅದನ್ನೇ ಕುರಿತು ಮತ್ತೊಂದು ವಿಧವಾದ ಅಂತರ್ದೃಷ್ಟಿಯ ವ್ಯಾಖ್ಯಾನವಿದೆ. ಮೊದಲನೆಯದರಲ್ಲಿ ಇದ್ದುದು ಬಾಹ್ಯದ ಅಥವಾ ಮೃಣ್ಮಯದ ಅನಂತತೆ; ಎರಡನೆಯದರಲ್ಲಿದ್ದುದು ಆಂತರ್ಯದ ಅಥವಾ ಚಿನ್ಮಯದ ಅನಂತತೆ. ಅಲ್ಲಿ ಬ್ರಹ್ಮವನ್ನು 'ಇತಿ ಇತಿ' ಎಂದು ವರ್ಣಿಸಲು ಪ್ರಯತ್ನಿಸಿ ಸೋತುಹೋಗಿದ್ದಾರೆ. ಆದ್ದರಿಂದ ಇಲ್ಲಿ ಅದನ್ನು 'ನೇತಿ, ನೇತಿ' ಭಾಷೆಯಲ್ಲಿ ವರ್ಣಿಸಲು ಪ್ರಯತ್ನಿಸಿದ್ದಾರೆ. ಜಗತ್ತಿದೆ; ಜಗತ್ತೇ ಬ್ರಹ್ಮ ಎಂದು ಇಟ್ಟುಕೊಂಡರೂ

ಆ ಬ್ರಹ್ಮವನ್ನು ನಾವರಿಯಲು ಸಾಧ್ಯವೆ? ನಾವೆಂದಿಗೂ ಅದನ್ನು ಅರಿಯಲು ಸಾಧ್ಯವಿಲ್ಲ; ಇದನ್ನು ಚೆನ್ನಾಗಿ ನೆನಪಿನಲ್ಲಿಡಿ. ಪುನಃಪುನಃ ನಿಮ್ಮ ಮನದಲ್ಲಿ ಈ ಪ್ರಶ್ನೆಯು ಮೂಡುತ್ತದೆ. ಬ್ರಹ್ಮವಾದರೆ ನಾವು ತಿಳಿಯುವುದು ಹೇಗೆ? (ವಿಜ್ಞಾತಾರಮರೇಕೇನ ವಿಜಾನೀಯಾತ್) "ಓ ಮೈತ್ರೇಯಿ, ತಿಳಿಯುವವನನ್ನೇ ತಿಳಿಯುವುದೆಂತು? ತಿಳಿಯುವವನೇ ಹೇಗೆ ತಿಳಿವಿನ ವಸ್ತುವಾಗಬಲ್ಲನು?" ಕಣ್ಣು ಎಲ್ಲವನ್ನೂ ನೋಡುತ್ತದೆ: ತನ್ನನ್ನು ತಾನು ನೋಡಿಕೊಳ್ಳಬಲ್ಲುದೇ? ಇಲ್ಲ ಅದು ಅಸಾಧ್ಯ. ಅರಿವೇ ಒಂದು ವಿಧವಾದ ಬಂಧನ, ಪರಿಮಿತಿ ಕಲ್ಪನೆ ಮಾಡಿದಂತೆ. ಆರ್ಯಸಂತಾನರೇ, ನೀವು ಇದನ್ನು ಮನಸ್ಸಿನಲ್ಲಿಡಿ, ಇದರಲ್ಲೊಂದು ಮಹಾ ಸತ್ಯವಿದೆ. ನಿಮ್ಮಲ್ಲಿಗೆ ಬಂದಿರುವ ಪಾಶ್ಚಾತ್ಯ ಪ್ರಲೋಭನೆಗಳಿಗೆಲ್ಲ ಆಧ್ಯಾತ್ಮಿಕವಾದ ಆಧಾರವೆಂದರೆ 'ಇಂದ್ರಿಯ ಜ್ಞಾನಕ್ಕಿಂತಲೂ ಉನ್ನತತರವಾದ ಜ್ಞಾನವಿಲ್ಲ' ಎಂಬುದು. ವೇದಗಳನ್ನನುಸರಿಸುವ ಪ್ರಾಚ್ಯರಾದ ನಾವು 'ಜ್ಞಾನವೇ ಜ್ಞೇಯಕ್ಕೊಂದು ಕಲಂಕ; ಏಕೆಂದರೆ ಜ್ಞಾನವು ಸ್ವಭಾವತಃ ಒಂದು ಬಂಧನ, ಪರಿಮಿತಿ' ಎಂದು ಹೇಳುತ್ತೇವೆ. ನಾವು ಒಂದು ವಸ್ತುವನ್ನು ತಿಳಿಯಲು ಹೋದರೆ ಅದು ನಮ್ಮ ಮನಸ್ಸಿನಿಂದ ಪರಿಮಿತವಾಗುತ್ತದೆ. ಶುಕ್ತಿಕೆಯ ಮುಕ್ತಾಫಲ ನಿರ್ಮಾಣದ ದೃಷ್ಟಾಂತವನ್ನು ನೆನಪಿಗೆ ತಂದುಕೊಳ್ಳಿ. ಒಂದು ವಸ್ತುವನ್ನು ತಿಳಿಯುವುದೆಂದರೆ, ತತ್ತ್ವತಃ ಅದನ್ನು ತಿಳಿಯುತ್ತೇವೆ ಎಂದಲ್ಲ. ನಮ್ಮ ಮನಸ್ಸಿನಂತೆ ಅದನ್ನು ನಿರ್ಮಿಸುತ್ತೇವೆ. ನಮ್ಮ ಜ್ಞಾನವೆಲ್ಲವೂ ಅಂತಹುದೆ. ಆದರೆ ಇತರ ವಸ್ತುಗಳನ್ನು ಅರಿತಂತೆ ಬ್ರಹ್ಮವನ್ನು ಅರಿಯಲು ಸಾಧ್ಯವೆ? ಯಾರು ಎಲ್ಲ ಜ್ಞಾನದ ಅಂತಃ ಸತ್ತ್ವ ವಸ್ತುವೋ ಯಾರು ಸಾಕ್ಷಿಯೋ ಯಾರಿಲ್ಲದಿದ್ದರೆ ಜ್ಞಾನವೇ ಇಲ್ಲವೋ ಯಾರು ನಿರ್ಗುಣನೋ ಯಾರು ಸಮಸ್ತ ವಿಶ್ವದ ಏಕಮಾತ್ರ ಸಾಕ್ಷಿಯೋ ಯಾರು ನಮ್ಮಾತ್ಮಗಳಲ್ಲಿ ಅಂತಃ ಸಾಕ್ಷಿಯಾಗಿದ್ದಾನೆಯೋ ಅಂತಹವನಿಗೆ ಮೇರೆಯನ್ನು ಕಲ್ಪಿಸುವುದು ಹೇಗೆ? ಅವನನ್ನು ಹೇಗೆ ತಾನೆ ತಿಳಿಯುತ್ತೀರಿ? ಯಾವುದರಿಂದ ಆತನನ್ನು ಸಾಂತಗೊಳಿಸುತ್ತೀರಿ? ಜಗತ್ತೆಂಬುದು ಆತ್ಮ ತನ್ನನ್ನು ತಾನೇ ಪ್ರಕಾಶಗೊಳಿಸಲು ಕೈಕೊಂಡಿರುವ ಒಂದು ಮಿಥ್ಯಾಪ್ರಯತ್ನ. ಅದು ಆತ್ಮ ಸಣ್ಣದರಿಂದ ಹಿಡಿದು ದೊಡ್ಡದರವರೆಗೆ ಎಲ್ಲಾ ಪ್ರಾಣಿಗಳ ದೇಹ ಮನಸ್ಸುಗಳ ಕನ್ನಡಿಯನ್ನು ತೆಗೆದುಕೊಂಡು ಪರೀಕ್ಷಿಸಿ ನೋಡಿ

ಒಂದೊಂದನ್ನೇ ಅಸಂಪೂರ್ಣವೆಂದು ವಿಸರ್ಜಿಸಿ ಕಟ್ಟಕಡೆಗೆ ಮನುಷ್ಯ ದೇಹದಲ್ಲಿ ಅನಂತವು ಸಾಂತದಿಂದ ಪ್ರಕಾಶಿತವಾಗಿರಲಾರದೆಂಬ ಸಿದ್ಧಾಂತಕ್ಕೆ ಬರುತ್ತದೆಯೋ ಎಂಬಂತಿದೆ. ಅದಾದಮೇಲೆ ಪ್ರತಿಗಮನ (ಹಿಂದಕ್ಕೆ ಹೋಗುವುದು) ಪ್ರಾರಂಭವಾಗುತ್ತಿದೆ. ಅದೇ 'ವೈರಾಗ್ಯ'. ಇಂದ್ರಿಯಗಳಿಂದ ಹಿಂದಕ್ಕೆ ಸರಿ, ಇಂದ್ರಿಯಗಳಕಡೆ ಹೋಗಬೇಡ ಎಂಬುದೇ ವೈರಾಗ್ಯದ ತೂರ್ಯವಾಣಿ. ವೈರಾಗ್ಯದಿಂದಲೇ ನೀತಿ ಧರ್ಮಗಳ ಆಧಾರವಾದ ಸಂಯಮವು ಲಭಿಸುತ್ತದೆ. ಚೆನ್ನಾಗಿ ನೆನಪಿನಲ್ಲಿಡಿ: ನಿಜವಾದ ವೈರಾಗ್ಯವೂ ತಪಸ್ಸೂ ಪ್ರಾರಂಭವಾದಮೇಲೆಯೇ ವಿಶ್ವವು ತನ್ನ ನೈಜಭಾವವನ್ನು ನಿಮಗೆ ಬಿಚ್ಚಿ ತೋರಲು ತೊಡಗುತ್ತದೆ. ನೀವು ಹಿಂದೆ ಹಿಂದೆ ಸರಿದಂತೆಲ್ಲಾ ಜಡಚೇತನ ಮಯನಾದ ಜಗತ್ತು ಕೊಡಬಲ್ಲುದೆಲ್ಲ ನಿಮ್ಮೆದುರು ಪ್ರದರ್ಶಿತವಾಗುತ್ತದೆ. ಅವುಗಳನ್ನು ಒಂದೊಂದನ್ನಾಗಿ ತ್ಯಜಿಸಿದಮೇಲೆಯೆ ನಿಮಗೆ ಸ್ವಸ್ವರೂಪದರ್ಶನವಾಗುತ್ತದೆ. ಅದನ್ನೇ ಮೋಕ್ಷ ಅಥವಾ ಮುಕ್ತಿ ಎಂದು ಕರೆಯುತ್ತಾರೆ.

ನಾವಿದನ್ನು ಚೆನ್ನಾಗಿ ಅರಿಯಬೇಕು:—ವಿಜ್ಞಾತಾರಮತೀಕೇನ ವಿಜಾನೀಯಾತ್ 'ತಿಳಿಯುವವನನ್ನೇ ತಿಳಿಯುವುದೆಂತು?' ತಿಳಿಯುವವನು ತಿಳಿಯಲ್ಪಡಲಾರನು. ಏಕೆಂದರೆ ತಿಳಿಯಲ್ಪಟ್ಟರೆ ಅದು ತಿಳಿಯುವವನಾಗುವುದಿಲ್ಲ. ಕನ್ನಡಿಯ ಪ್ರತಿಬಿಂಬದಲ್ಲಿ ನಿಮ್ಮ ಕಣ್ಣನ್ನು ನೀವು ನೋಡಿಕೊಂಡರೆ ಆ ಕಣ್ಣು ಎಂದೆಂದಿಗೂ ನಿಮ್ಮದಲ್ಲ; ಅದೊಂದು ಅನ್ಯ ಪದಾರ್ಥ, ಪ್ರತಿಬಿಂಬ ಮಾತ್ರ. ಆದರೆ ಈ ಆತ್ಮವು, ನೀವೇ ಆಗಿರುವ ಈ ಅನಂತ ಬ್ರಹ್ಮ. ಬರಿಯ ಸಾಕ್ಷಿ ಮಾತ್ರವಾಗಿದ್ದರೆ ಅದನ್ನು ಹಾಗೆಂದು ತಿಳಿಯುವುದರಿಂದ ಸಾರ್ಥಕತೆಯೇನು? ಅದು ನಮ್ಮಂತೆ ಬದುಕಲಾರದು, ಚಲಿಸಲಾರದು, ಸುಖಪಡಲಾರದು. ಸಾಕ್ಷಿಯಾದುದಕ್ಕೆ ಸುಖ ಲಭಿಸುತ್ತದೆ, ಎಂದರೆ ಜನರಿಗೆ ಅರ್ಥವಾಗುವುದಿಲ್ಲ. ಅದೂ ಅಲ್ಲದೆ ಅನೇಕರು ಹೇಳುತ್ತಾರೆ:—"ಅಯ್ಯೋ ಹಿಂದೂಗಳಿರಾ, ನೀವೆಲ್ಲ ಬರಿಯ ಸಾಕ್ಷಿಗಳೆಂಬ ಸಿದ್ಧಾಂತವನ್ನು ನಂಬಿ ಜಡರೂ ಕೆಲಸಕ್ಕೆ ಬಾರದವರೂ ಆಗಿಹೋಗಿದ್ದೀರಿ." ಅದಕ್ಕೆ ಉತ್ತರವಾಗಿ ನಾವು ಹೀಗೆ ಹೇಳಬಹುದು "ಮೊದಲನೆಯದಾಗಿ, ಸಾಕ್ಷಿಯೊಂದೇ ಭೋಕ್ತೃ, ಎಂದರೆ ಸುಖಪಡತಕ್ಕದ್ದು." ಎಲ್ಲಿಯಾದರೂ ಒಂದು ಕುಸ್ತಿ ನಡೆಯುತ್ತಿದ್ದರೆ ಹೆಚ್ಚು ಸುಖಾನುಭವ ಮಾಡುವವರು ಯಾರು? ಕುಸ್ತಿ ಆಡುವವರೋ? ಅದನ್ನು

ನೋಡುವವರೋ? ಜೀವನದಲ್ಲಿ ನೀವು ಯಾವುದನ್ನು ಸಾಕ್ಷಿ ಮಾತ್ರರಾಗಿ ಅನುಭವಿಸುತ್ತೀರೋ ಅದನ್ನು ಮಾತ್ರವೇ ಹೆಚ್ಚಾಗಿ ಭೋಗಿಸುತ್ತೀರಿ. ಅಂತಹ ಭೋಗವೇ ಆನಂದ. ಆದುದರಿಂದ ನಾವು ಜಗತ್ತಿನ ಸಾಕ್ಷೀ ಭೂತರಾದಾಗಲೇ ಮಾತ್ರ ಅನಂತ ಆನಂದವು ಪ್ರಾಪ್ತವಾಗುತ್ತದೆ. ಆಗಲೇ ನೀವು ಮುಕ್ತರಾಗುವುದು. ಕಾಮವಿಲ್ಲದೆ, ಸ್ವರ್ಗಾಭಿಲಾಷೆ ಯಿಲ್ಲದೆ, ಕೀರ್ತಿ ಅಪಕೀರ್ತಿಗಳ ಭಾವವಿಲ್ಲದೆ ಕರ್ಮಮಾಡುವುದು ಸಾಕ್ಷಿ ಯಾದವನಿಗೆ ಮಾತ್ರವೇ ಸಾಧ್ಯ. ಸಾಕ್ಷಿಯಾದವನು ಮಾತ್ರವೇ ಭೋಕ್ತೃ; ಬೇರೆ ಯಾರೂ ಅಲ್ಲ.

ಅದ್ವೈತ ದರ್ಶನದ ರೀತ್ಯಾ ನೀತಿಶಾಸ್ತ್ರವನ್ನು ವಿಚಾರಮಾಡುವ ಮೊದಲು ಅದ್ವೈತಕ್ಕೆ ಆಧಾರಭೂತವಾದ ಒಂದು ವಿಷಯುವನ್ನು ನಾವು ತಿಳಿದುಕೊಳ್ಳಬೇಕು. ಅದಾವುದೆಂದರೆ 'ಮಾಯಾ'. ಅದ್ವೈತ ದರ್ಶನದ ಈ ಪ್ರತಿಯೊಂದು ವಿಷಯುವನ್ನೂ ತಿಳಿಯಲು ವರ್ಷಗಳು ಬೇಕಾಗುತ್ತವೆ; ಹೇಳಲು ತಿಂಗಳುಗಳು ಬೇಕಾಗುತ್ತವೆ. ಆದುದರಿಂದ ನಾನಿಂದು ಆ ವಿಷಯುಗಳವನ್ನು ಮೇಲೆ ಮೇಲೆ ಮುಟ್ಟಿ ತೇಲಿ ಸಾಗಿದರೆ ನೀವು ಕ್ಷಮಿ ಸುತ್ತೀರೆಂದು ಬಾವಿಸುತ್ತೇನೆ. ಕಾಲ ಕಾಲದಲ್ಲಿಯೂ ಈ ಮಾಯಾ ಸಿದ್ಧಾಂತವು ಜನರ ತಿಳುವಳಿಕೆಗೆ ಅತಿ ಕಷ್ಟಸಾಧ್ಯವೆಂದು ತೋರಿಬಂದಿದೆ. ನಾನು ನಿಮಗೆ ಹೇಳುತ್ತೇನೆ - ಅದು ಸಿದ್ಧಾಂತವೇ ಅಲ್ಲ. ಕಾಲ ದೇಶ ನಿಮಿತ್ತಗಳೆಂಬ ಭಾವಗಳ ಸಂಯೋಗ ಮಾತ್ರವಾಗಿದೆ. ಕಾಲದೇಶ ನಿಮಿತ್ತಗಳು ನಾಮರೂಪಗಳಾಗಿ ವಿಭಾಗಿಸಲ್ಪಟ್ಟಿವೆ. ಸಮುದ್ರದಲ್ಲಿ ಒಂದು ತರಂಗವಿದೆಯೆಂದು ಭಾವಿಸಿ. ಅದು ನಾಮರೂಪಗಳಿಂದ ಮಾತ್ರವೇ ಸಮುದ್ರದಿಂದ ಬೇರೆಯಾಗಿದೆ. ಈ ನಾಮರೂಪಗಳು ತರಂಗ ದಿಂದ ಬೇರೆಯಾಗಿ ಇರಲಾರದು. ಅದು ತರಂಗದೊಂದಿಗೇ ಇರುತ್ತವೆ. ತರಂಗ ಕಣ್ಮರೆಯಾಗಬಹುದು. ಆದರೆ ನಾಮ ರೂಪಗಳು ಸಂಪೂರ್ಣ ನಾಶವಾದರೂ ಆ ತರಂಗ ರೂಪವಾದ ಜಲದ ಪ್ರಮಾಣ ಇದ್ದೇ ಇರುತ್ತದೆ. ಆದ್ದರಿಂದ ನಿಮಗೂ ನನಗೂ ಪ್ರಾಣಿಗಳಿಗೂ ಮನುಷ್ಯರಿಗೂ, ನರನಿಗೂ ದೇವತೆಗೂ, ಇತರ ಎಲ್ಲ ವಸ್ತುಗಳಿಗೂ ಪರಸ್ಪರ ಭೇದವಿರುವಂತೆ ಕಾಣುವುದು ಈ 'ಮಾಯೆ' ಯಿಂದಲೇ. ಅಷ್ಟೇ ಅಲ್ಲ. ಈ ಮಾಯೆಯ ದೆಸೆಯಿಂದಲೇ ನಿತ್ಯ ಮುಕ್ತವಾಗಿರುವ ಆತ್ಮವು ನಾಮ ರೂಪದಿಂದ ವಿವಿಧವೂ ಅಸಂಖ್ಯವೂ ಆಗಿರುವ ಜೀವನಗಳಲ್ಲಿ ಬಂಧಿತವಾಗಿರುವಂತೆ

ತೋರುತ್ತದೆ. ನಾಮರೂಪಗಳಿಂದ ಬಿಡಿಸಿ, ಅದನ್ನು ಕೇವಲವಾಗಿ ಮಾಡಿದರೆ ವಿಶ್ವವು ಎಂದೆಂದಿಗೂ ಕಣ್ಮರೆಯಾಗಿ ನೀವು ಸ್ವಸ್ವರೂಪಸ್ಥಿತರಾಗುತ್ತೀರಿ. ಇದೇ 'ಮಾಯೆ'. ಮತ್ತೆ ಹೇಳುತ್ತೇನೆ; ಅದು ಬರಿಯ ಸಿದ್ಧಾಂತ ಮಾತ್ರವಲ್ಲ. ವಾಸ್ತವ ಘಟನೆಗಳ ನಿರೂಪಣೆ. ಯಥಾರ್ಥ ವಾದಿಯು (ವಾಸ್ತವವಾದಿ - Realist) ಈ ಜಗತ್ತು 'ಇದೆ' ಎಂದು ಹೇಳಬೇಕಾದರೆ ಅವನ ಅಭಿಪ್ರಾಯವಿದು: ಈ ಮೇಜಿಗೆ ತನ್ನದೇ ಆದ ಒಂದು ಸ್ವತಂತ್ರ ಅಸ್ತಿತ್ವವಿದೆ; ಈ ವಿಶ್ವದಲ್ಲಿರುವ ಮತ್ತಾವ ವಸ್ತುವಿನ ಅಸ್ತಿತ್ವದ ಆಧಾರದ ಮೇಲೂ ಇದು ನಿಂತಿಲ್ಲ. ನಮಗಾಗುವ ವಸ್ತು ಜ್ಞಾನಕ್ಕೆ ಮೂರು ಮೆಟ್ಟಲುಗಳಿವೆ; ಪ್ರತಿಯೊಂದು ಭಾವವೂ ಬೇರೆ ಬೇರೆಯಾಗಿದೆ ಎಂದು ತಿಳಿಯುವ ಪೃಥಗ್ಭಾವ ಒಂದನೆ ಮೆಟ್ಟಲು; ಒಂದಕ್ಕೊಂದು ಪರ ತಂತ್ರವಾಗಿದೆ ಎಂದು ತಿಳಿಯುವ ಸಂಬಂಧ ಭಾವವು ಎರಡನೆಯದು; ಏಕವಾದುದನ್ನೇ ಅನೇಕವಾಗಿ ಕಾಣುತ್ತೇವೆ ಎಂಬುದು ಕಡೆಯದು. ಅಜ್ಞಾನಿಗಳ ದೇವರೆಂದರೆ, ಒಬ್ಬ ಸಮರ್ಥನಾದ ದೊಡ್ಡ ಮನುಷ್ಯ; ನಮಗಿಂತಲೂ ಸಾವಿರಪಾಲು ಸಮರ್ಥನು; ಸಾವಿರ ಪಾಲು ದೊಡ್ಡವನು. ಅವನು ಜಗತ್ತಿನ ಹೊರಗಡೆ ಮುಗಿಲಿನಾಚೆ ಎಲ್ಲಿಯೋ ಆಕಾಶದಲ್ಲಿ ವಾಸಿಸುತ್ತಾನೆ. ಆ ದೇವರು ತರ್ಕದೃಷ್ಟಿಯಿಂದಲೂ ಆತ್ಮ ದೃಷ್ಟಿಯಿಂದಲೂ ಹೇಗೆ ಅಸಮಂಜಸನು ಮತ್ತು ಅಸಂಪೂರ್ಣನು ಎಂಬುದನ್ನು ನಾವಾಗಲೇ ವಿಚಾರಿಸಿದ್ದೇವೆ. ಅದಾದ ತರುವಾಯ ಮನುಷ್ಯರ ಮನಸ್ಸಿಗೆ ಬರುವ ಈಶ್ವರ ಭಾವವೆಂದರೆ, ಸರ್ವವ್ಯಾಪಿಯೂ ಸರ್ವತ್ರ ಪ್ರಕಾಶಿಸಿತವೂ ಆಗಿರುವ ಒಂದು ಶಕ್ತಿ. ಇದನ್ನೇ ಸಗುಣ ಈಶ್ವರನೆಂದು ಕರೆಯುತ್ತಾರೆ. 'ಚಂಡಿ' ಯಲ್ಲಿ ದೊರೆಯುವ ಭಾವವೂ ಇದೇ. (ಮಾರ್ಕಂಡೇಯ ಪುರಾಣದಲ್ಲಿ ಸೃಷ್ಟಿಸ್ಥಿತಿಲಯ ಕರ್ತೃವಾದ 'ಶಕ್ತಿ' ಯನ್ನು ವರ್ಣಿಸುವ ಚಂಡೀ ಸ್ತೋತ್ರ). 'ಸಗುಣ - ಈಶ್ವರ' ಎಂದರೆ ಸುಗುಣ - ಈಶ್ವರನಲ್ಲ ವೆಂಬುದನ್ನು ಮರೆಯಬೇಡಿ. ಅವನು ಸಕಲ ಕಲ್ಯಾಣ ಗುಣಸಂಪನ್ನನು ಮಾತ್ರವೇ ಅಲ್ಲ. ದೇವ ಸೈತಾನನೆಂಬ ಎರಡು ದೇವರನ್ನು ಇಟ್ಟುಕೊಳ್ಳಲಾರಿರಿ. ಒಬ್ಬನನ್ನೇ ಇಟ್ಟುಕೊಳ್ಳಬೇಕು. ಒಳ್ಳೆಯದಕ್ಕೂ ಕೆಟ್ಟದಕ್ಕೂ ಅವನೊಬ್ಬನೇ ಕಾರಣವೆಂದು ಹೇಳುವ ಸಹಾಸವನ್ನು ಮಾಡಲೇಬೇಕು. ಅದರಿಂದ ಏನೇ ಆದರೂ 'ಏಕ' ವನ್ನೇ ಇಟ್ಟುಕೊಳ್ಳಬೇಕು (ಯಾ ದೇವಿ ಸರ್ವ ಭೂತೇಷು ಶಾಂತಿರೂಪೇಣ

ಸಂಸ್ಥಿತಾ। ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ॥ ಯಾ ದೇವಿ ಸರ್ವ ಭೂತೇಷು ಭ್ರಾಂತಿರೂಪೇಣ ಸಂಸ್ಥಿತಾ। ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ॥ – ಚಂಡೀ ) ಆ ಏಕಾತ್ಮನು ನನ್ನ ಮುಂದಿರುವ ಈ ದೀಪದಂತೆ. ಇದರ ಬೆಳಕಿನಲ್ಲಿ ಒಳ್ಳೆಯ ಕೆಲಸವನ್ನಾದರೂ ಮಾಡ ಬಹುದು; ಸುಳ್ಳುಪತ್ರವನ್ನು ಬೇಕಾದರೂ ಸೃಜಿಸಬಹುದು. ಇದು ಈಶ್ವರ ವಿಚಾರವಾದ ಜ್ಞಾನದಲ್ಲಿ ಎರಡನೇ ಮೆಟ್ಟಿಲು. ಮೂರನೆಯ ಮೆಟ್ಟಿಲೆಂದರೆ; ದೇವರು ಪ್ರಕೃತಿಯ ಒಳಗಾಗಲಿ ಹೊರಗಾಗಲಿ ಇಲ್ಲ ಆದರೆ ಈಶ್ವರ, ಪ್ರಕೃತಿ, ಆತ್ಮ ಈ ಪದಗಳು ಎಲ್ಲ ಒಂದನ್ನೇ ಸೂಚಿಸುತ್ತದೆ. ಒಂದಕ್ಕೆ ಬದಲಾಗಿ ಇನ್ನೊಂದು ಪದವನ್ನು ಉಪಯೋಗಿಸಬಹುದು. ಮೇಲೆ ಹೇಳಿದ ಎರಡು ಸಿದ್ಧಾಂತಗಳನ್ನು ನೀವೆಂದಿಗೂ ಒಟ್ಟಿಗೆ ಕಾಣಲಾರಿರಿ. ಒಂದೇ ಕಾಲದಲ್ಲಿ ದೇಹ ಮತ್ತು ಆತ್ಮಗಳೆರಡನ್ನೂ ಕಾಣುವುದು ಅಸಾಧ್ಯ ವಾಗಿರುವಂತೆ. ಅವುಗಳನ್ನು ಬೇರೆ ಬೇರೆಯಾಗಿ ಕಾಣಲು ಸಾಧ್ಯ ವೆಂಬುದು ನಿಮಗೆ ಅಧ್ಯಾತ್ಮಶಾಸ್ತ್ರದ ಪಾರಿಭಾಷಿಕ ಪದಗಳಿಂದ ಲಭಿ ಸಿರುವ ಭ್ರಾಂತಿ ಮಾತ್ರ ವಾಗಿದೆ. ಆ ಭ್ರಾಂತಿಯಿಂದ ನೀವೊಂದು ದೇಹವೆಂದೂ ನಿಮಗೊಂದು ಆತ್ಮವಿದೆಯೆಂದೂ, ನೀವು ದೇಹ ಮತ್ತು ಆತ್ಮಗಳ ಸಮಷ್ಟಿ ಎಂದೂ ಊಹಿಸುತ್ತೀರಿ. ಅದು ಹೇಗಾದೀತು? ನಿಮ್ಮ ಮನಸ್ಸಿನಲ್ಲಿಯೇ ಆಲೋಚಿಸಿ ನೋಡಿ. ಅದು ಅಸಾಧ್ಯವೆಂಬುದು ನಿಮಗೇ ಗೊತ್ತಾಗುತ್ತದೆ. ಯೋಗಿಯಾದವನು ತಾನು ಚೈತನ್ಯ ಎಂದು ತಿಳಿಯುವುದರಿಂದ ಆತನಿಗೆ ದೇಹ ಬುದ್ಧಿಯು ಇರುವುದೇ ಇಲ್ಲ. ಸಾಧಾ ರಣನಾದವನು ತಾನು ದೇಹವೆಂದು ತಿಳಿಯುವುದರಿಂದ ಅವನ ಭಾಗಕ್ಕೆ ಚೈತನ್ಯವು ನಾಸ್ತಿ ಎಂದೇ ಹೇಳಬೇಕು. ತತ್ತ್ವಶಾಸ್ತ್ರದಲ್ಲಿ ದೇಹ ಮತ್ತು ಆತ್ಮ ಎಂಬ ಮಾತುಗಳನ್ನು ಉಪಯೋಗಿಸುವುದರಿಂದ ನೀವು ಅವೆರಡೂ ಸೇರಿ ಮನುಷ್ಯನಾಗಿದ್ದಾನೆ ಎಂದು ಭಾವಿಸುತ್ತೀರಿ. ಒಂದೇ ಸಾರಿಗೆ ದೇಹವೂ ಆತ್ಮವೂ ಆಗಿರುವುದು ಅಸಂಭವ. ದೇಹಭಾವವಿದ್ದರೆ ಆತ್ಮವಿಲ್ಲ; ಆತ್ಮಭಾವವಿದ್ದರೆ ದೇಹವಿಲ್ಲ, ಆದುದರಿಂದ ಒಂದೊಂದೂ ಒಂದು ಸಾರಿ. ಪ್ರಕೃತಿ ಕಾಣುವಾಗ ಈಶ್ವರನು ಕಾಣುವುದಿಲ್ಲ. ಈಶ್ವರನು ಕಂಡಾಗ ಪ್ರಕೃತಿ ಮಾಯವಾಗುತ್ತದೆ. ಕಾರ್ಯವು ಕಾಣಿಸುವಾಗ ಕಾರಣವು ಎಂದಿಗೂ ಕಾಣಿ ಸುವುದಿಲ್ಲ. ಕಾರಣವು ಕಂಡು ಬಂದರೆ ಕಾರ್ಯವು ಮಾಯವಾಗುತ್ತದೆ. ಆಗ "ಜಗತ್ತೆಲ್ಲಿ? ಅದನ್ನಾರು ನುಂಗಿದರು?" ಎಂದು ಕೂಗುವಂತಾಗುತ್ತದೆ.

"ನಿರಾಕಾರವೂ ಅಪ್ರಮೇಯವೂ ನಿರುಪಮವೂ, ನಿರ್ಗುಣವೂ ಆಗಿರುವ ಬ್ರಹ್ಮವು ಓ ಬುದ್ಧಿವಾನ್, ಸಮಾಧಿಯಲ್ಲಿ ನಿನ್ನ ಹೃದಯ ಮಧ್ಯೆ ರಂಜಿಸುತ್ತದೆ." "ಯಾರಲ್ಲಿ ಪ್ರಕೃತಿ ವಿಕೃತಿಗಳೆಲ್ಲ ಎಂದೆಂದಿಗೂ ಕೊನೆಗಾಣುತ್ತವೆಯೋ, ಯಾರು ಚಿಂತಾತೀತ ಚಿಂತಾಮಣಿಯಾಗಿ ದ್ದಾನೆಯೋ, ಯಾರನ್ನು ವೇದಗಳು ನಮ್ಮ ಅಸ್ತಿತ್ವದ ಅಂತಃಸಾರವೆಂದು ಕರೆಯುತ್ತಿವೆಯೋ ಅದೇ ಸಮಾಧಿಯಲ್ಲಿ ಅನುಭವಗೋಚರವಾಗುವ ಬ್ರಹ್ಮ" "ಜನನ ಮರಣಾತೀತವಾಗಿ ಅನಂತವಾಗಿ ಅನುಪಮವಾಗಿ ಪ್ರಲಯ ಮಹಾ ಜಲರಾಶಿಯಂತೆ— ಮೇಲೆ ಕೆಳಗೆ ಸುತ್ತ ಮುತ್ತಲು ಹಬ್ಬಿ ತಬ್ಬಿರುವ ನಿಸ್ತರಂಗ ಸ್ತಬ್ಧ ವಾರಿ ವಿಸ್ತಾರದಂತೆ ಮೌನವಾಗಿ ಶಾಂತ ವಾಗಿ ಸರ್ವ ಮತದರ್ಶನಗಳನ್ನೂ ಕ್ಲೇಶ ಕಷ್ಟಗಳನ್ನೂ ಚಿರವಾಗಿ ಕೊನೆ ಗಾಣಿಸಿ, ಪರಬ್ರಹ್ಮವು ನಿಮ್ಮ ಹೃದಯಗಳ ಮಧ್ಯೆ ಸಮಾಧಿಯಲ್ಲಿ ಪ್ರಕಾ ಶಿತ ವಾಗುತ್ತದೆ." ಅಂತಹ ಸಾಕ್ಷಾತ್ಕಾರವು ಮಾನವ ಸಾಧ್ಯ ವಾದುದು. ಅದು ಸಿದ್ಧಿಸಿತೆಂದರೆ ಜಗತ್ತು ನಮ್ಮ ದೃಷ್ಟಿಗೆ ಆಮೂಲಾಗ್ರ ವಾಗಿ ಬದಲಾಯಿಸುತ್ತದೆ. ವಿಶ್ವವು ಈಗ ನಮಗೆ ತೋರುವಂತೆ ಆಮೇಲೆ ತೋರುವುದೇ ಇಲ್ಲ.

ಈ ಪರಬ್ರಹ್ಮವು, ಈ ಸತ್ಯಸ್ಯ ಸತ್ಯವು ಅಜ್ಞಾತವಾದುದೆಂದೂ ಹಿಂದೆ ಹೇಳಿದೆ, ಆದರೆ ಅದು ಸಂದೇಹವಾದಿಯ ದೃಷ್ಟಿಯಿಂದ ಹೇಳಿದ ಮಾತಲ್ಲ. ನಾವದನ್ನು ತಿಳಿಯಲಾರದೆ ಇರುವುದಕ್ಕೆ ಕಾರಣವೇನೆಂದರೆ ನಾವು ಈಗಾ ಗಲೇ ಅದಾಗಿದ್ದೇವೆ. ಅದನ್ನು ತಿಳಿದಿದ್ದೇವೆ ಎಂಬುದು ಶುದ್ಧ ನಾಸ್ತಿಕತೆ. ಆ ಬ್ರಹ್ಮವು ಹೇಗೆ ಒಂದು ದೃಷ್ಟಿಯಲ್ಲಿ ಈ ಮೇಜೇ ಆಗಿದ್ದರೂ ಇನ್ನೊಂದು ದೃಷ್ಟಿಯಲ್ಲಿ ಈ ಮೇಜು ಆಗಿಲ್ಲ ಎಂಬುದನ್ನೂ ವಿಚಾರಿಸಿದ್ದೇವೆ. ಈ ಮೇಜಿನ ನಾಮರೂಪಗಳನ್ನು ತೆಗೆದುಹಾಕಿದರೆ ಉಳಿಯುವುದೇ ಬ್ರಹ್ಮ. ಏಕೆಂದರೆ ಬ್ರಹ್ಮವೇ ಅದಾಗಿ ಎಲ್ಲ ವಸ್ತುಗಳ ಸಾರಸತ್ತ್ವವೂ ಬ್ರಹ್ಮವೇ ಆಗಿರುತ್ತದೆ.

"ನೀನೇ ಸ್ತ್ರೀ, ನೀನೇ ಪುರುಷ, ಯೌವನ ಗರ್ವದಿಂದ ಮೆರೆಯುವ ಯುವಕ ಯುವತಿಯೂ ನೀನೇ, ಕೋಲು ಹಿಡಿದು ತತ್ತರಿಸಿ ನಡೆಯುವ ವೃದ್ಧನೂ ನೀನೇ, ಎಲ್ಲವೂ ನೀನೇ, (ತ್ವಂ ಸ್ತ್ರೀ ತ್ವಂ ಪುಮಾನಸಿ। ತ್ವಂ ಕುಮಾರ ಉತ ವಾ ಕುಮಾರೀ॥ ತ್ವಂ ಜೀರ್ಣೋ ದಂಡೇನ ವಂಚಸಿ। ತ್ವಂ ಜಾತೋ ಭವಸಿ ವಿಶ್ವತೋ ಮುಖಃ॥ ಶ್ವೇತಾಶ್ವತರ ಉಪನಿಷತ್ತು) ಅದೇ ಅದ್ವೈತ ಸಿದ್ಧಾಂತದ ವಿಷಯ. ಇನ್ನೆರಡು ಮಾತು. ವಸ್ತುಗಳ ಅಂತಃ

ಸತ್ವದ ವಿಷಯವು ನಿಮಗಿಲ್ಲಿ ವಿಷದವಾಗುತ್ತದೆ. ವೈಜ್ಞಾನಿಕರ ತಾರ್ಕಿಕರ ಮತ್ತು ಇತರರ ವಾದಬಾಣಗಳಿಗೆಲ್ಲ ಅದ್ವೈತ ಒಂದೇ ಪ್ರತಿವಾದ ಬಾಣ. ಬುದ್ಧಿಗೆ ಇಲ್ಲಿ ಬಲವಾದ ಆಧಾರವಿದೆ. ಆದರೆ ವೇದಾಂತಿಯು ಅದ್ವೈತಕ್ಕೆ ನಮ್ಮನ್ನು ಕೊಂಡೊಯ್ಯುವ ಇತರ ಸೋಪಾನಗಳನ್ನು ಅಲ್ಲಗಳೆಯುವುದಿಲ್ಲ. ಹಿಂದಕ್ಕೆ ನೋಡಿ ಅವುಗಳನ್ನು ಆಶೀರ್ವದಿಸುತ್ತಾನೆ. ಕೇವಲ ಸತ್ಯವನ್ನು ಹೇಳದಿದ್ದರೂ ಅವುಗಳು ಹೇಳಿದ್ದರಲ್ಲಿ ಆಯಾ ದೃಷ್ಟಿಯಿಂದ ಸತ್ಯಾಂಶವಿದೆ ಎಂಬುದು ಆತನಿಗೆ ಗೊತ್ತು. ಅವುಗಳು ಕೊಟ್ಟ ದರ್ಶನವೇನೋ ಸತ್ಯದ್ದೇ ಹೌದು. ಆದರೆ ಮಾಯಾವೇಷ್ಟಿತ ಸತ್ಯದ್ದು. ವಿಚಿತ್ರವಾಗಿ ಕಂಡು ಬಂದರೂ ಅದೂ ಸತ್ಯದ ದರ್ಶನವೇ ಹೌದು. ಯಾವ ದೇವರನ್ನು ಅಜ್ಞಾನಿಯು ಪ್ರಕೃತಿಯ ಹೊರಗೆ ಇರುವಂತೆ ಕಾಣುತ್ತಾನೆಯೋ, ಅಲ್ಪ ಜ್ಞಾನಿಯು ಅಂತರ್ಯಾಮಿಯಾಗಿ ಕಾಣುತ್ತಾನೆಯೋ, ಜ್ಞಾನಿಯು ತನ್ನಾತ್ಮವಾಗಿಯೂ ಸರ್ವ ವಿಶ್ವವಾಗಿಯೂ ಕಾಣುತ್ತಾನೆಯೋ ಆತನು ಏಕವೂ ಅದ್ವಿತೀಯವೂ ದೃಷ್ಟಿ ಭೇದದಿಂದ ಮಾತ್ರವೇ ವಿಭಿನ್ನರೂಪಿಯೂ ಆಗಿರುವ ಪರಬ್ರಹ್ಮವು. ಆ ಮೆಟ್ಟಲುಗಳು ಸತ್ಯಮಾತ್ರವೇ ಅಲ್ಲ ಸತ್ಯದಿಂದ ಉತ್ತಮತರ ಸತ್ಯಕ್ಕೆ ನಮ್ಮನ್ನು ಒಯ್ಯುವ ಯಾನಗಳು. ವಿಜ್ಞಾನಕ್ಕೂ ಸಾಮಾನ್ಯಜ್ಞಾನಕ್ಕೂ ಇರುವ ಭೇದವೇನು? ಏನಾದರೂ ಅಪೂರ್ವ ಘಟನೆ ಸಂಭವಿಸಿದಾಗ ಹಳ್ಳಿಯವನೊಬ್ಬನನ್ನು ಅದಕ್ಕೆ ಕಾರಣವೇನು ಎಂದು ಕೇಳಿದರೆ ಅವನು ಯಾವುದಾದರೂ ಪಿಶಾಚಿಯ ಹೆಸರು ಹೇಳುತ್ತಾನೆ. ಏಕೆಂದರೆ ಘಟನೆಗಳ ಅಥವಾ ಕಾರ್ಯಗಳ ಹೊರಗೆ ಕಾರಣಗಳನ್ನು ಹುಡುಕುವುದು ಅಜ್ಞಾನದ ಸ್ವಭಾವ. ಕಲ್ಲು ಕೆಳಗೆ ಬಿದ್ದರೆ ಯಾವುದೋ ಭೂತ ಎಸೆಯಿತೆಂದು ಭಾವಿಸುತ್ತಾನೆ; ಆದರೆ ವಿಜ್ಞಾನಿ ಭೂಮಿಯಲ್ಲಿರುವ ಆಕರ್ಷಣ ಶಕ್ತಿಯೇ ಅದಕ್ಕೆ ಕಾರಣವೆಂದು ತಿಳಿಯುತ್ತಾನೆ.

ಮತ ಮತ್ತು ವಿಜ್ಞಾನಗಳಿಗೆ ನಡೆಯುವ ದ್ವಂದ್ವ ಯುದ್ಧಕ್ಕೆ ಈ ಭಿನ್ನ ದೃಷ್ಟಿಯೇ ಕಾರಣವಾಗಿದೆ. ಮತಗಳೆಲ್ಲ ಪ್ರಾಕೃತ ಘಟನೆಗಳಿಗೆ ಅಪ್ರಾಕೃತ ಅಥವಾ ಅತಿ ಪ್ರಾಕೃತ ಕಾರಣಗಳನ್ನು ಉಪಪತ್ತಿಯಾಗಿ ಒಡ್ಡಿವೆ. ಆದ್ದರಿಂದಲೇ ಅವು ಸೂರ್ಯ ಚಂದ್ರ ಗಾಳಿ ಬೆಂಕಿ ಎಲ್ಲವುಗಳಲ್ಲಿಯೂ ಒಂದೊಂದು ದೇವತೆಯಿದೆಯೆಂದು ಕಲ್ಪಿಸಿವೆ. ಎಂದರೆ ಹೆಚ್ಚು ಕಡಿಮೆ ಪ್ರಕೃತಿ ಜೀವನದಲ್ಲಿ ಪ್ರಾಪ್ತವಾಗುವ ಒಂದೊಂದು ವಿಕೃತಿ ವ್ಯತ್ಯಾಸಗಳಿಗೂ ಒಂದು ಉದ್ದೇಶವೇನೋ ಕಾರಣಾನ್ವೇಷಣೆ; ಬಹಿಃ

ಕಾರಣಾನ್ವೇಷಣೆ. ಆದರೆ ವಿಜ್ಞಾನವೆಂದರೆ ವಸ್ತು ಅಥವಾ ಘಟನೆಯು ಒಳಗಡೆಯೇ ಎಂದರೆ ಸ್ವಭಾವದಲ್ಲಿಯೇ ಕಾರಣವನ್ನು ಹುಡುಕುವುದು. ವಿಜ್ಞಾನ ಶಾಸ್ತ್ರವು ಮುಂದುವರಿದಹಾಗೆಲ್ಲಾ ಹೆಜ್ಜೆ ಹೆಜ್ಜೆಗೂ ವಸ್ತು ಮತ್ತು ಘಟನೆಗಳಿಗೆ ಸ್ವಾಭಾವಿಕವಾದ ಕಾರಣಗಳನ್ನು ಹುಡುಕಿ ಹುಡುಕಿ ಹೇಳುತ್ತಿದೆ. ಅದ್ವೈತ ವೊಂದೇ ವೈಜ್ಞಾನಿಕ ವಿಧಾನವನ್ನು ಅಂಜದೆ ಗ್ರಹಿಸಬಲ್ಲುದು. ಏಕೆಂದರೆ ಅದ್ವೈತ ಮತ ಸರ್ವ ಶ್ರೇಷ್ಠವಾದ ವೈಜ್ಞಾನಿಕ ಮತ. ಅದು ಹೇಳುತ್ತದೆ: ಈ ಜಗತ್ತು ವಿಶ್ವದ ಹೊರಗಿರುವ ಯಾವ ದೇವರಿಂದಾಗಲೀ ಅಥವಾ ಯಾವ ಅತಿ ಪ್ರಾಕೃತ ಭೂತದಿಂದಾಗಲೀ ಸೃಷ್ಟಿಯಾಗಿಲ್ಲ ಇದು ಸ್ವಯಂ ಸೃಷ್ಟಿಯಾಗುತ್ತದೆ. ಸ್ವಯಂ ಲಯವಾಗುತ್ತದೆ. ಸ್ವಯಂ ಪ್ರಕಾಶಿತವಾಗುತ್ತವೆ. ಅದು ಅನಂತವಾದುದು. ಅದು ಪರಬ್ರಹ್ಮ "ತತ್ತ್ವಮಸಿ"–"ನೀನೇ ಅದು". ಇದೇ ಅದ್ವೈತಿಯ ಸಿದ್ಧಾಂತ. ವಿಚಾರಿಸಿ ನೋಡಿ, ಇದೊಂದೇ ನಿಜವಾದ ವೈಜ್ಞಾನಿಕ ಮತವಾಗಲು ಅರ್ಹವಾಗಿದೆ. ಈ ಭರತಖಂಡದಲ್ಲಿ ಅರ್ಧ ವಿದ್ಯಾವಂತರಾದವರಲ್ಲಿ ನಡೆಯುತ್ತಿರುವ ವಿಜ್ಞಾನ ಶಾಸ್ತ್ರದ ಹರಟೆಯನ್ನು ಕೇಳಿದರೆ ಪ್ರತಿ ದಿನವೂ ನನ್ನ ಕಿವಿಗೆ ಬೀಳುತ್ತಿರುವ ವಿಚಾರ ವಾದ ಯುಕ್ತ ವಾದ ಮೊದಲಾದುವುಗಳ ಗಲಭೆಯನ್ನು ಕೇಳಿದರೆ ನೀವೆಲ್ಲರೂ ಧೈರ್ಯದಿಂದಲೂ ಸಾಹಸದಿಂದಲೂ ಅದ್ವೈತಿಗಳಾಗಿ ಬಹು ಜನರ ಹಿತಕ್ಕಾಗಿಯೂ ಆ ತತ್ತ್ವಗಳನ್ನು ಜನರಿಗೆ ಅಂಜದೆ ಬೋಧಿಸುತ್ತೀರೆಂದು ಹಾರೈಸುತ್ತೇನೆ. ಹಾಗೆ ಮಾಡದೇ ಇದ್ದರೆ ನೀವೆಲ್ಲರೂ ಹೇಡಿಗಳೆಂದು ಭಾವಿಸುತ್ತೇನೆ. ನಿಮ್ಮ ಹೇಡಿತನವನ್ನು ಬಿಡಲಾಗದಿದ್ದರೆ, ಕ್ಲೈಬ್ಯವೇ ನಿಮಗೆ ನೆವವಾಗುವ ಪಕ್ಷದಲ್ಲಿ ಇತರರಿಗೂ ಅದೇ ಸ್ವಾತಂತ್ರ್ಯವನ್ನು ಬಿಟ್ಟುಕೊಡಿ. ಬಡಮೂರ್ತಿ ಪೂಜಕನನ್ನು ಏಕೆ ಭಂಗಿಸುತ್ತೀರಿ? ಅವನನ್ನೇಕೆ ಪಿಶಾಚಿ ಎಂದು ಕರೆಯುತ್ತೀರಿ? ನಿಮಗಿಂತಲೂ ಭಿನ್ನಾಭಿಪ್ರಾಯ ಉಳ್ಳವರಿಗೆಲ್ಲ ನಿಮ್ಮ ಅಭಿಪ್ರಾಯವನ್ನೇ ಬಲಾತ್ಕಾರದಿಂದ ಬೋಧಿಸುತ್ತ ಹೋಗಬೇಡಿ. ವಿದ್ಯಾರ್ಜನೆಮಾಡಿರುವ ನೀವೇ ಹೇಡಿಗಳಾಗಿರುವಾಗ, ನೀವೇ ಸಮಾಜಕ್ಕೆ ಹೆದರಿ ನಡೆಯುವಾಗ, ನಿಮ್ಮ ಪುರಾತನ ಮೌಢ್ಯಗಳು ನಿಮ್ಮನ್ನೆ ಬೆದರಿಸುತ್ತಿರುವಾಗ, ಏನೂ ತಿಳಿಯದ ಬಡ ಜನರನ್ನು ಅವು ಎಷ್ಟರ ಮಟ್ಟಿಗೆ ಬೆದರಿಸುತ್ತಿರಬೇಕು? ಇನ್ನೆಷ್ಟರಮಟ್ಟಿಗೆ ಬಂಧಿಸುತ್ತಿರಬೇಕು? ಆದಕಾರಣ ಇತರರ ಮೇಲೆ ಕರುಣೆ ಇರಲಿ. ದೇವರ ದಯೆಯಿಂದ ನಾಳೆಯೇ

ಎಲ್ಲರೂ ಅದ್ವೈತಿಗಳಾದರೆ! ಮಾತಿನಲ್ಲಲ್ಲ ಕಾರ್ಯದಲ್ಲಿ. ಆದರೆ ಅದು ಸಾಧ್ಯವಲ್ಲ. ಆದಕಾರಣ ದ್ವಿತೀಯೋತ್ತಮವಾದುದನ್ನು ಕೈಕೊಳ್ಳುವ; ಅಜ್ಞಾನಿಗಳನ್ನು ಕೈ ಹಿಡಿದು ಮೆಟ್ಟಲು ಮೆಟ್ಟಲಾಗಿ ಅವರ ಬಲಪ್ರಮಾಣ ವಿರುವಂತೆ ಹೆಜ್ಜೆಯಿಡಿಸಿ ಮೇಲೆತ್ತುವಹಾಗೆ ಮಾಡಿದರೆ ಪ್ರತಿಯೊಂದು ಹೆಜ್ಜೆಯಿಂದಾಗುವ ಧರ್ಮೋನ್ನತಿಯು ಸತ್ಯವೂ ಶಾಶ್ವತವೂ ಪುರೋ ಗಾಮಿಯೂ ಆಗುತ್ತದೆ. ಅಂತಹ ಪ್ರಗತಿಯೂ ಅಧಮದಿಂದ ಉತ್ತಮ ಕ್ಕೆಂದು ಭಾವಿಸಬೇಡಿ, ಉತ್ತಮದಿಂದ ಉತ್ತಮತರಕ್ಕೆಂದು ತಿಳಿಯಿರಿ.

ಅದ್ವೈತದ ನೀತಿ ಶಾಸ್ತ್ರದ ವಿಚಾರವಾಗಿ ಇನ್ನೆರಡು ಮಾತು ಹೇಳಬೇಕಾಗಿದೆ. ಈಚೀಚಿಗೆ ಹುಡುಗರೆಲ್ಲ ಲಘುವಾಗಿ ಮಾತಾಡಲು ತೊಡಗಿದ್ದಾರೆ.—ಯಾರು ಹೇಳಿಕೊಟ್ಟರೋ ಏನೋ ದೇವರೇ ಬಲ್ಲ!— ಅದ್ವೈತವು ಜನರನ್ನು ಅನೀತಿಯುತರನ್ನಾಗಿ ಮಾಡುತ್ತದಂತೆ. ನಾವೆಲ್ಲರೂ ಒಂದೇ ಆಗಿ, ನಾವೆಲ್ಲರೂ ದೇವರೇ ಆಗಿರುವ ಪಕ್ಷದಲ್ಲಿ ನೀತಿಯಿಂದೇನು ಪ್ರಯೋಜನ? ಆದರೆ ಅದು ಕಿರಾತನ ತರ್ಕ; ಅಂತಹ ಕಿರಾತರನ್ನು ಚಾವಟಿಯಿಂದ ಮಾತ್ರವೇ ಹತೋಟಿಯಲ್ಲಿಡಲು ಸಾಧ್ಯ. ಯಾವಾಗಲೂ ಚಾವಟಿಯಿಂದ ಮಾತ್ರವೇ ಹತೋಟಿಗೆ ಬರುವ ಮನುಷ್ಯನು ಮೊದಲು ಆತ್ಮಹತ್ಯ ಮಾಡಿಕೊಳ್ಳಬೇಕು. ನೀತಿಗೆ ಅದ್ವೈತಕ್ಕಿಂತಲೂ ಹೆಚ್ಚು ಸಕಾರಣವಾದ ವಿವರಣೆಯು ಬೇರೊಂದಿಲ್ಲ. ಇತರರಿಗೆ ಒಳ್ಳೆಯದು ಮಾಡುವುದು, ಅಸ್ವಾರ್ಥಪರರಾಗಿರುವುದು ಇದೇ ನೀತಿಯ ಸಾರವೆಂದು ಎಲ್ಲ ಮತಗಳೂ ಸಾರುತ್ತವೆ. ಏಕೆ? ಯಾವುದೋ ದೇವತೆಯೋ ಅವತಾರವೋ ಹಾಗೆ ಹೇಳದೆಯೆಂತಲೇ? ಹಾಗೆ ಹೇಳುವವನ ಗೋಜಿಗೆ ನಾನು ಬರುವುದಿಲ್ಲ! ಯಾವುದೋ ಧರ್ಮಗ್ರಂಥವು ವಿಧಿಸಿದೆಯೆಂತಲೇ? ಅಂತಹವನಿಗೂ ನನಗೂ ಸಂಬಂಧವಿಲ್ಲ! ಅವನವನು ಅವನವನಿಗೇ; ಹಿಂದೆ ಬಿದ್ದವನು ಮಣ್ಣು ಮುಕ್ಕಲಿ; ಹೀಗೆಂಬುದೇ ಈ ಪ್ರಪಂಚದಲ್ಲಿ ಅನೇಕರ ನೀತಿಯಾಗಿದೆ. ನಾನೇಕೆ ನೀತಿವಂತನಾಗಿರಬೇಕು? ಕಾರಣ ವೇನು? ಭಗವದ್ಗೀತೆಯಲ್ಲಿ ಹೇಳಿರುವ ತತ್ತ್ವವನ್ನು ತಿಳಿದ ಹೊರತು ನಮಗೆ ಸರಿಯಾದ ಉಪಪತ್ತಿ ದೊರಕುವುದಿಲ್ಲ. ಗೀತೆಯು ಹೇಳುತ್ತಿದೆ; "ಎಲ್ಲರನ್ನು ತನ್ನಲ್ಲಿಯೂ ತನ್ನನ್ನು ಎಲ್ಲರಲ್ಲಿಯೂ ಕಾಣುವುದರಿಂದ ಯಾವಾತನು ಸರ್ವ ಭೂತಗಳಲ್ಲಿಯೂ ಈಶ್ವರನನ್ನೇ ದರ್ಶಿಸುತ್ತಾನೆಯೋ ಅಂತಹ ಮುನಿಯು ಆತ್ಮದಿಂದ ಆತ್ಮನನ್ನು ಕೊಲ್ಲುವುದಿಲ್ಲ". ನೀನು

ಇತರರಿಗೆ ಕೊಟ್ಟ ಪೀಡನೆಯು ನಿನ್ನನ್ನೇ ಪೀಡಿಸುತ್ತದೆ ಎಂಬುದು ಅದ್ವೈತದಿಂದ ಗೊತ್ತಾಗುತ್ತಿದೆ. ಏಕೆಂದರೆ ಎಲ್ಲವೂ ನೀನೆ. ನಿನಗೆ ತಿಳಿದಿರಲಿ ತಿಳಿಯದಿರಲಿ. ಎಲ್ಲ ಕೈಗಳಿಂದಲೂ ನೀನು ಕೆಲಸಮಾಡುತ್ತೀಯೆ. ಎಲ್ಲ ಕಾಲುಗಳಿಂದಲೂ ನೀನು ನಡೆಯುತ್ತೀಯೆ. ಅರಮನೆಯಲ್ಲಿ ಆನಂದ ಪಡುವ ದೊರೆಯೂ ನೀನೇ; ಬೀದಿಯಲ್ಲಿ ತಿರುಪೆ ಬೇಡಿ ತೊಳಲುವ ತಿರುಕನೂ ನೀನೆ; ಪಂಡಿತನೂ ನೀನೇ ಪಾಮರನೂ ನೀನೇ. ಬಲಿಷ್ಟನೂ ನೀನೇ ದುರ್ಬಲನೂ ನೀನೇ. ಇದನ್ನು ತಿಳಿದು ಸಹಾನುಭೂತಿಯಿಂದಿರು. ಆದ ಕಾರಣವೇ ನಾವು ಇತರರನ್ನು ನೋಯಿಸಬಾರದು. ಅದಕ್ಕಾಗಿಯೇ ನಾನು ಹಸಿದು ಸಾಯುವ ಕಾಲ ಬಂದರೂ ಲೆಕ್ಕಿಸುವುದಿಲ್ಲ. ಏಕೆಂದರೆ ನಾನು ಹಸಿದು ಸಾಯುವ ಸಮಯದಲ್ಲಿಯೇ ಇತರ ಲಕ್ಷಾಂತರ ಬಾಯಿಗಳು ಊಟ ಮಾಡುತ್ತಿರುತ್ತವೆ. ಅವೆಲ್ಲವೂ ನನ್ನವೇ ಆದುದರಿಂದ 'ನಾನು' 'ನನ್ನದು' ಎಂಬುದನ್ನು ನಾನು ಗಮನಿಸಬಾರದು. ಏಕೆಂದರೆ ವಿಶ್ವವೆಲ್ಲಾ ನನ್ನದೆ. ಅದರಲ್ಲಿರುವ ಅಸಂಖ್ಯ ಸುಖಗಳನ್ನೂ ಸಮಸ್ತ ಆನಂದವನ್ನೂ ಒಂದೇ ಸಾರಿಗೆ ನಾನು ಅನುಭವಿಸುತ್ತಿರುತ್ತೇನೆ. ವಿಶ್ವದಲ್ಲಿ ಐಕ್ಯವಾಗಿರುವ ನನ್ನನ್ನಾರು ಕೊಲ್ಲಬಲ್ಲರು? ಇಲ್ಲಿದೆ ಸಕಲ ನೀತಿಯ ಆಧಾರ. ಇತರರು ನೀತಿಯನ್ನೇನೋ ಬೋಧಿಸುತ್ತಾರೆ. ಆದರೆ ಅದಕ್ಕೆ ಕಾರಣಗಳನ್ನು ಕೊಡಲಾರರು.

ಆತ್ಮ ಬ್ರಹ್ಮರ ಏಕತೆಯನ್ನು ಸಾರುವ ಈ ಅದ್ವೈತ ತತ್ತ್ವವನ್ನು ಮೊದಲು ಆಲಿಸಬೇಕು, ಆಮೇಲೆ ಆಲೋಚಿಸಬೇಕು. ಕಡೆಗೆ ಅನುಭವಿಸಬೇಕು (ಶ್ರೋತವ್ಯೋ, ಮಂತವ್ಯೊ ನಿದಿಧ್ಯಾಸಿತವ್ಯಃ) ಹೀಗೆ ಮಾಡುವುದರಿಂದ ಪ್ರಯೋಜನವೇನು? ಶಕ್ತಿ ಮತ್ತು ಜ್ಯೋತಿ! ನಿಮ್ಮನ್ನು ಸುತ್ತಿರುವ, ನೀವೇ ಹರಡಿರುವ ಮಾಯೆಯ ಜಾಲಿಯನ್ನು ಹರಿದುಹಾಕುತ್ತದೆ, ನಿಮ್ಮ ಆತ್ಮಕ್ಕಾಗಲಿ ಅಥವಾ ಇತರ ಮಾನವ ವರ್ಗಕ್ಕಾಗಲಿ, ದುರ್ಬಲವಾದ ಆಲೋಚನೆಗಳನ್ನು ನೀಡಬೇಡಿ: ದುರ್ಬಲವಾದ ವಾಕ್ಯಗಳನ್ನು ಹೇಳಬೇಡಿ. ಎಲ್ಲ ಪಾಪಗಳೂ ಎಲ್ಲ ಕೇಡುಗಳೂ ಉತ್ಪನ್ನವಾಗುವುದು 'ದುರ್ಬಲತೆ' ಎಂಬ ಒಂದು ಪದದಿಂದ. ಪಾಪಕಾರ್ಯಗಳಿಗೆ ಪ್ರೇರಿಸುವುದು ದುರ್ಬಲತೆ; ತಪ್ಪುಗಳಿಗೆ ತಾಯಿ ದುರ್ಬಲತೆ; ಮಾಡಬಾರದುದನ್ನು ಮಾಡಿಸುವುದು ದುರ್ಬಲತೆ; ನಮ್ಮ ನೈಜಭಾವವನ್ನು ಮರೆಮಾಡಿ ಅನ್ಯತಾ ಭಾವವನ್ನು ವಿಕ್ಷೇಪಿಸುವುದೂ ದುರ್ಬಲತೆ. ಎಲ್ಲರಿಗೂ ತಮ್ಮ

ತಮ್ಮ ನೈಜ ಸ್ವರೂಪವು ತಿಳಿಯಲಿ; ಎಲ್ಲರೂ ಹಗಲಿರುಳೂ ತಮ್ಮ ಸ್ವರೂಪದ ವಿಚಾರವಾಗಿಯೇ ಮಂತ್ರಜಪ ಮಾಡಲಿ. ತಾಯಿಯ ಸ್ತನ್ಯ ದೊಡನೆ ಆ ಶಕ್ತಿಭಾವವೂ ಶಿಶುವಿಗೆ ಲಭಿಸಲಿ. ಶಿವೋಹಂ, ಶಿವೋಹಂ ಎಂಬ ಶಕ್ತಿ ಮಂತ್ರವು ಎಲ್ಲರ ಮನಸ್ಸನ್ನು ಪ್ರವೇಶಿಸಲಿ, ಆ ಮಂತ್ರದಿಂದ ಲೋಕವು ಇದುವರೆಗೂ ಕಾಣದಿರುವ ಶಕ್ತಿಗಳೂ ಕಾರ್ಯಗಳೂ ಹೊರ ಹೊಮ್ಮುವುದರಲ್ಲಿ ಸಂದೇಹ ವಿಲ್ಲ. ಆದುದರಿಂದ ನಾವದನ್ನು ಮೊದಲು ಮಾಡಬೇಕಾಗಿದೆ. ಅದ್ವೈತವು ಕಾರ್ಯಕಾರಿಯಲ್ಲವೆಂದು, ಎಂದರೆ ಅದು ಇನ್ನೂ ಲೌಕಿಕದಲ್ಲಿ ವ್ಯಕ್ತವಾಗಿಲ್ಲವೆಂದು ಕೆಲವರು ಹೇಳುತ್ತಾರೆ. ಆ ಹೇಳಿಕೆಯಲ್ಲಿ ಸ್ವಲ್ಪ ಮಟ್ಟಿಗೆ ಸಿಜಾಂಶವಿದೆ. ಅಂತೆಯೇ ಅದಕ್ಕೆ ಪರಿಹಾರವೂ ಇದೆ. ಈ ವೇದ ಮಂತ್ರವನ್ನು ನೆನಪಿಗೆ ತಂದುಕೊಳ್ಳಿ— "ಓಂ ಇದು ಮಹಾರಹಸ್ಯ; ಓಂ ಇದು ಮಹಾ ಸಂಪತ್ತು; ಈ ಓಂ ಕಾರದ ರಹಸ್ಯ ವನ್ನು ಅರಿತವನಿಗೆ ಬಯಕೆಗಳೆಲ್ಲ ಕೈಗೂಡುತ್ತವೆ" (ಓಮಿತ್ಯೇಕಾಕ್ಷರಂ ಬ್ರಹ್ಮ ಓಮಿತ್ಯೇಕಾಕ್ಷರಂ ಪರಂ। ಓ ಮಿತ್ಯೇಕಾಕ್ಷರಂ ಜ್ಞಾತ್ವಾ ಯೋ ಯದಿಚ್ಛತಿ ತಸ್ಯ ತತ್॥ ಕಠೋಪನಿಷತ್) ಮೊದಲು ನೀವು ಈ ಓಂಕಾರದ ರಹಸ್ಯವನ್ನು 'ನೀನೇ ಅದು' ಎಂಬುದನ್ನು ಅರಿಯಬೇಕು. "ತತ್ತ್ವ ಮಸಿ" ಎಂಬ ಮಂತ್ರದ ರಹಸ್ಯವನ್ನು ತಿಳಿಯಬೇಕು. ಹಾಗೆ ಮಾಡಿ ದರೇನೇ ನಿಮ್ಮಿಚ್ಛೆಯಂತೆ ನೀವಾಗುತ್ತೀರಿ, ಲೌಕಿಕದಲ್ಲಿಯೂ ಮಹತ್ವ ಸಂಪಾದನೆ ಮಾಡಬೇಕಾದರೆ "ನೀನೇ ಅದು" ಎಂಬುದನ್ನು ನಂಬಬೇಕು. ನಾನೊಂದು ಸಣ್ಣಗುಳ್ಳೆಯಾಗಿರಬಹುದು. ನೀವು ಪರ್ವತೋಪಮ ತರಂಗವಾಗಿರಬಹುದು. ಆದರೆ ನಮ್ಮಿಬ್ಬರಿಗೂ ಅನಂತ ಸಮುದ್ರವು ಆಧಾರವೆಂಬುದನ್ನು ತಿಳಿಯಬೇಕು. ಅನಂತನಾದ ಈಶ್ವರನು ನಮ್ಮೆಲ್ಲ ರಿಗೂ ಶಕ್ತಿಸಾಗರನು. ಆ ಶಕ್ತಿ ನಿಧಿಯಿಂದ ನಾವು ಬೇಕಾದಷ್ಟನ್ನು ಸೇದಿ ಕೊಳ್ಳಬಹುದು. ಆದ್ದರಿಂದ ನಿಮ್ಮಲ್ಲಿ ನೀವು ನಂಬಿಕೆ ಇಡಿ. ಆತ್ಮ ಶ್ರದ್ಧೆಯೇ ಅದ್ವೈತದ ಗುಟ್ಟು. ಮೊದಲು ಆತ್ಮಶ್ರದ್ಧೆ, ತರುವಾಯ ಉಳಿದುದೆಲ್ಲ. ಇದೇ ಅದ್ವೈತದ ಮಹಾರಹಸ್ಯ. ಜನಾಂಗಗಳನ್ನು ನೋಡಿದರೆ ಆತ್ಮಶ್ರದ್ಧೆಯುಳ್ಳ ಜನಾಂಗಗಳೇ ಕೀರ್ತಿ ಸಂಪತ್ತನ್ನು ಸಂಪಾ ದಿಸಿವೆ ಎಂಬ ವಿಷಯವು ಗೊತ್ತಾಗುತ್ತದೆ. ಒಂದೊಂದು ಜನಾಂಗದ ಇತಿಹಾಸವನ್ನು ತೆಗೆದುಕೊಂಡರೂ ಆತ್ಮ ಶ್ರದ್ಧೆಯುಳ್ಳ ವ್ಯಕ್ತಿಗಳೇ ಕೀರ್ತಿ ವಂತರೂ, ಶಕ್ತಿವಂತರೂ ಆಗಿದ್ದಾರೆಂಬುದು ಸ್ಪಷ್ಟವಾಗುತ್ತದೆ. ಇಲ್ಲಿಗೆ

ಈ ನಮ್ಮ ಭರತಖಂಡಕ್ಕೆ ಒಬ್ಬ ಇಂಗ್ಲೀಷರವನು ಬಂದನು. ಅವನೊಬ್ಬ ಕ್ಷುದ್ರ ಕರಣಿಕನಾಗಿದ್ದನು. ಹಣಸಾಲದುದಕ್ಕಾಗಿಯೂ ಇತರ ಕಾರಣಗಳಿಗಾಗಿಯೂ ಎರಡುಸಾರಿ ತಲೆಗೆ ಗುಂಡಿನಿಂದ ಹೊಡೆದುಕೊಂಡು ಮಿದುಳನ್ನು ಹಾರಿಸಿ ಆತ್ಮ ಹತ್ಯ ಮಾಡಿಕೊಳ್ಳಲು ಪ್ರಯತ್ನಿಸಿದನು. ಆದರೆ ಪ್ರಯತ್ನ ಸಫಲವಾಗಲಿಲ್ಲ. ತರುವಾಯ ಆತನಲ್ಲಿ ಆತ್ಮ ಶ್ರದ್ಧೆ ಮೂಡಿತು. ತಾನು ಮಹತ್ಕಾರ್ಯಗಳನ್ನು ಮಾಡುವುದಕ್ಕಾಗಿಯೇ ಹುಟ್ಟಿದ್ದೇನೆ ಎಂದು ನಂಬಿದನು. ಆ ಮನುಷ್ಯನೇ ಮುಂದೆ ಲಾರ್ಡ್‌ಕ್ಲೈವ್ ಎಂಬ ಹೆಸರಿನಿಂದ ಒಬ್ಬ ದೊಡ್ಡ ಚಕ್ರಾಧಿಪತ್ಯ ಸ್ಥಾಪಕನಾದನು. ಅವನೆಲ್ಲಿಯಾದರೂ ಪಾದ್ರಿಗಳನ್ನು ನಂಬಿ ಹೊಟ್ಟೆಯ ಮೇಲೆ ಹರಿದಾಡುತ್ತಾ "ಓ ದೇವರೇ ನಾನು ದುರ್ಬಲ; ಪಾಪಿ; ನಾನು ಹೀನ ಮನುಷ್ಯ" ಎಂದು ಹೇಳಿಕೊಂಡಿದ್ದರೆ ಅವನೆಲ್ಲಿರುತ್ತಿದ್ದನು? ಹುಚ್ಚಾಸ್ಪತ್ರೆಯಲ್ಲಿ! ನಿಮಗೆ ದುರ್ಬಲಕಾರಿಗಳಾದ ವಿಷಯಗಳನ್ನು ಬೋಧಿಸಿ ಮರುಳರನ್ನಾಗಿ ಮಾಡಿದ್ದಾರೆ. ನಾನು ಜಗತ್ತನ್ನೆಲ್ಲಾ ಸಂಚರಿಸಿ ಈ ದೌರ್ಬಲ್ಯ ಬೋಧನೆಯ ವಿಷಮಯಪರಿಣಾಮವನ್ನು ಕೃತ್ರಿಮ ದೀನತೆಯನ್ನೂ ಕಣ್ಣಾರೆ ಕಂಡಿದ್ದೇನೆ. ಆ ಬೋಧನೆಗಳು ಮಾನವ ವರ್ಗಕ್ಕೆ ನಾಶಕಾರಿಗಳಾಗಿವೆ. ಅಂತಹ ಬೋಧನೆಯಲ್ಲಿ ಬೆಳೆದ ನಮ್ಮ ಮಕ್ಕಳು ಅರೆಮರುಳಾಗಿರುವುದು ಮಹದಾಶ್ಚರ್ಯವೇನು?

ಇದೇ ಅದ್ವೈತ ವೇದಾಂತದ ಲೌಕಿಕ ಅಂಶ, ಎಂದರೆ ಕಾರ್ಯಕಾರಿಯಾದ ಅಂಶ. ಆದ್ದರಿಂದ ನಿಮ್ಮಲ್ಲಿ ನೀವು ಶ್ರದ್ಧೆ ಇಡಿ. ನಿಮಗೆ ಲೌಕಿಕ ಸಂಪತ್ತು ಬೇಕಾದರೆ ಸಾಹಸದಿಂದ ಕೆಲಸಮಾಡಿರಿ. ಲಭಿಸಿಯೇ ಲಭಿಸುತ್ತದೆ. ನೀವು ಮಹಾಮೇಧಾವಿಗಳಾಗಬೇಕಾದರೆ ಮಾನಸಿಕ ಭೂಮಿಕೆಯಲ್ಲಿ ಸಾಧನಮಾಡಿ; ಮಹಾಮೇಧಾವಿಗಳಾಗಿಯೇ ಆಗುತ್ತೀರಿ. ನಿಮಗೆ ಮುಕ್ತಿಬೇಕಾದರೆ ಧಾರ್ಮಿಕ ಭೂಮಿಕೆಯಲ್ಲಿ ಸಾಧನಮಾಡಿ; ನೀವು ದೇವತೆಗಳಾಗಿಯೇ ಆಗುತ್ತೀರಿ. ಪೂರ್ಣಾನಂದದ ನಿರ್ವಾಣವನ್ನು ಹೊಂದಿಯೇ ಹೊಂದುತ್ತೀರಿ. ಇದರಲ್ಲಿ ದೋಷವೆಂದರೆ ಅದ್ವೈತವು ಇದುವರೆಗೆ ಧರ್ಮಭೂಮಿಕೆಯಲ್ಲಿಯೇ ನಿಂತುಬಿಟ್ಟಿತು. ಅದನ್ನು ಇನ್ನು ಮುಂದೆ ಕರ್ಮಭೂಮಿಕೆಗೆ ಎಳೆದು ತರುವುದು ನಮ್ಮ ಕರ್ತವ್ಯ. ಇನ್ನು ಮುಂದೆ ಅದು 'ರಹಸ್ಯ' ಮಾತ್ರವಾಗಿರಬಾರದು: ಹಿಮಾಲಯ ಪರ್ವತಗಳ ಗುಹವನಾಂತರಗಳಲ್ಲಿರುವ ಸಾಧು ಸನ್ಯಾಸಿಗಳ ಗುಟ್ಟು 'ಗಂಟು'

ಮಾತ್ರ ಆಗಿರಬಾರದು; ಅದು ಸಾಮಾನ್ಯ ಜನಗಳ ದಿನದಿನದ ಉಪ ಯೋಗ ವಸ್ತುವಾಗಬೇಕು. ಅದು ಅರಸರ ಅರಮನೆಗಳಲ್ಲಿಯೂ ಋಷಿ ಗಳ ಎಲೆವನೆಗಳಲ್ಲಿಯೂ ಕಾರ್ಯಕಾರಿಯಾಗುವಂತೆಯೇ ಬಡವನ ಗುಡಿ ಸಲಿನಲ್ಲಿಯೂ ತಿರುಕನ ಬೀದಿಯಲ್ಲಿಯೂ ಎಲ್ಲರಲ್ಲಿಯೂ ಎಲ್ಲೆಲ್ಲಿಯೂ ಕಾರ್ಯಕಾರಿಯಾಗಬೇಕು. ಗೀತೆಯು ಹೇಳುವಂತೆ—ಸ್ವಲ್ಪ ಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್—ಈ ತತ್ತ್ವದ ಸ್ವಲ್ಪ ಮಾತ್ರ ಅನುಷ್ಠಾನವೂ ಕೂಡ ಮಹತ್ತಾದ ಭಯದಿಂದ ನಮ್ಮನ್ನು ಪಾರುಮಾಡು ತ್ತದೆ. ಆದಕಾರಣ ನಿಮ್ಮ ಜೀವನದಲ್ಲಿ ಪ್ರತಿಯೊಂದು ಸಮಯದಲ್ಲಿಯೂ ಪ್ರತಿಯೊಂದು ವಿಷಯದಲ್ಲಿಯೂ ಈ ತತ್ತ್ವವನ್ನು ಪ್ರಯೋಗಿಸಲಾರದ ಮಾತ್ರಕ್ಕೆ ಅಧೈರ್ಯಪಡಬೇಡಿ. ಏಕೆಂದರೆ ಭಗವಾನ್ ಶ್ರೀಕೃಷ್ಣನು ಹೇಳುವಂತೆ ಈ ಧರ್ಮವು ಎಷ್ಟು ಮಹತ್ತಾದುದೆಂದರೆ, ಇದರ ಅಲ್ಪ ಮಾತ್ರ ಅನುಷ್ಠಾನದಿಂದಲೂ ಕೂಡ ಮಹಾ ಶ್ರೇಯಸ್ಸು ಲಭಿಸುತ್ತದೆ. ಆದ್ದರಿಂದ ಆರ್ಯಮಾತೆಯ ಪುತ್ರರಿರಾ ಎಚ್ಚರಗೊಳ್ಳಿ, ಎದ್ದೇಳಿ, ಸೋಮಾರಿಗಳಾಗಬೇಡಿ; ಗುರಿಯು ದೊರಕುವವರೆವಿಗೂ ನಿಲ್ಲಬೇಡಿ. ಜಾತಿಭೇದಗಳಿಲ್ಲದೆ, ಲಿಂಗಭೇದವನ್ನು ತೊರೆದು, ವರ್ಣವ್ಯತ್ಯಾಸಗಳನ್ನು ಲೆಕ್ಕಿಸದೆ ಎಲೆಲ್ಲಿಯೂ ಎಲ್ಲರಲ್ಲಿಯೂ ಜೀವನದ ಪ್ರತಿಯೊಂದು ಭೂಮಿಕೆ ಯಲ್ಲಿಯೂ ಅದ್ವೈತವನ್ನು ಅನುಷ್ಠಾನಮಾಡುವ ಸುಸಮಯವು ನಿಮ ಗೀಗ ಪ್ರಾಪ್ತವಾಗಿದೆ. ಆಕಾಶದಲ್ಲಿ ಇರುವ ಅದನ್ನು ಭೂಮಿಗೆ ಎಳೆದು ತರೋಣ. ಇದೇ ನಮ್ಮ ಮುಂದಿರುವ ಆಧುನಿಕ ಕರ್ತವ್ಯ. 'ಅದನ್ನು ಕೈಗೂಡಿಸದ ಹೊರತೂ ನಿಲ್ಲಬೇಡಿ' ಎಂದು ನಮ್ಮ ಪೂರ್ವಿಕರ ಆತ್ಮಗಳು ಕೂಗುತ್ತಿವೆ. ಅದ್ವೈತ ತತ್ತ್ವವು ಸರ್ವರಿಗೂ ತಿಳಿದು ಬರಲಿ. ಶ್ರೀಮಂತ ದರಿದ್ರರೆಂಬ ವ್ಯತ್ಯಾಸವಿಲ್ಲದೆ ಅದು ಜಗತ್ತಿನ ಎಲ್ಲಾ ಭಾಗಗಳಲ್ಲಿಯೂ ಹರಡಲಿ. ಸಮಾಜದ ಮೂಲೆಮೂಲೆಗಳನ್ನು ಅದು ಪ್ರವೇಶಿಸಲಿ. ಅದು ಎಲ್ಲ ಜನರ ಹಕ್ಕಾಗಲಿ. ನಮ್ಮ ನಾಡಿಗಳಲ್ಲಿ ಹರಿದು ನಮ್ಮ ಒಂದೊಂದು ರಕ್ತಬಿಂದುವಿನಲ್ಲಿಯೂ ಚಿಮ್ಮಿ ಅದ್ವೈತವು ನಮ್ಮ ಜೀವನದ ಜೀವವಾಗಿ ಪರಿಣಮಿಸಲಿ. ಕೇಳಿದರೆ ನಿಮಗೆ ಆಶ್ಚರ್ಯವಾಗಬಹುದು; ಆದರೆ ಕರ್ಮಭೂಮಿಕೆಯಲ್ಲಿ ಐರೋಪ್ಯರು ನಮಗಿಂತಲೂ ಹೆಚ್ಚು ವೇದಾಂತಿ ಗಳೆಂಬುದು ವಾಸ್ತವವಾದುದು. ನ್ಯೂಯಾರ್ಕ್ ನಗರದ ಸಮುದ್ರ ತೀರ ದಲ್ಲಿ ನಿಂತು ಅಲ್ಲಿಗೆ ಬರುತ್ತಿದ್ದ ವಿದೇಶೀಯರನ್ನು ನೋಡುತ್ತಿದ್ದೆ.

ಪ್ರಪಂಚದ ನಾನಾಭಾಗಗಳಿಂದ ಜರ್ಝರಿತರಾಗಿ ಪತಿತರಾಗಿ ಹತಾಶರಾಗಿ ಸಣ್ಣ ಪುಟ್ಟ ಬಟ್ಟೆಯ ಗಂಟುಗಳನ್ನು ಹೊತ್ತು ಚಿಂದಿಬಟ್ಟೆಯನ್ನುಟ್ಟು ಮನುಷ್ಯರನ್ನು ಮುಖವೆತ್ತಿನೋಡಲು ಸಾಮರ್ಥ್ಯವಿಲ್ಲದವರಾಗಿ ಅಸಂಖ್ಯಾತ ಜನಗಳು ಅಲ್ಲಿಗೆ ಬರುತ್ತಿದ್ದರು. ಒಬ್ಬ ಪೋಲೀಸಿನವನನ್ನು ಕಂಡರೆ ಹೆದರಿ, ದಾರಿಯ ಮತ್ತೊಂದು ಪಕ್ಕಕ್ಕೆ ಹೋಗುತ್ತಿದ್ದರು. ಅಂತಹ ಕುರಿಗಳು ಆರೇ ತಿಂಗಳಲ್ಲಿ ಸುಸಜ್ಜಿತವಸನಭೂಷಿತರಾಗಿ ಕತ್ತೆತ್ತಿ ಬೀದಿಯಲ್ಲಿ ಸಿಂಹಗಳಂತೆ ಓಡಾಡುತ್ತಿದ್ದರು! ಈ ಅದ್ಭುತ ಮಾರ್ಪಾಡಿಗೆ ಕಾರಣವೇನು? ಅದರಲ್ಲೊಬ್ಬನು ಬಹುಶಃ ಆರ್ಮೇನಿಯಾದಿಂದಲೋ ಅಥವಾ ಇನ್ನಾವ ದೇಶದಿಂದಲೋ ಬಂದವನಾಗಿರಬಹುದು. ಅಲ್ಲಿ ಎಲ್ಲರೂ ಅವನನ್ನು ಕಾಲಿನಿಂದ ತುಳಿದು, ಅವನು ಯಾವಾಗಲೂ ಹಾಗೆಯೇ ಇರಬೇಕೆಂದು ಹೇಳುತ್ತಿದ್ದರು. ಅವನೆಲ್ಲಿಯಾದರೂ ತಲೆಯೆತ್ತಲು ಪ್ರಯತ್ನಪಟ್ಟರೆ ಜೀವವನ್ನೇ ಹಿಂಡಿ ತೆಗೆಯುತ್ತಿದ್ದರು. ಅಲ್ಲಿ ಅವನ ಸುತ್ತಣ ಗಾಳಿಯೂ ಕೂಡ "ಗುಲಾಮ, ನೀನು ಹುಟ್ಟು ಗುಲಾಮ; ನೀನು ಹಾಗೆಯೇ ಇರಬೇಕು. ಹುಟ್ಟು ದರಿದ್ರ ನೀನು, ದಾರಿದ್ರ್ಯವೇ ನಿನ್ನ ಬಾಳು" ಎಂದು ಹೇಳುತ್ತಿತ್ತು. ಆದರೆ ಅವನು ನ್ಯೂಯಾರ್ಕ್ ಬೀದಿಗಳಲ್ಲಿ ಕಾಲಿಟ್ಟ ಕೂಡಲೇ ಒಳ್ಳೆಯ ಉಡುಪನ್ನು ಧರಿಸಿದ ದೊಡ್ಡ ಮನುಷ್ಯರೂ ಕೂಡ ತನಗೆ ಹಸ್ತಲಾಘವ ಕೊಡುವುದನ್ನು ಕಂಡನು. ಅಲ್ಲಿ ಒಳ್ಳೆಯ ಬಟ್ಟೆ ಹಾಕಿದವನಿಗೂ ಹಾಕದವನಿಗೂ ಭೇದವೇ ಇರಲಿಲ್ಲ. ಮತ್ತು ಸ್ವಲ್ಪ ದೂರ ಹೋದಮೇಲೆ ಒಂದು ಒಳ್ಳೆಯ ಹೋಟಲಿನಲ್ಲಿ ದೊಡ್ಡಮನುಷ್ಯರು ಮೇಜಿನ ಸುತ್ತ ಊಟ ಮಾಡುತ್ತಿರುವುದನ್ನು ಕಂಡನು. ಅವರು ಇವನನ್ನು ಸಹ ಪಂಕ್ತಿಗೆ ಕರೆದರು. ಹೀಗೆ ಅವನು ಸುತ್ತಾಡಿದಂತೆಲ್ಲಾ ಒಂದು ನೂತನ ಜೀವನ ಕ್ರಮವನ್ನೂ ಲೋಕದಲ್ಲಿ ತನ್ನನ್ನು ಗೌರವ ಯೋಗ್ಯವಾದ ಮನುಷ್ಯನೆಂದು ಪರಿಗಣಿಸುವ ಸ್ಥಳವನ್ನೂ ಕಂಡುಹಿಡಿದನು. ಬಹುಶಃ ಅವನು ವಾಷಿಂಗ್‌ಟನ್ನಿಗೆ ಹೋಗಬಹುದು. ಸಂಯುಕ್ತ ಸಂಸ್ಥಾನದ ಅಧ್ಯಕ್ಷರೊಡನೆ ಕೈಕುಲುಕಿಸುವುದನ್ನು ಕಂಡು, ತಾನೂ ಧೈರ್ಯತಂದುಕೊಂಡು ಅವರಂತೆಯೇ ಮಾಡಿದನು. ಹೀಗೆ ಮಾಯೆಯ ಯವನಿಕೆಯು ಮೆಲ್ಲಮೆಲ್ಲನೆ ಹರಿದು ಬೀಳತೊಡಗಿತು. ಸ್ವಾತಂತ್ರ್ಯ ಮೂರ್ತಿಯಾಗಿದ್ದ ಅವನು, ದೌರ್ಬಲ್ಯ–ದಾಸ್ಯ–ಬೋಧನೆಯ ಮಾಯೆಯಿಂದ ಗುಲಾಮನಾಗಿದ್ದ. ಅವನು ಎಚ್ಚೆತ್ತು ನೋಡುತ್ತಾನೆ: ಜಗತ್ತಿನ

ಮನುಷ್ಯರಲ್ಲಿ ತಾನೂ ಒಬ್ಬ ಮಾನ್ಯವ್ಯಕ್ತಿಯಾಗಿದ್ದಾನೆ! ನಮ್ಮ ದೇಶದಲ್ಲಿ, ವೇದಾಂತದ ಜನ್ಮಸ್ಥಾನವಾದ ಈ ಪುಣ್ಯಭೂಮಿಯಲ್ಲಿ, ನಮ್ಮ ಸಾಮಾನ್ಯ ಜನಗಳು ದೌರ್ಬಲ್ಯ – ದಾಸ್ಯ – ಬೋಧನೆಯಿಂದ ಅನೇಕ ಕಾಲದಿಂದಲೂ ಸಮ್ಮೋಹಿತರಾಗಿದ್ದಾರೆ. ಅವರನ್ನು ಮುಟ್ಟಿದರೆ ಮೈಲಿಗೆಯಂತೆ, ಅವರ ಜೊತೆಯಲ್ಲಿ ಕುಳಿತರೆ ಮೈಲಿಗೆಯಂತೆ! ದರಿದ್ರರಾಗಿ ಹುಟ್ಟಿದವರು ದಾರಿದ್ರ್ಯದಲ್ಲಿಯೇ ಇರಬೇಕಂತೆ. ಪರಿಣಾಮವಾಗಿ ಅವರೆಲ್ಲರೂ ಅಧೋಗತಿಗೆ ಇಳಿದೂ ಇಳಿದೂ ಇನ್ನು ಮುಂದೆ ಇಳಿಯಲಸಾಧ್ಯವಾದ ಸ್ಥಿತಿಗೆ ಬಂದುಬಿಟ್ಟಿದ್ದಾರೆ. ಏಕೆಂದರೆ ಇನ್ನಾವ ದೇಶದಲ್ಲಿ ಮನುಷ್ಯರು ದನಗಳ ಕೊಟ್ಟಿಗೆಯಲ್ಲಿ ಮಲಗಿ ನಿದ್ರಿಸುತ್ತಾರೆ? ಇದಕ್ಕಾಗಿ ಯಾರನ್ನೂ ದೂಷಿಸಬೇಡಿ. ಅಜ್ಞಾನಿಗಳು ಮಾಡುವ ಅಪರಾಧಕ್ಕೆ ಪಕ್ಕಾಗಬೇಡಿ. ಕಾರಣವೂ ಕಾರ್ಯವೂ ಎರಡೂ ನಮ್ಮಲ್ಲಿಯೇ ಇವೆ. ದೂಷಣೆಗೆ ನಾವೇ ಬಾಧ್ಯರು. ಎದ್ದುನಿಂತು ಧೈರ್ಯವಾಗಿ ಆ ದೂಷಣೆಯನ್ನು ಭುಜದ ಮೇಲೆ ಹೊತ್ತುಕೊಳ್ಳೋಣ. ಸುಮ್ಮನೆ ಇತರರ ಮುಖಕ್ಕೆ ಕೆಸರನ್ನು ಎರೆಚುತ್ತಾ ಹೋಗಬೇಡಿ. ನಿಮ್ಮಲ್ಲಿರುವ ಕೇಡು ಕಷ್ಟಗಳಿಗೆಲ್ಲ, ನೀವೇ ಕಾರಣ. ಬೇರೆ ಕಾರಣವಿಲ್ಲ.

ಲಾಹೋರ್ ನಗರದ ತರುಣರಿರಾ, ಇದನ್ನು ತಿಳಿಯಿರಿ. ಈ ವಂಶ ಪಾರಂಪರ್ಯವಾಗಿ ಬಂದ ರಾಷ್ಟ್ರೀಯ ಮಹಾಪಾಪ ನಿಮ್ಮ ತಲೆಯ ಮೇಲಿದೆ ಎಂಬುದನ್ನು ತಿಳಿಯಿರಿ. ನೀವು ಸಾವಿರಾರು ಸುಧಾರಕ ಸಂಘಗಳನ್ನು ನಿರ್ಮಿಸಬಹುದು, ಲಕ್ಷಾಂತರ ಕಾಂಗ್ರೆಸ್‌ಗಳನ್ನು ಸೇರಿಸಬಹುದು. ಆದರೆ ಅಂತಹ ಸಂಸ್ಥೆಗಳಿಂದಲೇ ನಮಗೆ ಮೋಕ್ಷವಿಲ್ಲ. ಎದುವರೆಗೆ ನಿಜವಾದ ಸಹಾನುಭೂತಿಯೂ ಪ್ರೀತಿಯೂ ಎಲ್ಲರಿಗಾಗಿ ಮರುಗುವ ಹೃದಯವೂ ನಮಗೆ ಬರುವುದಿಲ್ಲವೋ, ಎದುವರೆಗೆ ಬುದ್ಧನ ಹೃದಯವು ಮತ್ತೆ ಭರತಖಂಡದಲ್ಲಿ ಆವಿರ್ಭವಿಸುವುದಿಲ್ಲವೋ, ಶ್ರೀ ಕೃಷ್ಣನು ಬೋಧಿಸಿದ ಸೇವಾಧರ್ಮವು ನಮ್ಮಲ್ಲಿ ಜಾಗ್ರತವಾಗುವುದಿಲ್ಲವೋ, ಅದುವರೆಗೆ ಸಂಸ್ಥೆಗಳೆಲ್ಲಾ ನಿಷ್ಪ್ರಯೋಜನ. ನೀವು ಸುಮ್ಮನೆ ಐರೋಪ್ಯರನ್ನು ಅನುಕರಿಸಿ, ಸಂಸ್ಥೆಗಳನ್ನು ಕಟ್ಟಿದರೆ ಏನಾಗುತ್ತದೆ? ನಾನು ಕಣ್ಣಾರ ಕಂಡ ಒಂದು ಕಥೆಯನ್ನು ಹೇಳುತ್ತೇನೆ. ಕೆಲವು ಯೂರೋಪಿಯನ್ನರು ಕೆಲವು ಬರ್ಮಾದವರನ್ನು ಲಂಡನ್ನಿಗೆ ಕರೆದೊಯ್ದರು. ಆ ಜನಗಳನ್ನು ಪ್ರದರ್ಶಿಸಿ ಬೇಕಾದಷ್ಟು ದುಡ್ಡು ಸಂಪಾದನೆ ಮಾಡಿಕೊಂಡು ಅಲ್ಲಿಂದ ಫ್ರಾನ್ಸ್, ಜರ್ಮನಿ

ಗಳಿಗೂ ಒಯ್ದು ದುಡ್ಡು ಸಂಪಾದನೆಮಾಡಿ, ಅವರನ್ನು ಬಿಟ್ಟು ಬಿಟ್ಟರು. ಆ ಬಡಜನಗಳಿಗೆ ಯೂರೋಪಿನ ಯಾವ ಭಾಷೆಯು ಒಂದು ಅಕ್ಷರವೂ ತಿಳಿಯದು. ಆಸ್ಟ್ರಿಯಾದಲ್ಲಿದ್ದ ಇಂಗ್ಲೀಷ್ ರಾಯಭಾರಿಗಳು ಅವರನ್ನು ಲಂಡನ್ನಿಗೆ ಕಳುಹಿಸಿದರು. ಲಂಡನ್ನಿನಲ್ಲಿ ಯಾರನ್ನೂ ಅರಿಯದೆ ಅವರು ಕೆಂಗೆಟ್ಟರು. ಆದರೆ ಒಬ್ಬ ಇಂಗ್ಲಿಷ್ ಮಹಿಳೆಯು ಅವರನ್ನು ತನ್ನ ಮನೆಯಲ್ಲಿ ಇರಿಸಿಕೊಂಡು ಊಟ ಬಟ್ಟೆಗಳನ್ನು ಕೊಟ್ಟು ಸುದ್ದಿಯನ್ನು ವರ್ತಮಾನ ಪತ್ರಿಕೆಗಳಿಗೆ ಕಳುಹಿಸಿದಳು. ಏನಾಯಿತು ಬಲ್ಲಿರಾ? ಮರುದಿನವೇ ಇಂಗ್ಲಿಷ್ ಜನಾಂಗಕ್ಕೆ ಜನಾಂಗವೇ ಕಣ್ದೆರೆದು ಬರ್ವಾದವರಿಗಾದ ಅನ್ಯಾಯಕ್ಕಾಗಿ ಸಿಟ್ಟುಗೊಂಡಿತು. ಬೇಕಾದಷ್ಟು ದುಡ್ಡು ಸೇರಿತು. ಅಂತೂ ಕಡೆಗೆ ಹಾಗೂ ಹೀಗೂ ಆ ಜನಗಳು ತಮ್ಮ ದೇಶಕ್ಕೆ ಬಂದು ಸೇರಿದರು. ಪಾಶ್ಚಾತ್ಯ ದೇಶಗಳ ರಾಜಕೀಯ ಮತ್ತು ಇತರ ಸಂಸ್ಥೆಗಳೆಲ್ಲವೂ ಇಂತಹ ಸಹಾನುಭೂತಿಯ ಆಧಾರದ ಮೇಲೆಯೇ ನಿಂತಿವೆ. ತಮ್ಮ ತಮ್ಮ ಮಟ್ಟಿಗಾದರೂ ಚಿಂತೆಯಿಲ್ಲ; ಅದು ಪ್ರೀತಿಯ ಬಲವಾದ ಅಸ್ತಿಭಾರ. ಅವರು ಲೋಕವನ್ನೆಲ್ಲಾ ಪ್ರೀತಿಸದಿರಬಹುದು. ಆದರೂ ಸ್ವದೇಶದವರ ಪರವಾಗಿಯೂ, ಸ್ವದೇಶಕ್ಕೆ ಬಂದ ವಿದೇಶಿಗಳ ವಿಷಯದಲ್ಲಿಯೂ ಅವರು ಪ್ರೀತ್ಯಾದರಗಳನ್ನು ತೋರಿಸುತ್ತಾರೆ ಎಂಬುದರಲ್ಲಿ ಸಂದೇಹವಿಲ್ಲ. ಪ್ರತಿಯೊಂದು ಪಾಶ್ಚಾತ್ಯ ದೇಶದಲ್ಲಿಯೂ ನನ್ನನ್ನು ಎಷ್ಟು ಆದರದಿಂದ ಸತ್ಕಾರಮಾಡಿದ್ದಾರೆ ಎಂಬುದನ್ನು ನಾನಿಲ್ಲಿ ಹೇಳದೆ ಹೋದರೆ ಮಹಾ ಕೃತಘ್ನನಾಗುತ್ತೇನೆ. ರಾಷ್ಟ್ರ ನಿರ್ವಾಣಕ್ಕೆ ಅಂತಹ ಹೃದಯ ಇಲ್ಲಿ ಎಲ್ಲಿದೆ? ನಾಲ್ಕು ಜನ ಸೇರಿ ಒಂದು ಸಂಘವನ್ನು ಮಾಡಿಕೊಳ್ಳುವುದೇ ತಡ, ಒಬ್ಬರನ್ನೊಬ್ಬರು ವಂಚಿಸಲು ಪ್ರಯತ್ನಿಸುತ್ತೀರಿ. ಸಂಘ ಒಡೆದು ನುಚ್ಚು ನೂರಾಗುತ್ತದೆ. ಪಾಶ್ಚಾತ್ಯರನ್ನು ಅನುಕರಿಸಿ ಅವರಂತೆಯೇ ಮಹಾ ಜನಾಂಗವನ್ನು ನಿರ್ಮಾಣಮಾಡಬೇಕು ಎನ್ನುತ್ತೀರಿ. ಆದರೆ ತಳಹದಿ ಎಲ್ಲಿ? ನಮ್ಮ ತಳಹದಿ ಎಲ್ಲಾ ಮಳಲಾಗಿದೆ. ಅದರಮೇಲೆ ಕಟ್ಟಿದ ಮಂದಿರಗಳು ಕಣ್ಣುಮುಚ್ಚಿ ಬಿಡುವುದರೊಳಗಾಗಿ ನೆಲಸಮವಾಗುತ್ತವೆ. ಆದುದರಿಂದ ಲಾಹೋರಿನ ತರುಣರಿರಾ, ಅದ್ವೈತ ವೇದಾಂತದ ಅದ್ಭುತ ವೈಜಯಂತಿಯನ್ನು ಮತ್ತೊಮ್ಮೆ ಗಗನಕ್ಕೆತ್ತಿಹಿಡಿಯಿರಿ. ಅದು ಹೊರತೂ ಎಲ್ಲರಲ್ಲಿಯೂ ಯಾವಾಗಲೂ ಏಕಮಾತ್ರ ಈಶ್ವರನನ್ನು ಸಂದರ್ಶಿಸುವ ಸಮದರ್ಶಿತ್ವವೂ ಪ್ರೀತಿಯೂ ಲಭಿಸುವುದು ಅಸಾಧ್ಯ.

ಪ್ರೀತಿಯ ಬಾವುಟವನ್ನು ಬಿಚ್ಚಿ ಹಿಡಿಯಿರಿ. "ಎದ್ದೇಳಿ,!" ಎಚ್ಚರಗೊಳ್ಳಿ! ಗುರಿಯು ದೊರಕುವವರೆಗೂ ಮುಂದೆನುಗ್ಗಿ ! ನಿಲ್ಲದಿರಿ! "ಉತ್ತಿಷ್ಠತ, ಜಾಗ್ರತ, ಪ್ರಾಪ್ಯವರ್ಾನ್ನಿಬೋಧತ! ಎದ್ದೇಳಿ ಇನ್ನೊಮ್ಮೆ ಎದ್ದೇಳಿ! ಏಕೆಂದರೆ ತ್ಯಾಗವಿಲ್ಲದೆ ಯಾವುದೂ ಸಾಧ್ಯವಿಲ್ಲ. ಇತರರಿಗೆ ನೀವು ಸಹಾಯ ಮಾಡಬೇಕೆಂದಿದ್ದರೆ ಮೊದಲು ನಿಮ್ಮ ಆತ್ಮವಿಸರ್ಜನೆ ಯಾಗ ಬೇಕು. ಹೌದು ಕ್ರೈಸ್ತನು ಹೇಳುವಂತೆ– ದೇವರನ್ನೂ ಸೈತಾನನ್ನೂ ಒಟ್ಟಿಗೆ ಸೇವಿಸಲಾರಿರಿ. ನಮಗೀಗ ಬೇಕಾಗಿರುವುದು ವೈರಾಗ್ಯ–ತ್ಯಾಗ. ನಿಮ್ಮ ಪೂರ್ವಿಕರು ಮಹಾ ಕಾರ್ಯಗಳನ್ನು ಸಾಧಿಸಲೋಸುಗ ಐಹಿಕ ಸುಖ ತ್ಯಾಗ, ಮಾಡಿದರು. ಆದರೆ ಈಗ ಜನರು ತಮ್ಮ ಸ್ವಂತ ಮೋಕ್ಷಕ್ಕಾಗಿ ಮಾತ್ರ ಐಹಿಕವನ್ನು ಬಿಡುತ್ತಾರೆ. ಎಲ್ಲವನ್ನೂ ತ್ಯಜಿಸಿಬಿಡಿ. ನಿಮ್ಮ ಸ್ವಂತ ಮೋಕ್ಷವನ್ನೂ ಬಿಸಾಡಿ. ಹೋಗಿ, ಇತರರ ಸೇವೆಮಾಡಿ. ನೀವು ಯಾವಾಗಲೂ ಧೀರ ವಚನಗಳನ್ನು ಆಡುತ್ತಿರುತ್ತೀರಿ, ಈಗ ನಿಮ್ಮ ಮುಂದಿದೆ ಈ ಕಾರ್ಯಕಾರಿಯಾದ ವೇದಾಂತ. ಇತರರ ಕ್ಷೇಮಕ್ಕಾಗಿ ನಿಮ್ಮ ಕ್ಷುದ್ರ ಜೀವನಗಳನ್ನು ವಿಸರ್ಜಿಸಿ. ದೇಶದ ಹಿತಕ್ಕಾಗಿ ನಿಮ್ಮ ಸಣ್ಣ ಜೀವನಗಳನ್ನು ಬಲಿದಾನ ಮಾಡಿ. ಹೊಟ್ಟೆಗಿಲ್ಲದೆ ಸತ್ತರೇನಂತೆ! ನಾನೂ ನೀವೂ ನಿಮ್ಮಂತೆ ಇನ್ನೂ ಸಹಸ್ರ ಜನರೂ ಮಡಿದರೇನಂತೆ! ಈ ಜನಾಂಗ ಉಳಿದರೆ ಸಾಕಲ್ಲವೇ? ದೇಶ ಮುಳುಗುತ್ತಿದೆ. ಅಸಂಖ್ಯ ಲಕ್ಷೋಪಲಕ್ಷ ಜೀವಿಗಳ ಅಭಿ ಶಾಪವು ನಮ್ಮ ತಲೆಯಮೇಲೆ ಬಿದ್ದಿದೆ. ಯಾರು ಬಾಯಾರಿಕೆಯಿಂದ ಸಾಯುತ್ತಿದ್ದಾಗ ಪಕ್ಕದಲ್ಲಿ ಅಮೃತವಾಹಿನಿ ಹರಿಯುತ್ತಿದ್ದರೂ ಬಚ್ಚಲ ನೀರನ್ನು ಕುಡಿಯಲು ಕೊಟ್ಟೆವೋ, ಯಾರು ಸುಭಿಕ್ಷವನ್ನು ನೋಡುತ್ತ ನೋಡುತ್ತ ಕ್ಷಾಮಪೀಡಿತರಾಗಿ ಸಾಯುವಂತೆ ಮಾಡಿದೆವೋ, ಅದ್ವೈತವನ್ನು ಕುರಿತು ಮಾತನಾಡುತ್ತ ಹೃತ್ಪೂರ್ವಕವಾಗಿ ಯಾರನ್ನು ದ್ವೇಷಿಸಿದೆವೋ, ಯಾರಿಗೆ ಬಾಯಿ ಮಾತಿನಲ್ಲಿ ಮಾತ್ರ "ಎಲ್ಲರೂ ಒಂದೇ ಎಲ್ಲರಲ್ಲಿಯೂ ಈಶ್ವರನಿದ್ದಾನೆ" ಎಂದು ಹೇಳುತ್ತ ಕಾರ್ಯತಃ ಅದನ್ನು ಒಂದಿನಿತೂ ಅಭ್ಯಾಸಮಾಡಲಿಲ್ಲವೋ ಅಂತಹ ಅಸಂಖ್ಯ ಲಕ್ಷೋಪಲಕ್ಷ ಜನಗಳ ಅಭಿಶಾಪವು ಸಿಡಿಲಿನಂತೆ ನಮ್ಮ ತಲೆಯಮೇಲೆ ರಗುತ್ತದೆ. ಈ ಭೇದ ಭಾವದಿಂದ ಉತ್ಪನ್ನವಾದ ಪಾಪವನ್ನು ತೊಡೆದು ಹಾಕಿ. ಆಹಾರದಲ್ಲಿಯೂ ಆಲೋಚನೆಯಲ್ಲಿಯೂ ಸಮತ್ವವನ್ನು ಅನು ಷ್ಠಾನಮಾಡಿ. "ಉತ್ತಿಷ್ಠತ! ಜಾಗ್ರತ!" ಈ ಸಣ್ಣ ಜೀವ ಹೋದ

ರೇನಂತೆ? ಎಲ್ಲರೂ ಸಾಯಲೇಬೇಕು. ಮಹರ್ಷಿಯಾಗಲಿ, ಪಾಪಿ ಯಾಗಲಿ, ಶ್ರೀಮಂತನಾಗಲಿ, ಯಾರ ದೇಹವೂ ಶಾಶ್ವತವಲ್ಲ. ಎದ್ದೇಳಿ, ಎಚ್ಚರಗೊಳ್ಳಿ! ಹೃತ್ಪೂರ್ವಕವಾಗಿ ಪ್ರಯತ್ನಮಾಡಿ! ಈ ದೇಶದಲ್ಲಿ ನಮ್ಮ ಮನೋವಕ್ರತೆಯು ಭೀಕರವಾಗಿದೆ. ನಮಗೀಗ ಬೇಕಾಗಿರುವುದು ಶೀಲ, ಪ್ರಾಣ ಹೋದರೂ ಹಿಂಜರಿಯದೆ ಕಾರ್ಯವನ್ನು ಸಾಧಿಸುವ ದೃಢ ಚಿತ್ತವು ಬೇಕಾಗಿದೆ. "ತಾರ್ಕಿಕರು ನಿಂದಿಸಲಿ, ಹೊಗಳಲಿ! ಲಕ್ಷ್ಮಿ ಕೈಸೇರಲಿ, ತಪ್ಪಲಿ, ಸಾವು ಈಗಲೆ ಬರಲಿ, ಅಥವಾ ಇನ್ನೊಂದು ನೂರು ವರ್ಷದ ಮೇಲೆ ಬರಲಿ. ದೃಢ ಮನಸ್ಕನು ಸನ್ಮಾರ್ಗದಿಂದ ಒಂದು ಹೆಜ್ಜೆಯನ್ನೂ ತಪ್ಪಿ ಇಡುವುದಿಲ್ಲ" ಎದ್ದೇಳಿ! ಎಚ್ಚರಗೊಳ್ಳಿ! ಸಮಯ ಕಳೆಯುತ್ತಿದೆ. ನಮ್ಮ ಶಕ್ತಿಯೆಲ್ಲ ಬರಿಯ ಕಾಡುಹರಟೆಯಲ್ಲಿ ವ್ಯರ್ಥ ವಾಗುತ್ತಿದೆ. ಎದ್ದೇಳಿ; ಎಚ್ಚರಗೊಳ್ಳಿ! ಸಣ್ಣ ಪುಟ್ಟ ಜಗಳಗಳೂ ವಾದಗಳೂ ಕೊನೆಗಾಣಲಿ, ಏಕೆಂದರೆ ನಮ್ಮ ಮುಂದೆ ಒಂದು ಮಹಾ ಕಾರ್ಯವು ಬಂದು ನಿಂತಿದೆ— ಮುಳುಗುತ್ತಿರುವ ಲಕ್ಷಾಂತರ ಜನರನ್ನು ಮೇಲೆತ್ತಿ ಉದ್ಧಾರಮಾಡುವ ಮಹಾ ಸೇವಾ ಕಾರ್ಯ. ನೋಡಿ ಮುಸಲ್ಮಾನರು ಈ ದೇಶಕ್ಕೆ ಮೊಟ್ಟ ಮೊದಲು ಬಂದಾಗ ಇಲ್ಲಿ ಎಷ್ಟು ಕೋಟಿ ಹಿಂದೂಗಳಿದ್ದರು? ಆದರೆ ಇಂದು ಅದರ ಮೂರರಲ್ಲಿ ಒಂದು ಪಾಲು ಮಾತ್ರ ಇದ್ದಾರೆ. ದಿನ ಕಳೆದ ಹಾಗೆಲ್ಲಾ ಅವರು ಕಡಿಮೆ ಕಡಿಮೆ ಯಾಗಿ ಕಡೆಗೆ ಏನೂ ಇಲ್ಲದಾಗುವ ಕಾಲವೂ ಬರಬಹುದು. ಅವ ರೊಂದಿಗೆ ಅವರಲ್ಲಿರುವ ಮಹಾ ತತ್ತ್ವಗಳೂ ಖಿಲವಾಗುತ್ತವೆ. ಇಷ್ಟು ಅಧೋಗತಿಯಲ್ಲಿದ್ದರೂ ಅವರಿನ್ನೂ ತತ್ತ್ವಗಳಲ್ಲೆಲ್ಲಾ ಅತ್ಯಂತ ಶ್ರೇಷ್ಠ ತಮವಾದ ಅದ್ವೈತ ವೇದಾಂತಕ್ಕೆ ಪ್ರತಿನಿಧಿಗಳೂ ನಿಧಿಗಳೂ ಆಗಿರು ತ್ತಾರೆ. ಆದುದರಿಂದ ಎದ್ದೇಳಿ! ಎಚ್ಚರ ಗೊಳ್ಳಿ! ನಿಮ್ಮ ಬಾಹು ಗಳನ್ನು ಚಾಚಿ, ಜಗತ್ತಿನ ಆಧ್ಯಾತ್ಮಿಕ ಜೀವನವನ್ನು ರಕ್ಷಿಸಿ. ಮೊತ್ತಮೊದಲು ನಿಮ್ಮ ದೇಶದಲ್ಲಿಯೇ ಕಾರ್ಯಸಾಧನೆ ಮಾಡಿ. ನಮಗೀಗ ಬೇಕಾಗಿರುವುದು ಒಂದಿಷ್ಟು ಭಕ್ತಿ ಮಾತ್ರವಲ್ಲ; ಒಂದಿಷ್ಟು ವೈಷ್ಣವ ಬುದ್ಧಿ ಮಾತ್ರವಲ್ಲ. ನಮ್ಮ ಜನಗಳಿಗೆ ಸ್ವಲ್ಪ ಅದ್ವೈತಾ ಮೃತ ಪಾನಮಾಡಿಸಬೇಕು. ಮೊದಲು ರೊಟ್ಟಿ ಅನಂತರ ಅಧ್ಯಾತ್ಮ. ಮೊದಲು ಅನ್ನ ಆಮೇಲೆ ಬ್ರಹ್ಮ. ಅನ್ನವಿಲ್ಲದೆ ಸಾಯುವವರಿಗೆ ಅಧ್ಯಾತ್ಮ ವನ್ನು ತುರುಕುತ್ತಿದ್ದೇವೆ. ನಮ್ಮವರಿಗೆ ಹೊಟ್ಟೆಗಿಲ್ಲದಿದ್ದರೂ ಧರ್ಮ

ವೇನೋ ಅಜೀರ್ಣವಾಗುವಷ್ಟಾಗಿದೆ. ಆದರೆ ಸಿದ್ಧಾಂತಗಳು ಹಸಿವನ್ನು ಪರಿಹರಿಸಲಾರವು. ನಮ್ಮಲ್ಲಿ ಎರಡು ಮಹಾ ಪಾಪಗಳಿವೆ; ಒಂದು ದೌರ್ಬಲ್ಯ, ಮತ್ತೊಂದು ಸಾಧಾರಣ ಜನರಲ್ಲಿ ನಮಗಿರುವ ಜಿಗುಪ್ಸೆ, ಶುಷ್ಕಹೃದಯತೆ. ನೀವು ಸಾವಿರ ಮತಗಳನ್ನು ಹರಡಬಹುದು. ಲಕ್ಷ ಪಂಥಗಳನ್ನು ಸೃಜಿಸಬಹುದು. ಆದರೆ ಎಲ್ಲಿಯವರೆಗೆ ನಿಮ್ಮ ಹೃದಯ ದಲ್ಲಿ ಕನಿಕರ ಇರುವುದಿಲ್ಲವೋ, ಎಲ್ಲಿಯವರೆಗೆ ವೇದಗಳು ಬೋಧಿಸುವಂತೆ ಎಲ್ಲರೂ ನಿಮ್ಮ ಆತ್ಮದ ಅಂಶಗಳೆಂದೂ, ಶ್ರೀಮಂತರೂ ದರಿದ್ರರೂ ಮಹರ್ಷಿಗಳೂ ಪಾಪಿಗಳೂ ಎಲ್ಲರೂ ಅನಂತ ಬ್ರಹ್ಮದ ಅಂಶಗಳೆಂದು ತಿಳಿಯುವುದಿಲ್ಲವೋ ಅಲ್ಲಿಯವರೆಗೆ ನಿಮ್ಮ ಸಿದ್ಧಾಂತ ಬೋಧೆಯೂ ಮತ ಪ್ರಚಾರವೂ ಕೆಲಸಕ್ಕೆ ಬರುವುದಿಲ್ಲ.

ಮಹನೀಯರೇ ಅದ್ವೈತ ವೇದಾಂತದ ಒಂದೆರಡು ಮುಖ್ಯಾಂಶ ಗಳನ್ನು ನಿಮ್ಮೆದುರು ಹೇಳಲು ಪ್ರಯತ್ನಿಸಿದ್ದೇನೆ. ಅವುಗಳನ್ನು ಕಾರ್ಯತಃ ಪ್ರಯೋಗಿಸುವ ಕಾಲವೀಗ ಬಂದಿದೆ. ಈ ದೇಶಗಳಲ್ಲಿ ಮಾತ್ರವಲ್ಲ ಇತರ ದೇಶಗಳಲ್ಲಿಯೂ ಅದ್ವೈತ ವೇದಾಂತ ಪ್ರಚಾರ ಮಾಡುವ ಸುಸಮಯ ವೀಗ ದೊರೆ ಕೊಂಡಿದೆ. ನವೀನ ವಿಜ್ಞಾನ ಶಾಸ್ತ್ರದ ಪ್ರಚಂಡ ಆಘಾತ ಗಳಿಂದ ದ್ವೈತ ಮತಗಳ ವೃತ್ತಿಕಾಮಣಿ ಮಂದಿರಗಳು ಎಲ್ಲೆಲ್ಲಿಯೂ ನುಚ್ಚುನೂರಾಗುತ್ತಿವೆ. ಈ ದೇಶದಲ್ಲಿ ಮಾತ್ರವೇ ಅಲ್ಲ ದ್ವೈತಿಗಳು ಶಾಸ್ತ್ರ ಪಾಠಗಳಿಗೆ ವಕ್ರವ್ಯಾಖ್ಯಾನಗಳನ್ನು ಹೇಳಲು ಪ್ರಯತ್ನಿಸುತ್ತಿರು ವುದು! ಎಳೆದತ್ತ ಹಿಗ್ಗಲು ಶಾಸ್ತ್ರಗಳೇನು ಇಂಡಿಯಾರಬ್ಬರೇ! ಇಲ್ಲಿ ಮಾತ್ರವೇ ಅಲ್ಲ, ಮತ ಪ್ರಮುಖರು ಸ್ವಸಂರಕ್ಷಣಾರ್ಥವಾಗಿ ವಿವಿಧೋ ಪಾಯಗಳನ್ನು ಕಂಡುಹಿಡಿಯುತ್ತಿರುವುದು! ಯೂರೋಪು ಅಮೇರಿಕಾಗಳ ಲ್ಲಿಯೂ ಅಂತಹ ಕಾರ್ಯವು ಭರದಿಂದ ಸಾಗುತ್ತಿದೆ. ಈ ಅದ್ವೈತ ವೇದಾಂತವು ಭರತಖಂಡದಿಂದ ಅಲ್ಲಿಗೂ ಧಾಳಿಯಿಡಬೇಕು. ಗುಟ್ಟೇನು? ಅದಾಗಲೇ ಅಲ್ಲಿ ಕಾಲಿಟ್ಟಿದೆ. ಆದರೆ ನಾವು ಹಿಡಿದ ಕೆಲಸವನ್ನು ಇನ್ನೂ ಮುಂದುವರಿಸಬೇಕು; ಅವರ ನಾಗರಿಕತೆಗಳನ್ನೂ ಉದ್ಧಾರ ಮಾಡಬೇಕು. ಏಕೆಂದರೆ ಈಗ ಪಾಶ್ಚಾತ್ಯ ದೇಶಗಳಲ್ಲಿ ಪಾಚೀನ ಸಂಪ್ರದಾಯಗಳೆಲ್ಲ ಸಡಿಲವಾಗಿ ನವೀನ ಜೀವನ ರೀತಿಗಳು ಬೇರೂರುತ್ತಿವೆ. ಕಾಂಚನದ ಪೂಜೆಯು, ಮಾಯೆಯ ಆರಾಧನೆಯು ಮೆಲ್ಲಗೆ ಮಾಯವಾಗುತ್ತಿದೆ. ಆದರ ಹಳೆಯ ಮತ ಪದ್ಧತಿಯು ಒರಟಾಗಿದ್ದರೂ ಕಾಂಚನ ವ್ಯಸನವೆ

ಪ್ರಧಾನವಾಗಿ ಧರ್ಮನಾಮಕ ಮಾತ್ರವಾಗಿರುವ ಹೊಸ ಮತಸಿದ್ಧಾಂತಕ್ಕಿಂತಲೂ ಅದು ಮೇಲಾಗಿತ್ತು. ಯಾವ ಜನಾಂಗವೇ ಆಗಲಿ ಎಷ್ಟೇ ಬಲವಾಗಿರಲಿ, ಅಂತಹ ತಳಹದಿಯ ಮೇಲೆ ಬಹಳ ಕಾಲ ನಿಲ್ಲಲಾರದು. ಅಂತಹ ತಳಹದಿಯ ಮೇಲೆ ಕಟ್ಟಿದ ನಾಗರಿಕತೆಗಳೆಲ್ಲ ಮಣ್ಣುಪಾಲಾಗಿವೆ ಎಂಬುದನ್ನು ಜಗತ್ತಿನ ಇತಿಹಾಸ ಸಾರಿ ಹೇಳುತ್ತಿದೆ. ಆದ್ದರಿಂದ ಅಂತಹ ಲೋಭ ಮತದ ಪ್ರವಾಹವು ನಮ್ಮ ದೇಶಕ್ಕೆ ನುಗ್ಗದಂತೆ ತಡೆದು, ನಿಜವಾದ ಧರ್ಮವು ನವೀನ ವಿಜ್ಞಾನ ಶಾಸ್ತ್ರದ ಅಘಾತಕ್ಕೆ ತತ್ತರಿಸಿ ಬೀಳದಂತೆ ಅದ್ವೈತ ವೇದಾಂತವನ್ನು ಎಲ್ಲರಿಗೂ ಬೋಧಿಸಬೇಕು. ಅಷ್ಟೇ ಅಲ್ಲ, ಇತರ ರಾಷ್ಟ್ರಗಳಿಗೂ ನಾವು ಸಹಾಯ ಮಾಡಬೇಕು. ಯೂರೋಪು ಮತ್ತು ಅಮೇರಿಕಾಗಳನ್ನು ಕಾಂಚನ ಮತದಿಂದ ತಪ್ಪಿಸಿ ಉದ್ಧಾರ ಮಾಡಬೇಕಾಗಿದೆ. ಮತ್ತೊಮ್ಮೆ ನಿಮಗೆ ನೆನಪು ಮಾಡುತ್ತೇನೆ. ನಮಗೆ ಮಾಡುವ ಕೆಲಸ ಬಹಳವಿದೆ. ಮೊದಲನೆಯದಾಗಿ ಅಧೋಗತಿಗಿಳಿಯುತ್ತಿರುವ ಲಕ್ಷಾಂತರ ಭಾರತೀಯರನ್ನು ಕೈಹಿಡಿದು ಮೇಲೆತ್ತಬೇಕು. ಭಗವಾನ್ ಶ್ರೀಕೃಷ್ಣನ ಅಮರ ವಾಣಿ ನಮ್ಮ ಕರ್ಣಗಳಲ್ಲಿ ಸದಾ ದನಿಗೈಯುತ್ತಿರಲಿ.

"ಯಾರ ಮನಸ್ಸು ಸಮತಾ ಭಾವವನ್ನು ತಾಳುತ್ತದೆಯೋ ಅವರು ಈ ಜೀವನದಲ್ಲಿಯೇ ಸರ್ವ ಸುಖವನ್ನು ಗೆದ್ದವರಾಗುತ್ತಾರೆ. ಏಕೆಂದರೆ ಈಶ್ವರನು ನಿರ್ಮಲ ಮತ್ತು ಸಮದರ್ಶಿ, ಆದುದರಿಂದ ಯಾರಲ್ಲಿ ಆ ಗುಣಗಳಿರುತ್ತವೆಯೋ ಅವರು ಈಶ್ವರನಲ್ಲಿ ಆರೂಢರಾಗುತ್ತಾರೆ."



## ವೇದಾಂತ

### ಖೇತ್ರಿಯಲ್ಲಿ ಮಾಡಿದ ಉಪನ್ಯಾಸದ ಸಾರಾಂಶ

ಹಿಂದೆ ಗ್ರೀಕ್ ಮತ್ತು ಆರ್ಯರು ಬೇರೆ ಬೇರೆ ವಾತಾವರಣದಲ್ಲಿ ಬೆಳೆದರು. ಗ್ರೀಕರು ಪ್ರಕೃತಿಯ ರಮ್ಯದೃಶ್ಯ ಮತ್ತು ಒಳ್ಳೆಯ ಹವಾಗುಣದಿಂದ ಪರಿವೃತರಾಗಿದ್ದರು. ಆರ್ಯರಿಗೆ ಸುತ್ತಲೂ ಭವ್ಯ ಪ್ರಕೃತಿ ದೃಶ್ಯಗಳಿದ್ದುವು. ಹೆಚ್ಚು ಶಾರೀರಕ ಶ್ರಮ ಸಹಿಸಲಾಗದ ಹವಾಗುಣದಲ್ಲಿ ಹುಟ್ಟಿದುದರಿಂದ ಇಬ್ಬರೂ ಬೇರೆ ಬೇರೆ ಸಂಸ್ಕೃತಿಯ ಲಕ್ಷಣದಲ್ಲಿ ಬೆಳೆದರು. ಗ್ರೀಕರು ಬಾಹ್ಯ ಅನಂತತೆಯನ್ನು ಆರ್ಯರು ಆಂತರಿಕ ಅನಂತತೆಯನ್ನು ತೆಗೆದುಕೊಂಡರು. ಒಬ್ಬರು ಬ್ರಹ್ಮಾಂಡವನ್ನು ತೆಗೆದುಕೊಂಡರು. ಮತ್ತೊಬ್ಬರು ಪಿಂಡಾಂಡವನ್ನು ತೆಗೆದುಕೊಂಡರು. ಪ್ರಪಂಚದ ಸಂಸ್ಕೃತಿಯಲ್ಲಿ ಇಬ್ಬರಿಗೂ ಬೇರೆ ಬೇರೆ ಸ್ಥಾನವಿದ್ದಿತು. ಒಬ್ಬರು ಮತ್ತೊಬ್ಬರಿಂದ ಎರವಲಾಗಿ ತೆಗೆದುಕೊಳ್ಳಬೇಕಾಗಿಲ್ಲ. ಆದರೆ ಒಬ್ಬರು ಇನ್ನೊಬ್ಬರೊಂದಿಗೆ ಹೋಲಿಸಿ ನೋಡಿದರೆ ಒಳ್ಳೆಯದಾಗುವುದು. ಆರ್ಯರು ಸ್ವಭಾವತಃ ವಿಭಜನಾತ್ಮಕ (Analyticle) ದೃಷ್ಟಿಯವರು. ಗಣಿತಶಾಸ್ತ್ರ, ವ್ಯಾಕರಣ ಶಾಸ್ತ್ರ ಮುಂತಾದುವುಗಳಲ್ಲಿ ಬಹಳ ಮುಂದುವರಿದರು. ಮನಸ್ಸಿನಲ್ಲಿ ವಿಭಜನೆ ಮಾಡಿ ಪೂರ್ಣವನ್ನು ತಿಳಿದುಕೊಂಡರು. ಪೈಥಾಗೋರಸ್, ಸಾಕ್ರಟೀಸ್, ಪ್ಲೇಟೊ ಈಜಿಪ್ಟಿನ ನಿಯೋ ಪ್ಲೇಟೋನಿಸ್ಟ್ ಇವರಲ್ಲಿ ಭಾರತೀಯ ಭಾವನೆಯ ಅಂಶವನ್ನು ನೋಡುತ್ತೇವೆ.

ಸ್ವಾಮೀಜಿಗಳು ನಂತರ ಯೂರೋಪಿನಲ್ಲಿ ಭಾರತೀಯ ಭಾವನೆಯ ಪ್ರಭಾವವನ್ನು ದೀರ್ಘವಾಗಿ ವಿವರಿಸಿದರು. ಬೇರೆ ಬೇರೆ ಕಾಲದಲ್ಲಿ ಸ್ಪೈಯಿನ್ ಜರ್ಮನಿ ಮತ್ತು ಬೇರೆ ಬೇರೆ ರಾಷ್ಟ್ರಗಳು ಭಾರತೀಯ ಭಾವನೆಯ ಪ್ರಭಾವಕ್ಕೆ ಒಳಗಾಗಿದ್ದುವು ಎಂಬುದನ್ನು ತೋರಿದರು. ಇಂಡಿಯಾ ದೇಶದ ದಾರಾಶೂಕೊ ಎಂಬ ಮೊಗಲ ರಾಜನು ಉಪನಿಷತ್ತನ್ನು ಪಾರ್ಸಿ ಭಾಷೆಗೆ ಭಾಷಾಂತರಿಸಿದನು. ಶೊಫನಿಯರ್ ಇದರ ಲ್ಯಾಟಿನ್ ಭಾಷಾಂತರವನ್ನು ನೋಡಿದನು. ಅವನ ತತ್ತ್ವದಮೇಲೆ ಉಪನಿಷತ್ತು ಬಹಳ ಪ್ರಭಾವ ಬೀರಿತು. ನಂತರ ಕಾಂಟಿನಲ್ಲಿ ಕೂಡ ಈ ಭಾವನೆ ಪ್ರಭಾವ ಕಾಣುವುದು. ಯೂರೋಪಿನಲ್ಲಿ ಭಾಷಾಶಾಸ್ತ್ರ ತುಲನೆಯ ಅಭಿರುಚಿಯಿಂದ ಕೆಲವರು ಸಂಸ್ಕೃತವನ್ನು ಓದುವರು. ಡಾಯ್‌ಸನ್ ಮುಂತಾದ

ಕೆಲವರಿಗೆ ತತ್ತ್ವ ಶಾಸ್ತ್ರದ ಮೇಲೆ ಆಸಕ್ತಿ ಇದೆ. ಇನ್ನು ಮುಂದೆ ಹೆಚ್ಚು ಜನ ಸಂಸ್ಕೃತ ಭಾಷೆಯ ಕಡೆ ಹೆಚ್ಚು ಗಮನಕೊಡುವರೆಂದು ಆಶಿಸಿದರು. ಹಿಂದಿನ ಕಾಲದಲ್ಲಿ ಹಿಂದೂ ಎಂಬ ಪದಕ್ಕೆ ಬೇಕಾದಷ್ಟು ಅರ್ಥವಿತ್ತು. ಆಗಿನ ಕಾಲದಲ್ಲಿ ಹಿಂದೂ ಅಥವಾ ಸಿಂಧೂ ನದಿಯ ಪೂರ್ವದಲ್ಲಿ ಇದ್ದ ವರಿಗೆ ಹಿಂದೂಗಳೆಂದು ಕರೆದರು. ಈಗ ಅದಕ್ಕೆ ಅರ್ಥವೇ ಇಲ್ಲ. ಅದು ಜನಾಂಗವನ್ನಾಗಲೀ, ಧರ್ಮವನ್ನಾಗಲಿ ತೋರುವುದಿಲ್ಲ. ಸಿಂಧೂನದಿಗೆ ಪೂರ್ವದಲ್ಲಿ ಹಲವು ಜನಾಂಗಗಳು ಹಲವು ಧರ್ಮಕ್ಕೆ ಸೇರಿವೆ.

ನಂತರ ಸ್ವಾಮಿಗಳು ವೇದವನ್ನು ತೆಗೆದುಕೊಂಡರು. ಅವನ್ನು ಯಾವ ವ್ಯಕ್ತಿಯೂ ಹೇಳಲಿಲ್ಲ. ಆದರೆ ಆ ಭಾವನೆ ವಿಕಾಸವಾಗುತ್ತಾ ಬಂದು ಅನಂತರ ಈ ಶಾಸ್ತ್ರ ಪ್ರಮಾಣವಾಯಿತು. ಹಲವು ಧರ್ಮಗಳು ಈ ಶಾಸ್ತ್ರದಲ್ಲಿವೆ. ಶಾಸ್ತ್ರದ ಶಕ್ತಿಗೆ ಒಂದು ಅಂತ್ಯವೇ ಇಲ್ಲದಂತೆ ತೋರುವುದು. ಹಿಂದೂಗಳಿಗೆ ವೇದಗಳಿವೆ. ಸಹಸ್ರಾರು ವರುಷಗಳವರೆಗೆ ಅವರು ಇದನ್ನೇ ನೆಚ್ಚಿಕೊಂಡಿರಬೇಕು. ಆದರೆ ಅವುಗಳ ಭಾವನೆ ಬದಲಾಯಿಸಿ ಅಭೇದ್ಯವಾದ ತಳಹದಿಯ ಮೇಲೆ ಕಟ್ಟಬೇಕು. ವೇದ ದೊಡ್ಡದೊಂದು ಸಾಹಿತ್ಯ. ಅದರಲ್ಲಿ ತೊಂಬತ್ತೊಂಬತ್ತು ಭಾಗ ಆಗಲೇ ನಷ್ಟವಾಗಿಹೋಗಿದೆ. ಪ್ರತಿಯೊಂದು ಭಾಗವನ್ನೂ ಒನ್ನೊಂದು ವಂಶ ದವರು ನೋಡಿಕೊಳ್ಳುತ್ತಿದ್ದರು. ಅವರು ಕಾಲವಾದಮೇಲೆ ಆ ವೇದವೇ ನಾಶವಾಯಿತು. ಆದರೂ ಈಗ ಇರುವಷ್ಟನ್ನು ಕೂಡ ಇಡುವುದಕ್ಕೆ ಇಂತಹ ದೊಡ್ಡ ಪ್ರಾಂಗಣ ಸಾಲದು. ಅದನ್ನು ಹಿಂದಿನ ಕಾಲದ ಸುಲಭ ಭಾಷೆಯಲ್ಲಿ ಬರೆದಿದ್ದರು. ಅದರ ವ್ಯಾಕರಣ ಬಹಳ ಹಳೆಯದು. ಇದರಿಂದ ವೇದದ ಸ್ವಲ್ಪ ಭಾಗಕ್ಕೆ ಅರ್ಥವೇ ಗೊತ್ತಾಗುವಂತೆ ಇರಲಿಲ್ಲ.

ನಂತರ ಕರ್ಮಕಾಂಡ ಜ್ಞಾನಕಾಂಡವನ್ನು ವಿವರಿಸಿದರು. ಸಂಹಿತೆ ಮತ್ತು ಬ್ರಾಹ್ಮಣದಲ್ಲಿ ಕರ್ಮಕಾಂಡ ಬರುವುದು. ಬ್ರಾಹ್ಮಣ ದಲ್ಲಿ ಯಜ್ಞಗಳನ್ನು ವಿವರಿಸಿರುವರು. ಸಂಹಿತೆಯಲ್ಲಿ ಅನುಷ್ಟುಪ್, ತ್ರಿಷ್ಟುಪ್, ಜಗತೀ ಛಂದಸ್ಸಿನಲ್ಲಿ ಸ್ತೋತ್ರಗಳಿವೆ. ಸಾಧಾರಣವಾಗಿ ಇದರಲ್ಲಿ ಇಂದ್ರ ವರುಣರ ಸ್ತೋತ್ರಗಳಿವೆ. ದೇವತೆಗಳು ಯಾರು ಎಂಬ ಪ್ರಶ್ನೆ ಎದ್ದಿತು. ಇದನ್ನು ವಿವರಿಸುವುದಕ್ಕೆ ಕೆಲವು ಸಿದ್ಧಾಂತವನ್ನು ತೆಗೆದುಕೊಂಡು ಬಂದರೆ ಬೇರೆ ಸಿದ್ಧಾಂತದಿಂದ ಅದನ್ನು ಖಂಡಿಸಿದರು.

ಸ್ವಾಮಿಜಿ ನಂತರ ಹಲವು ಬಗೆಯ ಪೂಜೆಯನ್ನು ವಿವರಿಸಿದರು. ಪ್ರಾಚೀನ ಬ್ಯಾಬಿಲೋನಿನ ದೃಷ್ಟಿಯಲ್ಲಿ ಜೀವ ದೇಹದ ಮತ್ತೊಂದು ಭಾಗ. ಅದಕ್ಕೆ ದೇಹವನ್ನು ಬಿಟ್ಟು ಬೇರೆ ಒಂದು ವ್ಯಕ್ತಿತ್ವವೇ ಇಲ್ಲ. ಈ ಜೀವಕ್ಕೆ ದೇಹಕ್ಕೆ ಇರುವಂತೆ ಹಸಿವು ಬಾಯಾರಿಕೆ, ಕೋಪತಾಪಗಳು ಇವೆ ಎಂದು ಭಾವಿಸಿದ್ದರು. ದೇಹಕ್ಕೆ ಅಪಾಯವಾದರೆ ಜೀವಕ್ಕೂ ಅಪಾಯ ವಾಗುವುದು. ಮೊದಲನೆಯದು ನಾಶವಾದರೆ ಜೀವವೂ ನಾಶವಾಗುವುದು. ಅದಕ್ಕೆ ದೇಹವನ್ನು ಸುರಕ್ಷಿತವಾಗಿಡಲು ಪ್ರಯತ್ನಿಸಿದರು. ಮಮ್ಮಿಗಳು ಗೋರಿ ಮುಂತಾದುವು ಬಂದುವು. ಈಜಿಪ್ಟ್ ಬ್ಯಾಬಿಲೋನಿಯ ಯಹೂದ್ಯರು ಈ ಭಾವನೆಯನ್ನು ಮೀರಿಹೋಗಲೇ ಇಲ್ಲ. ಇದನ್ನು ಮೀರಿರುವ ಆತ್ಮಭಾವನೆಯನ್ನೇ ಅವರು ಮುಟ್ಟಲಿಲ್ಲ.

ಮ್ಯಾಕ್ಸ್‌ಮುಲ್ಲರ ಅಭಿಪ್ರಾಯದಲ್ಲಿ ಋಗ್ವೇದದಲ್ಲಿ ಪೂರ್ವಿಕರ ಆರಾಧನೆಯೇ ಇಲ್ಲ. ಇಲ್ಲಿ ನಮ್ಮನ್ನು ದಿಟ್ಟಿಸಿ ನೋಡುವ ಮಮ್ಮಿಗಳು ಇಲ್ಲ. ದೇವತೆಗಳು ಮಾನವರಿಗೆ ಸ್ನೇಹಪರರಾಗಿದ್ದರು. ಉಪಾಸ್ಯ ಮತ್ತು ಉಪಾಸಕರ ಸಂಬಂಧ ಗೌರವವಾಗಿತ್ತು. ಅಲ್ಲಿ ಅಳುಮೋರೆ ಯಿಲ್ಲ. ಸರಳ ಸಂತೋಷಕ್ಕೆ ಅಭಾವವಿಲ್ಲ. ಮಂದಹಾಸಕ್ಕೆ ಅಭಾವ ವಿಲ್ಲ. ಕಣ್ಣಿನಲ್ಲಿ ಕಾಂತಿ ನಲಿಯುತ್ತಿತ್ತು. ಸ್ವಾಮಿಗಳು ವೇದವನ್ನು ಕುರಿತು ಆಲೋಚಿಸುತ್ತಿದ್ದರೆ ದೇವರ ನಗು ಕೂಡ ಕೇಳುವಂತೆ ತೋರುವುದು ಎಂದರು. ವೇದದ ಋಷಿಗಳು ತಮ್ಮ ಭಾವನೆ ವ್ಯಕ್ತಗೊಳಿಸುವುದರಲ್ಲಿ ಪ್ರಾವೀಣ್ಯತೆ ಪಡೆಯದೆ ಇರಬಹುದು. ಆದರೆ ಅವರಲ್ಲಿ ಸಂಸ್ಕೃತಿ ಇತ್ತು. ಹೃದಯವಿತ್ತು. ಅವರೊಂದಿಗೆ ಹೋಲಿಸಿ ನೋಡಿದರೆ ನಾವು ಅನಾಗರಿ ಕರು. ಇದನ್ನು ಉದಾಹರಿಸುವುದಕ್ಕೆ ಹಲವು ಸ್ತೋತ್ರಗಳನ್ನು ವೇದ ದಿಂದ ಹೇಳಿದರು. "ಪಿತೃಗಳಿರುವ ಕಡೆ ಎಲ್ಲಿ ದುಃಖ ವ್ಯಸನಗಳಿಲ್ಲವೊ ಅಲ್ಲಿಗೆ ಅವರನ್ನು ಕರೆದೊಯ್ಯಿ." ದೇಹವನ್ನು ಎಷ್ಟು ಬೇಗ ಮಣ್ಣುಪಾಲು ಮಾಡಿದರೆ ಅಷ್ಟು ಒಳ್ಳೆಯದು ಎಂಬ ಭಾವನೆ ಬಂದಿತು. ನಂತರ ಸೂಕ್ಷ್ಮ ಶರೀರ ಒಂದು ಇದೆ, ಅದು ದುಃಖವಿಲ್ಲದ ಪರಮಸಂತೋಷವಿರುವ ಲೋಕಕ್ಕೆ ಹೋಗುವುದು ಎಂದು ಕ್ರಮೇಣ ತಿಳಿದುಕೊಂಡರು. ಸೆಮಿಟಿಕ್ ಧರ್ಮದಲ್ಲಿ ದುಃಖ ಅಂಜಿಕೆಗಳಿವೆ. ಮನುಷ್ಯ ದೇವರನ್ನು ಕಂಡರೆ ಅವನು ಸಾಯುವನು ಎಂದು ಭಾವಿಸಿದ್ದರು. ಆದರೆ ಋಗ್‌ವೇದದಲ್ಲಿ ಮನುಷ್ಯ ದೇವ ರನ್ನು ಪ್ರತ್ಯಕ್ಷ ಕಂಡಾಗ ಅವನ ನಿಜವಾದ ಬಾಳು ಪ್ರಾರಂಭವಾಯಿತು.

ಈ ದೇವರು ಯಾರು ಎಂಬ ಪ್ರಶ್ನೆ ನಂತರ ಎದ್ದಿತು. ಕೆಲವು ವೇಳೆ ಇಂದ್ರ ಬಂದು ಮನುಷ್ಯನಿಗೆ ಸಹಾಯಮಾಡುವನು. ಕೆಲವು ವೇಳೆ ಅವನು ಮಿತಿಮೀರಿ ಸೋಮ ಕುಡಿಯುವನು. ಕೆಲವು ವೇಳೆ ಸರ್ವವ್ಯಾಪಕ ಸರ್ವಶಕ್ತ ಎಂಬ ಗುಣವಾಚಕವನ್ನು ಅವನಿಗೆ ಸೇರಿಸುವರು. ಇದರಂತೆಯೇ ವರುಣನಿಗೂ ಮಾಡುವರು. ಹೀಗೆ ಆಗುತ್ತಾ ಹೋಯಿತು. ದೇವರ ಗುಣವನ್ನು ಹೇಳುವ ಇಂತಹ ಕೆಲವು ಮಂತ್ರಗಳು ಅತಿ ಅದ್ಭುತವಾಗಿತ್ತು. ಭಾಷೆ ಅತಿ ಸುಂದರವಾಗಿತ್ತು. ಉಪನ್ಯಾಸಕರು ನಂತರ "ತಮ ತಮವನ್ನು ಆವರಿಸಿದಂತೆ ಇತ್ತು" ಎನ್ನುವ ನಾಸದೀಯ ಸೂಕ್ತವನ್ನು ಹೇಳಿದರು. ಇಂತಹ ಭವ್ಯಭಾವನೆಯನ್ನು ಇಷ್ಟು ಸುಂದರ ಕವಿತ್ವದಲ್ಲಿ ವಿವರಿಸುವವರು ಅನಾಗರಿಕರಾದರೆ ನಮ್ಮನ್ನು ಏನೆಂದು ಕರೆದುಕೊಳ್ಳಬೇಕು. ಋಷಿಗಳು, ಇಂದ್ರ, ವರುಣ ಮುಂತಾದ ದೇವತೆಗಳಲ್ಲಿ ತಪ್ಪು ಕಂಡುಹಿಡಿಯುವುದು ತನ್ನ ಇಚ್ಛೆಯಲ್ಲವೆಂದರು. ಇವೆಲ್ಲ ಒಂದು ವಿರಾಟ್‌ದರ್ಶನ, ಒಂದು ದೃಶ್ಯವಾದ ಮೇಲೆ ಮತ್ತೊಂದು ದೃಶ್ಯ ಬರುವುದು. ಅದರಲ್ಲೆಲ್ಲಾ ಹಿನ್ನೆಲೆಯಂತೆ "ಏಕಂ ಸತ್ ವಿಪ್ರಾ ಬಹುಧಾ ವದಂತಿ" ಎಂಬುದು ಇತ್ತು. ಇವೆಲ್ಲ ಇಂದ್ರಿಯಾತೀತವಾಗಿತ್ತು, ಅದ್ಭುತವಾಗಿತ್ತು, ಅತಿ ಸುಂದರವಾಗಿತ್ತು. ಅದನ್ನು ಸಮೀಪಿಸುವುದಕ್ಕೆ ಆಗುವುದಿಲ್ಲ ಎಂಬುವಂತೆ ಇತ್ತು. ಸ್ವಲ್ಪ ಸ್ಪರ್ಶಮಾಡಿದರೆ ಸಾಕು ಆ ತೆರೆ ಮರೀಚಿಕೆ ಮಾಯವಾಗುವಂತೆ ಭಾಸವಾಗುವುದು.

ಮುಂದುವರಿಸುತ್ತಾ ಒಂದು ಊಹೆ ಸಾಧ್ಯ ಮತ್ತು ಸ್ಪಷ್ಟವಾದಂತೆ ಆಗಿದೆ; ಅದೇ ಆರ್ಯರೂ ಕೂಡ ಗ್ರೀಕರಂತೆ ಸಮಸ್ಯೆ ಬಗೆಹರಿಸುವುದಕ್ಕೆ ಬಾಹ್ಯಪ್ರಕೃತಿಗೆ ಹೋಗಿದ್ದರು. ಬಾಹ್ಯ ಪ್ರಕೃತಿ ಅವರನ್ನು ಆಕರ್ಷಿಸಿ ಮೆಟ್ಟಲುಮೆಟ್ಟಲಾಗಿ ಒಳ್ಳೆಯದಾಗಿರುವ ಸುಂದರವಾಗಿರುವ ಕಡೆಗೆ ಕರೆದೊಯ್ಯಿತು. ಆದರೆ ಭರತ ಖಂಡದಲ್ಲಿ ಯಾವುದು ಭವ್ಯವಾಗಿಲ್ಲವೊ ಅದಕ್ಕೆ ಬೆಲೆ ಇಲ್ಲ. ಮೃತ್ಯುರಹಸ್ಯವನ್ನು ಅರಿಯಬೇಕೆಂದು ಗ್ರೀಕರಿಗೆ ಹೊಳೆಯಲೇ ಇಲ್ಲ. ಆದರೆ ಭರತಖಂಡದಲ್ಲಿ ಮೊದಲಿನಿಂದಲೂ "ನಾನಾರು? ಸತ್ತಮೇಲೆ ನನ್ನ ಗತಿ ಏನು?" ಎಂಬ ಪ್ರಶ್ನೆಯನ್ನು ಹಾಕಿದರು. ಮನುಷ್ಯ ಕಾಲವಾದ ಮೇಲೆ ಸ್ವರ್ಗಕ್ಕೆ ಹೋಗುವನು ಎಂದು ಗ್ರೀಕರು ನಂಬಿದ್ದರು. ಸ್ವರ್ಗಕ್ಕೆ ಹೋಗುವುದು ಎಂದರೇನು?

ಫಿಲ್ಲವನ್ನೂ ಮೀರಿ ಹೋಗುವುದು ಎಂದು ಅರ್ಥ. ಒಳಗೆ ಏನೂ ಇಲ್ಲ, ಹೊರಗೆ ಎಲ್ಲಾ ಇರುವುದು. ಅವನ ಶೋಧನೆಯೆಲ್ಲಾ ಹೊರಗೆ. ಅವನು ಕೂಡ ಹೊರಗೆ ಇದ್ದನು. ಅವನು ಈ ಪ್ರಪಂಚದಂತೆ ಇರುವ ಮತ್ತೊಂದು ಪ್ರಪಂಚಕ್ಕೆ ಹೋದರೆ ಅಲ್ಲಿ ದುಃಖಮಾತ್ರವಿಲ್ಲ, ತನಗೆ ಇಚ್ಛಿಸಿದುದೆಲ್ಲ ದೊರಕಿತೆಂದು ತೃಪ್ತನಾಗುತ್ತಿದ್ದನು. ಅಲ್ಲಿಗೆ ಅವನ ಧಾರ್ಮಿಕ ಭಾವನೆಯೆಲ್ಲ ನಿಂತಿತು. ಆದರೆ ಹಿಂದೂಗೆ ಇದರಿಂದ ತೃಪ್ತಿ ದೊರಕಲಿಲ್ಲ. ಸ್ವರ್ಗ ಮುಂತಾದುವುಗಳೆಲ್ಲ ಅವನ ವಿಭಜನೆಯಲ್ಲಿ ಬಾಹ್ಯದಲ್ಲಿ ಇರುವುದು. ಯಾವುದು ಸಂಯೋಗದಿಂದ ಆಗಿದೆಯೋ ಅದು ನಾಶವಾಗಬೇಕೆಂದು ಹಿಂದೂ ಹೇಳುವನು. ಅವರು ಆತ್ಮನೆಂದರೇನು ಎಂದು ಪ್ರಕೃತಿಯನ್ನು ಕೇಳಿದರು. ಪ್ರಕೃತಿ ತನಗೆ ಗೊತ್ತಿಲ್ಲವೆಂದಿತು. "ದೇವರೇನಾದರೂ ಇರುವನೆ"? ಎಂದು ಪ್ರಕೃತಿಯನ್ನು ಕೇಳಿದರು. "ನನಗೆ ಗೊತ್ತಿಲ್ಲ" ಎಂದಿತು. ಅವರು ಪ್ರಕೃತಿಯನ್ನು ತೊರೆದರು. ಬಾಹ್ಯಪ್ರಕೃತಿ ಎಷ್ಟೇ ದೊಡ್ಡದಾಗಿ ಚಮತ್ಕಾರವಾಗಿದ್ದರೂ ಕಾಲ ದೇಶದ ಮೇರೆಯಲ್ಲಿರುವುದು. ಆಗ ಮತ್ತೊಂದು ಭಾವನೆ ಉದಿಸಿತು, ಹೊಸ ಭವ್ಯ ಆಲೋಚನೆ ಅವರ ಮನಸ್ಸಿನಲ್ಲಿ ಮೂಡಿತು. ಅದು "ನೇತಿ, ನೇತಿ," ಇದಲ್ಲ, ಇದಲ್ಲ ಎಂದಿತು. ಹಲವು ದೇವರುಗಳೆಲ್ಲ ಒಂದು ದೇವರಾದರು. ಸೂರ್ಯ ಚಂದ್ರ ನಕ್ಷತ್ರ ಇಡೀ ಬ್ರಹ್ಮಾಂಡವೇ ಏಕ ವಾಯಿತು. ಈ ಹೊಸ ಭಾವನೆಯ ಮೇಲೆ ಆಧ್ಯಾತ್ಮಿಕ ಆದರ್ಶ ಕಟ್ಟಲ್ಪಟ್ಟಿತು.

> ನ ತತ್ರ ಸೂರ್ಯೋ ಭಾತಿ ನ ಚಂದ್ರತಾರಕಂ ನೇಮಾ ವಿದ್ಯುತೋ
> ಭಾನ್ತಿ ಕುತೋಽಯಮಗ್ನಿಃ ।
> ತಮೇವ ಭಾನ್ತಮನುಭಾತಿ ಸರ್ವಂ ತಸ್ಯ ಭಾಸಾ ಸರ್ವ
> ಮಿದಂ ವಿಭಾತಿ ॥

"ಸೂರ್ಯನಲ್ಲಿ ಬೆಳಗುವುದಿಲ್ಲ. ಚಂದ್ರ, ತಾರೆ, ಮಿಂಚು ಕೂಡ ಬೆಳಗುವುದಿಲ್ಲ; ಇನ್ನು ಬೆಂಕಿಯ ಮಾತೇನು? ಅವನು ಬೆಳಗಿದರೆ ಎಲ್ಲಾ ಬೆಳಗುವುದು, ಅವನಿಂದ ಎಲ್ಲಾ ಬೆಳಗುವುದು." ಮಿತವಾದ ಒಡ್ಡ ಸಾಕಾರ ದೇವರ ಭಾವನೆ ಇನ್ನು ಇಲ್ಲ. ನಮ್ಮ ನ್ಯಾಯಾನ್ಯಾಯಗಳನ್ನು ವಿಚಾರಿಸುವ ನ್ಯಾಯಾಧಿಪತಿಯ ಸಣ್ಣ ದೇವರ ಭಾವನೆ ಇಲ್ಲ. ಬಾಹ್ಯ ಅನ್ವೇಷಣೆಯನ್ನು ಅವರು ಸಂಪೂರ್ಣ ತೊರೆದರು. ಇನ್ನು ಮೇಲೆ ಅದೆಲ್ಲ

ಅಂತರ್ಮುಖವಾಯಿತು. ಉಪನಿಷತ್ತು ಭರತಖಂಡದ ಬೈಬಲ್ಲಾಯಿತು. ಬೇರೆ ಬೇರೆ ಆದರ್ಶಗಳಿಂದ ಕೂಡಿದ ವಿಭಿನ್ನ ಧಾರ್ಮಿಕ ಸಂಪ್ರದಾಯ ಗಳೆಲ್ಲ ಉಪನಿಷತ್ತಿನ ಮೇಲೆ ಪ್ರತಿಷ್ಠಿತವಾದುವು.

ಸ್ವಾಮಿಗಳು ನಂತರ ದ್ವೈತ ವಿಶಿಷ್ಟಾದ್ವೈತ ಅದ್ವೈತದ ಸಿದ್ಧಾಂತಕ್ಕೆ ಬಂದರು. ಇವುಗಳೆಲ್ಲ ಒಂದು ಸೋಪಾನ ಪಂಗ್ತಿಯಂತೆ ಇದೆ. ಒಂದು ಮತ್ತೊಂದಕ್ಕೆ ಒಯ್ಯುವುದು ಎಂಬ ಸಾಮರಸ್ಯವನ್ನು ತೋರಿದರು. ಅದ್ವೈತವೇ ಕೊನೆಯ ಹಂತ, ತತ್ವಮಸಿಯೇ ಕೊನೆಯ ಮೆಟ್ಟಿಲು. ಶಂಕರ ರಾಮಾನುಜ ಮಧ್ವ ಮುಂತಾದ ಹಿರಿಯ ಆಚಾರ್ಯರು ಕೂಡ ಎಲ್ಲಿ ತಪ್ಪನ್ನು ಮಾಡಿರುವರು ಎಂಬುದನ್ನು ತೋರಿದರು. ಪ್ರತಿಯೊಬ್ಬರೂ ಉಪನಿಷತ್ತಿನ ಪ್ರಮಾಣ ಒಪ್ಪುತ್ತಿದ್ದರು. ಆದರೆ ಅದು ಒಂದೇ ಮಾರ್ಗ ವನ್ನು ಮಾತ್ರ ಬೋಧಿಸುತ್ತದೆ ಎಂದು ಭಾವಿಸಿದ್ದರು. ಉಪನಿಷತ್ತೆಲ್ಲ ಅದ್ವೈತ ಒಂದನ್ನೇ ಬೋಧಿಸುತ್ತದೆ ಎಂದು ಶಂಕರಾಚಾರ್ಯರು ತಪ್ಪು ತಿಳಿದರು. ಯಾವ ಶ್ಲೋಕವಾದರೂ ದ್ವೈತ ಅರ್ಥ ಕೊಡುವಂತೆ ಇದ್ದರೆ ಅದನ್ನು ಹೇಗೊ ಹಿಗ್ಗಲಿಸಿ ತಮ್ಮ ಅರ್ಥ ಬರುವಂತೆ ಮಾಡುತ್ತಿದ್ದರು. ಅದರಂತೆಯೇ ಶುದ್ಧ ಅದ್ವೈತ ಅರ್ಥ ಕೊಡುವ ಶ್ಲೋಕ ಬಂದಾಗ ರಾಮಾನುಜ ಮಾಧ್ವಾಚಾರ್ಯರೂ ಮಾಡಿದರು. ಉಪನಿಷತ್ತಿಗೆ ಬೋಧಿ ಸುವುದಕ್ಕೆ ಇದ್ದುದೇನೊ ಒಂದೇ ಸತ್ಯ. ಆದರೆ ಅದನ್ನು ಮೆಟ್ಟಿಲು ಮೆಟ್ಟಿಲಾಗಿ ಹೇಳಿದರು. ಆಧುನಿಕ ಭರತಖಂಡದಲ್ಲಿ ಧಾರ್ಮಿಕ ಭಾವನೆ ಮಾಯವಾಗಿದೆ. ಬಾಹ್ಯ ಆಚಾರ ಮಾತ್ರ ಉಳಿದಿದೆ. ಜನ ಹಿಂದೂ ಗಳೂ ಅಲ್ಲ, ವೇದಾಂತಿಗಳೂ ಅಲ್ಲ. ಅವರು ಕೇವಲ ಅಸ್ಪರ್ಶಿಗಳು ಮಾತ್ರ. ಅಡಿಗೆ ಮನೆಯೆ ದೇವಸ್ಥಾನ, ಅಡಿಗೆ ಪಾತ್ರೆಯೆ ಅವರು ಪೂಜಿಸುವ ದೇವರು. ಇಂತಹ ಭಾವನೆ ಹೋಗಬೇಕು. ಇದನ್ನು ಎಷ್ಟು ಬೇಗ ತ್ಯಜಿಸಿದರೆ ನಮ್ಮ ಧರ್ಮಕ್ಕೆ ಅಷ್ಟು ಒಳ್ಳೆಯದು. ಉಪ ನಿಷತ್ತು ಸ್ವಯಂಜ್ಯೋತಿಯಿಂದ ಬೆಳಗಲಿ. ವಿಭಿನ್ನ ಧರ್ಮಗಳಲ್ಲಿ ಮನ ಸ್ತಾಪವಿಲ್ಲದಿರಲಿ.

ಸ್ವಾಮಿಗಳಿಗೆ ಆರೋಗ್ಯ ಚೆನ್ನಾಗಿ ಇಲ್ಲದೆ ಇದ್ದಕಾರಣ ಇಷ್ಟು ಹೊತ್ತು ಮಾತನಾಡುವ ಹೊತ್ತಿಗೆ ಅವರಿಗೆ ಸಾಕಾಯಿತು. ಅವರು ಅರ್ಧ ಗಂಟೆ ವಿರಾಮ ತೆಗೆದುಕೊಂಡರು. ಆ ಸಮಯದಲ್ಲಿ ಸಭಿಕರೆಲ್ಲ ಉಳಿದ ಉಪನ್ಯಾಸ ಕೇಳಲು ಕುತೂಹಲದಿಂದ ಕಾಯುತ್ತಿದ್ದರು. ಅನಂತರ

ಸ್ವಾಮಿಗಳು ಪುನಃ ಅರ್ಧ ಗಂಟೆ ಮಾತನಾಡಿದರು. ಜ್ಞಾನವೆಂದರೆ ವೈವಿಧ್ಯತೆಯಲ್ಲಿ ಐಕ್ಯತೆಯನ್ನು ಕಂಡುಹಿಡಿಯುವುದು. ಯಾವ ವಿಜ್ಞಾನ ಎಲ್ಲಾ ವೈವಿಧ್ಯತೆಯಲ್ಲಿ ಏಕವನ್ನು ಕಂಡುಹಿಡಿಯುವುದೊ ಅದೇ ಪರಮ ಗುರಿ. ಇದು ಬಾಹ್ಯ ಜಗತ್ತಿಗೆ ಅನ್ವಯಿಸುವಂತೆ ಆಧ್ಯಾತ್ಮಿಕ ಜಗತ್ತಿಗೂ ಅನ್ವಯಿಸುವುದು.



# ಇಂಗ್ಲೆಂಡಿನಲ್ಲಿ ಭಾರತೀಯ ಆಧ್ಯಾತ್ಮಿಕ ಪ್ರಭಾವ

**(ಕಲ್ಕತ್ತೆಯಲ್ಲಿ ೧೧ನೇ ಮಾರ್ಚ್ ೧೮೯೮ರಲ್ಲಿ ಸೋದರಿ ನಿವೇದಿತಾ ಮಾತನಾಡಿದ ಸಮಯದಲ್ಲಿ ಮಾಡಿದ ಅಧ್ಯಕ್ಷ ಭಾಷಣ)**

ಮಹಿಳೆಯರೆ ಮತ್ತು ಮಹನೀಯರೆ,

ಏಷ್ಯಾಖಂಡದ ಪೂರ್ವ ರಾಷ್ಟ್ರಗಳಲ್ಲಿ ನಾನು ಪ್ರಯಾಣ ಮಾಡುತ್ತಿದ್ದಾಗ ಒಂದು ವಿಷಯ ನನಗೆ ಹೆಚ್ಚು ಕಂಡಿತು. ಅದೇ ಆ ದೇಶಗಳಲ್ಲಿ ಭಾರತೀಯ ಭಾವನೆ ಪ್ರಚಾರದಲ್ಲಿದ್ದುದು. ಚೈನಾ ಜಪಾನಿ ದೇವಸ್ಥಾನದ ಗುಡಿಗಳ ಮೇಲೆ ಕೆಲವು ಪ್ರಖ್ಯಾತ ಸಂಸ್ಕೃತ ಮಂತ್ರಗಳು ಹಳೆಯ ಬಂಗಾಳಿ ಲಿಪಿಯಲ್ಲಿ ಬರೆದಿದ್ದರು ಎಂಬುದನ್ನು ನೀವು ಕೇಳಿದರೆ ತುಂಬಾ ಆಶ್ಚರ್ಯ ಪಡಬಹುದು. ವಂಗದೇಶದ ಪೂರ್ವಿಕರು ಭಾವನೆಯ ಪ್ರಚಾರಕ್ಕೆ ತೋರಿದ ಸ್ಫೂರ್ತಿ ಉತ್ಸಾಹಕ್ಕೆ ಇದು ಚಿಹ್ನೆಯಾಗಿದೆ.

ಪೌರಾತ್ಯ ದೇಶಗಳನ್ನು ಬಿಟ್ಟರೆ, ಭಾರತೀಯ ಆಧ್ಯಾತ್ಮಿಕ ಭಾವನೆ ಪಾಶ್ಚಾತ್ಯ ದೇಶದಲ್ಲಿಯೂ ಆ ಜೀವನದ ಅಂತರಾಳಕ್ಕೆ ಹೋದರೆ ಅಲ್ಲಿಯೂ ಆ ಪ್ರಭಾವದ ಚಿಹ್ನೆಗಳು ನಿಸ್ಸಂಶಯವಾಗಿ ಪ್ರಚಾರದಲ್ಲಿರುವುದು ಕಾಣುವುದು. ಭಾರತೀಯ ಆಧ್ಯಾತ್ಮಿಕ ಭಾವನೆ ಇಲ್ಲಿಂದ ಪೂರ್ವಕಾಲದಲ್ಲಿ ಪೂರ್ವಕ್ಕೂ ಪಶ್ಚಿಮಕ್ಕೂ ಹೋಗಿರುವುದು ಇತಿಹಾಸ ನಿಶ್ಚಿತವಾಗಿದೆ. ಪ್ರಪಂಚ ಎಷ್ಟುಮಟ್ಟಿಗೆ ಭಾರತೀಯ ಆಧ್ಯಾತ್ಮಿಕ ಭಾವನೆಗೆ ಋಣಿಯಾಗಿದೆ, ಭರತಖಂಡದ ಆಧ್ಯಾತ್ಮಿಕ ಶಕ್ತಿ ಜಗತ್ತಿನ ಇತಿಹಾಸದಲ್ಲಿ ಹಿಂದೆ ಮತ್ತು ಈಗ ಬಹಳ ಮುಖ್ಯವಾಗಿ ತನ್ನ ಪ್ರಭಾವವನ್ನು ಬೀರುತ್ತಿದೆ ಎಂಬುದು ಎಲ್ಲರಿಗೂ ತಿಳಿದ ವಿಷಯ.

ಮತ್ತೊಂದು ವಿಶೇಷ ಸಮಾಚಾರವಿದೆ. ಅದೆ ಪ್ರಪಂಚದ ನಾಗರಿಕತೆ ಜನಾಂಗದ ಪ್ರಗತಿ ಮತ್ತು ಸಮಾಜದ ಅಭ್ಯುದಯ ಆ ಅದ್ಭುತ ಆಂಗ್ಲೋ ಸ್ಯಾಕ್ಸನ್ ಜನಾಂಗದಿಂದ ಬಹುಮಟ್ಟಿಗೆ ಪರಿಣಾಮಕಾರಿಯಾಗಿದೆ. ನಾನು ಇನ್ನೂ ಸ್ವಲ್ಪ ಮುಂದೆ ಹೋಗಿ ಆಂಗ್ಲೊಸ್ಯಾಕ್ಸನ್‌ರ ಶಕ್ತಿ ಇಲ್ಲದೇ ಇದ್ದರೆ ಭಾರತೀಯ ಆಧ್ಯಾತ್ಮಿಕ ಭಾವನೆಯ ಪರಿಣಾಮವನ್ನು ನಾವಿಂದು ಚರ್ಚಿಸುತ್ತಿರುವಂತೆ ಚರ್ಚಿಸುವುದಕ್ಕೂ ಆಗುತ್ತಿರಲಿಲ್ಲ. ನಮ್ಮ ದೇಶಕ್ಕೆ ಹಿಂತಿರುಗಿದ ಮೇಲೆ ಪಾಶ್ಚಾತ್ಯದಿಂದ ಪೌರಾತ್ಯಕ್ಕೆ ಬಂದ ಮೇಲೆ ಅದೇ ಆಂಗ್ಲೊಸ್ಯಾಕ್ಸನ್ ಜನಾಂಗ ತನ್ನಲ್ಲಿ ಎಷ್ಟೇ ಕುಂದುಕೊರತೆಗಳಿದ್ದರೂ

ತಮ್ಮ ಅಪೂರ್ವ ಒಳ್ಳೆಯ ಸ್ವಭಾವದಿಂದ ಕೆಲಸಮಾಡುತ್ತಿರುವುದನ್ನು ನೋಡುತ್ತಿರುವೆನು. ಕೊನೆಗೆ ಒಂದು ಮಹಾಪರಿಣಾಮ ಉಂಟಾಗಿದೆ ಎಂದು ನಂಬುತ್ತೇನೆ. ಆಂಗ್ಲೇಯರ ವಿಲಾಸ ಮತ್ತು ಪ್ರಗತಿಯ ಭಾವನೆ ನಮ್ಮನ್ನು ಬಲಾತ್ಕರಿಸುತ್ತಿರುವುದು. ಪಾಶ್ಚಾತ್ಯ ಸಂಸ್ಕೃತಿಗೆ ಮೂಲ ಗ್ರೀಕ್. ಗ್ರೀಕ್ ಸಂಸ್ಕೃತಿಯ ಭಾವನೆ ವ್ಯಕ್ತಪಡಿಸುವುದು. ಭರತಖಂಡದಲ್ಲಿ ನಾವು ವಿಚಾರಲೋಲರು. ದುರದೃಷ್ಟವಶಾತ್ ಕೆಲವುವೇಳೆ ನಾವು ಅಷ್ಟೊಂದು ಹೆಚ್ಚಾಗಿ ವಿಚಾರಮಗ್ನರಾಗುತ್ತೇವೆ. ಶಕ್ತಿಯೆಲ್ಲ ಅದರಲ್ಲೆ ವ್ಯಯವಾಗಿ ಕಾರ್ಯರೂಪಕ್ಕೆ ತರುವುದಕ್ಕೆ ಏನೂ ಇರುವುದಿಲ್ಲ. ಆದಕಾರಣ ನಾವು ಪ್ರಪಂಚದ ಎದುರಿಗೆ ನಮ್ಮ ವ್ಯಕ್ತಿತ್ವವನ್ನು ಪ್ರಕಾಶಗೊಳಿಸಲಿಲ್ಲ. ಇದರ ಪರಿಣಾಮ ಏನಾಯಿತು? ನಮ್ಮಲ್ಲಿರುವ ಎಲ್ಲವನ್ನೂ ಮುಚ್ಚು ವುದಕ್ಕೆ ಪ್ರಯತ್ನ ಪಟ್ಟೆವು. ಮೊದಲು ಇದು ಕೆಲವು ವ್ಯಕ್ತಿಗಳ ಚಾಳಿ ಯಾಗಿ ನಂತರ ಇಡೀ ದೇಶದ ಒಂದು ಹುಟ್ಟುಗುಣವಾಯಿತು. ನಮ್ಮಲ್ಲಿ ಪ್ರಕಾಶಪಡಿಸುವುದಕ್ಕೆ ಶಕ್ತಿಯೇ ಇಲ್ಲ. ಇತರರು ನಮ್ಮನ್ನು ಒಂದು ಸತ್ತ ಜನಾಂಗ ಎಂದು ಭಾವಿಸುವರು. ನಾವು ಪ್ರಕಾಶಪಡಿಸದೆ ಹೇಗೆ ಬಾಳಬಲ್ಲೆವು? ಪಾಶ್ಚಾತ್ಯ ಸಂಸ್ಕೃತಿಯ ಮೂಲಭಿತ್ತಿಯೆ ವಿಕಾಸ ಮತ್ತು ಪ್ರಕಾಶ. ಭರತಖಂಡದಲ್ಲಿ ಆಂಗ್ಲೋ ಸ್ಯಾಕ್ಸನ್ ಮಾಡುತ್ತಿರುವ ಕೆಲಸದಲ್ಲಿ ಈ ಭಾವನೆ ಕಡೆಗೆ ನಿಮ್ಮ ಲಕ್ಷ್ಯವನ್ನು ಸೆಳೆಯುತ್ತೇನೆ. ಇದು ನಮ್ಮ ಜನಾಂಗವನ್ನು ಪ್ರಕಾಶಗೊಳಿಸಲು ಪ್ರಬೋಧಿಸುತ್ತಿದೆ. ಈ ಪ್ರಬಲ ಚಕ್ರಾಧಿಪತ್ಯ ನಿರ್ಮಿಸಿರುವ ಮಾರ್ಗಗಳಮೂಲಕ ಗುಪ್ತನಿಧಿಯನ್ನು ವ್ಯಕ್ತ ಪಡಿಸಲು ಹುರಿದುಂಬಿಸುತ್ತದೆ. ಭರತಖಂಡಕ್ಕೆ ಆಂಗ್ಲೊ ಸ್ಯಾಕ್ಸನ್‌ರು ಒಂದು ಭವಿಷ್ಯವನ್ನು ಸೃಷ್ಟಿಸಿರುವರು. ನಮ್ಮ ಪೂರ್ವಿಕರ ಭಾವನೆ ಬಹಳ ವೇಗ ವಾಗಿ ಹರಡುತ್ತಿದೆ. ನಮ್ಮ ಪೂರ್ವಿಕರು ಸತ್ಯ ಮತ್ತು ಮುಕ್ತಿಯ ಸಂದೇಶ ವನ್ನು ಪ್ರಪಂಚಕ್ಕೆ ಸಾರಿದಾಗ ಎಷ್ಟು ಸೌಕರ್ಯಗಳು ಅವರಿಗೆ ಇದ್ದುವು? ಭಗ ವಾನ್ ಬುದ್ಧ ವಿಶ್ವಸಹೋದರ ಭಾವನೆಯನ್ನು ಹೇಗೆ ಪ್ರಚಾರ ಮಾಡಿದ? ಆಗಲೂ ನಮ್ಮ ಪ್ರಿಯ ಭರತಖಂಡದಲ್ಲಿ ನಿಜವಾದ ಆನಂದವನ್ನು ಪಡೆಯು ವುದಕ್ಕೆ ಬೇಕಾದಷ್ಟು ಸೌಕರ್ಯಗಳಿದ್ದುವು. ಪ್ರಪಂಚದ ಒಂದು ಮೂಲೆ ಯಿಂದ ಮತ್ತೊಂದು ಮೂಲೆಗೆ ನಮ್ಮ ಭಾವನೆಯನ್ನು ಬಹಳ ಸುಲಭವಾಗಿ ಕಳುಹಿಸಬಹುದಾಗಿತ್ತು. ನಾವು ಈಗ ಆಂಗ್ಲೋಸ್ಯಾಕ್ಸನ್ ಜನಾಂಗ ವನ್ನು ಕೂಡ ಮುಟ್ಟಿರುವೆವು. ಈಗ ಆಗುತ್ತಿರುವ ಪ್ರತಿಕ್ರಿಯೆ ಇದು.

ನಮ್ಮ ಸಂದೇಶವನ್ನು ಅವರು ಕೇಳುತ್ತಿರುವರು; ಕೇಳುವುದು ಮಾತ್ರವಲ್ಲ ಅದಕ್ಕೆ ಒಲಿಯುತ್ತಿರುವರು. ನನ್ನ ಧ್ಯೇಯಸಾಧನೆಗೆ ಇಂಗ್ಲೆಂಡ್ ತನ್ನ ಅತಿ ಮೇಧಾವಂತರಲ್ಲಿ ಕೆಲವರನ್ನು ಕೊಟ್ಟಿರುವುದು. ಈ ವೇದಿಕೆಯ ಮೇಲೆ ಇರುವ ನನ್ನ ಸ್ನೇಹಿತೆ ಮಿಸ್ ಮುಲ್ಲರ್ ವಿಷಯ ನಿಮ್ಮಲ್ಲಿ ಎಲ್ಲರೂ ಕೇಳಿರಬಹುದು. ಅವರ ಪರಿಚಯ ಅನೇಕರಿಗೆ ಇರಬಹುದು. ಈ ಮಹಿಳೆ ಸದ್ವಂಶದಲ್ಲಿ ಹುಟ್ಟಿ, ವಿದ್ಯಾವಂತಳಾಗಿ, ಭರತಖಂಡದ ಮೇಲಿನ ಪ್ರೀತಿಯಿಂದ ತನ್ನ ಇಡೀ ಜೀವನವನ್ನು ನಮಗೆ ಕೊಟ್ಟು ಭರತ ಖಂಡವನ್ನು ತಮ್ಮ ಮನೆಯನ್ನಾಗಿ ತಮ್ಮ ಸಂಸಾರವಾಗಿ ಮಾಡಿಕೊಂಡಿರುವರು. ಭರತಖಂಡದ ಹಿತಕ್ಕೆ ಭರತಖಂಡದ ಪುನರುತ್ಥಾನಕ್ಕೆ ತನ್ನ ಜೀವನವನ್ನು ತೆರುತ್ತಿರುವ ಮತ್ತೊಬ್ಬ ಪ್ರಖ್ಯಾತ ಆಂಗ್ಲಮಹಿಳೆ ಹೆಸರು ನಿಮಗೆ ಚಿರಪರಿಚಿತವಾಗಿರಬಹುದು. ಅವರೇ ಶ್ರೀಮತಿ ಬೆಸೆಂಟ್. ಇಂದು ಇದೇ ಆಸೆ ಇರುವ ಇಬ್ಬರು ಅಮೆರಿಕಾ ಮಹಿಳೆಯರನ್ನು ಇದೇ ವೇದಿಕೆಯ ಮೇಲೆ ಸಂದರ್ಶಿಸುತ್ತೇವೆ. ನಮ್ಮ ಬಡದೇಶಕ್ಕೆ ಸಾಧ್ಯವಾದಷ್ಟು ಒಳ್ಳೆಯದನ್ನು ಮಾಡಲು ಅವರೂ ಸಿದ್ಧರಾಗಿರುವರು. ಈ ಸಮಯದಲ್ಲಿ ನಮ್ಮ ದೇಶದ ಮತ್ತೊಬ್ಬರನ್ನು ನಿಮ್ಮ ನೆನಪಿಗೆ ತರಲು ಇಚ್ಛಿಸುತ್ತೇನೆ. ಇಂಗ್ಲೆಂಡ್ ಅಮೆರಿಕವನ್ನು ಅವರು ನೋಡಿರುವರು. ಅವರು ನನ್ನ ನೆಚ್ಚಿನ ಗೆಳೆಯರು. ಅವರನ್ನು ಗೌರವಿಸುತ್ತೇನೆ, ಪ್ರೀತಿಸುತ್ತೇನೆ. ಬೇರೆ ಅವರಿಗೆ ಕಾರ್ಯಕ್ರಮವಿಲ್ಲದೇ ಇದ್ದರೆ ಅವರು ಇಂದು ಇಲ್ಲಿರುತ್ತಿದ್ದರು. ನಮ್ಮ ದೇಶದ ಹಿತಕ್ಕೆ ಮೌನವಾಗಿ ಸ್ಥಿರವಾಗಿ ಅವರು ದುಡಿಯುತ್ತಿರುವರು. ದೊಡ್ಡ ಆಧ್ಯಾತ್ಮಿಕ ಜೀವಿ. ಆತನೆ ಮೇಧಾವಿ ಮೋಹಿನಿ ಮೋಹನ ಚಟರ್ಜಿ. ಈಗ ಇಂಗ್ಲೆಂಡ್ ಭಾರತಕ್ಕೆ ಮಿಸ್ ಮಾರ್ಗರೆಟ್ ನೋಬಲ್ ಎಂಬ ಮತ್ತೊಂದು ನಾರೀರತ್ನವನ್ನು ಬಹುಮಾನವಾಗಿ ಕೊಟ್ಟಿದೆ. ಅವರಿಂದ ನಾವು ಬಹಳ ನಿರೀಕ್ಷಿಸುತ್ತಿರುವೆವು. ನಾನು ಇನ್ನು ಹೆಚ್ಚು ಮಾತನಾಡದೆ ಮಿಸ್ ನೋಬೆಲ್ ಪರಿಚಯ ಮಾಡಿಸುತ್ತೇನೆ. ಈಗ ಅವರು ಮಾತನಾಡುವರು.

ಸೋದರಿ ನಿವೇದಿತಾ (ಮಾರ್ಗರೆಟ್ ನೋಬಲ್) ಸ್ವಾರಸ್ಯವಾದ ಉಪನ್ಯಾಸ ಮುಗಿದಮೇಲೆ ಸ್ವಾಮಿ ವಿವೇಕಾನಂದರು ಪುನಃ ಮಾತನಾಡಿದರು.

ನಾನೆಲ್ಲೋ ಸ್ವಲ್ಪ ಮಾತ್ರ ಹೇಳಬೇಕಾಗಿದೆ. ಭಾರತೀಯರಾದ ನಾವು ಏನಾದರೂ ಸ್ವಲ್ಪ ಕೆಲಸ ಮಾಡಬಹುದು ಎಂದು ನಂಬುತ್ತೇವೆ.

ಭಾರತೀಯರಲ್ಲಿ ಬೆಂಗಾಲಿಯವರು ಇದನ್ನು ನೋಡಿ ನಗಬಹುದು. ಆದರೆ ನಾನು ಹಾಗೆ ಮಾಡುವುದಿಲ್ಲ. ನಿಮ್ಮಲ್ಲಿ ಒಂದು ಹೋರಾಟ ವನ್ನು ಎಬ್ಬಿಸುವುದೇ ನನ್ನ ಉದ್ದೇಶ. ನೀವು ಅದ್ವೈತಿಗಳೋ ವಿಶಿಷ್ಟಾ ದ್ವೈತಿಗಳೊ ದ್ವೈತಿಗಳೊ ಚಿಂತೆಯಿಲ್ಲ. ನಿಮ್ಮ ಲಕ್ಷ್ಯವನ್ನು ಈ ಒಂದು ಭಾವನೆಗೆ ಸೆಳೆಯುತ್ತೇನೆ. ದುರದೃಷ್ಟವಶಾತ್ ಅದನ್ನು ನಾವು ಯಾವಾ ಗಲೂ ಮರೆಯುವೆವು. ಅದೇ "ಹೇ ಮಾನವ, ನಿನ್ನಲ್ಲಿ ಆತ್ಮಶ್ರದ್ಧೆ ಇರಲಿ." ಇದರಿಂದ ನಮಗೆ ದೇವರಲ್ಲಿ ಶ್ರದ್ಧೆ ಹುಟ್ಟುವುದು. ನೀವು ದ್ವೈತಿಗಳೊ, ಅದ್ವೈತಿಗಳೊ, ಯೋಗದಲ್ಲಾದರೂ ನಂಬಿ, ಶಂಕರಾಚಾರ್ಯ ರಲ್ಲಾದರೂ ನಂಬಿ, ನೀವು ವ್ಯಾಸನನ್ನಾದರೂ ಅನುಸರಿಸಿ, ವಿಶ್ವಾಮಿತ್ರ ನನ್ನಾದರೂ ಅನುಸರಿಸಿ. ಇದರಿಂದ ಏನೂ ವ್ಯತ್ಯಾಸವಾಗುವುದಿಲ್ಲ. ಮುಖ್ಯವಾಗಿರುವುದು ಈ ವಿಷಯದಲ್ಲಿ ಭರತಖಂಡದ ಭಾವನೆ ಇತರರ ಭಾವನೆಗಿಂತ ಬೇರೆ ಆಗಿದೆ. ಬೇರೆ ದೇಶದಲ್ಲಾಗಲಿ, ಧರ್ಮದಲ್ಲಾಗಲಿ ಆತ್ಮಶಕ್ತಿಯನ್ನು ಗಣನೆಗೇ ತರುವುದಿಲ್ಲ. ಇದನ್ನು ಸ್ವಲ್ಪ ನೆನಪಿನಲ್ಲಿ ಇಡೋಣ. ಆತ್ಮನನ್ನು ಶಕ್ತಿಹೀನ, ದುರ್ಬಲ, ಜಡ ಎಂದು ಭಾವಿಸು ವರು. ಆದರೆ ಭರತಖಂಡದಲ್ಲಿ ನಾವು ಆತ್ಮನನ್ನು ಆದಿ ಅಂತ್ಯ ರಹಿತ, ಎಲ್ಲಾ ಕಾಲದಲ್ಲಿಯೂ ಪರಿಪೂರ್ಣವಾಗಿರುವುದು ಎಂದು ನಂಬುವೆವು. ನೀವು ಯಾವಾಗಲೂ ಉಪನಿಷತ್ತಿನ ಸಂದೇಶವನ್ನು ಜ್ಞಾಪಕದಲ್ಲಿಟ್ಟಿರ ಬೇಕು.

ನಿಮ್ಮ ಜೀವನದ ಮಹಾಧ್ಯೇಯವನ್ನು ಸ್ಮರಿಸಿಕೊಳ್ಳಿ. ಭಾರ ತೀಯರು ಅದರಲ್ಲೂ ಬಂಗಾಳಿಯವರನ್ನು ಹಲವು ಪಾಶ್ಚಾತ್ಯಭಾವನೆ ಮೆಟ್ಟಿಕೊಂಡಿವೆ. ಅವು ನಮ್ಮ ಜನಾಂಗದ ಧರ್ಮದ ತಿರುಳನ್ನೇ ಭೇದಿ ಸುತ್ತಿವೆ. ನಾವೇಕೆ ಈಚೆಗೆ ಇಷ್ಟು ಹಿಂದಿರುವುದು? ನಮ್ಮಲ್ಲಿ ಶೇಕಡ ೯೯ ಮಂದಿ ಬಾಹ್ಯ ಆದರ್ಶಗಳ ಕಂತೆ ಏತಕ್ಕೆ ಆಗಿರುವುದು? ನಾವು ಜನಾಂಗದ ಗೌರವಕ್ಕೆ ಪಾತ್ರರಾಗಬೇಕಾದರೆ ಇವನ್ನು ಕಿತ್ತೊಗೆಯಬೇಕು. ನಾವು ಮೇಲೇಳಬೇಕಾದರೆ ಪಾಶ್ಚಾತ್ಯರಿಂದ ಹಲವು ವಿಷಯ ಕಲಿಯ ಬೇಕಾಗಿದೆ ಎನ್ನುವುದನ್ನು ತಿಳಿಯಬೇಕು. ನಾವು ಪಾಶ್ಚಾತ್ಯರಿಂದ ವಿಜ್ಞಾನ ಶಾಸ್ತ್ರವನ್ನು ಕಲಿಯಬೇಕು. ಅವರು ಧಾರ್ಮಿಕ ವಿಷಯ ತಿಳಿದುಕೊಳ್ಳುವು ದಕ್ಕೆ ನಮ್ಮ ಹತ್ತಿರ ಬರಬೇಕು. ಹಿಂದುಗಳು ಜಗತ್ತಿಗೇ ಗುರುಗಳು ಎಂಬುದನ್ನು ನಂಬಬೇಕು. ರಾಜಕೀಯ ಸ್ವಾತಂತ್ರ್ಯ ಮುಂತಾದುವಕ್ಕೆ

ನಾವು ಇಲ್ಲಿ ಗದ್ದಲವೆಬ್ಬಿಸುತ್ತಿರುವೆವು. ಅದೇನೊ ಸರಿ. ಹಕ್ಕು ಬಾಧ್ಯತೆ ಸ್ನೇಹದಿಂದ ಮಾತ್ರ ಬರಬಲ್ಲುದು. ಸ್ನೇಹ ಸರಿಸಮಾನರಲ್ಲಿ ಮಾತ್ರ ಸಾಧ್ಯ. ಅವರಲ್ಲಿ ಒಬ್ಬ ಭಿಕ್ಷುಕನಾಗಿದ್ದರೆ ಸ್ನೇಹ ಹೇಗೆ ಸಾಧ್ಯ? ಹಾಗೆ ಹೇಳುವುದೇನೊ ಸುಲಭ. ಪರಸ್ಪರ ಸಹಕಾರವಿಲ್ಲದೆ ನಾವೆಂದಿಗೂ ಬಲಾಢ್ಯರಾಗಲಾರೆವು. ಇಂಗ್ಲೆಂಡ್ ಮತ್ತು ಅಮೇರಿಕಾ ದೇಶಗಳಿಗೆ ಧಾರ್ಮಿಕ ಗುರುಗಳಂತೆ ಹೋಗಿ ಎನ್ನುವೆನು. ಕೊಟ್ಟು ತೆಗೆದುಕೊಳ್ಳುವ ನಿಯಮ ವನ್ನು ನಮ್ಮ ಶಕ್ತಿಗನುಗುಣವಾಗಿ ಉಪಯೋಗಿಸಬೇಕು. ಈ ಜೀವನ ದಲ್ಲಿ ನಮ್ಮನ್ನು ಸುಖಿಗಳನ್ನಾಗಿ ಮಾಡುವ ಮಾರ್ಗವನ್ನು ಅವರಿಂದ ಕಲಿ ತರೆ ಅವರಿಗೆ ಎಂದೆಂದಿಗೂ ಸುಖಿಗಳನ್ನಾಗಿ ಮಾಡುವ ಮಾರ್ಗವನ್ನು ಏಕೆ ತೋರಬಾರದು? ಎಲ್ಲಕ್ಕಿಂತ ಮಿಗಿಲಾದ ಮಾನವ ಕೋಟಿಯ ಹಿತಕ್ಕೆ ಯತ್ನಿಸಿ; ಕ್ಷುದ್ರ ಆಚಾರ ಸಂಪ್ರದಾಯದ ಜೀವನದ ಅಹಂಕಾರವನ್ನು ತ್ಯಜಿಸಿ. ಸಾವು ಎಲ್ಲರಿಗೂ ನಿಶ್ಚಯ. ಪ್ರಖ್ಯಾತ ಐತಿಹಾಸಿಕ ಘಟನೆಯನ್ನು ಗಮನದಲ್ಲಿಡಿ. ಪ್ರಪಂಚದ ರಾಷ್ಟ್ರಗಳಲ್ಲಿ ಭಾರತೀಯನ ಪದತಳದಲ್ಲಿ ಮೌನವಾಗಿ ಕುಳಿತು ಅವರ ಶಾಸ್ತ್ರದಲ್ಲಿರುವ ಸನಾತನ ತತ್ತ್ವಗಳನ್ನು ಕಲಿಯಬೇಕಾಗಿದೆ. ಇಂಡಿಯಾ ನಾಶವಾಗುವುದಿಲ್ಲ, ಚೈನಾ ನಾಶವಾಗುವು ದಿಲ್ಲ, ಜಪಾನ್ ನಾಶವಾಗುವುದಿಲ್ಲ. ನಮ್ಮ ಮೂಲಭಿತ್ತಿ ಅಧ್ಯಾತ್ಮ ಎಂಬುದನ್ನು ನಾವು ಯಾವಾಗಲೂ ನೆನಪಿನಲ್ಲಿಡಬೇಕು. ಈ ಮಾರ್ಗ ವನ್ನು ತಿಳಿಯಬೇಕಾದರೆ ಒಬ್ಬ ಮಾರ್ಗದರ್ಶಕ ಆವಶ್ಯಕ. ನಿಮ್ಮಲ್ಲಿ ಯಾರಾದರೂ ಇದನ್ನು ನಂಬದೇ ಇದ್ದರೆ, ತನ್ನ ಧರ್ಮ ಶುದ್ಧ ಆಧ್ಯಾತ್ಮ ಎಂದು ಯಾವ ಹುಡುಗ ನಂಬುವುದಿಲ್ಲವೋ ಅವನು ಹಿಂದುವಲ್ಲ. ಹಿಂದೆ ಕಾಶ್ಮೀರದಲ್ಲಿ ಒಬ್ಬ ಮಹಮ್ಮದೀಯ ಮುದುಕಿಯೊಂದಿಗೆ ಮಾತನಾಡು ತ್ತಿದ್ದಾಗ "ನಿನ್ನದು ಯಾವ ಧರ್ಮ?" ಎಂದು ಕೇಳಿದೆ. ಆಕೆ, "ದೇವರಿಗೆ ಜಯವಾಗಲಿ, ಅವನ ದಯೆಯಿಂದ ನಾನು ಮಹಮ್ಮದೀಯ ಕುಲಕ್ಕೆ ಸೇರಿದವಳು" ಎಂದಳು. ಅನಂತರ ಒಬ್ಬ ಹಿಂದುವನ್ನು ನಿನ್ನ ಧರ್ಮ ಯಾವುದು ಎಂದು ಕೇಳಿದೆ. ಅವನು ಸುಮ್ಮನೆ "ನಾನು ಹಿಂದು" ಎಂದ. ಕಠೋಪನಿಷತ್ತಿನಲ್ಲಿ ಬರುವ ಶ್ರದ್ಧೆ ಎಂಬ ಅಪೂರ್ವ ಪದ ನನಗೆ ಜ್ಞಾಪಕ ಬರುವುದು. ನಚಿಕೇತನ ಜೀವನದಲ್ಲಿ ಶ್ರದ್ಧೆಗೆ ಉದಾಹರಣೆ ದೊರಕುವುದು. ಶ್ರದ್ಧೆ ಆತ್ಮನಂಬಿಕೆ ಇದನ್ನು ಸಾರುವುದೇ ನನ್ನ ಜೀವನದ ಧ್ಯೇಯ. ಇದೇ ಮಾನವ ಕೋಟಿಯ, ಎಲ್ಲಾ ಧರ್ಮಗಳ ಅತಿ ಮುಖ್ಯ

ವಾದ ವಿಷಯವೆಂಬುದನ್ನು ಮತ್ತೊಮ್ಮೆ ಹೇಳುವೆನು. ಮೊದಲು ಆತ್ಮ ಶ್ರದ್ಧೆ ಇರಲಿ. ಒಂದು ಸಣ್ಣ ಗುಳ್ಳೆಯಾಗಿ ಮತ್ತೊಂದು ಪರ್ವತಾಕಾರದ ಅಲೆಯಾದರೂ, ಗುಳ್ಳೆ ಮತ್ತು ಆ ಬೃಹದಾಕಾರದ ಅಲೆ ಎರಡರ ಹಿಂದೆಯೂ ಒಂದೇ ಅನಂತ ಸಾಗರವಿದೆ ಎಂಬುದನ್ನು ತಿಳಿದುಕೊಳ್ಳಿ. ಎಲ್ಲರಿಗೂ ಭರವಸೆ ಇದೆ. ಎಲ್ಲರಿಗೂ ಮೋಕ್ಷವಿದೆ. ಪ್ರತಿಯೊಬ್ಬನೂ ನಿಧಾನವಾಗಿಯೋ, ಜಾಗ್ರತೆಯಾಗಿಯೋ, ಮಾಯಾಬಂಧನದಿಂದ ಪಾರಾಗಬೇಕಾಗಿದೆ. ಇದು ನಾವು ಮಾಡಬೇಕಾದ ಪ್ರಥಮ ಕರ್ತವ್ಯ. ಅನಂತ ಭರವಸೆಯಿಂದ ಅನಂತ ಸ್ಫೂರ್ತಿ ಜನಿಸುವುದು. ಆ ಶ್ರದ್ಧೆ ನಮ್ಮಲ್ಲೂ ಬಂದರೆ, ವ್ಯಾಸ ಅರ್ಜುನರ ಕಾಲದ ಜನಾಂಗದ ಜೀವನ ವನ್ನು ಪುನಃ ತರುವುದು. ಮಾನವ ಕೋಟಿಯ ಭವ್ಯತಮ ಸಿದ್ಧಾಂತವನ್ನು ಸಾರಿದ ಸಮಯ ಅದು. ಆಧ್ಯಾತ್ಮಿಕ ಭಾವನೆ ಮತ್ತು ದರ್ಶನಗಳಲ್ಲಿ ನಾವು ಇಂದು ಹಿಂದೆ ಬಿದ್ದಿರುವೆವು. ಭರತಖಂಡದಲ್ಲಿ ಹಿಂದೆ ಬೇಕಾ ದಷ್ಟು ಆಧ್ಯಾತ್ಮವಿತ್ತು. ಈ ಆಧ್ಯಾತ್ಮಿಕ ಮಹಿಮೆ ಭರತಖಂಡದ ಗತ ಕಾಲದ ಮಹಿಮೆ ಮತ್ತು ಭರವಸೆಯನ್ನು ನಂಬಬಹುದಾದರೆ, ಅಂತಹ ಸುದಿನ ನಮಗೆ ಮತ್ತೊಮ್ಮೆ ಬರುವುದು. ಅದು ನಮ್ಮ ಮೇಲೆ ನಿಂತಿರು ವುದು. ವಂಗ ದೇಶದ ತರುಣರೇ, ಈ ಶ್ರೀಮಂತರನ್ನು ನೆಚ್ಚಬೇಡಿ. ಪ್ರಪಂಚದ ಅದ್ಭುತ ಕೆಲಸಗಳನ್ನೆಲ್ಲಾ ಸಾಧಿಸಿದವರೆ ದೀನರು. ವಂಗ ದೇಶದ ದೀನರೇ, ಮುಂದೆ ಬನ್ನಿ. ನೀವು ಏನನ್ನು ಬೇಕಾದರೂ ಸಾಧಿಸ ಬಹುದು, ಎಲ್ಲವನ್ನೂ ಸಾಧಿಸಲೇ ಬೇಕು. ನೀವು ದೀನರಾದರೂ ಹಲ ವರು ನಿಮ್ಮನ್ನು ಅನುಸರಿಸುವರು. ಸ್ಥಿರವಾಗಿ ಎಲ್ಲಕ್ಕಿಂತ ಹೆಚ್ಚಾಗಿ ಪರಿ ಶುದ್ಧರಾಗಿ, ನಿಷ್ಠಾವಂತರಾಗಿ, ನಿಮ್ಮ ಅದೃಷ್ಟದಲ್ಲಿ ನಂಬಿ. ವಂಗದೇಶದ ತರುಣರೇ, ನೀವು ಭರತಖಂಡದ ವಿಮೋಚನೆ ಮಾಡಬೇಕಾಗಿದೆ. ಇದನ್ನು ಗಮನಿಸಿ. ನಂಬಿದರೆ ನಂಬಿ ಬಿಟ್ಟರೆ ಬಿಡಿ. ಇಂದೋ, ನಾಳೆಯೋ ಅದು ನೆರವೇರುತ್ತದೆ ಎಂದು ಭಾವಿಸಬೇಡಿ. ನನ್ನ ದೇಹ ಮತ್ತು ಆತ್ಮ ದಲ್ಲಿ ನಂಬುವಂತೆ ಅದರಲ್ಲೂ ನಂಬುತ್ತೇನೆ. ವಂಗ ತರುಣರೇ, ಅದಕ್ಕೇ ನನ್ನ ಹೃದಯ ನಿಮ್ಮನ್ನು ಪ್ರೀತಿಸುವುದು. ದುಡ್ಡಿಲ್ಲದ ನಿಮ್ಮ ಮೇಲೆ ಅದು ನಿಂತಿದೆ; ನೀವು ದೀನರು, ಅದಕ್ಕೇ ನೀವು ಅದನ್ನು ಸಾಧಿಸುವಿರಿ. ನಿಮ್ಮಲ್ಲಿ ಏನೂ ಇಲ್ಲ. ಅದಕ್ಕೆ ನೀವು ನಿಷ್ಠಾವಂತರಾಗುವಿರಿ. ನೀವು ನಿಷ್ಠಾವಂತ ರಾಗುವುದರಿಂದಲೇ ಸರ್ವವನ್ನೂ ತ್ಯಾಗ ಮಾಡಬಲ್ಲಿರಿ. ಈಗ ನಾನು

ಅದನ್ನೇ ನಿಮಗೆ ಹೇಳುತ್ತಿರುವುದು. ಮತ್ತೊಮ್ಮೆ ನಾನು ನಿಮಗೆ ಇದನ್ನು ಹೇಳುತ್ತೇನೆ. ಜೀವನದಲ್ಲಿ ಇದು ನಿಮ್ಮ ಉದ್ದೇಶ; ನನ್ನ ಉದ್ದೇಶ. ನೀವು ಯಾವ ತತ್ತ್ವವನ್ನಾದರೂ ತೆಗೆದುಕೊಳ್ಳಿ ಚಿಂತೆ ಇಲ್ಲ. ಭರತ ಖಂಡದಲ್ಲೆಲ್ಲಾ, ಮಾನವ ಕೋಟಿಯ ಪರಿಪೂರ್ಣತೆಯಲ್ಲಿ ಸೌಹಾರ್ದ ಸ್ನೇಹ ಪೂರಿತ ಅನಂತ ವಿಶ್ವಾಸವಿದೆ ಎಂಬುದನ್ನು ನಿಮಗೆ ಸಪ್ರಮಾಣ ವಾಗಿ ತೋರಬಲ್ಲೆ. ಈ ವಿಶ್ವಾಸ ಭರತಖಂಡದಲ್ಲೆಲ್ಲಾ ಪ್ರಚಾರವಾಗಲಿ.



# ಸನ್ಯಾಸ: ಆದರ್ಶ ಮತ್ತು ಅನುಷ್ಠಾನ

**( ಸ್ವಾಮಿ ವಿವೇಕಾನಂದರು ೧೯ ನೇ ಜೂನ್ ೧೮೯೯ರಲ್ಲಿ ಸನ್ಯಾಸ ವೃಂದಕ್ಕೆ ಕೊಟ್ಟ ಭಾಷಣದ ಸಾರಾಂಶ.)**

ಧೀರ್ಘ ಉಪನ್ಯಾಸಕ್ಕೆ ಇದು ವೇಳೆಯಲ್ಲ. ನೀವು ಅನುಷ್ಠಾನಕ್ಕೆ ತರಬೇಕಾದ ಕೆಲವು ವಿಷಯಗಳನ್ನು ಮಾತ್ರ ನಿಮಗೆ ಸಂಕ್ಷೇಪವಾಗಿ ಹೇಳಬಯಸುವೆನು. ಮೊದಲು ನಾವು ಆದರ್ಶವನ್ನು ತಿಳಿದುಕೊಳ್ಳಬೇಕು. ಯಾರು ಸನ್ಯಾಸಿಗಳೋ ಅವರು ಪರರಿಗೆ ಹಿತಮಾಡುವುದಕ್ಕೆ ಪ್ರಯತ್ನಿಸಬೇಕು. ಸನ್ಯಾಸವೆಂದರೆ ಅದೆ ಅರ್ಥ. ತ್ಯಾಗದ ಮೇಲೆ ಧೀರ್ಘ ಭಾಷಣ ಮಾಡುವುದಕ್ಕೆ ಸಮಯವಿಲ್ಲ. ಸನ್ಯಾಸವೆಂದರೆ ಮೃತ್ಯು ಪ್ರೇಮ ಎಂದು ಸಂಕ್ಷೇಪವಾಗಿ ಹೇಳುತ್ತೇನೆ. ಪ್ರಾಪಂಚಿಕರು ಜೀವನವನ್ನು ಪ್ರೀತಿಸುವರು. ಸನ್ಯಾಸಿ ಮೃತ್ಯುವನ್ನು ಪ್ರೀತಿಸಬೇಕು. ಹಾಗಾದರೆ ನಾವು ಆತ್ಮಹತ್ಯೆ ಮಾಡಿಕೊಳ್ಳಬೇಕೆ? ಅದಲ್ಲ. ಆತ್ಮಹತ್ಯೆ ಮಾಡಿಕೊಳ್ಳ ಬಯಸುವರು ಮೃತ್ಯು ಪ್ರೇಮಿಗಳಲ್ಲ. ಒಮ್ಮೆ ಅವರು ಆತ್ಮಹತ್ಯಕ್ಕೆ ಪ್ರಯತ್ನಿಸಿ ಸೋತರೆ, ಪುನಃ ಅದನ್ನು ಮಾಡಲಿಚ್ಛಿಸುವುದಿಲ್ಲ. ಹಾಗಾದರೆ ಮೃತ್ಯು ಪ್ರೇಮವೆಂದರೇನು? ನಾವು ಸಾಯಬೇಕು, ಅದು ನಿಶ್ಚಯ. ಹಾಗಾದರೆ ಒಂದು ಒಳ್ಳೆಯ ಆದರ್ಶಕ್ಕೆ ಸಾಯುವ. ನಮ್ಮ ಕ್ರಿಯೆಗಳೆಲ್ಲ, ಊಟಮಾಡುವುದು, ಕುಡಿಯುವುದು, ಪ್ರತಿಯೊಂದೂ ಆತ್ಮತ್ಯಾಗಕ್ಕೆ ಸಹಾಯಕವಾಗಲಿ. ಆಹಾರದಿಂದ ನಿಮ್ಮ ದೇಹವನ್ನು ರಕ್ಷಿಸುವಿರಿ. ನಿಮ್ಮ ದೇಹವನ್ನು ಇತರರ ತ್ಯಾಗಕ್ಕೆ ಉಪಯೋಗಿಸವೆ ಇದ್ದರೆ ಅದನ್ನು ರಕ್ಷಿಸಿ ಪ್ರಯೋಜನವೇನು? ಗ್ರಂಥ ಓದಿ ಮನಸ್ಸನ್ನು ಅಭಿವೃದ್ಧಿಪಡಿಸಿಕೊಳ್ಳುವಿರಿ. ಇದನ್ನು ಪ್ರಪಂಚಕ್ಕೆ ತ್ಯಾಗಮಾಡದಿದ್ದರೆ ಇದರಿಂದಲೂ ಪ್ರಯೋಜನವಿಲ್ಲ. ನಿನ್ನ ಕ್ಷುದ್ರ ಅಹಂಕಾರವನ್ನು ವೃದ್ಧಿಪಡಿಸುವುದಕ್ಕಿಂತ ಲಕ್ಷಾಂತರ ನಿನ್ನ ಸಹೋದರರನ್ನು ಸೇವಿಸುವುದು ಒಳ್ಳೆಯದು. ನೀವು ಹಾಗೆ ಕ್ರಮೇಣ ಮೃತ್ಯುಮುಖರಾಗಬೇಕು. ಇಂತಹ ಮರಣದಲ್ಲಿ ಸ್ವರ್ಗವಿದೆ. ಸರ್ವ ಶುಭದ ಆಗಾರ ಇದು. ಇದಕ್ಕೆ ವಿರೋಧವಾಗಿರುವುದೇ ನರಕ, ಪಾಪ.

ನಂತರ ಈ ಆದರ್ಶವನ್ನು ಅನುಷ್ಠಾನಕ್ಕೆ ತರುವ ಮಾರ್ಗ. ಅನುಷ್ಠಾನ ಮಾಡಲು ಆದರ್ಶ ಅಸಾಧ್ಯವಾಗಿರಕೂಡದು. ಇದನ್ನು ತಿಳಿದುಕೊಳ್ಳ

ಬೇಕು. ನಮ್ಮ ಸಾಮರ್ಥ್ಯಕ್ಕೆ ನಿಲುಕದ ಆದರ್ಶವಿದ್ದರೆ ಆ ದೇಶ ದುರ್ಬಲ ವಾಗಿ ಅಧೋಗತಿಗೆ ಇಳಿಯುವುದು. ಇದು ಬೌದ್ಧ ಮತ್ತು ಜೈನ ಧರ್ಮ ಸುಧಾರಣೆಗಳಾದ ಮೇಲೆ ಪ್ರಾಪ್ತವಾಯಿತು. ಕೇವಲ ವ್ಯವಹಾರ ಜ್ಞಾನ ಕೂಡ ತಪ್ಪು. ನಿಮ್ಮಲ್ಲಿ ಸ್ವಲ್ಪವೂ ಕಲ್ಪನೆ ಇಲ್ಲದೇ ಇದ್ದರೆ, ನಿಮಗೆ ದಾರಿತೋರುವುದಕ್ಕೆ ಒಂದು ಆದರ್ಶವಿಲ್ಲದೇ ಇದ್ದರೆ ನೀವೊಬ್ಬ ಮೂರ್ಖರು. ನಾವು ಆದರ್ಶವನ್ನು ಕೆಳಗೆ ಎಳೆಯ ಕೂಡದು, ಅದು ಅನುಷ್ಠಾನಕ್ಕೆ ಸಾಧ್ಯವೇ ಎಂಬುದನ್ನು ಮರೆಯಕೂಡದು. ಈ ಎರಡು ಅತಿ ಇಂದಲೂ ಪಾರಾಗಬೇಕು. ನಮ್ಮ ದೇಶದಲ್ಲಿ ಹಿಂದಿನ ಕಾಲದ ಆದರ್ಶ ಒಂದು ಗುಹೆಯಲ್ಲಿ ಕುಳಿತು ಧ್ಯಾನಮಾಡಿ ಸಾಯುವುದು. ಮುಕ್ತಿಗೆ ಇತರರಿ ಗಿಂತ ಮುಂದೆ ಹೋಗುವುದು ತಪ್ಪು. ನಮ್ಮ ಸಹೋದರರ ಮುಕ್ತಿಗೆ ನಾವು ಪ್ರಯತ್ನಿಸದೆ ಇದ್ದರೆ ನಮಗೂ ಮುಕ್ತಿ ಇಲ್ಲವೆಂಬುದನ್ನು ಇಂದೋ ನಾಳೆಯೋ ಕಲಿಯಬೇಕಾಗಿದೆ. ಅದ್ಭುತ ಆದರ್ಶ ಮತ್ತು ಅದ್ಭುತ ಅನುಷ್ಠಾನ ಇವೆರಡನ್ನು ನಿಮ್ಮ ಆದರ್ಶದಲ್ಲಿ ಸೇರಿಸಲು ಯತ್ನಿಸಬೇಕು. ಈ ಕ್ಷಣ ಧ್ಯಾನಪರವಶರಾಗಲು ಸಾಧ್ಯವಾಗಬೇಕು. ಮರುಕ್ಷಣ ಎದುರಿ ಗಿರುವ ಹೊಲವನ್ನು ಉಳಲು ಸಿದ್ಧರಾಗಿರಬೇಕು. ಈಗ ಶಾಸ್ತ್ರದ ಜಟಿಲ ಸಮಸ್ಯೆಯನ್ನು ಬಗೆಹರಿಸಲು ಸಿದ್ಧರಾಗಿರಬೇಕು. ತಕ್ಷಣ ತೋಟದ ತರಕಾರಿಯನ್ನು ಅಂಗಡಿಯಲ್ಲಿ ಮಾರಲು ಸಿದ್ಧರಾಗಿರಬೇಕು. ಅತಿ ನೀಚ ಕೆಲಸವನ್ನು ಕೂಡ ಮಾಡಲು ಸಿದ್ಧರಾಗಿರಬೇಕು. ಇಲ್ಲಿ ಮಾತ್ರವಲ್ಲ. ಎಲ್ಲಾ ಕಡೆಯಲ್ಲಿಯೂ ಅದನ್ನು ಮಾಡಲು ಸಿದ್ಧರಾಗಿರಬೇಕು.

ನಂತರ ನಾವು ಜ್ಞಾಪಕದಲ್ಲಿಡಬೇಕಾದುದೆ ಈ ಸಂಘದ ಉದ್ದೇಶ "ಪುರುಷನಿರ್ಮಾಣ" ಎಂಬುದು. ಋಷಿಗಳ ಬೋಧನೆಯನ್ನು ನೀವು ಕಲಿತು ಕೊಳ್ಳುವುದಲ್ಲ. ಆ ಋಷಿಗಳೆಲ್ಲಾ ಹೊರಟುಹೋದರು, ಅವರ ಭಾವನೆಯೂ ಅವರೊಂದಿಗೆ ಹೋಯಿತು. ನೀವು ಋಷಿಗಳಾಗಬೇಕು. ಪ್ರಪಂಚದಲ್ಲಿ ಜನಿಸಿದ ಶ್ರೇಷ್ಠತಮ ವ್ಯಕ್ತಿಗಳಂತೆ, ಅವತಾರಗಳಂತೆ, ನೀವುಕೂಡ ಮನುಷ್ಯರೆ. ಕೇವಲ ಪುಸ್ತಕ ಪಾಂಡಿತ್ಯದಿಂದ ಪ್ರಯೋಜನ ವೇನು? ಧ್ಯಾನದಿಂದ ತಾನೇ ಏನು ಪ್ರಯೋಜನ. ಮಂತ್ರತಂತ್ರದಿಂದ ಏನು ಪ್ರಯೋಜನ? ನೀವು ನಿಮ್ಮ ಕಾಲಮೇಲೆ ನಿಲ್ಲಬೇಕು. ಈ ಒಂದು ಹೊಸ ಮಾರ್ಗ ನಿಮಗೆ ಬೇಕು. ಪುರುಷ ನಿರ್ಮಾಣಮಾರ್ಗ. ನಿಜ ವಾದ ಮನುಷ್ಯ ಶಕ್ತಿಯೇ ರೂಪು ತಾಳಿದಂತೆ ಇರುವನು. ಆದರೂ

ಕೋಮಲ ಅಬಲೆಯ ಹೃದಯವಿರುವುದು. ನಮ್ಮ ಸುತ್ತಲಿರುವ ಮಾನವ ಕೋಟಿಗೆ ಅನುಕಂಪತಾಳಬೇಕು. ಆದರೂ ಬಲಾಢ್ಯನಾಗಿರಬೇಕು; ಅಧ್ಯವ್ಯನಾಗಿರಬೇಕು; ಆದರೂ ವಿಧೇಯತೆ ಇರಬೇಕು. ಇದು ವಿರೋಧಾಭಾಸದಂತೆ ತೋರಬಹುದು. ಆದರೂ ತೋರಿಕೆಗೆ ವಿರೋಧ ದಂತೆ ಕಾಣುತ್ತಿರುವ ಈ ಗುಣಗಳು ಇರಬೇಕು. ನಮ್ಮ ಹಿರಿಯರು ನದಿಗೆ ಧುಮುಕಿ ಮೊಸಳೆ ಹಿಡಿಯಿರಿ ಎಂದರೆ ಮೊದಲು ಅದನ್ನು ಪಾಲಿಸಿ ನಂತರ ಚರ್ಚಿಸಬೇಕು. ಅಪ್ಪಣೆ ತಪ್ಪಾಗಿದ್ದರೂ ಮೊದಲು ಅದನ್ನು ಪರಿಪಾಲಿಸಿ, ನಂತರ ವಿರೋಧಿಸಿ. ಬಂಗಾಳ ದೇಶದ ಜಾತಿಗಳ ಒಂದು ದುರ್ಬಲತೆಯೆ, ಬೇರೆ ಅಭಿಪ್ರಾಯ ಯಾರಲ್ಲಾದರೂ ಇದ್ದರೆ, ಅವನು ಬೇರೊಂದು ಹೊಸ ಪಂಗಡವನ್ನು ಸ್ಥಾಪಿಸುವನು. ತಾಳುವುದಕ್ಕೆ ಅವನಿಗೆ ಸಹನೆ ಇಲ್ಲ. ಸಂಘದ ಮೇಲೆ ಅಪೂರ್ವ ಶ್ರದ್ಧಾ ವಿಶ್ವಾಸವಿರಬೇಕು. ಆಜ್ಞೋಲ್ಲಂಘನೆಗೆ ಇಲ್ಲಿ ಅವಕಾಶವಿಲ್ಲ. ನಿರ್ದಾಕ್ಷಿಣ್ಯವಾಗಿ ಅದನ್ನು ನಿರ್ಮೂಲಮಾಡಿ. ಈ ಸಂಘದಲ್ಲಿ ಆಜ್ಞೆಯನ್ನು ಪಾಲಿಸದವರಿಗೆ ಎಡೆ ಇಲ್ಲ. ಅವರನ್ನು ಆಚೆಗೆ ಕಳಿಸಬೇಕು. ಸಂಘದಲ್ಲಿ ದ್ರೋಹಿಗಳಾರೂ ಇರ ಕೂಡದು. ವಾಯುವಿನಂತೆ ಸ್ವಚ್ಛಂದವಾಗಿರಬೇಕು, ಈ ಗಿಡ ಅಥವಾ ನಾಯಿಯಂತೆ ನಮ್ರನಾಗಿರಬೇಕು.



## ನಾನು ಕಲಿತುದೇನು ?

### (ಸ್ವಾಮಿ ವಿವೇಕಾನಂದರು ಢಾಕಾದಲ್ಲಿ ಬಂಗಾಳಿಯಲ್ಲಿ ಮಾಡಿದ ಉಪನ್ಯಾಸದ ಸಾರಾಂಶ)

ಮೊದಲನೆಯದಾಗಿ ಪೂರ್ವ ಬಂಗಾಳಕ್ಕೆ ಬರುವುದಕ್ಕೆ ನನಗೆ ಒಂದು ಅವಕಾಶ ಸಿಕ್ಕಿದುದಕ್ಕೆ ನಿಮಗೆ ವಂದನೆ. ಪಾಶ್ಚಾತ್ಯ ನಾಗರಿಕ ದೇಶಗಳಲ್ಲಿ ನಾನು ಬೇಕಾದಷ್ಟು ಅಲೆದಾಡಿದರೂ ನಮ್ಮ ದೇಶದ ಈ ಭಾಗದ ಪರಿಚಯವೇ ನನಗೆ ಇರಲಿಲ್ಲ. ದೊಡ್ಡ ದೊಡ್ಡ ನದಿಗಳು, ಫಲವತ್ತಾದ ಭೂಮಿ, ಸುಂದರವಾದ ಗ್ರಾಮಗಳು, ನಮ್ಮ ಸ್ವಂತ ಬಂಗಾಳಾ ದೇಶದಲ್ಲಿಯೇ ಇವೆ. ಇದನ್ನು ನೋಡುವುದಕ್ಕೆ ನನಗೆ ಅವಕಾಶವೇ ಇದುವರೆಗೆ ಇರಲಿಲ್ಲ. ನಮ್ಮ ದೇಶದಲ್ಲಿ ನೆಲದ ಮೇಲೆ, ನೀರಿನ ಮೇಲೆ, ಇಷ್ಟೊಂದು ಸೌಂದರ್ಯವಿದೆ ಎಂದು ನನಗೆ ತಿಳಿದಿರಲಿಲ್ಲ. ಪ್ರಪಂಚದ ಇತರ ಭಾಗಗಳನ್ನು ನೋಡಿದ ಮೇಲೆ ನಮ್ಮ ದೇಶದ ಸೌಂದರ್ಯವನ್ನು ನಾನು ಹೆಚ್ಚು ನೋಡಿ ಆನಂದಿಸಬಹುದು. ಈ ಒಂದು ಅನುಕೂಲವೇ ನನಗೆ ಈಗಿರುವುದು. ಹೀಗೆಯೇ ಧರ್ಮಕ್ಕಾಗಿ ಬೇರೆ ಬೇರೆ ಜಾತಿಯನ್ನೆಲ್ಲಾ ಹುಡುಕಿದೆ. ಹೊರಗಿನವರ ಆದರ್ಶವನ್ನು ಅನುಕರಿಸುತ್ತಿರುವ ಪಂಗಡದ ಬಾಗಿಲಲ್ಲಿ ನಿಂತು ಬೇಡುತ್ತಿದ್ದೆ. ನಮ್ಮದೇಶದ ಜನಾಂಗದ ಧರ್ಮದಲ್ಲೆ ಇಷ್ಟೊಂದು ಭವ್ಯತೆ ಮತ್ತು ಸೌಂದರ್ಯವಿರುವುದೆಂದು ನಾನು ಭಾವಿಸಿಯೇ ಇರಲಿಲ್ಲ. ಪ್ರಪಂಚದಲ್ಲೆಲ್ಲಾ ಹಿಂದೂ ಧರ್ಮ ಅತ್ಯಂತ ಶ್ರೇಷ್ಠ, ತೃಪ್ತಿದಾಯಕ ಧರ್ಮವೆಂಬುದನ್ನು ಹಲವು ವರುಷಗಳ ಹಿಂದೆ ತಿಳಿದುಕೊಂಡೆನು. ನಮ್ಮ ದೇಶದಲ್ಲಿ ಇಂತಹ ಅಪೂರ್ವ ಧರ್ಮವಿದ್ದರೂ, ಧರ್ಮದಮೇಲೆ ಆಸಕ್ತಿಯೇ ಇಲ್ಲದಿರುವುದನ್ನು ನೋಡಿದರೆ ವ್ಯಸನವಾಗುವುದು. ನಮ್ಮ ಪ್ರಖ್ಯಾತ ಮಾತೃಭೂಮಿಯಲ್ಲಿ ಆಧ್ಯಾತ್ಮಿಕತೆಯ ವಿಕಾಸಕ್ಕೆ ಹಿತಕಾರಿಯಲ್ಲದ ಈಗ ಪ್ರಚಾರದಲ್ಲಿರುವ ಪಾಶ್ಚಾತ್ಯ ಭಾವನೆಯ ಜಡ ದೃಷ್ಟಿಯ ವಾತಾವರಣದಲ್ಲಿ ಅವರು ಬೆಳೆಯಬೇಕಾಗಿದೆ ಎಂಬುದು ನನಗೆ ಗೊತ್ತು.

ಇಂದು ನಮ್ಮಲ್ಲಿ ಕೆಲವು ಸುಧಾರಕರು ಇರುವರು. ಅವರು ಧರ್ಮವನ್ನು ಸುಧಾರಿಸಬೇಕು ಎನ್ನುವರು. ಎಂದರೆ ಹಿಂದೂ ಜನಾಂಗದ ಸುಧಾರಣೆಗೆ ಅದನ್ನು ತಲೆಕೆಳಕ ಮಾಡುವುದು ಎಂದು ಅರ್ಥ. ಅವರಲ್ಲಿ ಕೆಲವರು

ಆಲೋಚನಾಪರರಿರುವರೇನೋ ನಿಜ. ಆದರೆ ಮುಕ್ಕಾಲುಪಾಲು ಜನ ತಾವು ಏನು ಮಾಡುತ್ತಿರುವುದು ಎಂಬುದನ್ನು ಆಲೋಚಿಸದೆ ಅನ್ಯರನ್ನು ಅಂಧರಾಗಿ ಅನುಕರಿಸುತ್ತಿರುವರು. ಈ ಗುಂಪಿಗೆ ಸೇರಿದವರು ನಮ್ಮ ಧರ್ಮಕ್ಕೆ ಹೊರಗಿನ ಭಾವನೆಗಳನ್ನು ತರಲು ಬಹಳ ತವಕ ಪಡುತ್ತಿರುವರು. ವಿಗ್ರಹಾರಾಧನೆ ಇರುವುದರಿಂದ ಅದು ಸತ್ಯವಲ್ಲ ಎಂದು ಹೇಳುವರು. ವಿಗ್ರಹಾರಾಧನೆ ಎಂದರೇನು? ಅದು ಒಳ್ಳೆಯದೆ ಕೆಟ್ಟದ್ದೆ ಇದನ್ನು ವಿಚಾರಿಸುವುದಕ್ಕೆ ಪ್ರಯತ್ನಪಡುವುದಿಲ್ಲ. ಬರೀ ಮತ್ತೊಬ್ಬರ ಭಾವನೆ ತೆಗೆದುಕೊಂಡು ಹಿಂದೂ ಧರ್ಮವನ್ನು ದೂರುವರು. ಮತ್ತೊಂದು ಪಕ್ಷದ ಜನರಿರುವರು. ಹಿಂದೂ ಧರ್ಮದಲ್ಲಿರುವ ಪ್ರತಿಯೊಂದು ಆಚಾರಕ್ಕೆ ಯಾವುದಾದರೂ ವೈಜ್ಞಾನಿಕ ವಿವರಣೆ ಕೊಡಲು ಯತ್ನಿಸುವರು. ಯಾರಿಗೆ ಗೊತ್ತು ಒಂದು ದಿನ ದೇವರನ್ನೇ ವಿದ್ಯುತ್ ಸ್ಪಂದನದ ರಾಶಿ ಎನ್ನಬಹುದು! ಹೇಗಾದರೂ ಆಗಲಿ, ಜಗನ್ಮಾತೆ ಅವರನ್ನು ಹರಸಲಿ. ಅವಳೇ ತನ್ನ ಕೆಲಸವನ್ನು ಹಲವು ರೀತಿಯಲ್ಲಿ ಹಲವು ಸ್ವಭಾವದ ಜನರ ಮೂಲಕ ಮಾಡಿಸುತ್ತಿರುವಳು.

ಇವರಿಗೆ ವಿರೋಧವಾಗಿ ಪೂರ್ವಾಚಾರಪರಾಯಣರ ಗುಂಪೊಂದು ಇದೆ. ಅವರು "ನನಗೆ ಗೊತ್ತಿಲ್ಲ, ನಿಮ್ಮ ಈ ತರ್ಕವನ್ನೆಲ್ಲಾ ತಿಳಿದುಕೊಳ್ಳುವುದಕ್ಕೆ ನನಗೆ ಇಚ್ಛೆ ಇಲ್ಲ. ನನಗೆ ದೇವರು ಬೇಕು, ಆತ್ಮಬೇಕು, ನಾನು ಎಲ್ಲಿ ಪ್ರಪಂಚವಿಲ್ಲವೋ, ಸುಖ, ದುಃಖಗಳಿಲ್ಲವೋ, ಪರಮಾನಂದ ನೆಲೆಸಿರುವುದೋ, ಅತೀಂದ್ರಿಯ ಅನುಭವದೆಡೆಗೆ ಹೋಗಬೇಕು" ಎನ್ನುವರು. ಶ್ರದ್ಧೆಯಿಂದ ಗಂಗಾನದಿಯಲ್ಲಿ ಮಿಂದರೆ ಮುಕ್ತಿ ಸಿಕ್ಕುವುದೆಂದು ಅವರು ಭಾವಿಸುವರು. ಶ್ರದ್ಧಾಭಕ್ತಿಯಿಂದ ಶಿವ, ರಾಮ, ವಿಷ್ಣು, ಯಾವ ದೇವರನ್ನು ಆರಾಧಿಸಿದರೂ, ನಿಮಗೆ ಮೋಕ್ಷ ಸಿಕ್ಕುವುದೆಂದು ಅವರು ಹೇಳುವರು. ಇಂತಹ ಗಟ್ಟಿಮುಟ್ಟಾದ ಹಳೆಯ ಪರಂಪರೆಗೆ ನಾನು ಸೇರಿರುವುದೊಂದು ಹೆಮ್ಮೆ. ಮತ್ತೊಂದು ಗುಂಪಿನವರು ದೇವರು ಪ್ರಪಂಚ ಎರಡನ್ನೂ ಅನುಸರಿಸುವರು. ಅವರು ನಿಸ್ಪೃಹರಲ್ಲ. ತಮ್ಮ ಹೃದಯದಲ್ಲಿರುವುದನ್ನು ಹೇಳುವುದಿಲ್ಲ. ಮಹಾಪುರುಷರು ಏನು ಬೋಧಿಸುವರು? "ರಾಮನಿರುವ ಕಡೆ ಕಾಮನಿಲ್ಲ, ಕಾಮನಿರುವ ಕಡೆ ರಾಮನಿಲ್ಲ. ಹಗಲು ರಾತ್ರಿ ಏಕ ಕಾಲದಲ್ಲಿ ಇರಲಾರದು." ಪುರಾತನ ಋಷಿವಾಣಿ "ದೇವರು ನಿನಗೆ ಬೇಕಾದರೆ ಕಾಮಕಾಂಚನ ತ್ಯಜಿಸ

ಬೇಕು" ಎನ್ನುವುದು. ಈ ಸಂಸಾರ ಅನಿತ್ಯ, ಜೊಳ್ಳು, ಮಿಥ್ಯೆ, ಇದನ್ನು ತ್ಯಜಿಸಿದ ಹೊರತು ನೀವೆಷ್ಟು ಪ್ರಯತ್ನಪಟ್ಟರೂ ದೇವರು ನಿಮಗೆ ದೊರಕುವುದಿಲ್ಲ. ಇದು ನಿಮಗೆ ಸಾಧ್ಯವಿಲ್ಲದೇ ಇದ್ದರೆ ದುರ್ಬಲರೆಂದು ಒಪ್ಪಿಕೊಳ್ಳಿ, ಆದರ್ಶವನ್ನು ಕೆಳಗೆ ಎಳೆಯಬೇಡಿ. ಕೊಳೆತು ನಾರುವ ಶವದ ಮೇಲೆ ಚಿನ್ನದ ತಗಡನ್ನು ಹೊರಿಸಬೇಡಿ. ಅವರ ದೃಷ್ಟಿಯಲ್ಲಿ, ನಿಮಗೆ ಆಧ್ಯಾತ್ಮ ಬೇಕಾದರೆ, ದೇವರು ಬೇಕಾದರೆ, ಮೊದಲು ಈ ಮರೆಮಾಚುವಿಕೆಯಿಂದ ಪಾರಾಗಬೇಕು; ಆತ್ಮವಂಚನೆಯಿಂದ ಪಾರಾಗಬೇಕು.

ನಾನೇನು ಕಲಿತಿರುವೆ? ಈ ಪುರಾತನ ಸಂಪ್ರದಾಯದಿಂದ ನಾನೇನು ಕಲಿತಿರುವೆ?

ದುರ್ಲಭಂ ತ್ರಯಮೇವೈತತ್ ದೇವಾನುಗ್ರಹಹೇತುಕಮ್ ।
ಮನುಷ್ಯತ್ವಂ ಮುಮುಕ್ಷುತ್ವ ಮಹಾಪುರುಷಸಂಶ್ರಯಃ ॥

ಈ ಮೂರು ಬಹಳ ದುರ್ಲಭ. ದೇವರ ದಯೆಯಿಂದ ಮಾತ್ರ ಲಭಿಸುವುದು. ಅದೇ, ಮನುಷ್ಯ ಜನ್ಮ, ಮುಕ್ತನಾಗಬೇಕೆಂಬ ಆಸೆ, ಮಹಾಪುರುಷರ ಸಂಗ. ತಮಗೆ ಮೊದಲು ಬೇಕಾಗಿರುವುದೇ ಮನುಷ್ಯತ್ವ. ಇಲ್ಲಿ ಮಾತ್ರ ಮುಕ್ತಿಸಾಧ್ಯ. ಅನಂತರವೇ ಮುಮುಕ್ಷುತ್ವ. ವ್ಯಕ್ತಿ ಮತ್ತು ಜಾತಿಗೆ ತಕ್ಕಂತೆ ಮಾರ್ಗ ಬೇರೆಯಾದರೂ, ಕೆಲವು ಪಂಗಡದವರು ಈ ಜ್ಞಾನಕ್ಕೆ ತಮಗೇ ಪ್ರತ್ಯೇಕ ಮಾರ್ಗವಿದೆ ಎಂದು ಭಾವಿಸಿದರೂ, ಅದು ಆಯಾ ಪಂಗಡಕ್ಕೆ ವ್ಯತ್ಯಾಸವಾದರೂ, ವಿರೋಧದ ಅಂಜಿಕೆ ಇಲ್ಲದೆ, ಈ ಮುಮುಕ್ಷುತ್ವವಿಲ್ಲದೆ ಭಗವಂತನ ಸಾಕ್ಷಾತ್ಕಾರವಿಲ್ಲವೆಂದು ಹೇಳಬಹುದು. ಮುಮುಕ್ಷುತ್ವ ಎಂದರೇನು? ಮೋಕ್ಷಕ್ಕೆ ತೀವ್ರ ಆಕಾಂಕ್ಷೆ, ಸುಖ, ದುಃಖಗಳ ತುಮುಲದಿಂದ ಪಾರಾಗಿ ಹೋಗಬೇಕೆಂಬ ತೀವ್ರ ಇಚ್ಛೆ. ಪ್ರಪಂಚದ ಮೇಲೆ ಜಿಗುಪ್ಸಾ ಮನೋಭಾವನೆ. ಭಗವಂತನನ್ನು ನೋಡಬೇಕೆಂಬ ಆಸೆ ಉತ್ಕಟವಾಗಿ ದಾರುಣವಾದಾಗ ಮಾತ್ರ ನೀನು ಆ ಪರಮ ಪದವನ್ನು ಪಡೆಯಲು ಯೋಗ್ಯ.

ಮತ್ತೊಂದು ಬೇಕಾಗಿದೆ. ಅದೇ ಮಹಾಪುರುಷರ ಸಂಗ. ಗುರಿಯನ್ನು ಸೇರಿದ ಮಹಾ ಪುರುಷರ ಬಾಳಿನಂತೆ ನಮ್ಮ ಜೀವನವನ್ನು ರೂಢಿಸಬೇಕು. ಪ್ರಪಂಚದ ಮೇಲೆ ಜಿಗುಪ್ಸೆ, ಭಗವಂತನನ್ನು ಪಡೆಯಬೇಕೆಂಬ ತೀವ್ರ ಆಕಾಂಕ್ಷೆ ಇವೆರಡೇ ಸಾಲದು. ಗುರುವಿನಿಂದ ಉಪದೇಶ ಆವಶ್ಯಕ.

ಏತಕ್ಕೆ? ಇದರಿಂದ ಆ ಶಕ್ತಿಮೂಲಕ್ಕೆ ಒಂದು ಸಂಬಂಧವನ್ನು ಕಲ್ಪಿಸಿ ಕೊಳ್ಳುವೆ. ಹಲವು ತಲೆಮಾರುಗಳಿಂದ ಗುರುವಿನಿಂದ ಶಿಷ್ಯನಿಗೆ ಈ ಶಕ್ತಿ ಅಖಂಡವಾಗಿ ಹರಿದುಬಂದಿದೆ. ಶಿಷ್ಯ ಗುರುವನ್ನು ಮಾರ್ಗದರ್ಶಕ, ಸ್ನೇಹಿತ ತತ್ತ್ವದರ್ಶಿ ಎಂದು ಸ್ವೀಕರಿಸಬೇಕು. ಆಧ್ಯಾತ್ಮಿಕ ಜೀವನದಲ್ಲಿ ಮುಂದು ವರಿಯ ಬೇಕಾದರೆ ಗುರುವೆ ಅತಿಮುಖ್ಯ. ನಾನು ಯಾರನ್ನು ನನ್ನ ಗುರುವನ್ನಾಗಿ ಸ್ವೀಕರಿಸಬೇಕು? "ಶ್ರೋತ್ರಿಯೋ ಅವೃಜಿನೋ, ಅಕಾ ಮಹತೋ ಯೋ ಬ್ರಹ್ಮವಿತ್ತಮಃ" ವೇದ ಬಲ್ಲವನು ಪಾಪದೂರನು, ಕಾಮಹೀನನು, ಬಹ್ಮಜ್ಞರಲ್ಲಿ ಉತ್ತಮ ಆಗಿರಬೇಕು. ಶ್ರೋತ್ರಿಯ ಎಂದರೆ ಕೇವಲ ಶಾಸ್ತ್ರಜ್ಞಾನ ಬಲ್ಲವನು ಎಂದು ಅಲ್ಲ. ಶಾಸ್ತ್ರಗಳ ಸೂಕ್ಷ್ಮ ರಹಸ್ಯ ವನ್ನು ತಿಳಿದವನು, ಅದನ್ನು ತನ್ನ ಜೀವನದಲ್ಲಿ ಮನಗಂಡವನು. ಹಲವು ಶಾಸ್ತ್ರಗಳನ್ನು, ಓದಿ ಅರಗಿಳಿಗಳಾಗಿರುವವರು ಪಂಡಿತರಲ್ಲ. ಶಾಸ್ತ್ರದ ಒಂದುಪದ ಓದಿ ದೇವರ ಮೇಲೆ ಯಾರು ಪ್ರೇಮವನ್ನು ಪಡೆದಿರುವರೋ ಅವರೇ ಪಂಡಿತರು. ಕೇವಲ ಪುಸ್ತಕಪಂಡಿತರಿಂದ ಪ್ರಯೋಜನವಿಲ್ಲ. ಈಗಿನ ಕಾಲದಲ್ಲಿ ಎಲ್ಲರೂ ಗುರುಗಳಾಗಬಯಸುವರು. ಒಬ್ಬ ಭಿಕಾರಿಯು ಲಕ್ಷ ರುಪಾಯಿ ದಾನ ಮಾಡಲು ಇಚ್ಛಿಸುವನು! ಗುರುವಿನಲ್ಲಿ ಪಾಪವಿರ ಕೂಡದು. ಆತ ಯಾವ ಆಸೆಗೂ ತುತ್ತಾಗಿರಬಾರದು. ಇತರರಿಗೆ ಹಿತವನ್ನು ಮಾಡುವುದಲ್ಲದೆ ಮತ್ತಾವ ಉದ್ದೇಶವೂ ಅವನಲ್ಲಿರಕೂಡದು. ಅವನು ಅಹೇತುಕ ಕೃಪಾಸಾಗರನಾಗಿರಬೇಕು. ಹೆಸರು ಕೀರ್ತಿ ಅಥವಾ ಸ್ವಾರ್ಥ ಲಾಭಕ್ಕಾಗಿ ಅವನು ಜ್ಞಾನವನ್ನು ಕೊಡಬಾರದು. ಅವನು ಪೂರ್ಣ ಬ್ರಹ್ಮ ಜ್ಞಾನಿಯಾಗಿರಬೇಕು. ಅಂಗೈ ಮೇಲಿನ ನೆಲ್ಲಿಕಾಯಿಯಂತೆ ಸಾಕ್ಷಾತ್ಕಾರ ಅವನ ವಶದಲ್ಲಿರಬೇಕು. ಇಂತಹವನೆ ಗುರು ಎಂದು ಶ್ರುತಿ ಹೇಳುವುದು. ಇಂತಹ ಗುರುವಿನೊಂದಿಗೆ ಆಧ್ಯಾತ್ಮಿಕ ಸಂಬಂಧವನ್ನು ಕಲ್ಪಿಸಿಕೊಂಡರೆ ಆಗ ಭಗವತ್ಸಾಕ್ಷಾತ್ಕಾರವಾಗುವುದು. ಸಾಕ್ಷಾತ್ಕಾರ ಸುಲಭವಾಗುವುದು.

ಉಪದೇಶ ಪಡೆದಾದಮೇಲೆ ಶಿಷ್ಯ ಸತತ ಅದನ್ನು ಅಭ್ಯಾಸ ಮಾಡ ಬೇಕು. ನಿನಗೆ ದೇವರಮೇಲೆ ಆಸಕ್ತಿ ಇದ್ದರೂ, ಗುರು ದೊರೆತಿದ್ದರೂ ಯಾವುದನ್ನು ನೀನು ಕಲಿತಿರುವೆಯೋ ಅದನ್ನು ಅಭ್ಯಾಸಮಾಡಿದ ಹೊರತು ಸಾಕ್ಷಾತ್ಕಾರ ದೊರಕುವುದಿಲ್ಲ. ಇವೆಲ್ಲ ನಿನ್ನಲ್ಲಿ ದೃಢವಾಗಿ ನೆಲಸಿದ ಮೇಲೆ ನೀನು ಗುರಿಯನ್ನು ಸೇರುವೆ. ಆದಕಾರಣವೇ ಹಿಂದೂಗಳೇ, ಪ್ರಖ್ಯಾತ ಆರ್ಯ ಸಂತಾನರೆ, ಈ ಆದರ್ಶವನ್ನು ಎಂದೂ ಮರೆಯಬೇಡಿ. ಹಿಂದುಗಳ

ಪರಮ ಆದರ್ಶ ಈ ಸಂಸಾರದಿಂದ ಪಾರಾಗುವುದು. ಪ್ರಪಂಚವನ್ನು ತ್ಯಜಿಸುವುದು ಮಾತ್ರವಲ್ಲ. ಸ್ವರ್ಗವನ್ನೂ ತ್ಯಜಿಸಬೇಕು. ಅಶುಭವನ್ನು ತೊರೆಯುವುದು ಮಾತ್ರವಲ್ಲ, ಶುಭವನ್ನೂ ತೊರೆಯುವುದು. ಈ ವ್ಯಕ್ತ ಪ್ರಪಂಚವನ್ನು ಮೀರಿ ಸಚ್ಚಿದಾನಂದದಲ್ಲಿ ಐಕ್ಯವಾಗಬೇಕು.



# ನಾವು ಜನ್ಮವೆತ್ತ ಧರ್ಮ

## ( ಢಾಕಾ ಉಪನ್ಯಾಸ )

ಪ್ರಾಚೀನ ಕಾಲದಲ್ಲಿ ನಮ್ಮ ದೇಶ ಆಧ್ಯಾತ್ಮಿಕ ಕ್ಷೇತ್ರದಲ್ಲಿ ಬಹಳ ಮುಂದುವರಿದು ಹೋಗಿತ್ತು. ಆ ಪ್ರಾಚೀನ ಇತಿಹಾಸವನ್ನು ಪುನಃ ಇಂದು ಸ್ಮರಿಸಿಕೊಳ್ಳುವ, ಗತಕಾಲದ ವೈಭವವನ್ನು ಮೆಲಕುಹಾಕುವ ಒಂದು ಅಪಾಯವೆ, ಹೊಸದನ್ನು ಸಾಧಿಸಲು ಪ್ರಯತ್ನ ಪಡದಿರುವುದು. ಗತ ಕಾಲದ ವೈಭವವನ್ನೇ ಮೆಲುಕು ಹಾಕಿ ಅದರಲ್ಲಿ ಜಂಭ ಕೊಚ್ಚಿಕೊಳ್ಳುವೆವು. ಹಿಂದಿನ ಕಾಲದಲ್ಲಿ ಸತ್ಯಸಾಕ್ಷಾತ್ಕಾರ ಮಾಡಿಕೊಂಡ ಋಷಿ ಮಹರ್ಷಿ ಗಳೇನೋ ನಿಸ್ಸಂದೇಹವಾಗಿ ಇದ್ದರು. ಪ್ರಾಚೀನ ಕಾಲದ ಮಹಿಮಾಸ್ಮರಣೆ ಪ್ರಯೋಜನವಾಗಬೇಕಾದರೆ ನಾವೂ ಅವರಂತೆಯೇ ಋಷಿಗಳಾಗಬೇಕು. ಅದು ಮಾತ್ರವಲ್ಲ. ಹಿಂದೆ ನಮ್ಮ ದೇಶದಲ್ಲಿದ್ದ ಮಹರ್ಷಿಗಳನ್ನು ನಾವು ಮೀರಿಸಬಲ್ಲೆವು ಎಂಬುದು ನನ್ನ ದೃಢನಿಶ್ಚಯ. ನಾವು ಹಿಂದೆ ಬಹಳ ಸಾಧಿಸಿದ್ದೆವು ; ನನಗೆ ಅದರಲ್ಲಿ ಹೆಮ್ಮೆ ಅದನ್ನು ಕುರಿತು ಆಲೋಚಿಸು ವುದಕ್ಕೆ ಆನಂದವಾಗುವುದು. ಈಗಿನ ಅವನತಿಯನ್ನು ನೋಡಿ ನಾನು ನಿರಾಶನೂ ಆಗುವುದಿಲ್ಲ. ಭವಿಷ್ಯದಲ್ಲಿ ನಮಗೆ ಏನು ಕಾದಿದೆ ಎಂಬು ದನ್ನು ಕುರಿತು ಆಲೋಚಿಸುವಾಗ ಭರವಸೆ ಇರುವುದು. ಇದು ಏತಕ್ಕೆ? ಬೀಜ ಒಂದು ಮರವಾಗುವುದಕ್ಕೆ ಮುಂಚೆ ಸಂಪೂರ್ಣ ಬದಲಾಯಿಸು ವುದು. ಬೀಜ ತನ್ನ ಬೀಜಸ್ವರೂಪವನ್ನು ಕಳೆದುಕೊಳ್ಳುವುದು. ಬಹುಶಃ ಹಿಂದಿಗಿಂತ ಮಹಿಮಾನ್ವಿತವಾಗಿ ಪುನಃ ಜಾಗ್ರತವಾಗುವುದಕ್ಕೆ ಸಿದ್ಧ ವಾಗಿದೆ.

ನಾವು ಜನ್ಮವೆತ್ತ ಧರ್ಮದಲ್ಲಿ ಸಾಮಾನ್ಯ ಭಾವನೆಗಳಾವುದೆಂಬು ದನ್ನು ಪರ್ಯಾಲೋಚಿಸೋಣ. ಮೊದಲು ನಮ್ಮ ವಿಭಿನ್ನ ಪಂಗಡಗಳಲ್ಲಿ ಎಷ್ಟೊ ವ್ಯತ್ಯಾಸಗಳು ಕಾಣುತ್ತವೆ. ಕೆಲವರು ಅದ್ವೈತಿಗಳು, ಕೆಲವರು ವಿಶಿಷ್ಟಾದ್ವೈತಿಗಳು, ಮತ್ತೆ ಕೆಲವರು ದ್ವೈತಿಗಳು. ಕೆಲವರು ಅವತಾರದಲ್ಲಿ ನಂಬುವರು. ಆಚಾರ ವ್ಯವಹಾರದಲ್ಲಿ ಎಷ್ಟೋ ಭಿನ್ನತೆಗಳಿವೆ. ಜಾಟರು, ಮಹಮ್ಮದೀಯ, ಮತ್ತು ಕ್ರೈಸ್ತರಲ್ಲಿ ಮದುವೆಯಾದರೂ ಅವರಿಗೆ ಬಹಿಷ್ಕಾರ ವಿಲ್ಲ. ಯಾವ ಹಿಂದೂ ದೇವಸ್ಥಾನಕ್ಕಾದರೂ ಆತಂಕವಿಲ್ಲದೆ ಪ್ರವೇಶಿಸ ಬಹುದು. ಪಂಜಾಬಿನ ಹಲವು ಗ್ರಾಮಗಳಲ್ಲಿ ಹಂದಿಯನ್ನು ತಿನ್ನದ

ವರನ್ನು ಹಿಂದೂಗಳೆಂದು ಪರಿಗಣಿಸುವುದೇ ಇಲ್ಲ. ನೇಪಾಳದಲ್ಲಿ ಬ್ರಾಹ್ಮಣರು ಚತುರ್ವರ್ಣಗಳಲ್ಲಿ ಮದುವೆ ಮಾಡಿಕೊಳ್ಳಬಹುದು. ಆದರೆ ಬಂಗಾಳದಲ್ಲಿ ಬ್ರಾಹ್ಮಣ ತನ್ನ ಜಾತಿಯಲ್ಲೇ ಬೇರೊಂದು ಪಂಗಡದಲ್ಲೂ ಮದುವೆಯಾಗಲಾರ. ಹೀಗೆ ಹಲವು ಆಚಾರಗಳಿವೆ. ಇಷ್ಟೊಂದು ಭಿನ್ನತೆಗಳಿದ್ದರೂ ಎಲ್ಲಾ ಹಿಂದೂಗಳಲ್ಲಿಯೂ ಒಂದು ಐಕ್ಯತೆಯನ್ನು ನೋಡುವೆವು. ಅದೇ ಯಾವ ಹಿಂದೂವೂ ಗೋಮಾಂಸ ಭಕ್ಷಣ ಮಾಡದಿರುವುದು. ಹೀಗೆಯೇ ಹಿಂದೂ ಧರ್ಮದ ವಿಭಿನ್ನ ಪಂಗಡದಲ್ಲಿ ಎಷ್ಟೋ ಸಾಮಾನ್ಯ ಭಾವನೆ ಇದೆ.

ಶಾಸ್ತ್ರವನ್ನು ವಿಚಾರಿಸುವಾಗ ಒಂದು ಸಂಗತಿ ಬಹಳ ಮುಖ್ಯವಾಗಿ ತೋರುವುದು. ಯಾವ ಧರ್ಮದಲ್ಲಿ ಒಂದು ಅಥವಾ ಹಲವು ಶಾಸ್ತ್ರಗಳು ಇವೆಯೋ ಅವೇ ಅವನ್ನು ಏನೇನು ವಿರೋಧಿಸಿದರೂ ಅದನ್ನೆಲ್ಲಾ ಎದುರಿಸಿ ಇಂದಿನವರೆಗೂ ನಿಂತಿರುವುದು. ಅವೇ ಹಿಂದೆ ಬಹಳ ಮುಂದುವರಿದು ಹೋಗಿದ್ದ ಗ್ರೀಕ್ ಧರ್ಮ ಅಷ್ಟು ಸುಂದರವಾಗಿದ್ದರೂ ಶಾಸ್ತ್ರದ ಆಧಾರವಿಲ್ಲದೆ ಇದ್ದುದರಿಂದ ಮಾಯವಾಯಿತು. ಆದರೆ ಯಹೂದ್ಯರ ಧರ್ಮ ಹಳೆಯ ಟೆಸ್ಟಮೆಂಟಿನ ಮೇಲೆ ಭದ್ರವಾಗಿ ನಿಂತಿರುವುದು. ಇದರಂತೆಯೇ ಪ್ರಪಂಚದಲ್ಲೆಲ್ಲ ಬಹಳ ಪುರಾತನವೆಂದು ಪರಿಗಣಿಸಲ್ಪಟ್ಟ ವೇದವನ್ನು ಶಾಸ್ತ್ರವಾಗುಳ್ಳ ಹಿಂದೂ ಧರ್ಮ ಕೂಡ. ವೇದವನ್ನು ಕರ್ಮ ಕಾಂಡ ಜ್ಞಾನಕಾಂಡವೆಂದು ವಿಭಾಗಿಸಿರುವರು. ಒಳ್ಳೆಯದಕ್ಕೊ, ಕೆಟ್ಟದಕ್ಕೊ, ಅಂತೂ ಕರ್ಮಕಾಂಡ ಈಗ ಜಾರಿಯಲ್ಲಿ ಇಲ್ಲ. ಎಲ್ಲೋ ಮಹಾರಾಷ್ಟ್ರ ದೇಶದಲ್ಲಿ ಕೆಲವು ವೇಳೆ ಯಜ್ಞಮಾಡಿ ಮೇಕೆ ಬಲಿಕೊಡುವ ಕೆಲವು ಬ್ರಾಹ್ಮಣರು ಇರುವರು. ಮದುವೆ ಶ್ರಾದ್ಧ, ಮುಂತಾದ ಸಮಯದಲ್ಲಿ ನಾವು ಉಪಯೋಗಿಸುವ ಮಂತ್ರದಲ್ಲಿ ವೇದಗಳ ಕ್ರಿಯಾಕಾಂಡದ ಸ್ವಲ್ಪ ಚಹರೆ ಕಾಣುವುದು. ಆದರೆ, ಅದು ಪುನಃ ಹಿಂದಿನಂತೆ ಪ್ರಬಲವಾಗುವ ಸಂಭವವಿಲ್ಲ. ಒಮ್ಮೆ ಕುಮಾರಿಲ ಭಟ್ಟ ಇದನ್ನು ಪ್ರಯತ್ನಿಸಿದನು. ಆದರೆ ಜಯಶೀಲನಾಗಲಿಲ್ಲ.

ವೇದಗಳ ಜ್ಞಾನಕಾಂಡಕ್ಕೆ ಉಪನಿಷತ್ ಅಥವಾ ವೇದಾಂತವೆಂದು ಹೆಸರು. ಎಲ್ಲಿಯಾದರೂ ಆಚಾರ್ಯರು ಶ್ರುತಿಯನ್ನು ಉದಹರಿಸಿದರೆ ಅದು ಮುಕ್ಕಾಲು ಪಾಲು ಉಪನಿಷತ್ತಿನಿಂದ. ಹಿಂದೂಗಳ ಈಗಿನ ಧರ್ಮ, ವೇದಾಂತ. ಭರತಖಂಡದಲ್ಲಿ ಯಾವುದಾದರೂ ಒಂದು ಪಂಗಡ ಸುಭದ್ರ

ವಾಗಿ ಜನಾದರಣೀಯವಾಗಬೇಕಾದರೆ ಅದು ವೇದಾಂತದ ಪ್ರಮಾಣದ ಮೇಲೆ ನಿಂತಿರಬೇಕು. ದ್ವೈತಿಗಳಾಗಲೀ ಅದ್ವೈತಿಗಳಾಗಲೀ ಇದನ್ನು ಮಾಡಬೇಕು. ವೈಷ್ಣವರು ಕೂಡಾ ಗೋಪಾಲತಪನೀ ಉಪನಿಷತ್ತಿಗೆ ತಮ್ಮ ಧರ್ಮದ ಪ್ರಮಾಣಕ್ಕೆ ಹೋಗಬೇಕು. ಹೊಸ ಪಂಗಡಕ್ಕೆ ಉಪ ನಿಷತ್ತಿನಲ್ಲಿ ತಮ್ಮ ಧರ್ಮ ಪ್ರತಿಪಾದನೆಗೆ ಆಧಾರ ಸಿಕ್ಕದೆ ಇದ್ದರೆ ಹೊಸ ಒಂದು ಉಪನಿಷತ್ತನ್ನು ರಚಿಸುವುದಕ್ಕೆ ಯತ್ನಿಸುವರು. ಬಹಳ ಹಿಂದಿನ ಗ್ರಂಥ ಅದು ಎಂದು ತೋರುವುದಕ್ಕೆ ಪ್ರಯತ್ನಿಸುವರು. ಹಿಂದೆ ಇಂತ ಹವು ಎಷ್ಟೋ ಇದ್ದವು.

ವೇದ ಎಲ್ಲೋ ಹಿಂದಿನಕಾಲದಲ್ಲಿ ಮನುಷ್ಯ ಬರೆದ ಗ್ರಂಥ ಎಂದು ಹಿಂದೂ ಒಪ್ಪಿಕೊಳ್ಳುವುದಿಲ್ಲ. ಅದು ಅಂತ್ಯವಿಲ್ಲದ ಆಧ್ಯಾತ್ಮಿಕ ಧರ್ಮ ಸಂಗ್ರಹ. ಕೆಲವು ವೇಳೆ ಅದು ಸುಪ್ತವಾಗಿರುವುದು, ಕೆಲವು ವೇಳೆ ವ್ಯಕ್ತ ವಾಗಿರುವುದು. ಭಾಷ್ಯಕಾರ ಸಾಯಣಾಚಾರ್ಯರು ಎಲ್ಲೋ ಒಂದು ಕಡೆ "ಯೋ ವೇದೇಭ್ಯೋ ಅಖಿಲಂ ಜಗತ್ ನಿರ್ಮಮೆ" ವೇದಗಳಿಂದ ಅಖಿಲ ಜಗತ್ತನ್ನು ಸೃಷ್ಟಿಸಿದನು. ವೇದ ಸಂಗ್ರಹಕಾರರನ್ನು ಯಾರೂ ನೋಡಿಲ್ಲ. ಹಾಗೆ ಯಾರನ್ನಾದರೂ ಊಹಿಸುವುದಕ್ಕೂ ಅಸಾಧ್ಯ. ಋಷಿಗಳು ಮಂತ್ರ ಅಥವಾ ಸನಾತನ ನಿಯಮವನ್ನು ಕಂಡುಹಿಡಿದವರು. ಅನಾದಿ ಕಾಲದಿಂದಲೂ ಇದ್ದ ವೇದಜ್ಞಾನ ರಾಶಿಯನ್ನು ಇವರು ಸಂದರ್ಶಿಸಿದರು. ಅಷ್ಟೆ.

ಈ ಋಷಿಗಳು ಯಾರು? ಯಾರು ಸರಿಯಾದ ಮಾರ್ಗದಲ್ಲಿ ಧರ್ಮ ವನ್ನು ಸಾಕ್ಷಾತ್ಕಾರಮಾಡಿಕೊಂಡಿರುವರೋ, ಅವರೇ ಋಷಿಗಳು, ಅವರು ಮ್ಲೇಚ್ಛರಾದರೂ ಚಿಂತಿಲ್ಲ, ಎಂದು ವಾತ್ಸ್ಯಾಯನ ಹೇಳುವನು. ಆದ ಕಾರಣವೇ ಹಿಂದಿನ ಕಾಲದಲ್ಲಿ ವೇಶ್ಯಾಪುತ್ರ ವಶಿಷ್ಟ, ಬೆಸ್ತರ ಮಗ ವ್ಯಾಸ, ಗಂಡನಾರೆಂದು ತಿಳಿಯದ ದಾಸೀಸುತ ನಾರದ, ಇವರೆಲ್ಲಾ ಮಹಾಋಷಿ ಗಳಾಗಿದ್ದರು. ಯಾರು ಸತ್ಯಸಾಕ್ಷಾತ್ಕಾರಮಾಡಿಕೊಂಡಿರುವರೋ, ಅವರಲ್ಲಿ ವ್ಯತ್ಯಾಸವನ್ನು ನೋಡಬಾರದು ಎಂಬುದಕ್ಕೆ ಬರುವುದು. ಈಗ ತಾನೇ ಹೇಳಿದವರೆಲ್ಲರೂ ಋಷಿಗಳಾದರೆ ಕುಲೀನ ಬ್ರಾಹ್ಮಣರಾದ ನೀವು, ಎಂತಹ ಶ್ರೇಷ್ಠ ಋಷಿಗಳಾಗಬಹುದು. ಆ ಋಷಿತ್ವಕ್ಕೆ ಪ್ರಯತ್ನಿಸಿ. ಗುರಿಸೇರುವ ತನಕ ಬಿಡಬೇಡಿ. ಇಡೀ ಪ್ರಪಂಚ ಸ್ವಭಾವತಃ ನಿಮಗೆ ಮಣಿಯುವುದು. ಋಷಿಗಳಾಗಿ, ಅದೇ ಶಕ್ತಿ ರಹಸ್ಯ.

ವೇದವೇ ನಮ್ಮ ಪ್ರಮಾಣ. ಅದನ್ನು ಓದುವುದಕ್ಕೆ ಎಲ್ಲರಿಗೂ ಅಧಿಕಾರವಿದೆ.

"ಯಥೇಮಾಂ ವಾಚಂ ಕಲ್ಯಾಣೀಮಾವದಾನಿ ಜನೇಭ್ಯಃ ।
ಬ್ರಹ್ಮರಾಜದ್ಯಾಭ್ಯಾಮ್ ಶೂದ್ರಾಯ ಚಾರ್ಯಾಯ ಚ ಸ್ವಾಯ
ಚಾರಣಾಯ ॥

(ಶುಕ್ಲಯಜುರ್ವೇದ ಮಾಧ್ಯಂದಿನಶಾಖಾ ೨೬ ಅಧ್ಯಾಯ ಮಂತ್ರ).

ವೇದಗಳಿಂದ ಅದನ್ನು ಓದಲು ಎಲ್ಲರಿಗೂ ಅಧಿಕಾರವಿಲ್ಲ ಎಂಬ ಯಾವುದಾದರೂ ಪ್ರಮಾಣವನ್ನು ತೋರಬಲ್ಲಿರಾ? ಪುರಾಣಗಳೇನೋ ವೇದಗಳ ಕೆಲವು ಭಾಗಗಳಿಗೆ ಕೆಲವರಿಗೆ ಅಧಿಕಾರವಿದೆ, ಮತ್ತೆ ಕೆಲವು ಪಂಗಡದವರಿಗೆ ಅಧಿಕಾರವಿಲ್ಲ ಎಂದು ಹೇಳಬಹುದು. ವೇದಗಳ ಈ ಭಾಗ ಸತ್ಯಯುಗಕ್ಕೆ ಸೇರಿದ್ದು, ಆ ಭಾಗ ಕಲಿಯುಗಕ್ಕೆ ಸೇರಿದ್ದು, ಎಂದು ಹೇಳಬಹುದು. ಆದರೆ ಇದನ್ನು ನೆನಪಿನಲ್ಲಿಡಿ. ವೇದಗಳು ಇದನ್ನು ಹೇಳುವುದಿಲ್ಲ; ಪುರಾಣಗಳು ಹೇಳುವುದು. ಸೇವಕ, ಸ್ವಾಮಿಗೆ ಆಜ್ಞೆ ಮಾಡಬಲ್ಲನೆ? ಸ್ಮೃತಿ, ಪುರಾಣ, ತಂತ್ರ – ಇವೆಲ್ಲ ಎಲ್ಲಿಯವರೆಗೆ ವೇದಕ್ಕೆ ಅಧೀನವಾಗಿರುವುದೋ, ಅಲ್ಲಿಯವರೆಗೆ ಇದನ್ನು ಒಪ್ಪಿಕೊಳ್ಳಬಹುದು. ಎಲ್ಲಿ ಅವು ವೇದವನ್ನು ವಿರೋಧಿಸುವುದೋ, ಅಲ್ಲಿ ಅವನ್ನು ನಿರಾಕರಿಸಬಹುದು. ಆದರೆ ಈಗಿನ ಕಾಲದಲ್ಲಿ ಪುರಾಣವನ್ನು ವೇದಕ್ಕಿಂತ ಮೇಲೆ ಕೂರಿಸಿರುವೆವು. ವೇದಾಧ್ಯಯನವು ವಂಗದೇಶದಿಂದ ಸಂಪೂರ್ಣ ಮಾಯವಾಗಿದೆ. ಪ್ರತಿಯೊಂದು ಮನೆಯಲ್ಲಿಯೂ, ಸಾಲಿಗ್ರಾಮದೊಂದಿಗೆ ವೇದವನ್ನು ಇಟ್ಟು, ಯುವಕರು ವೃದ್ಧರು ಸ್ತ್ರೀಯರೆಲ್ಲರೂ ಅದನ್ನು ಆರಾಧಿಸುವ ಸುದಿನ ಬೇಗ ಬರಲೆಂದು ನಾನು ಹಾರೈಸುತ್ತೇನೆ.

ವೇದಗಳ ಮೇಲೆ ಪಾಶ್ಚಾತ್ಯ ವಿದ್ವಾಂಸರ ಅಭಿಪ್ರಾಯದಲ್ಲಿ ನನಗೆ ನಂಬಿಕೆಯಿಲ್ಲ. ಇಂದು ವೇದ ಕಾಲವನ್ನು ಒಂದು ರೀತಿ ನಿಷ್ಕರ್ಷಿಸುವರು, ನಾಳೆ ಪುನಃ ಒಂದು ಸಾವಿರ ವರ್ಷ ಮುಂದೆ ತರುವರು, ಹೀಗೆಯೇ ಮಾಡುತ್ತಿರುವರು. ಪುರಾಣ ಎಲ್ಲಿಯವರೆಗೆ ವೇದದೊಂದಿಗೆ ಒಪ್ಪುವುದೋ, ಅಲ್ಲಿಯವರೆಗೆ ಪ್ರಮಾಣ, ಇಲ್ಲದಿದ್ದರೆ ಇಲ್ಲ. ವೇದ ಭಾವನೆಗೆ ವಿರುದ್ಧವಾದ ಹಲವು ವಿಷಯಗಳು ಪುರಾಣದಲ್ಲಿವೆ. ಪುರಾಣದಲ್ಲಿ ಒಬ್ಬ ಹತ್ತು ಸಾವಿರ ವರುಷ ಬದುಕಿದನೆಂದೂ, ಮತ್ತೊಬ್ಬ ಇಪ್ಪತ್ತು ಸಾವಿರ ವರುಷ ಬದುಕಿದನೆಂದೂ ಇದೆ. ಆದರೆ ವೇದದಲ್ಲಿ "ಶತಾಯುರ್ವೈ

ಪುರುಷಃ'' ಮನುಷ್ಯನ ಆಯುಸ್ಸು ನೂರು ವರುಷ ಎಂದಿದೆ. ಇವುಗಳಲ್ಲಿ ನಾವು ಯಾವುದನ್ನು ಒಪ್ಪಿಕೊಳ್ಳುವುದು? ನಿಜವಾಗಿಯೂ ವೇದಗಳನ್ನು. ಇಂತಹ ವಿಷಯಗಳಿದ್ದರೂ ನಾವು ಪುರಾಣವನ್ನು ನಿಕೃಷ್ಟ ದೃಷ್ಟಿಯಿಂದ ನೋಡುವುದಿಲ್ಲ. ಅವುಗಳಲ್ಲಿ ಯೋಗ, ಭಕ್ತಿ, ಜ್ಞಾನ, ಕರ್ಮ ಮುಂತಾದುವುಗಳಮೇಲೆ ಹಲವು ಸುಂದರವಾದ ಧಾರ್ಮಿಕ ಉಪದೇಶಗಳಿವೆ. ನಾವು ಇದನ್ನೇನೋ ಸ್ವೀಕರಿಸಬೇಕು. ಅನಂತರ ತಂತ್ರ ಶಾಸ್ತ್ರವಿದೆ. ಉದಾಹರಣೆಗೆ ಕಾಪಿಲ ತಂತ್ರವಿದೆ. ಆದರೆ ತಂತ್ರವನ್ನು ಬಹಳ ಸಂಕುಚಿತ ದೃಷ್ಟಿಯಲ್ಲಿ ಉಪಯೋಗಿಸಿರುವರು. ಅಹಿಂಸಾ ಸಿದ್ಧಾಂತವನ್ನು ಪ್ರಚಾರ ಮಾಡುತ್ತಿದ್ದ ಬೌದ್ಧ ಧರ್ಮಾವಲಂಬಿ ರಾಜರ ಕೆಳಗೆ ವೇದಕಾಲದ ಯಾಗ ಯಜ್ಞಗಳು ಹಿಂದಿನ ಕಾಲಕ್ಕೇ ಆಗಿಹೋದವು. ಅರಸರಿಗೆ ಅಂಜಿ ಯಾಗ ಸಮಯದಲ್ಲಿ ಕೂಡ ಪ್ರಾಣಿಗಳನ್ನು ಕೊಲ್ಲುತ್ತಿರಲಿಲ್ಲ. ಆದರೆ ಕ್ರಮೇಣ ಹಿಂದೂ ಧರ್ಮದಿಂದ ಬೌದ್ಧ ಧರ್ಮಕ್ಕೆ ಸೇರಿದ್ದವರೇ ಅದನ್ನು ರಹಸ್ಯದಲ್ಲಿ ಮಾಡಲು ತೊಡಗಿದರು. ಇದರಿಂದಲೇ ತಂತ್ರ ಶಾಸ್ತ್ರ ಹುಟ್ಟಿತು. ವಾಮಾಚಾರ ಮುಂತಾದ ಕೆಲವು ಹೀನ ಅನುಷ್ಠಾನಗಳನ್ನು ಬಿಟ್ಟರೆ ತಂತ್ರವು ಜನರು ತಿಳಿದುಕೊಂಡಿರುವಷ್ಟು ಕೆಟ್ಟದ್ದೇನೂ ಅಲ್ಲ. ಅವುಗಳಲ್ಲಿ ಎಷ್ಟೋ ಉತ್ತಮವಾದ ಗಹನ ವೇದಾಂತ ಭಾವನೆಗಳಿವೆ. ವೇದಗಳಲ್ಲಿರುವ ಬ್ರಾಹ್ಮಣ ಭಾಗವನ್ನು ಸ್ವಲ್ಪ ವ್ಯತ್ಯಾಸಮಾಡಿ ತಂತ್ರ ಶಾಸ್ತ್ರದಲ್ಲಿ ಸೇರಿಸಿದರು. ಈಗಿನ ಕರ್ಮಕಾಂಡಕ್ಕೆ ಸೇರಿದ ಹಲವು ಪೂಜೆ ಆಚಾರಗಳಲ್ಲಿ ತಂತ್ರ ಶಾಸ್ತ್ರದಲ್ಲಿರುವಂತೆಯೇ ಆಚರಿಸುವರು.

ಈಗ ನಮ್ಮ ಧಾರ್ಮಿಕ ತತ್ತ್ವಗಳನ್ನು ಸ್ವಲ್ಪ ವಿಮರ್ಶಿಸೋಣ. ವಿಭಿನ್ನ ಪಂಗಡಗಳಲ್ಲಿ ಎಷ್ಟೋ ವ್ಯತ್ಯಾಸಹೊಂದಿದ ಚರ್ಚಾಸ್ಪದ ವಿಷಯಗಳಿದ್ದರೂ, ಎಷ್ಟೋ ಸರ್ವಸಾಮಾನ್ಯ ಭಾವನೆಗಳೂ ಇವೆ. ಮುಕ್ಕಾಲು ಪಾಲು, ಎಲ್ಲರೂ ಜೀವ ಜಗತ್ ಈಶ್ವರನನ್ನು ನಂಬುತ್ತಾರೆ. ಈಶ್ವರನೇ ಸೃಷ್ಟಿ, ಸ್ಥಿತಿ, ಪ್ರಳಯಕ್ಕೆ ಕಾರಣಕರ್ತ. ಸಾಂಖ್ಯರೊಬ್ಬರನ್ನು ಬಿಟ್ಟರೆ ಉಳಿದವರೆಲ್ಲರೂ ಇದನ್ನೊಪ್ಪಿಕೊಳ್ಳುವರು. ನಂತರ ಆತ್ಮ ಮತ್ತು ಪುನರ್ಜನ್ಮ ತತ್ತ್ವ. ಅಸಂಖ್ಯ ಜೀವನಗಳು ದೇಹಧರಿಸಿ, ತಮ್ಮ ಕರ್ಮಕ್ಕೆ ತಕ್ಕಂತೆ ಜನನ ಮರಣಗಳ ಚಕ್ರದಲ್ಲಿ ಸಾರಿಹೋಗುತ್ತಿವೆ. ಇದೇ ಸಂಸಾರವಾದ ಅಥವಾ ಪುನರ್ಜನ್ಮವಾದ. ನಂತರ ಆದಿ ಅಂತ್ಯವಿಲ್ಲದ ಜಗತ್ತೊಂದು ಇದೆ. ಕೆಲವರು, ಈ ಮೂರೂ ಒಂದರ ಅವಿರ್ಭಾವನೆ

ಎಂತಲೂ, ಕೆಲವರು ಈ ಮೂರೂ ಸಂಪೂರ್ಣ ಬೇರೆ ಬೇರೆ ಎಂತಲೂ, ಉಳಿದವರು ಇನ್ನು ಬೇರೆ ದೃಷ್ಟಿಯಲ್ಲಿಯೂ ಈ ಮೂರನ್ನೂ ನೋಡುವರು. ಆದರೆ ಎಲ್ಲರೂ ಈ ಮೂರನ್ನು ಒಪ್ಪಿಕೊಳ್ಳುವುದರಲ್ಲಿ ಏಕಮತೀಯರು.

ಬಹಳ ಹಿಂದಿನ ಕಾಲದಿಂದಲೂ ಹಿಂದೂಗಳಿಗೆ, ಆತ್ಮ ಎಂದರೆ ಮನಸ್ಸಿಗಿಂತ ಬೇರೆ ಎಂಬುದು ತಿಳಿದಿತ್ತು. ಆದರೆ ಪಾಶ್ಚಾತ್ಯರು ಮನಸ್ಸನ್ನು ಮೀರಿ ಹೋಗಲಾಗಲಿಲ್ಲ. ಪಾಶ್ಚಾತ್ಯರಿಗೆ ಈ ಪ್ರಪಂಚದಲ್ಲಿ ಸುಖವಿದೆ, ಇದು ಅವರಿಗೆ ಭೋಗಭೂಮಿ. ಆದರೆ ಪೌರ್ವಾತ್ಯರು, ಈ ಸಂಸಾರ ಅನಿತ್ಯ, ದುಃಖಮಯ, ಮಿಥ್ಯೆ ; ಆತ್ಮನನ್ನು ತಾತ್ಕಾಲಿಕ ಸುಖಭೋಗಗಳಿಗೆ ಮಾರಿಕೊಳ್ಳಕೂಡದು ಎಂದು ಭಾವಿಸುವರು. ಆದ ಕಾರಣವೇ ಪಾಶ್ಚಾತ್ಯರು ಸಂಘಬದ್ಧ ಕರ್ಮಗಳಲ್ಲಿ ಪಟುಗಳು. ಪ್ರಾಚ್ಯರು ಅಂತ ಜಗತ್ತಿನ ಅನ್ವೇಷಣೆಯಲ್ಲಿ ಹೆಚ್ಚು ಸಾಹಸವನ್ನು ತೋರುವರು.

ಹಿಂದೂ ಧರ್ಮದ ಉಳಿದ ಒಂದೆರಡು ವಿಷಯಗಳನ್ನು ತೆಗೆದುಕೊಳ್ಳೋಣ. ಭಗವಂತನ ಅವತಾರ ಸಿದ್ಧಾಂತವಿದೆ. ವೇದಗಳಲ್ಲಿ ಮತ್ಸ್ಯಾವತಾರದ ಪ್ರಸಂಗ ಮಾತ್ರ ಇದೆ. ಎಲ್ಲರೂ ಈ ಸಿದ್ಧಾಂತದಲ್ಲಿ ನಂಬುತ್ತಾರೆ ಅಥವಾ ಇಲ್ಲ ಎನ್ನುವುದಲ್ಲ ವಿಷಯ. ಈ ಅವತಾರ ವಾದದ ನಿಜವಾದ ಅರ್ಥವೇ ಮಾನವ ಪೂಜೆ, ಮಾನವನಲ್ಲಿ ದೇವರನ್ನು ನೋಡುವುದು. ಹಿಂದೂಗಳು ಪ್ರಕೃತಿಯಿಂದ ಪ್ರಕೃತಿಯ ದೇವನೆಡೆಗೆ ಹೋಗುವುದಿಲ್ಲ. ಮಾನವನ ಮೂಲಕ ಮಾನವ ದೇವನೆಡೆಗೆ ಹೋಗುವನು.

ವಿಗ್ರಹಾರಾಧನೆ ಇದೆ. ಎಲ್ಲಾ ಪವಿತ್ರ ದಿನಗಳಲ್ಲಿಯೂ ಪಂಚದೇವತೆಗಳನ್ನು ಪೂಜೆ ಮಾಡಬೇಕೆಂದು ನಮ್ಮ ಶಾಸ್ತ್ರ ವಿಧಿಸಿರುವುದು. ಉಳಿದ ದೇವತೆಗಳೆಲ್ಲ ಆಯಾ ಸ್ಥಾನದ ಹೆಸರು. ಈ ಪಂಚದೇವತೆಗಳೂ ಕೂಡ ಒಂದೇ ದೇವರ ಹೆಸರು. ನಮ್ಮ ಶಾಸ್ತ್ರಗಳೆಲ್ಲಾ ಬಾಹ್ಯ ಪ್ರತಿಮಾ ಪೂಜೆಯು ಅತಿ ಕೆಳಗಿನ ದರ್ಜೆಯ ಪೂಜೆ ಎಂದು ಸಾರುವುದು. ಆದರೆ ಹೀಗೆ ಪೂಜಿಸುವುದು ತಪ್ಪು ಎಂದು ಅರ್ಥವಲ್ಲ. ಈಗ ರೂಢಿಯಲ್ಲಿರುವ ಪ್ರತಿಮಾ ಪೂಜೆಯಲ್ಲಿ ಎಷ್ಟೋ ಅನಾವಶ್ಯಕವಾಗಿರುವುದು ಸೇರಿದ್ದರೂ ನಾನು ಇದನ್ನು ದೂರುವುದಿಲ್ಲ. ಆ ಸಂಪ್ರದಾಯಶೀಲ ವಿಗ್ರಹಾರಾಧಕ ಬ್ರಾಹ್ಮಣನ ಪದರಜ ನನ್ನ ಭಾಗ್ಯಕ್ಕೆ ದೊರಕದೇ ಇದ್ದರೆ ನಾನು ಎಲ್ಲಿರುತ್ತಿದ್ದೆ !

ವಿಗ್ರಹಾರಾಧನೆಯನ್ನು ದೂರುವ ಸುಧಾರಕರಿಗೆ ನಾನು ಹೀಗೆ ಹೇಳುತ್ತೇನೆ: "ಸಹೋದರರೆ! ಬಾಹ್ಯ ಆಕಾರ ಮತ್ತು ಸಹಾಯ ಗಳನ್ನೆಲ್ಲಾ ತ್ಯಜಿಸಿ ನೀವು ಭಗವಂತನನ್ನು ನಿರಾಕಾರವಾಗಿ ಆರಾಧಿಸಲು ಶಕ್ತಿ ಇದ್ದರೆ ಮಾಡಿ. ಹೀಗೆ ಯಾರಿಗೆ ಮಾಡುವುದಕ್ಕೆ ಸಾಧ್ಯವಿಲ್ಲವೋ, ಅವರನ್ನು ಏಕೆ ದೂರುವಿರಿ? ಒಂದು ಘನ ಸೌಧ, ಪ್ರಾಚೀನ ಕಾಲದ ಪ್ರಖ್ಯಾತ ಅವಶೇಷ. ಅದನ್ನು ಉಪಯೋಗಿಸದೆ ಸರಿಯಾಗಿ ನೋಡಿ ಕೊಳ್ಳದೆ ಈಗ ಪಾಳುಬಿದ್ದಿದೆ. ಅದರಲ್ಲೆಲ್ಲಾ ಕೊಳೆ ಧೂಳು ಕವಿದಿರ ಬಹುದು. ಕೆಲವು ಭಾಗ ಕುಸಿಯುತ್ತಲೂ ಇರಬಹುದು. ನೀವೇನು ಮಾಡುವಿರಿ? ಅದನ್ನು ಶುಚಿಮಾಡಿ ಆವಶ್ಯಕವಾದ ರಿಪೇರಿ ಮಾಡು ವಿರೋ ಅಥವಾ ಅದನ್ನೆಲ್ಲಾ ಧ್ವಂಸಮಾಡಿ ಇನ್ನೂ ಸ್ಥಿರತೆಯನ್ನು ಸಾಧಿಸ ಬೇಕಾಗಿರುವ ಆಧುನಿಕ ಯೋಜನೆಯಂತೆ ಒಂದು ಕೆಲಸಕ್ಕೆ ಬಾರದ ಕಟ್ಟಡವನ್ನು ಅದರ ಸ್ಥಳದಲ್ಲಿ ಕಟ್ಟಲು ಯತ್ನಿಸುವಿರೊ? ನಾವು ಅದನ್ನು ಸುಧಾರಿಸಬೇಕು. ಎಂದರೆ ಅದನ್ನು ಕ್ರಮೇಣ ಶುದ್ಧಿಮಾಡಿ, ಸರಿಪಡಿಸಿ, ವಾಸಯೋಗ್ಯವಾಗಿ ಮಾಡಬೇಕು. ಇಡೀ ಕಟ್ಟಡವನ್ನೇ ಧ್ವಂಸ ಮಾಡುವುದಲ್ಲ. ಅಲ್ಲಿಗೆ ಸುಧಾರಣೆ ಕೆಲಸ ಕೊನೆಗಾಣುವುದು. ಹಳೆಯ ಕಟ್ಟಡವನ್ನು ಸರಿಮಾಡಿದ ಮೇಲೆ ಇದರಿಂದ ಮತ್ತೇನು ಪ್ರಯೋಜನ? ಅದನ್ನೇ ಸಾಧ್ಯವಾದರೆ ಮಾಡಿ. ಇಲ್ಲದಿದ್ದರೆ ಸುಮ್ಮನಿರಿ. ನಮ್ಮ ದೇಶದ ಸುಧಾರಕರ ತಂಡದವರು ಅವರದೇ ಒಂದು ಪಂಗಡವನ್ನು ಸ್ಥಾಪಿಸಲು ಯತ್ನಿಸುವರು. ಅವರು ಒಳ್ಳೆಯ ಕೆಲಸವನ್ನೇನೋ ಮಾಡಿರುವರು. ಅದಕ್ಕೆ ಭಗವಂತನು ಅವರನ್ನು ಆಶೀರ್ವದಿಸಲಿ! ಆದರೆ ನೀವು ಹಿಂದೂ ಸಮು ದಾಯದಿಂದ ಏತಕ್ಕೆ ಬೇರೆಯಾಗಬೇಕು? ಹಿಂದೂಗಳ ಹೆಸರನ್ನು ಹೇಳಿ ಕೊಳ್ಳುವುದಕ್ಕೆ ಏತಕ್ಕೆ ಲಜ್ಜೆ? ಇದೇ ನಮ್ಮ ಶ್ರೇಷ್ಠ ಅನರ್ಘ್ಯ ಆಸ್ತಿ.

ನಮ್ಮ ದೇಶ ಬಾಂಧವರೇ; ಅಮೃತ ಪುತ್ರರೇ! ಈ ಜನಾಂಗದ ಹಡಗು ಹಲವು ಶತಮಾನಗಳಿಂದ ಸಂಚರಿಸುತ್ತಿದೆ. ಅನರ್ಘ್ಯರತ್ನ ದಂತಿರುವ ಸಂಸ್ಕೃತಿಯನ್ನು ಇತರ ದೇಶಗಳಿಗೆ ಇತ್ತು, ಪ್ರಪಂಚವನ್ನೇ ಉತ್ತಮ ಸ್ಥಾನಕ್ಕೆ ತರುತ್ತಿದೆ. ಈ ಜನಾಂಗವೆಂಬ ನಮ್ಮ ಭೀಮ ಹಡಗು ಭವಸಾಗರದ ಮೇಲೆ ಹಲವು ಶತಮಾನಗಳಿಂದ ಸಂಚರಿಸಿ, ಎಲ್ಲಾ ದುಃಖದಾಚೆ ಕೋಟ್ಯಂತರ ಜೀವಿಗಳನ್ನು ಒಯ್ದಿದೆ. ಆದರೆ ಇಂದು ನಮ್ಮ ತಪ್ಪಿನಿಂದಲೋ, ಅಥವಾ ಮತ್ತಾವ ಕಾರಣದಿಂದಲೋ,

ಸೋರಲು ಮೊದಲಾಗಿ ಅದಕ್ಕೇ ಊನವಾಗಿರಬಹುದು. ಅದರಲ್ಲಿರುವ ನೀವು ಈಗ ಏನು ಮಾಡಬಲ್ಲಿರಿ? ಅದನ್ನು ದೂರುತ್ತ ನಿಮ್ಮ ನಿಮ್ಮಲ್ಲೇ ಜಗಳ ಕಾಯುವಿರೇನು? ನೀವೆಲ್ಲ ಕಲೆತು ಆ ರಂಧ್ರವನ್ನು ಮುಚ್ಚಲು ಸಾಧ್ಯವಾದಷ್ಟು ಪ್ರಯತ್ನಪಡುವುದಿಲ್ಲವೇ? ನಮ್ಮ ಹೃದಯದ ರಕ್ತ ವನ್ನು ಸಂತೋಷದಿಂದ ಇದಕ್ಕೆ ಅರ್ಪಿಸುವ. ನಾವು ಪ್ರಯತ್ನದಲ್ಲಿ ಸೋತರೆ ನಾವೆಲ್ಲ ಒಟ್ಟಿಗೆ ಕಲೆತು, ಶಾಪಕೊಡದೆ, ಆಶೀರ್ವಾದವನ್ನು ಉಚ್ಚರಿಸುತ್ತ ಮುಳುಗೋಣ.

ಬ್ರಾಹ್ಮಣರೇ! ನಿಮ್ಮ ಜಾತಿಕುಲದ ಹೆಮ್ಮೆ ವ್ಯರ್ಥ. ಅದರಿಂದ ಪಾರಾಗಿ. ನಿಮ್ಮ ಶಾಸ್ತ್ರ ಪ್ರಕಾರದ ಬ್ರಾಹ್ಮಣ್ಯ ನಿಮ್ಮಲ್ಲಿ ಇಂದು ಇಲ್ಲ. ಮ್ಲೇಚ್ಛರ ಕೈ ಕೆಳಗೆ ಬಹಳ ದಿನಗಳಿಂದ ಇರುವಿರಿ. ನಿಮ್ಮ ಪೂರ್ವಿಕರ ಮಾತಿನಲ್ಲಿ ನಿಮಗೆ ಇನ್ನೂ ನಂಬಿಕೆ ಇದ್ದರೆ ಈ ಕ್ಷಣವೇ, ಹಿಂದೆ ಕುಮಾರಿಲ ಒಬ್ಬ ಬೌದ್ಧ ಗುರುವಿನಲ್ಲಿ ಕಲಿತು, ಅನಂತರ ಅವರನ್ನು ಸೋಲಿಸಿ, ಹಲವು ಬೌದ್ಧರ ಸೋಲಿಗೆ ಕಾರಣನಾದನೆಂದು ಅದರ ಪ್ರಾಯಶ್ಚಿತ್ತಕ್ಕಾಗಿ ತುಷಾನಲದಲ್ಲಿ ಬಿದ್ದಂತೆ ನೀವೂ ಬಿದ್ದು ಪ್ರಾಯಶ್ಚಿತ ಮಾಡಿಕೊಳ್ಳಿ. ಅದನ್ನು ಮಾಡುವುದಕ್ಕೆ ನಿಮಗೆ ಧೈರ್ಯವಿಲ್ಲದೇ ಇದ್ದರೆ, ನಿಮ್ಮ ತಪ್ಪನ್ನು ಒಪ್ಪಿಕೊಂಡು ಎಲ್ಲರಿಗೂ ಸಹಾಯ ಮಾಡಿ. ಜ್ಞಾನಾ ಗಾರದ ಬಾಗಿಲನ್ನು ಎಲ್ಲರಿಗೂ ತೆರೆಯಿರಿ. ದುರ್ಬಲ ಜನ ಸಾಮಾನ್ಯರಿಗೆ ಮತ್ತೊಮ್ಮೆ ಅವರಿಗೆ ನ್ಯಾಯವಾಗಿ ಸಲ್ಲುವ ಹಕ್ಕು ಬಾಧ್ಯತೆಗಳನ್ನು ಕೊಡಿ.



ಬೆಂಗಳೂರು ಪ್ರೆಸ್ ಮೈಸೂರು ಬ್ರಾಂಚ್‌ನಲ್ಲಿ ಮುದ್ರಿಸಲ್ಪಟ್ಟಿತು.

# ಶ್ರೀ ರಾಮಕೃಷ್ಣಾಶ್ರಮದ ಪ್ರಕಟಣೆಗಳು, ಮೈಸೂರು.

| | | | |
|---|---|---|---|
| ಶ್ರೀ ರಾಮಕೃಷ್ಣ ಉಪದೇಶಾಮೃತ .. .. | ೩ | ೮ | ೦ |
| ಸ್ವಾಮಿ ವಿವೇಕಾನಂದ (ಕುವೆಂಪು) .. .. | ೩ | ೮ | ೦ |
| ಕೊಲಂಬೊ ಇಂದ ಆಲ್ಮೋರಕೆ .. .. | ೫ | ೦ | ೦ |
| ಪತ್ರಮಾಲೆ .. .. .. | ೩ | ೦ | ೦ |
| ಶ್ರೀ ಶಾರದಾದೇವಿ .. .. | ೨ | ೦ | ೦ |
| ಶ್ರೀ ಶಾರದಾದೇವಿ ಸಂಭಾಷಣೆ .. .. | ೨ | ೮ | ೦ |
| ಶ್ರೀ ರಾಮಕೃಷ್ಣ .. .. | ೦ | ೧೨ | ೦ |
| ಜ್ಞಾನಯೋಗ .. .. | ೩ | ೦ | ೦ |
| ರಾಜಯೋಗ .. .. | ೨ | ೧೦ | ೦ |
| ಕರ್ಮಯೋಗ .. .. | ೧ | ೮ | ೦ |
| ಭಕ್ತಿಯೋಗ .. .. | ೧ | ೦ | ೦ |
| ತ್ರಿವೇಣೀ (ಶ್ರೀ ರಾಮಕೃಷ್ಣ, ಸ್ವಾಮಿ ವಿವೇಕಾನಂದ, ಶಾರದಾದೇವಿ ಸಂಕ್ಷಿಪ್ತ ಜೀವನ) .. | ೧ | ೦ | ೦ |
| ಶ್ರೀ ಗುರುದೇವರ ವಚನ .. .. | ೧ | ೦ | ೦ |
| ಬ್ರಹ್ಮಾನಂದ ವಚನ ಸುಧೆ .. .. | ೧ | ೪ | ೦ |
| ಶ್ರೀ ರಾಮಕೃಷ್ಣ ಉಪನಿಷತ್ .. .. | ೧ | ೪ | ೦ |
| ಪರಿವ್ರಾಜಕ .. .. | ೧ | ೪ | ೦ |
| ಪ್ರಾಚ್ಯ ಮತ್ತು ಪಾಶ್ಚಾತ್ಯ .. .. | ೧ | ೪ | ೦ |
| ವಿದ್ಯಾಭ್ಯಾಸ .. .. | ೦ | ೧೦ | ೦ |
| ಹಿಂದೂ ಧರ್ಮಸಾರ .. .. | ೦ | ೧೦ | ೦ |
| ವರ್ತಮಾನ ಭಾರತ .. .. | ೦ | ೧೦ | ೦ |
| ವಿವೇಕವಾಣಿ .. .. | ೦ | ೧೦ | ೦ |
| ನನ್ನ ಗುರುದೇವ .. .. | ೦ | ೮ | ೦ |
| ಭಕ್ತಿಮಾರ್ಗ .. .. | ೦ | ೮ | ೦ |
| ಚಿಕಾಗೋ ಉಪನ್ಯಾಸ .. .. | ೦ | ೬ | ೦ |
| ಆರತಿ .. .. | ೦ | ೬ | ೦ |

ಮುಮುಕ್ಷು ಲಕ್ಷಣ . . . . ೦ ೪ ೦

ನನ್ನ ಜೀವನ ಮತ್ತು ಧ್ಯೇಯ . . . . ೦ ೪ ೦

ಈಶ್ವರಾನುರಾಗ . . . . ೦ ೪ ೦

ನೊಂದ ಜೀವಕ್ಕೆ ಭರವಸೆ . . . . ೦ ೪ ೦

ಭಾರತ ಮಹಿಳೆ . . . . ೦ ೪ ೦

ಕರ್ಮರಹಸ್ಯ . . . . ೦ ೪ ೦

ಸಾಧನ . . . . . . ೦ ೪ ೦

ಅಮರನಾಥ ಯಾತ್ರೆ . . . . ೧ ೦ ೦

ಅನುಷ್ಠಾನ ವೇದಾಂತ . . . . ೧ ೦ ೦

ಪರಮಾರ್ಥ ಪ್ರಸಂಗ . . . . ೨ ೦ ೦

ವೇದಾಂತ . . . . ೦ ೧೦ ೦

ಗೀತಾಪತ್ರಗಳು . . . . ೨ ೮ ೦

ಸ್ವಾಮಿ ಶಿಷ್ಯ ಸಂವಾದ . . . . ೪ ೦ ೦

ದಿವ್ಯವಾಣಿ . . . . ೧ ೦ ೦

ನಾಗಮಹಾಶಯ . . . . ೦ ೧೨ ೦

ಶ್ರೀ ರಾಮಕೃಷ್ಣ ಲೀಲಾಪ್ರಸಂಗ . . . . ೧ ೮ ೦

Drig Drishya Viveka . . . . 2 0 0

Mandukya Upanishad with Goudapada Karika
& Shankara's Comments . . . . 8 0 0

---